# ಊರ್ವಶಿ

ಗೊರೂರು ರಾಮಸ್ವಾಮಯ್ಯಂಗಾರ್

ಸತ್ಯಶೋಧನ ಪುಸ್ತಕ ಭಂಡಾರ
ಕೋಟೆ, ಬೆಂಗಳೂರು ನಗರ

. . .ಸೊಗಸಾದ ಹಾಸ್ಯದಿಂದ ತುಂಬಿತುಳುಕುತ್ತಿದೆ. ಕೊನಷ್ಟೆ ಕತೆಗಳು ಇಂತಹ ಪುಸ್ತಕಗಳ ಮಾಲೆಗೆ ಸೇರುವ ಇನ್ನೊಂದು ಸುಂದರ ಪುಷ್ಪ ... . . ಎಲ್ಲದರಲ್ಲಿಯೂ ಒಂದೇ ಜಾತಿಯ ಸೊಗಸು ಹಾಸ್ಯ ಸ್ವಾರಸ್ಯ ... . ...ಇಲ್ಲಿ ಯಾವ ಬಗ್ಗೆಯ ಹಾಸ್ಯಕ್ಕೂ ಕೊರತೆ ಇಲ್ಲ ... ..... ಕೊನಷ್ಟೆ ಹುಟ್ಟು ಕತೆಗಾರರು ಎಂಬುದು ವ್ಯಕ್ತವಾಗಿದೆ. ಮರೆಯಲಾಗದ ಹಾಸ್ಯದ ವ್ಯಕ್ತಿಗಳನ್ನು ಅವರು ಇಲ್ಲಿ ಸೃಷ್ಟಿಸಿದ್ದಾರೆ

ಇವರ ಪರಿಚಯವಾದ ಮೇಲೆ ಇವರನ್ನು ಮರೆಯುವುದೆಂದರೆ ಹೇಗೆ? ... . . .ಪ್ರಾಯಶಃ ಒಂದು ಸಲ ಓದಿ ಮುಗಿಸುತ್ತಲೇ ಮತ್ತೊಮ್ಮೆ ಓದಬೇಕೆನ್ನಿಸುವ ಕತೆ. . . ಬಿರುಗಾಳಿ ಮುಂದೆ ಓಡಿದಂತೆ ಓಡುತ್ತದೆ ಕತೆ . ಕತೆಯನ್ನು ಓದುವುದನ್ನು ನಿಲ್ಲಿಸಲು ಸಾಧ್ಯವಿಲ್ಲ.. ಸಂತೋಷದ ಆಗರವಾದ ಜಗತ್ತೊಂದರ ಕನಸು-ಕಲ್ಪನೆ ಇಲ್ಲಿಯ ಕೆಲವು ಕೃತಿಗಳಲ್ಲಿ ಹೊಂದುವುದು ವಿಸ್ಮಯವಾಗಿದೆ ಎಲ್ಲಿ ಕೊಳೆಯನ್ನೂ, ತೊಳೆಯುವ ನಿರ್ಮಲ ಗಂಗೆಯಂತೆ ಬರುವ ಶ್ರೀಹಾಸ್ಯ ಸರಳ. ಇಂತಹ ಹಾಸ್ಯದ ಬುಗ್ಗೆಗಳು ಕೊನಷ್ಟೆ ಕತೆಗಳು ಬೇಸರಿಕೆ ಬಂದಾಗಲೆಲ್ಲ ಮತ್ತೆ ಮತ್ತೆ ನಿರ್ಮಲ ಹಾಸ್ಯದ ಈ ಬುಗ್ಗೆಗೆ ಬಂದು ದಣಿವಾರಿಸಿಕೊಳ್ಳಬಹುದು. ಯಾರ ಮನಸ್ಸನ್ನೂ ನೋಯಿಸದ, ಸುಸಂಸ್ಕೃತ ಅಭಿರುಚಿಯ ಎಲ್ಲೆಯನ್ನು ಮೀರದ ಹಾಸ್ಯ ಇಲ್ಲಿ ಸಂತತವಾಗಿ ಹರಿದಿದೆ " ಕನ್ನಡ ನುಡಿ

---

ಮತ್ತೊಮ್ಮೆ ಓದೋಣವೆನ್ನುವಷ್ಟು ಸುಂದರವಾಗಿದೆ—ಕರ್ಮವೀರ.

ಇಲ್ಲಿನ ಕತೆಗಳು ಒಂದಕ್ಕಿಂತ ಒಂದು ಸೊಗಸಾಗಿವೆ. . ಇವು ಮತ್ತೆ ಮತ್ತೆ ಓದುವ ಕುತೂಹಲವನ್ನು ಕೆರಳಿಸುತ್ತವೆ. ಕೊನಷ್ಟೆ ಕತೆಗಳ ಹಾಸ್ಯ, ಶ್ರೀ ಗೊರೂರರ ಹಾಸ್ಯದಂತೆ ಬಹಳ ಉತ್ಕೃಷ್ಟವಾದುದು. ಕೃತಿಗಳನ್ನು ಓದಿ ಹಾಸ್ಯವನ್ನನುಭವಿಸಬೇಕಲ್ಲದೆ ಇನ್ನೊಬ್ಬರ ವರ್ಣನೆ ಕೇಳಿ ಅನುಭವಿಸುವುದು ಸಾಧ್ಯವಿಲ್ಲ ನಿಜವಾಗಿ ಕೊನಷ್ಟೆ ತಮಿಳಿನ ಶ್ರೀ ಗೊರೂರು ಎನ್ನಬಹುದು. ಇಬ್ಬರ ಕೃತಿಗಳಲ್ಲಿಯೂ ನವಿರಾದ ಯಾರ ಮನಸ್ಸನ್ನೂ ನೋಯಿಸದ ಸೊಗಸಾದ ಹಾಸ್ಯ . ..

ಕತೆಗಾರ

---

ಶ್ರೀ ಗೊರೂರರು ಹಾಸ್ಯದ ಆಳವನ್ನು ಚೆನ್ನಾಗಿ ಬಲ್ಲವರು. ಇಂತಹ ಲೇಖಕರು ತಮಿಳಿನ ಲೇಖಕರೊಬ್ಬರ ಕೃತಿಗಳನ್ನು ಕನ್ನಡಕ್ಕೆ ಇಳಿಸಿರುವುದನ್ನು ನೋಡಿದರೆ ಈ ಸಂಗ್ರಹದ ಮೂಲ ಲೇಖಕರ ಬೆಲೆಯನ್ನು ಓದುಗರು ಊಹಿಸಬಹುದು . . . ಬಹಳ ಸ್ವಾರಸ್ಯವಾಗಿದೆ... .. ಶ್ರೀ ಗೊರೂರರು ಪ್ರಶಂಸಾರ್ಹರು.. ....

ಪ್ರಜಾವಾಣಿ.

ಕನ್ನಡ ಸಾಹಿತ್ಯದ ನಗೆಯ ಹೊನಲನ್ನು ಹರಿಸಿದ ಸಾಹಿತಿಗಳಲ್ಲಿ ಅಗ್ರಗಣ್ಯರಾದ ಶ್ರೀ ಗೊರೂರು ರಾಮಸ್ವಾಮಯ್ಯಂಗಾರ್ಯರು, ತಮಿಳು ಸಾಹಿತ್ಯದ ತಮ್ಮ ಜತೆಗಾರರೊಬ್ಬರನ್ನು ಕನ್ನಡಿಗರ ಬಳಕೆಗೆ ತಂದಿದ್ದಾರೆ..............ನಗೆಯ ಚುಟಕೆಯಲ್ಲಿ ಸಮಾಜವನ್ನು ಕುಟುಕಿ ಅದರ ಅನ್ಯಾಯಗಳನ್ನೂ ಮೌಢ್ಯವನ್ನೂ ಎತ್ತಿ ತೋರಿಸಬಲ್ಲ ಸಾಮರ್ಥ್ಯಶಾಲಿಗಳು......ಸಾಹಿತ್ಯವೃತ್ತದಲ್ಲಿ ಸಲ್ಲಿಸಿರುವ ಸೇವೆ ಪ್ರಶಂಸನೀಯವಾಗಿದೆ. ಇಂತಹ ಉದ್ದಾಮ ಲೇಖಕರ ಆರಿಸಿದ ಬರೆಹಗಳನ್ನು ಸರಳವಾಗಿ ಮನೋಜ್ಞವಾಗಿ ಕನ್ನಡಿಸಿ ನಮಗೊದಗಿಸಿದ ಶ್ರೀ ಗೊರೂರ್‌ರವರನ್ನು ಎಷ್ಟು ವಂದಿಸಿದರೂ ಸಾಲದಾಗಿದೆ......... ಶ್ರೀ ಗೊರೂರ್‌ರವರು ಮೂಲಲೇಖನಗಳಿಗೆ ಮತ್ತಷ್ಟು ಪುಟವಿತ್ತಿದ್ದಾರೆ. ಇಂತಹ ಹಾಸ್ಯಪೂರಿತ ವಿಚಾರಪೂರ್ಣಗ್ರಂಥಗಳು ಇಂದು ಎಂದಿಗಿಂತ ತುಂಬ ಅಗತ್ಯವಾಗಿವೆ. ಎಲ್ಲರೂ ಓದಬೇಕಾದ ಪುಸ್ತಕ.

ತಾಯಿನಾಡು.

---

ಉತ್ತಮ ಸಾಹಿತ್ಯದ ಕುರಿತಾದ ಅಭಿರುಚಿ ಕನ್ನಡ ಓದುಗರಿಗೆ ಉಂಟಾಗುವ ದೃಷ್ಟಿಯಿಂದ ಈ ಸಂಗ್ರಹವನ್ನು ಕನ್ನಡ ಜನ ತುಂಬ ಆದರದಿಂದ ಸ್ವಾಗತಿಸಬೇಕಾಗಿದೆ. ಮೂಲವನ್ನೇ ಓದುತ್ತಿರುವೆವೇ ಎಂಬ ಭಾವನೆಯುಂಟಾಗುವಷ್ಟು ಸಮರ್ಪಕವಾಗಿ ಶ್ರೀ ಗೊರೂರರು ಈ ಕತೆಗಳನ್ನು ಅನುವಾದಿಸಿದ್ದಾರೆ......ನಕ್ಕು ನಗಿಸಿಯೇ ತಮ್ಮ ಕತೆಗಾರಿಕೆಯ ಹಿರಿಮೆಯನ್ನು ಪ್ರಕಟಿಸುವವರು.........ವಿನೋದ ಸ್ವಭಾವ ವಿಡಂಬನದೃಷ್ಟಿ, ವಿಡಂಬನ ದೃಷ್ಟಿಯ ಹಿಂದೆ ಆಳವಾದ ಸ್ವಭಾವ ನಿರೀಕ್ಷಣೆ.

ರಾಯಭಾರಿ.

---

## ಅರಿಕೆ.

ಪುಟ 207 ರಲ್ಲಿ ಎರಡನೆ ಪ್ಯಾರಾ ಮೊದಲನೆ ಸಾಲಿನಲ್ಲಿ "ಆಧುನಿಕ ಮನುಷ್ಯವಾದಳು" ಎಂಬುದಕ್ಕೆ ಬದಲಾಗಿ "ಆಧುನಿಕ ಮನುವಾದಳು" ಎಂದು ಓದಿಕೊಳ್ಳಬೇಕು. ಇತರ ಮುದ್ರಣ ತಪ್ಪುಗಳನ್ನೂ ತಿದ್ದಿ ಓದಿಕೊಳ್ಳಬೇಕೆಂದು ಅರಿಕೆ.

ಗೊರೂರ್ ರಾ.

---

# ಊರ್ವಶಿ

## ೧

ಅಂದು ಸೀತಾಲಕ್ಷ್ಮಿಯ ವಿವಾಹ. ಊರಿಗೆ ಊರೇ ಸಂಭ್ರಮಗೊಂಡಿತ್ತು. ಆ ಸಂಭ್ರಮಕ್ಕೆ ಮುಖ್ಯಕಾರಣ ಸೀತಾಲಕ್ಷ್ಮಿಯ ಅನುಪಮ ಸೌಂದರ್ಯವೇ. ರತಿಯಂತಿದ್ದ ಆ ಹೆಣ್ಣುಮಗಳು ಊರಿನ ಯುವಕರೆಲ್ಲರ ಹೃದಯಾಕರ್ಷಣೆಯಾದ ಕಣ್ಮಣಿಯಾಗಿದ್ದಳು. ಆಕೆಯನ್ನು ಬಾಲ್ಯದಿಂದ ನೋಡುತ್ತಿದ್ದು ದಿನದಿನಕ್ಕೂ ಹೆಚ್ಚು ಹೆಚ್ಚು ಮೋಹಕವಾಗಿ ಬೆಳೆಯುತ್ತಿದ್ದ ಅವಳ ಚೆಲುವನ್ನೂ ಬೆಡಗನ್ನೂ ನೋಡಿ ಪರಿಚಿತರಾಗಿದ್ದವರಿಗೆ ಸಹ, ತುಂಬು ಯವ್ವನದ ಅರಳಿದ ಗುಲಾಬಿಯಂತಹ ಆಕೆಯ ನಿಲುವು ಹೊಸ ಕಾಂತಿಯನ್ನು ಬೀರುತ್ತಿತ್ತು. ಯುವಕ ವೃಂದ ಆಕೆಯನ್ನು ತಮ್ಮ ಅಧಿದೇವತೆಯನ್ನಾಗಿ ಪೂಜಿಸುತ್ತಿತ್ತು. ಹಿರಿಯರು ಸದ್ಗುಣಿಯಾದ ಈ ಹುಡುಗಿ ಚೆನ್ನಾಗಿ ಬಾಳಿ ಬದುಕಬೇಕೆಂದು ಹರಸಿದ್ದರು. ಹೀಗೆ ಆಕೆಯ ವಿವಾಹದಲ್ಲಿ ಊರವರಿಗೆಲ್ಲ ಒಂದು ಆತ್ಮೀಯತೆಯೂ ಅಭಿಮಾನವೂ ಹೆಮ್ಮೆಯೂ ಉಂಟಾಗಿತ್ತು.

ಸುಬ್ಬಗಹಳ್ಳಿಯ ಶ್ಯಾನುಭೋಗ್ ರಾಮಣ್ಣನವರ ಮೂರನೆಯ ಮತ್ತು ಕೊನೆಯ ಮಗಳು ಸೀತಾಲಕ್ಷ್ಮಿ. ರಾಮಣ್ಣನವರ ಹೆಂಡತಿ ಆ ಮಗುವನ್ನು ಹೆತ್ತು ಹದಿನೆಂಟು ವರುಷಗಳ ಕೆಳಗೆ ಬಾಣಂತಿಯಾಗಿ ಇಹಲೋಕ ವ್ಯಾಪಾರವನ್ನು ತ್ಯಜಿಸಿದ್ದರು. ಆಕೆ ಸುಂದರಿಯಾಗಿದ್ದುದರಿಂದ ಆಕೆಯ ಮಕ್ಕಳೆಲ್ಲ ಒಳ್ಳೆ ಲಕ್ಷಣವಾಗಿ ಜನಿಸಿದ್ದರು. ಅದರಲ್ಲಿಯೂ ಸೀತಾಲಕ್ಷ್ಮಿ, ಚಿನ್ನದಲ್ಲಿ ಕಡೆದು ಮಾಡಿದ ಒಳ್ಳೆಯ ಮಾಟದ ಗೊಂಬೆಯಂತಿದ್ದಳು. ಇಂತಹ ಮನೋಹರವಾದ ಆಕೃತಿಗೆ ಜನ್ಮವಿತ್ತುದರಿಂದ ತನ್ನ ಬಾಳು ಸಾರ್ಥಕವಾಯಿತೋ ಎಂಬಂತೆ ತಾಯಿಯ ಜೀವಜ್ಯೋತಿ ನಂದಿಹೋಯಿತು. ಹೆಂಡತಿ ಸ್ವರ್ಗಸ್ಥಳಾದಾಗ ರಾಮಣ್ಣನವರಿಗೆ ಇಬ್ಬರು ಗಂಡು, ಮೂರು ಹೆಣ್ಣುಗಳಿದ್ದರು. ಅವರು ಮತ್ತೆ ಎರಡನೆಯ ಮದುವೆಮಾಡಿಕೊಳ್ಳುವ ಹವ್ಯಾಸಕ್ಕೆ ಹೋಗಲಿಲ್ಲ. ಗಂಡು ಮಕ್ಕಳು ಹಿರಿಯ ಮಕ್ಕಳಾಗಿದ್ದುದರಿಂದ ಸಕಾಲದಲ್ಲಿ ಅವರಿಗೆ

ಮದುವೆಮಾಡಿ ಮನೆಗೆ ಬರುವ ಸೊಸೆಯರನ್ನು ನೋಡಿಕೊಂಡು ನಿರಾತಂಕವಾಗಿರಲು ಅವರು ನಿಶ್ಚಯಿಸಿದ್ದರು. ಐದು ಮಕ್ಕಳ ತಂದೆಯಾಗಿದ್ದರೂ, ಆತನಿಗೆ ಬಲಾತ್ಕಾರವಾಗಿ ಎರಡನೆಯ ಮದುವೆಗೆ ಹೆಣ್ಣನ್ನು ತಂದು ಒಪ್ಪಿಸುವಷ್ಟು ಆತ ಧನಿಕನಾಗಿರಲಿಲ್ಲವಾಗಿ ಎರಡನೆಯ ಮದುವೆ ಮಾಡಿಕೊಳ್ಳಬೇಕೆಂಬ ಒತ್ತಾಯವೂ ಯಾವೆಡೆಯಿಂದಲೂ ಬರಲಿಲ್ಲ.

ಹೆಂಡತಿ ಸಾಯುವಾಗ ಶ್ಯಾನುಭೋಗ ರಾಮಣ್ಣನವರಿಗೆ ನಲವತ್ತೈದು ವಯಸ್ಸಾಗಿತ್ತು. ಹಿರಿಯ ಮಗ ರಾಮನಿಗೆ ಹನ್ನೆರಡು, ಎರಡನೆಯ ಮಗ ಶ್ರೀನಿವಾಸನಿಗೆ ಹತ್ತು, ಮೂರನೆಯ ಲಕ್ಷ್ಮಿಗೆ ಎಂಟು, ನಾಲ್ಕನೆಯ ಜಲಜಾಕ್ಷಿಗೆ ನಾಲ್ಕು, ಸೀತಾಲಕ್ಷ್ಮಿ ಎರಡು ತಿಂಗಳ ಕೂಸು ಆಗಿದ್ದಳು. ರಾಮಣ್ಣನವರ ಸಂಸಾರ ಅವರ ಮಧ್ಯವಯಸ್ಸಿನಲ್ಲಿ ಹೀಗೆ ದಿಕ್ಕು ಕೆಟ್ಟು ಅನಾಥವಾಯಿತು. ತಂದೆ ಇಲ್ಲದಿದ್ದರೂ ತಾಯಿ ಹೇಗೋ ಮಕ್ಕಳನ್ನು ಸಾಕಿಕೊಂಡು ಹೋಗುತ್ತಾಳೆ. ತಾಯಿ ಇದ್ದರೆ ಬಡತನ ಕಷ್ಟವಿಲ್ಲ. ಆದರೆ ತಾಯಿಯಿಲ್ಲದಿದ್ದರೆ ಎಷ್ಟೇ ಐಶ್ವರ್ಯವಿದ್ದರೂ ಆ ಸಂಸಾರದ ಮಕ್ಕಳು ನಿಜವಾಗಿ ತಬ್ಬಲಿಗಳಾಗುತ್ತಾರೆ.

ಹೆಂಡತಿ ಸತ್ತಮೇಲೆ ರಾಮಣ್ಣನವರ ಕಷ್ಟಗಳು ನಿಜವಾಗಿ ಪ್ರಾರಂಭವಾದವು. ಎರಡು ವರುಷಗಳವರೆಗೆ ಸೀತಾಲಕ್ಷ್ಮಿ ಹೇಗೆ ಬೆಳೆದಳೋ ದೇವರಿಗೇ ಗೊತ್ತು. ಒಂದು ಮಗುವನ್ನು ಸಾಕಿ ದೊಡ್ಡದು ಮಾಡಬೇಕಾದರೆ ತಾಯಿಯಾದವಳ ತ್ಯಾಗವೆಷ್ಟು ಎಂಬುದರ ಅರಿವು ಅವರಿಗೆ ಹಿಂದೆಯೇ ಆಗಿದ್ದರೂ ಅನುಭವವುಂಟಾಗಿರಲಿಲ್ಲ. ಈ ಅನುಭವದಿಂದ ಅವರು ಒಂದು ಮಗುವನ್ನು ಸಾಕಬೇಕಾದರೆ ಒಬ್ಬನ ಪ್ರಾಣವೇ ಹೋಗುತ್ತದೆ ಎಂದು ತೀರ್ಮಾನಿಸಿದರು. ಎಂಟನೆಯ ತಿಂಗಳಿನಲ್ಲಿ ಒಂದು ಸಲ ಸೀತಾಲಕ್ಷ್ಮಿಗೆ ಶೀತ ತೀರ ಹೆಚ್ಚಾಗಿ ಅವಳ ಆಸೆಯನ್ನೇ ಎಲ್ಲರೂ ಬಿಟ್ಟಿದ್ದರು. ಅನಂತರ ಅದಕ್ಕೆ ಮೂರು ವರುಷವಾಗಿದ್ದಾಗ ಅತಿಯಾದ ಜ್ವರದಿಂದ ಒಂದು ದಿನ ಮೇಲುಸಿರು ಎಳೆಯಿತು. ಆಗ ಸಮೀಪದಲ್ಲಿ ಸಹ ಯಾರೂ ಇರಲಿಲ್ಲ. ಆಯಸ್ಸು ಗಟ್ಟಿಯಾಗಿದ್ದುದರಿಂದ ಮಗು ಉಳಿದುಕೊಂಡಿತು. ತಾಯಿ ಯಿಲ್ಲದ ಮಕ್ಕಳು ಹೇಗೆ ಹೇಗೋ ಬೆಳೆದವು. ಹಿರಿಯ ಮಗ ರಾಮನಿಗೆ ಇಪ್ಪತ್ತು ವಯಸ್ಸಾಗಿದ್ದಾಗ ಅವನು ಇನ್ನೂ ಎಸ್. ಎಸ್. ಎಲ್. ಸಿ. ತರಗತಿಯಲ್ಲಿರುವಾಗಲೇ ಅವನ ಮದುವೆ

ಯಾಗಿ ಹೋಯಿತು. ಶ್ರೀನಿವಾಸನೂ ಲೋವರ್ ಸೆಕಂಡರಿ ಪರೀಕ್ಷೆ ಮಾಡಿದ ನಂತರ ಮನೆಯಲ್ಲಿಯೇ ಉಳಿತನು. ಹೆಂಡತಿಯ ಮರಣಾನಂತರ ಶ್ಯಾನುಭೋಗ ರಾಮಣ್ಣನವರು ಹನ್ನೆರಡು ವರುಷಗಳಿದ್ದರು. ಈ ಅವಧಿಯಲ್ಲಿ ಲಕ್ಷ್ಮಿಗೂ ಮದುವೆಯಾಯಿತು. ಶ್ರೀನಿವಾಸನಿಗೂ, ಒಂದು ಹೆಣ್ಣಿನ ತಂದೆ ಹುಡುಕಿಕ್ಕೊಂಡು ಬಂದು ಹೆಣ್ಣು ಕೊಟ್ಟರು. ಅದಾದ ಮೂರು ತಿಂಗಳಿಗೆ ಶ್ಯಾನುಭೋಗ ರಾಮಣ್ಣನವರೂ ದಿವಂಗತರಾದರು.

ಆಗ ಎರಡನೆಯ ಮಗಳಾದ ಜಲಜಾಕ್ಷಿಗೆ ಹದಿನಾರು ವಯಸ್ಸೂ ಸೀತಾಲಕ್ಷ್ಮಿಗೆ ಹನ್ನೆರಡು ವಯಸ್ಸೂ ಆಗಿದ್ದವು. ಆಗಲೇ ಜಲಜಾಕ್ಷಿಯ ಮದುವೆಯ ವಯಸ್ಸು ಮೀರಿದೆಯೆಂದು ಹಳ್ಳಿಯವರು ಮಾತನಾಡಿಕೊಳ್ಳುತ್ತಿದ್ದರು ಪ್ರತಿ ಮನೆಯಲ್ಲಿಯೂ ಬೆಳೆದ ಎರಡು ಮೂರು ಹುಡುಗಿಯರಿರುವಲ್ಲಿ, ಪಟ್ಟಣಗಳಲ್ಲಿ ಮದುವೆಯಾಗದ ಹದಿನಾರು ವರುಷದ ಹುಡುಗಿ ಒಂದು ಸುದ್ದಿಯಲ್ಲ. ಆದರೆ ಬೇರೆ ಉದ್ಯೋಗವಿರದ ಹಳ್ಳಿಯ ಬ್ರಾಹ್ಮಣ ಕುಟುಂಬದ ಹಳೆಯ ಕಾಲದ ವಿಧವೆಯರಿಗೂ ವೈದೀಕರಿಗೂ ಅದೇ ಪುರಾಣವಸ್ತು. "ಪಾಪ ತಂದೆ ತಾಯಿ ಯಿಲ್ಲದ ಮಗಳು; ಇದ್ದಿದ್ದರೆ ಈವರೆಗೆ ಮದುವೆಮಾಡದೆ ಬಿಡುತ್ತಿದ್ದರೆ? ಆ ಅಣ್ಣಂದಿರು ಹೆಂಡತಿಯರೊಂದಿಗೆ ಸುಖವಾಗಿದ್ದಾರೆ. ಅವರ ಲೋಲಾಪ್ತಿಯಲ್ಲಿ ಈ ತಂಗಿಯರ ಅವಸ್ಥೆ ಅವರ ಕಣ್ಣಿಗೆಲ್ಲಿ ಬೀಳುತ್ತೆ?" ಎಂದು ಊರವರು ಕಂಡಕಂಡೆಡೆ ಮಾತನಾಡಿಕೊಳ್ಳುತ್ತಿದ್ದರು..

ನಿಜವಾಗಿ ರಾಮನಾಗಲೀ ಶ್ರೀನಿವಾಸನಾಗಲಿ ಊರವರು ತಿಳಿದಿದ್ದಂತೆ ಸ್ವಾರ್ಥಿಗಳಲ್ಲ. ಅವರು ಮದುವೆಮಾಡಿಕೊಂಡುದೂ ಸಹ ಕರ್ತವ್ಯದ ದೃಷ್ಟಿಯಿಂದಲೇ. ಹಳ್ಳಿಯ ಮನೆ, ದನಕರು, ಬೇಸಾಯ, ತಂದೆ ತಂಗಿಯರ ಪೋಷಣೆ, ಮೇಲಾಗಿ ರಾಮಣ್ಣನವರ ಬಲಾತ್ಕಾರ ಈ ಕಾರಣಗಳಿಗಾಗಿ ರಾಮನೂ ಶ್ರೀನಿವಾಸನೂ ಮದುವೆಯಾದರು. ಆದರೆ ರಾಮಣ್ಣನವರು ಬದುಕಿರುವವರೆಗೆ ತಮ್ಮ ಸಂಸಾರದ ಹಣ ಕಾಸು ಅನುಕೂಲಗಳ ಸ್ಥಿತಿ ಮಕ್ಕಳಿಗೆ ಗೊತ್ತಾಗಿರಲಿಲ್ಲ. ಶ್ಯಾನುಭೋಗರಾಗಿದ್ದ ರಾಮಣ್ಣನವರು ಹಣದಲ್ಲಿ ಪುಷ್ಟರಾಗಿಲ್ಲದಿದ್ದರೂ ಭತ್ತ, ರಾಗಿ, ತರ್ಕಾರಿ, ತೆಂಗಿನಕಾಯಿ ಮುಂತಾದ ಆಹಾರ ಪದಾರ್ಥಗಳನ್ನು ಸಮೃದ್ಧವಾಗಿ ಮನಗೆ ತಂದುಹಾಕಿ ಮನೆಯನ್ನು ಸುಖವಾಗಿಟ್ಟಿದ್ದರು. ಅವರ ಮರಣಾನಂತರ ಸಂಸಾರದ ಆಸ್ತಿಯ ಲೆಕ್ಕವನ್ನು

ನೋಡುವಾಗ ಅವರು ಸುಖವಾಗಿದ್ದುದಕ್ಕೆ ಅವರ ಶಕ್ತಿ ಕಾರಣವೇ ಹೊರತು ಆಸ್ತಿಯಲ್ಲವೆಂಬುದು ಮಕ್ಕಳಿಗೆ ಚೆನ್ನಾಗಿ ಮನದಟ್ಟಾಯಿತು. ಆಸ್ತಿ ಎರಡು ತಾಕು ಮಕ್ಕಿ ಗದ್ದೆ ಮಾತ್ರವಾಗಿದ್ದು, ಅದರಮೇಲೆ ಲಕ್ಷ್ಮಿಯ ಮದುವೆಗಾಗಿ ಮಾಡಿದ್ದ ಎರಡು ಸಾವಿರ ರೂಪಾಯಿ ಸಾಲ ಕೂತೇ ಇತ್ತು. ಈ ಪರಿಸ್ಥಿತಿಯಲ್ಲಿ ಜೀವನಮಾಡುವುದೇ ಕಷ್ಟವಾಗಿ ಜಲಜಾಕ್ಷಿ ಮತ್ತು ಸೀತಾಲಕ್ಷ್ಮಿಯರ ವಿವಾಹದ ಪ್ರಶ್ನೆಯ ಯೋಚನೆಯೇ ಕಣ್ಣಿಗೆ ಮಂಕುಕವಿಸುವುದಾಗಿದ್ದಿತು.

ಹಣದ ಅಭಾವದ ಜತೆಗೆ ವರಗಳ ಅಭಾವವೂ ಸೇರಿತ್ತು. ಜಲಜಾಕ್ಷಿ ಕುರೂಪಿಯಲ್ಲದಿದ್ದರೂ ಸುಂದರಿಯಲ್ಲ. ಜತೆಗೆ ವರ ಬಂದು ಹೆಣ್ಣನು ನೋಡಿ ಒಪ್ಪುವುದಕ್ಕೆ ಮುಂಚೆಯೇ ವರನ ತಂದೆ, ರಾಮನಿಗೂ ಶ್ರೀನಿವಾಸನಿಗೂ ಗಾಬರಿಯಾಗುವಂತೆ ವರೋಪಚಾರದ ಸಾಮಾನುಗಳ ಪಟ್ಟಿ ಇಡುತ್ತಿದ್ದರು. ಆ ಪಟ್ಟಿಯನ್ನು ಕೇಳಿದ ಕೂಡಲೇ ಆ ಹುಡುಗರಿಗೆ ದಿಕ್ಕೇ ತೋರದೆ ಮುಂದಿನ ಮಾತುಕಥೆಗಳನ್ನು ಅಲ್ಲಿಗೇ ನಿಲ್ಲಿಸಿ ಬಂದಹಾದಿ ಹಿಡಿಯುತ್ತಿದ್ದರು. ಕನ್ಯಾಪರೀಕ್ಷೆಗಾಗಿ ಮನೆಗೆ ಬಂದ ಒಂದೆರಡು ವರಗಳು ಮನೆಯ ಬಡತನವನ್ನು ಕಂಡು "ದಾರಿದ್ರ್ಯವನ್ನು ಲಗ್ನವಾಗಲು ನಾವು ಬಂದಿಲ್ಲ" ಎಂದು ಮುಖ ಗಂಟುಹಾಕಿಕೊಂಡು ಹೊರಟುಹೋಗಿದ್ದರು. ಒಬ್ಬ ವರ ಜಲಜಾಕ್ಷಿಯನ್ನು ಪರೀಕ್ಷಿಸುವುದಕ್ಕೆ ಬಂದವನು, ಮನೆಯಲ್ಲಿ ಓಡಾಡುತ್ತಿದ್ದ ಹದಿಮೂರು ವಯಸ್ಸಿನ ಸೀತಾಲಕ್ಷ್ಮಿಯ ಮೋಹಕ ರೂಪವನ್ನು ನೋಡಿ ತಾನು ಬಂದ ಉದ್ದೇಶವನ್ನೇ ಮರೆತು ಸೀತಾಲಕ್ಷ್ಮಿಯನ್ನೇ ವಿವಾಹವಾಗುತ್ತೇನೆಂದನು. ಕೊನೆಗೂ ಜಲಜಾಕ್ಷಿಗೆ ವಿವಾಹವಾದುದು ಸೀತಾಲಕ್ಷ್ಮಿಯ ಕಾರಣದಿಂದಲೇ. ಯಾಕೆಂದರೆ ಜಲಜಾಕ್ಷಿಯನ್ನು ನೋಡುವುದಕ್ಕೆ ಬಂದ ನರಸಿಂಹ, ಸೀತಾಲಕ್ಷ್ಮಿಯಂತಹವಳು ನಾದಿನಿಯಾಗುವಳಲ್ಲ ಎಂಬ ಆಸೆಯಿಂದಲೇ ಜಲಜಾಕ್ಷಿಯನ್ನು ಮದುವೆಯಾಗಲು ಸಮ್ಮತಿಸಿದನು.

ಜಲಜಾಕ್ಷಿಗೆ ಮದುವೆಯಾದ ನಂತರದ ಐದು ವರುಷಗಳೂ ರಾಮನೂ ಶ್ರೀನಿವಾಸನೂ ಸೀತಾಲಕ್ಷ್ಮಿಗೆ ಗಂಡನನ್ನು ಹುಡುಕಿ ಹುಡುಕಿ ಬಳಲಿದರು. ಆದರೆ ಹೆಣ್ಣು ಚೆಲುವೆಯಾಗಿದ್ದ ಮಾತ್ರಕ್ಕೆ ಮದುವೆಯಾಗಿಬಿಡುವುದೆ? ಜಲಜಾಕ್ಷಿಯ ವಿವಾಹದಲ್ಲಿ ಇಟ್ಟ ಡಿಮ್ಯಾಂಡ್ ಪಟ್ಟಿಗಿಂತಲೂ ಸೀತಾಲಕ್ಷ್ಮಿಯ ವಿವಾಹದ ವೇಳೆಗೆ ವರಗಳ ಕೇಳಿಕೆ ಒಂದಕ್ಕೆ ಎರಡಾಯಿತು. "ಎರಳಿ

ನೋಟದಂಥ ಹೆಣ್ಣು, ಕುಡಿಹುಬ್ಬು ಕಾಡಿಗೆ ಕಣ್ಣು, ತುಟಿ ಹವಳದ ಕುಡಿ, ಭಂಗಾರ ವಸ್ತು ಸಿಂಗಾರ ಮಾಡಿ ಇಟ್ಟಾರ ಬೆಂಕಿಯ ಕುಡಿ" ಯಾಗಿದ್ದ ಸೀತಾ ಲಕ್ಷ್ಮಿಯನ್ನು ನೋಡಿ ವರಗಳು "ದಮ್ಮಯ್ಯ, ಕೊಟ್ಟರೆ ಸಾಕು. ಮದುವೆ ಯಾಗುತ್ತೇವೆ" ಎಂದು ಮನಸ್ಸಿನಲ್ಲಿ ಹೇಳಿಕೊಂಡರೂ ವರದಕ್ಷಿಣೆಯನ್ನೂ ವರೋಪಚಾರವನ್ನೂ ಗಿಟ್ಟಿಸಬೇಕೆಂದಿದ್ದ ಹಿರಿಯರನ್ನು ಎದುರಿಸುವ ಶಕ್ತಿ ಯಿಲ್ಲದವರಾಗಿ 'ದರಿದ್ರಾಣಾಂ ಮನೋರಥಃ' ಎಂಬಂತೆ ಹಿಂದಿರುಗುತ್ತಿದ್ದರು. ಅದರಲ್ಲಿಯೂ ಸಂಗೀತಪ್ರಿಯರಾದವರ ಅವಸ್ಥೆಯಂತೂ ವರ್ಣಿಸಲಸದಳ ವಾಗಿತ್ತು. ಯಾಕೆಂದರೆ ಮಲ್ಲಿಗೆಹಳ್ಳಿಯ ಬಾಲಿಕಾಪಾಠಶಾಲೆಯ ಪಿಟೀಲು ವಿದ್ವಾಂಸಳಾದ ಮುಖ್ಯೋಪಾಧ್ಯಾಯನಿಗೂ ಸೀತಾಲಕ್ಷ್ಮಿಗೂ ಸ್ನೇಹ ಬೆಳೆದು ಸೀತಾಲಕ್ಷ್ಮಿ ಪಿಟೀಲು ನುಡಿಸುವುದರಲ್ಲಿ ಒಳ್ಳೆಯ ಪ್ರಾವೀಣ್ಯವನ್ನೇ ಹೊಂದಿ ದ್ದಳು. ಮುಖ್ಯೋಪಾಧ್ಯಾಯಿನಿಯನ್ನು ಎರಡು ವರುಷಗಳ ಕೆಳಗೆ ಮಲ್ಲಿಗೆ ಹಳ್ಳಿಯಿಂದ ವರ್ಗಮಾಡಬೇಕೆಂದು ಸರ್ಕಾರ ನಿಶ್ಚಯಿಸಿದಾಗ ಸೀತಾಲಕ್ಷ್ಮಿ ಸಂಗೀತದಲ್ಲಿ ಮುಕ್ಕಾಲು ಭಾಗ ಪರಿಣತಳಾಗಿದ್ದಳು. ಅನ್ಯಾಯವಾಗಿ ಇನ್ನೊಂದು ವರುಷವಾದರೂ ಈಕೆ ಇಲ್ಲದೆಹೋಗಿಬಿಡುವಳಲ್ಲ ಎಂದು ಸೀತಾ ಲಕ್ಷ್ಮಿ ಎಲ್ಲರಿಗಿಂತ ಹೆಚ್ಚಾಗಿ ಕೊರಗಿದಳು. ಆಗ ಆಕೆಗೆ ವರ್ಗವಾಗಿಬಿಟ್ಟಿದ್ದರೆ ಸೀತಾಲಕ್ಷ್ಮಿಯ ವಿದ್ಯೆ ಅಷ್ಟಕ್ಕೇ ನಿಂತುಹೋಗುತ್ತಿತ್ತು. ಯಾಕೆಂದರೆ ಮಲ್ಲಿಗೆ ಹಳ್ಳಿಯಲ್ಲಿ ಸಂಗೀತ ತಿಳಿದವರು ಮತ್ತಾರೂ ಇರಲೇ ಇಲ್ಲ. ಇದ್ದಿದ್ದರೂ, ಹಳ್ಳಿ ಯಲ್ಲಿ ವಯಸ್ಸಾದ ಹುಡುಗಿ ಗಂಡಸರ ಬಳಿ ಹೋಗಿ ವಿದ್ಯೆ ಕಲಿತರೆ ಜನರ ಬಾಯಿ ಸುಮ್ಮನಿರುವುದೇ? ಆದರೆ ದೇವರ ದಯದಿಂದ ಮುಖ್ಯೋಪಾಧ್ಯಾ ಯಿನಿಗೆ ವರ್ಗವಾಗಲಿಲ್ಲ. ದೇವರ ದಯ ಎನ್ನುವುದಕ್ಕಿಂತ, ಮುಖ್ಯೋಪಾ ಧ್ಯಾಯಿನಿಗೆ ಸೀತಾಲಕ್ಷ್ಮಿಯಲ್ಲಿದ್ದ ದಯದಿಂದ ಎಂದೇ ಹೇಳಬೇಕು. ಯಾಕೆಂದರೆ ಸೀತಾಲಕ್ಷ್ಮಿಯ ಸಂಗೀತದ ಅಭಿರುಚಿಯಿಂದ ಮುಖ್ಯೋಪಾ ಧ್ಯಾಯಿನಿಗೇ ಬಹಳ ಆನಂದವಾಗಿತ್ತು. ಶಾಲೆಯಲ್ಲಿ ನಿತ್ಯ ಗಂಟೆಗಟ್ಟಲೆ ಪಾಠ ಹೇಳಿಸಿಕೊಂಡರೂ ಇತರ ವಿದ್ಯಾರ್ಥಿನಿಯರಿಗೆ ಬರದಿದ್ದ ಪಾಠ, ಒಂದೇ ಸಲ ಮನೆಯಲ್ಲಿ ಹೇಳಿಕೊಟ್ಟಕೂಡಲೇ ಸೀತಾಲಕ್ಷ್ಮಿಗೆ ಬರುತ್ತಿದ್ದಿತು. ಸೀತಾ ಲಕ್ಷ್ಮಿಯು ಹೀಗೆ ಸಂಗೀತದಲ್ಲಿ ತಯಾರಾಗುತ್ತಿದ್ದುದು ಊರವರಾರಿಗೂ ತಿಳಿದೇ ಇರಲಿಲ್ಲ. ರಾಮು, ಶ್ರೀನಿವಾಸನಿಗೆ ಸಹ ಇವಳು ಯಾವುದೋ

ಮುರುಕು ಪಿಟೀಲನ್ನು ನುಡಿಸುತ್ತಿರುವಳೆಂಬ ಭಾವನೆಯಿದ್ದಿತೇ ಹೊರತು ಈಕೆ ನಿಜವಾಗಿ ಸಂಗೀತ ವಿದ್ವಾಂಸೆಯಾಗುತ್ತಿರುವಳೆಂಬುದು ಕನಸಿನಲ್ಲಿಯೂ ಇರಲಿಲ್ಲ. ಆದಕ್ಕೆ ಮುಖ್ಯ ಕಾರಣ ಮಲ್ಲಿಗೆಹಳ್ಳಿಯಲ್ಲಿ ಯಾರಿಗೂ ಸಂಗೀತ ಕಲೆ ತಿಳಿಯದಿದ್ದುದೇ

ಅಲ್ಲದೆ ಹಳ್ಳಿಯಲ್ಲಿ ಬಡವರ ಮಗಳಾಗಿ, ಸಂಗೀತ ಉಪಾಧ್ಯಾಯನಿಗೆ ತಿಂಗಳಿಗೆ ಮುವತ್ತು ಐವತ್ತು ಕೊಡದೆ, ಮುಂದೆಯೂ ದೊಡ್ಡ ಅಧಿಕಾರಿಯ ಅಥವ ಲಕ್ಷಾಧಿಪತಿಯ ಹೆಂಡತಿಯಾಗುವ ಸಂಭವವೇ ಇಲ್ಲದ ಹೆಣ್ಣು, ಅದ್ಭುತವಾದ ಪಿಟೀಲು ಪಾಂಡಿತ್ಯ ಹೊಂದಿರುವಳೆಂಬುದು ಹಳ್ಳಿಯವರ ದೃಷ್ಟಿಯಲ್ಲಿ ಸಂಭವಿಸಕೂಡದ ಆಕಸ್ಮಿಕವಾಗಿತ್ತು. ರಾಮನ ಹೆಂಡತಿಗಾಗಲಿ ಶ್ರೀನಿವಾಸನ ಹೆಂಡತಿಗಾಗಲಿ ಸಂಗೀತದ ಗಂಧವಿರಲಿಲ್ಲ. ಸಂಸಾರಿಯಾದ ಹೆಣ್ಣಿಗೆ ಮದುವೆಯಲ್ಲಿ ಗಂಡನನ್ನು ಆಕರ್ಷಿಸುವ ಮಟ್ಟಿಗೆ ಹೊರತು, ಅದಕ್ಕಿಂತ ಹೆಚ್ಚಾಗಿ ಸಂಗೀತ, ಯಾಕೆ? ಎಂಬ ಅಭಿಪ್ರಾಯ ಊರಿನವರಿಗೆಲ್ಲ ಸಾಮಾನ್ಯವಾಗಿತ್ತು. ಆದುದರಿಂದ ಮನೆಯಲ್ಲಿ ಸೀತಾಲಕ್ಷ್ಮಿ ತನ್ನ ವಿದ್ಯೆಯನ್ನು ಪ್ರಕಾಶಿಸುತ್ತಲೇ ಇರಲಿಲ್ಲ. ಮುಖ್ಯೋಪಾಧ್ಯಾಯಿನಿಯು ಒಬ್ಬಳೇ ಇದ್ದುದರಿಂದ ಸೀತಾಲಕ್ಷ್ಮಿ ತನ್ನ ಹೆಚ್ಚು ಕಾಲವನ್ನು ಅವಳ ಮನೆಯಲ್ಲಿಯೇ ಪಿಟೀಲಿನ ಅಭ್ಯಾಸದಲ್ಲಿ ಕಳೆಯುತ್ತಿದ್ದಳು. ಕಡೆಕಡೆಗೆ ಅವಳ ಕೈ ಪೂರ್ಣವಾಗಿ ಕುದುರಿತು. ಉಪಾಧ್ಯಾಯಿನಿಯು "ಗಾನಸರಸ್ವತಿ ನಿನ್ನ ಬೆರಳುಗಳಲ್ಲಿ ನರ್ತಿಸುತ್ತಿದ್ದಾಳೆ. ನೀನು ಪಿಟೀಲು ನುಡಿಸುವಾಗ ನನಗೆ, ನಾನು ಎಲ್ಲಿರುವೆನೆಂಬುದರ ಅರಿವೇ ಇರುವುದಿಲ್ಲ. ರಕ್ಕೆ ಕಟ್ಟಿಕೊಂಡು ಯಾವುದೋ ಮೇಲಿನ ಲೋಕಗಳಲ್ಲಿ ವಿಹರಿಸುತ್ತಿರುವೆನೆಂಬ ಭಾವನೆಯುಂಟಾಗುತ್ತದೆ. ಸುಖದ ದಿನಗಳೆಲ್ಲ ಮತ್ತೆ ಜ್ಞಾಪಕಕ್ಕೆ ಬರುತ್ತವೆ. ಅನಿರ್ವಚನೀಯವಾದ ಆನಂದವುಂಟಾಗುತ್ತದೆ. ನಿನ್ನನ್ನು ಯಾವನು ಕೈಹಿಡಿಯುತ್ತಾನೆಯೋ ಅವನೇ ಅದೃಷ್ಟಶಾಲಿ" ಎನ್ನುತ್ತಿದ್ದಳು.

ಮುಖ್ಯೋಪಾಧ್ಯಾಯಿನಿ, ವಿಧವೆ ಮಕ್ಕಳಿರಲಿಲ್ಲ. ವಯಸ್ಸು ಇನ್ನೂ ಮೂವತ್ತೈದನ್ನು ಮೀರಿರಲಿಲ್ಲ. ಅವಳಿಗೆ ಬಂಧುಗಳೂ ಸಹ ಯಾರೂ ಇರಲಿಲ್ಲ. ಗಂಡ ಅವಳಿಗೆ ಮದುವೆಯಾದ ಮೂರು ವರುಷಗಳೊಳಗೆ ತೀರಿಕೊಂಡಿದ್ದನು. ಒಂಟಿಯಾದ ದುಃಖದಿಂದಲೂ ಬೇಸರಿಕೆ ಭಯದಿಂದಲೂ ಹೊಳೆಯನ್ನೋ ಭಾವಿಯನ್ನೋ ಬಿದ್ದು ಪ್ರಾಣ ಕಳೆದುಕೊಳ್ಳಬೇಕೆಂದು

ಆಕೆ ಯೋಚಿಸಿದಳು. ಆ ದುರಂತದಿಂದ ಆಕೆಯನ್ನು ಉಳಿಸಿದ್ದುದು ಅವಳ ಸಂಗೀತ ಪ್ರೇಮವೇ. ಅವಳಿಗೆ ಬಾಲ್ಯದಿಂದಲೂ ಪಿಟೀಲಿನ ಹುಚ್ಚು ಬಹಳವಾಗಿತ್ತು. ಆದರೆ ಆದನ್ನು ಕಲಿಯಲು ಅವಳಿಗೆ ಸಾಧ್ಯವಾಗಿರಲಿಲ್ಲ. ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದಾಗ ಅವಳ ಲಕ್ಷ್ಯ ಸ್ವಾಭಾವಿಕ ವಾಗಿ ಪಿಟೀಲಿನ ಕಡೆಗೆ ಹೋಯಿತು. ಅದು ಆಕೆಯನ್ನು ಪಿಶಾಚಿಯಂತೆ ಹಿಡಿದಿತ್ತು. ಆ ಏಕಾಗ್ರತೆಯಲ್ಲಿ ಅವಳ ದುಃಖವು ಭಸ್ಮವಾಯಿತು. ತಪಸ್ಸಿನ ಸಾಧನೆಯಲ್ಲಿರುವವನು ಎಲ್ಲವನ್ನೂ ಮರೆಯುವಂತೆ ಪಿಟೀಲಿನ ಆರಾಧನೆಯಲ್ಲಿ ಆಕೆ ತನ್ನ ಸಮಸ್ತ ದುಃಖವನ್ನೂ ಮರೆತಳು. ಪಿಟೀಲು ಅವಳ ಜೀವನ ಸರ್ವಸ್ವವಾಯಿತು. ಅದೇ ಕಣ್ಣಿನ ಬೆಳಕೂ ಉಸಿರಿನ ಉಸಿರೂ ಆಯಿತು. ಆ ಸಾಧನೆಯಲ್ಲಿ ಅವಳು ಹಿಂದೂ ವಿಧವೆಯನ್ನು ವಿಧಿಯು ಅಣಕಿ ಸುವ ವಿಕಟ ಅಟ್ಟಹಾಸವನ್ನು ಸಹ ಮರೆತಳು. ಜಗತ್ತಿನಲ್ಲಿ ಆಕೆಗೆ ಪಿಟೀಲಿನ ಹೊರತು ಮತ್ತಾವುದೂ ಇಲ್ಲವಾಯಿತು. "ಈ ಬಾಲವಿಧವೆಗೆ ಈ ವೈಯ್ಯಾರವ್ಯಾಕೆ? ಇವಳು ನಾಟಕಕ್ಕೆ ಸೇರಿ ಓಡಿಹೋಗುತ್ತಾಳೆ" ಎಂಬ ಹಳೆಯ ಸಂಪ್ರದಾಯದವರ ಕಟುನುಡಿಯಿಂದ ತಾನು ಮಾಡಿದುದೇ ಸರಿ ಯೆಂಬ ಅವಳ ನಿಶ್ಚಯ ಇನ್ನೂ ಹೆಚ್ಚು ದೃಢವಾಯಿತು. ನಾಲ್ಕು ವರುಷ ಗಳಲ್ಲಿ ಆಕೆ ಪಿಟೀಲಿನಲ್ಲಿ ಪೂರ್ಣ ಪರಿಣತಳಾದಳು. ಅದನ್ನು ನುಡಿಸುವಾಗ ತನ್ನ ಕೌಶಲ್ಯಕ್ಕೆ ತಾನೇ ಬೆರಗುವಡೆದ ಪರಮಾತ್ಮಕಲಾವಿದನಂತೆ ಆಕೆ ಸಮಸ್ತವನ್ನೂ ಮರೆಯುತ್ತಿದ್ದಳು. ರಬ್ಬರ್ ಚೆಂಡು, ತನ್ನ ಒಳಗೆ ಇರುವ ಗಾಳಿಯಿಂದ ಹೇಗೆ ಸಮಸ್ತ ಏಟು ಹೊಡೆತಗಳನ್ನೂ ತಪ್ಪಿಸಿಕೊಂಡು ನುಗುಚಿ ಕೊಳ್ಳುವುದೋ ಹಾಗ ಆಕೆ, ತನ್ನ ಗಾನದಲ್ಲಿ ಆಶ್ರಯಪಡೆದು ಜಗತ್ತಿನ ಕಾರ್ಪಣ್ಯಗಳ ಹೊರೆಯಿಂದ ತಪ್ಪಿಸಿಕೊಳ್ಳುತ್ತಿದ್ದಳು. ಒಂದೊಂದು ಮಂತ್ರ ಸ್ವಾಧೀನವಾದರೆ, ಅದು ಸಿದ್ಧಿಸಿದವನಿಗೆ ಹಸಿವು ಬಾಯಾರಿಕೆ ಆಗುವುದಿಲ್ಲ ವೆಂದೂ ಹೊಡೆದ ಏಟು ತಗಲುವುದಿಲ್ಲವೆಂದೂ ನಮ್ಮ ಪುರಾಣಗಳಲ್ಲಿ ಅದ್ಭುತ ಪವಾಡಗಳ ವರ್ಣನೆಯಿದೆ. ಆಕೆಯ ಸಂಗೀತ ಅವಳಿಗೆ ಅಂತಹ ಅದ್ಭುತ ತಾರಕ ಮಂತ್ರವಾಗಿತ್ತು. ಗುಪ್ತವಾಗಿ ಧನವನ್ನಿಟ್ಟುಕೊಂಡಿರುವವನು ದಾರಿದ್ರ್ಯಕ್ಕೆ ಹೆದರದಿರುವಂತೆ ಆಕೆ ಈ ಗಾನಸ್ಪರ್ಶಶಿಲೆಯಿಂದ ತೃಪ್ತಳಾಗಿ ದ್ದಳು. ಗಾನ ಅವಳ ಬಾಳಿನ ಮುಸಕನ್ನು ಹೋಗಲಾಡಿಸಿ ಹೊಸದುಮಾಡಿ,

ಕ್ಷಣಕ್ಷಣಕ್ಕೂ ಜಗತ್ತನ್ನು ಆಕೆಗೆ ನವನವೀನವಾಗಿ ತೋರಿಸುತ್ತಿತ್ತು. ಗಾನದಿಂದ ಆಕೆಯ ಬಾಳು ಪೂರ್ಣವಾಗಿ ಬದಲಾವಣೆ ಹೊಂದಿತ್ತು. ಹೂವು ತನ್ನಲ್ಲಿ ಅಡಗಿರುವ ಸುಗಂಧವನ್ನು ಪಸರಿಸಿ ವಾತಾವರಣವನ್ನೆಲ್ಲ ಮಧುರವಾಗಿ ಮಾಡುವಂತೆ, ಆಕೆ ಹೋದ ಹೋದ ಕಡೆಗಳಲ್ಲಿ ತನ್ನ ಗಾನ ದಿಂದುಂಟಾದ ಸುಸಂಸ್ಕೃತಿಯ ಸುಗಂಧವನ್ನು ಬೀರುತ್ತಿದ್ದಳು.

ಹೀಗೆ ಸಂಗೀತ ತನ್ನ ಬಾಳನ್ನು ಸಾರ್ಥಕ್ಯವಮಾಡಿದುದು ಆಕೆಗೆ ತಿಳಿ ದಿದ್ದುದರಿಂದ, ಮನುಷ್ಯನನ್ನು ಸುಖದುಃಖದ ಆಚೆಗೆ ಕೊಂಡೊಯ್ಯುವ ಈ ಆತ್ಮವಿದ್ಯೆಯನ್ನು ಒಬ್ಬಿಬ್ಬರಿಗಾದರೂ ತನ್ನ ಜೀವಿತಕಾಲದಲ್ಲಿ ಕಲಿಸ ಬೇಕೆಂಬುದು ಆಕೆಯ ಹಿರಿಯಾಸೆಯಾಗಿದ್ದಿತು. ಮಲ್ಲಿಗೆಹಳ್ಳಿಗೆ ಬರುವ ವರೆಗೆ ಅಂತಹ ಪಾತ್ರ ಆಕೆಗೆ ದೊರತಿರಲಿಲ್ಲ. ಆಕೆ ಹಿಂದೆ ಇದ್ದ ಊರು ಗಳಲ್ಲಿ ಮದುವೆಯ ಆಕರ್ಷಣೆಗಾಗಿ ಎಂದು, ಹುಡುಗಿಯರು ಅವಳಲ್ಲಿ ಬಂದು ಪಿಟೀಲನ್ನು ಕಲಿತುಮಂಟು. ಅವರು ತರುತ್ತಿದ್ದ ಪಿಟೀಲುಗಳು ಒಳ್ಳೆ ಬೆಲೆ ಬಾಳುವುವುಗಳಾಗಿದ್ದುವು. ಪಿಟೀಲನ್ನಿಡಲು ಪಿಟೀಲಿನಷ್ಟೇ ಬೆಲೆಯಾದ ಕರಿಮರದ ಪೆಟ್ಟಿಗೆ, ಅದಕ್ಕೆ ಅಷ್ಟೇ ಬೆಲೆಯಾದ ರೇಶಿಮೆಯ ಹೊದಿಪು, ಕೈ ಬೆರಳು ತಂತಿಯಮೇಲೆ ಕುಣಿಯುತ್ತಿರುವಾಗ ಥಳಥಳನೆ ಹೊಳೆಯುವ ವಜ್ರದ ಉಂಗರಗಳು. ಕೈಬಳೆಗಳಿಗೆ ಸುತ್ತಿದ ಕೆಂಪಿನ ನಾಲು, ಇಂತಹ ವೈಭವದ ಧನಿಕರ ಮಕ್ಕಳು, ತಮ್ಮ ಪಿಟೀಲುಗಾನ, ಪುರುಷ ಫಣಿಯನ್ನು ಆಕರ್ಷಿಸುವ ಪುಂಗಿಯಾಗಲೆಂದು ಅದರ ಅಭ್ಯಾಸಕ್ಕೆ ತೊಡಗಿದ್ದರು. ಅವರ ವಿವಾಹವಾದ ಕೂಡಲೆ ಅವರ ಪಿಟೀಲುಗಳು ಅಟ್ಟದಮೇಲೆ ಪ್ರದರ್ಶನದ ವಸ್ತುಗಳಾಗಿ ಉಳಿದು ಅವುಗಳ ಸ್ಥಳಕ್ಕೆ ತೊಟ್ಟಿಲುಗಳು ಬಂದಿದ್ದವು. ಎಲ್ಲಿಯವರೆಗೆ ಗಾನ, ಅದರಿಂದ ದೊರಕುವ ಆತ್ಮಾನಂದಕ್ಕಾಗಿ ಅಲ್ಲದೆ ಬರಿಯ ಒಂದು ಗುರಿಗಾಗಿಯೋ, ಅಲ್ಲಿಯವರೆಗೆ ಅದು ಉಪಾಸಕನಿಗೆ ದೊರೆಯುವುದಿಲ್ಲ. ಜ್ಞಾನವೂ ಅಷ್ಟೆ. ಆದುದರಿಂದಲೇ ದೇವರಿಗೆ "ಜ್ಞಾನಾನಂದಮಯಂ ದೇವಂ" ಎಂದು ಹೇಳಿದ್ದಾರೆ.

ಸೀತಾಲಕ್ಷ್ಮಿ ಕಣ್ಣಿಗೆ ಬೀಳುವವರೆಗೆ, ತನ್ನ ಬಯಕೆಯ ಶಿಷ್ಯೆ ತನಗೆ ದೊರೆಯುವದಿಲ್ಲವೆಂದೇ ಮುಖ್ಯೋಪಾಧ್ಯಾಯಿನಿಯು ಭಾವಿಸಿದ್ದಳು. ಮಲ್ಲಿಗೆ ಹಳ್ಳಿಗೆ ಅವಳು ವರ್ಗವಾಗಿ ಬಂದನಂತರ ಸೀತಾಲಕ್ಷ್ಮಿಯ ಎದುರು ಮನೆಯ

ಲ್ಲಿಯೇ ಅವಳು ವಾಸಮಾಡಲು ತೊಡಗಿದುದರಿಂದ ಇಬ್ಬರ ಪರಿಚಯವೂ ಚೆನ್ನಾಗಿ ಬೆಳೆಯಿತು. ಸೀತಾಲಕ್ಷ್ಮಿಗೆ ಅಲ್ಲಿಯವರೆಗೆ ಸಂಗೀತದ ಗಂಧವಾಗಲಿ ಪಿಟೀಲಿನ ಆಸೆಯಾಗಲಿ ಇರಲಿಲ್ಲ. ಆದರೆ ಮುಖ್ಯೋಪಾಧ್ಯಾಯಿನಿಯು ಪಿಟೀಲನ್ನು ನುಡಿಸುತ್ತಾ ಅದರಲ್ಲಿ ತಲ್ಲೀನಳಾಗುತ್ತಿದ್ದುದನ್ನು ನೋಡಿ, ಸೀತಾಲಕ್ಷ್ಮಿಯ ಮನಸ್ಸಿನಲ್ಲಿ ಎಲ್ಲೋ ಹುದುಗಿದ್ದ ಸಂಗೀತದ ಆಸೆ ತಲೆ ಎತ್ತಿತು. ಹಾಗೆ ಆಸೆ ತಲೆ ಎತ್ತಿದಾಗ ಅವಳಿಗೆ ಅದು ಅಲ್ಲಿ ಬಹುದಿನಗಳಿಂದ ಸುಪ್ತವಾಗಿದ್ದ ಆಸೆ ಎಂಬುದು ಗೊತ್ತಾಯಿತು. ಸಂಗೀತದ ಆಸೆ ಅವಳಲ್ಲಿ ಎಷ್ಟು ತೀವ್ರವಾಗಿದ್ದಿತೆಂದರೆ, ಇಷ್ಟು ದಿವಸ ಈ ಆಸೆಯನ್ನು ನಾನು ಹೇಗೆ ಅಡಗಿಸಿದ್ದೆ ಎಂಬುದು ಆಕೆಗೇ ಆಶ್ಚರ್ಯವಾಯಿತು. ಅವಳ ಆಸೆಯನ್ನು ನೋಡಿ ಮುಖ್ಯೋಪಾಧ್ಯಾಯಿನಿಗೂ ಸಂತೋಷವಾಯಿತು. ಸೀತಾಲಕ್ಷ್ಮಿಗೆ ಪಿಟೀಲನ್ನು ಕೊಂಡುಕೊಳ್ಳುವ ಹಣದ ಅನುಕೂಲ ಸಹ ಇರಲಿಲ್ಲ. ಆಕೆ ತನ್ನ ಮನೆಯಲ್ಲಿ ಅಭ್ಯಾಸವನ್ನು ಸಹ ಮಾಡುತ್ತಿರಲಿಲ್ಲ. ಮುಖ್ಯೋಪಾಧ್ಯಾಯಿನಿಯ ಪಿಟೀಲಿನಲ್ಲಿಯೇ ಅಭ್ಯಾಸಮಾಡುತ್ತಾ ತನ್ನ ಹೆಚ್ಚು ಕಾಲವನ್ನೆಲ್ಲ ಆಕೆಯ ಮನೆಯಲ್ಲಿಯೇ ಕಳೆಯುತ್ತಿದ್ದಳು. ಅವಳು ಪಿಟೀಲಿನಲ್ಲಿ ಎಂತಹ ಪ್ರಾವೀಣ್ಯವನ್ನು ಹೊಂದಿರುವಳೆಂಬುದೂ ಸಹ ಮುಖ್ಯೋಪಾಧ್ಯಾಯಿನಿಯ ಹೊರತು ಉಳಿದವರಾರಿಗೂ ತಿಳಿದಿರಲಿಲ್ಲ.

ಹೀಗೆ ಕನ್ಯೆ ಸರ್ವವಿದ್ಯಾಪಾರಂಗತಳಾಗಿದ್ದರೂ, ಸಾಲಂಕೃತ ಕನ್ಯಾದಾನ ಮಾಡಲು ರಾಮುನಿಗೂ ಶ್ರೀನಿವಾಸನಿಗೂ ಶಕ್ತಿ ಇಲ್ಲದುದರಿಂದ ಒಳ್ಳೆಯ ತಾಳೆಯ ಮೋತೆಯಂತೆ ಬೆಳೆದ ಸುಂದರಿ ಸೀತಾಲಕ್ಷ್ಮಿ, ಹದಿನೆಂಟು ವರುಷದವರೆಗೆ ಒಂಟಿಯಾಗಿಯೇ ಉಳಿದಳು. ಆ ಹಳ್ಳಿಯಲ್ಲಿ ಅವಳ ರೂಪ ವಿದ್ಯೆ ಎರಡೂ ವರಗಳನ್ನು ಆಕರ್ಷಿಸಲೇ ಇಲ್ಲ. ಕೊನೆಗೆ ರಂಭಾಪುರಿಯ ಗುಂಡಣ್ಣನವರ ಮಗ ಸುಂದರರಾಜ ಮಲ್ಲಿಗೆಹಳ್ಳಿಯ ರಥೋತ್ಸವಕ್ಕೆ ಬಂದಿದ್ದಾಗ ಅವನ ಕಣ್ಣು ಸೀತಾಲಕ್ಷ್ಮಿಯ ಮೇಲೆ ಬಿದ್ದಿತು. ಸೀತಾಲಕ್ಷ್ಮಿಯನ್ನು ನೋಡಿದ ಕೂಡಲೆ ಸುಂದರರಾಜನಿಗೆ ತಾನು ರಥೋತ್ಸವದಲ್ಲಿ ದೇವರ ಸೇವೆಗಾಗಿ ಬಂದಿರುವ ವಿಚಾರವೇ ಮರೆತುಹೋಯಿತು. ನರಸಿಂಹಸ್ವಾಮಿದೇವರು, ಅವನ ಕಣ್ಣಿನಿಂದ ಮರೆಯಾಗಿ ಅವನ ಧ್ಯಾನವೆಲ್ಲ ಸೀತಾಲಕ್ಷ್ಮಿಯ ಮೇಲೆಯೇ ಹೋಯಿತು. ನರಸಿಂಹಸ್ವಾಮಿಯ ಉತ್ಸವ

ಹೊರಟಾಗ ಅದರ ಹಿಂದೆ ಊರ ಸುತ್ತಾ ಸುಂದರರಾಜನೂ ಹೊರಡುತ್ತಿದ್ದನು. ಉತ್ಸವವನ್ನು ಸೇವಿಸಲು ತನ್ನ ಮನೆಯ ಬಾಗಿಲಿನಲ್ಲಿ ಸೀತಾಲಕ್ಷ್ಮಿ ನಿಂತಿರುತ್ತಿದ್ದಳು. ಅಲ್ಲಿಯವರೆಗೆ ಬರುವವರೆಗೇ ಸುಂದರರಾಜನಿಗೆ ಒಂದು ಉತ್ಸಾಹ. ಅಲ್ಲಿ ಬಂದು ಸೀತಾಲಕ್ಷ್ಮಿಯನ್ನು ನೋಡಿದ ನಂತರ ಅವನಿಗೆ ತಾನು ದೇವರ ಹಿಂದೆ ಹೊರಟುದರ ಗುರಿ ಮುಟ್ಟಿದಂತೆ ಭಾಸವಾಗುತ್ತಿತ್ತು. ಅಲ್ಲಿಂದಲೇ ತಾನು ಹಿಂದಕ್ಕೆ ಹೊರಡಬೇಕೆಂದು ಅವನು ಯೋಚಿಸುತ್ತಿದ್ದನು. ಆದರೆ ಹಾಗೆ ಹಿಂದಕ್ಕೆ ಹೊರಟರೆ, ಯಾರಾದರೂ ಕಂಡವರು ಏನಾದರೂ ಅಂದು ಕೊಂಡಾರು ಎಂಬ ಭಯದಿಂದ ಮುಂದುವರಿದು ಊರಸುತ್ತಾ ದೇವರಹಿಂದೆ ಹೋಗುತ್ತಿದ್ದನು. ಸುಂದರರಾಜನಿಗೆ ದೇವರಲ್ಲಿ ಭಕ್ತಿಯಿದ್ದರೂ ಆ ಭಕ್ತಿಯನ್ನು ದೇವಸ್ಥಾನಕ್ಕೆ ಹೋಗುವುದರಲ್ಲಿ ಅವನು ಆವರೆಗೆ ಪ್ರಕಟಿಸಿರಲಿಲ್ಲ. ಮಲ್ಲಿಗೆಹಳ್ಳಿಯ ತಮ್ಮ ಸೋದರಮಾವನ ಮನೆಗೆ ಹಿಂದೆ ಒಂದೆರಡು ಸಲ ಆತ ಬಂದಿದ್ದಾಗಲೂ, ದೇವಸ್ಥಾನಕ್ಕೆ ಹೋಗಿರಲಿಲ್ಲ. ಆದರೆ ಈ ಸಲ ಮಾತ್ರ ಅವನು ಪ್ರತಿದಿನವೂ ದೇವಸ್ಥಾನಕ್ಕೆ ಹೋಗತೊಡಗಿದನು. ಯಾಕೆಂದರೆ ಅಲ್ಲಿ ಅವನಿಗೆ ಸೀತಾಲಕ್ಷ್ಮಿಯ ದರ್ಶನ ತಪ್ಪದೆ ಆಗುತ್ತಿತ್ತು. ಅರ್ಚಕ ತೀರ್ಥವನ್ನು ಕೊಡುವುದಕ್ಕೆ ಬಂದಾಗ, ಸ್ವಲ್ಪ ದೂರದಲ್ಲಿ ನಿಂತಿರುತ್ತಿದ್ದ ಹುಡುಗಿಯರ ಜತೆಯಲ್ಲಿ ಸೀತಾಲಕ್ಷ್ಮಿಯೂ ಮುಂದೆ ಬಂದು ತೀರ್ಥವನ್ನು ತೆಗೆದುಕೊಳ್ಳುತ್ತಿದ್ದಳು. "ದೇವಸ್ಥಾನದಲ್ಲಿ ಅರ್ಚಕ ಕೊಡುತ್ತಿದ್ದ ತೀರ್ಥ, ಬರಿಯ ಹೇಮಾವತಿಯ ನೀರು. ಇದರಲ್ಲಿ ಏನಿದೆ ಮಹಿಮೆ" ಎನ್ನುತ್ತಿದ್ದ ಸುಂದರರಾಜನಿಗೆ ಇದ್ದಕ್ಕಿದ್ದಂತೆ ಆ ತೀರ್ಥದಲ್ಲಿ ಮಹಿಮೆ ಕಾಣತೊಡಗಿತು. ಅವನು ಒಂದು ದಿನವೂ ತೀರ್ಥವನ್ನು ಶ್ರದ್ಧೆಯಿಂದ ತೆಗೆದುಕೊಳ್ಳುವುದನ್ನು ಬಿಡಲಿಲ್ಲ. ಇವನ ಭಕ್ತಿಯನ್ನೂ ಆಸ್ತಿಕತೆಯನ್ನೂ ಕಂಡು ನಿಜವಾಗಿ ವೈದಿಕರಾದ ಅವನ ಸೋದರಮಾವನವರಿಗೇ ಆಶ್ಚರ್ಯವಾಯಿತು. ದೇವಸ್ಥಾನಕ್ಕೆ ಅಪರೂಪವಾಗಿ ಹೋಗುತ್ತಿದ್ದ ತಮ್ಮ ಮಗ ವಾಸುವಿನೊಂದಿಗೆ ಅವರು "ನೋಡು ಸುಂದರರಾಜ ಹೇಗಿದ್ದಾನೆ? ಒಂದು ದಿನ ದೇವಸ್ಥಾನಕ್ಕೆ ತಪ್ಪುತ್ತಾನೆಯೆ? ಏನು ಭಕ್ತಿ ಶ್ರದ್ಧೆ. ಹುಡುಗರು ಹಾಗಲ್ಲವೇ ಇರಬೇಕಾದುದು" ಎನ್ನುತ್ತಿದ್ದರು. ಅದನ್ನು ಕೇಳಿ ಸುಂದರರಾಜನಿಗೇ ನಾಚಿಕೆಯಾಗುತ್ತಿದ್ದಿತು.

ರಂಭಾಪುರಿ, ಮಲ್ಲಿಗೆಹಳ್ಳಿಗೆ ಸುಮಾರು ಹದಿನೈದು ಮೈಲಿಯಲ್ಲಿರುವ ಹಳ್ಳಿ. ಸುಂದರರಾಜನ ತಂದೆ ಗುಂಡಣ್ಣನವರು ಅಲ್ಲಿ ಬಡ ಜವಿಾನುದಾರರು. ಸುಂದರರಾಜನಲ್ಲದೆ ಅವರಿಗೆ ಮೂರು ಗಂಡು ಮಕ್ಕಳಿದ್ದರು. ಗುಂಡಣ್ಣನವರಿಗೆ ಎರಡನೆಯ ಮದುವೆ ಆಗಿತ್ತು. ಸುಂದರರಾಜ ಎರಡನೆಯ ಹೆಂಡತಿಯಲ್ಲಿ ಹುಟ್ಟಿದ ಮೊದಲನೆ ಗಂಡು. ಗುಂಡಣ್ಣನವರಿಗೆ ಹೆಣ್ಣು ಮಕ್ಕಳು ಇರಲಿಲ್ಲ. ಗುಂಡಣ್ಣನವರಾಗಲಿ ಅವರ ಮಕ್ಕಳಾಗಲಿ ಯಾರೂ ವಿದ್ಯಾವಂತರಲ್ಲ. ರಂಭಾಪುರಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ಮಟ್ಟವನ್ನು ವಿಾರಿದ ಬ್ರಾಹ್ಮಣರಾರೂ ಇರಲೇ ಇಲ್ಲ. ಅವರೆಲ್ಲ ದರಿದ್ರರು. ಒಂದೆರಡು ತುಂಡು ಹೊಲಗದ್ದೆ ಮಾಡಿಕೊಂಡು ದನಗಳನ್ನು ಮೇಯಿಸಿಕೊಂಡು ಬಡತನದ ಬಾಳನ್ನು ನೂಕುತ್ತಿದ್ದವರು. ಕೆಲವರಿಗೆ ಹತ್ತು ಇಪ್ಪತ್ತು ಗುಂಟೆ ತೋಟಗಳಿರುತ್ತಿದ್ದವು. ಇಂತಹ ಅವಿದ್ಯಾವಂತರ ಮನೆಯಲ್ಲಿ ಹುಟ್ಟಿದವನಾದ ಸುಂದರರಾಜನಿಗೆ ಮನೆಯಲ್ಲಿಯೂ ತಾಯಿಯ ಪ್ರೀತಿ ಹೆಚ್ಚಾಗಿ ದೊರಕಲಿಲ್ಲ. ಮೊದಲನೆಯ ಹೆಂಡತಿಯ, ವಯಸ್ಸಾದ ಮೂರು ಗಂಡು ಮಕ್ಕಳಮೇಲೆ ಗುಂಡಣ್ಣನವರಿಗೆ, ನಾಲ್ಕನೆ ಮಗ ಅಂತಹ ಅಪರೂಪವಾಗಿ ತೋರಲಿಲ್ಲ. ಸುಂದರರಾಜನ ತಾಯಿ ಸಹ ತೀರ ಬಡಸಂಸಾರದಿಂದ ಬಂದಿದ್ದುದರಿಂದ ಆ ಮನೆಯಲ್ಲಿ ಅವಳಿಗೆ ಏನೂ ಗೌರವವಿರಲಿಲ್ಲ. ಗುಂಡಣ್ಣನವರ ಹಿರಿಯ ಹೆಂಡತಿಯ ಮಕ್ಕಳಿಗೆ, ಈ ಎರಡನೆಯ ಮದುವೆ ತಂದೆಗೆ ಆಗದಿದ್ದರೂ ನಷ್ಟವಿರಲಿಲ್ಲ ಎಂಬ ಭಾವನೆ ಇತ್ತು. ಆ ಭಾವವನ್ನು ಅವರು ತಂದೆಯ ಎದುರಿಗೆ ವ್ಯಕ್ತಪಡಿಸದಿದ್ದರೂ ಚಿಕ್ಕತಾಯಿಯ ಎದುರಿಗೆ ನಿರ್ದಾಕ್ಷಿಣ್ಯವಾಗಿ ನಿರ್ಲಜ್ಜೆಯಿಂದ ವ್ಯಕ್ತಪಡಿಸುತ್ತಿದ್ದರು. ಮಲತಾಯಿಯ ಮಕ್ಕಳ ಈ ಮೌನದ್ವೇಷದಿಂದ ಕಲ್ಯಾಣಿಗೆ ಮಗನಲ್ಲಿದ್ದ ನಿಜವಾದ ಪ್ರೇಮಕ್ಕೆ ಹುಳಿಹಿಂಡಿದಂತೆ ಆಗಿತ್ತು. ತನಗೆ ಮೂರು ವರುಷವಾಗುವ ವೇಳೆಗೇ ಸುಂದರರಾಜನಿಗೆ ಅಣ್ಣಂದಿರ ತಿರಸ್ಕಾರ, ಮಕ್ಕಳಿಗಿರುವ ಸ್ವಾಭಾವಿಕ ಬುದ್ಧಿಯಿಂದ ಗೊತ್ತಾಗಿತ್ತು. ಹಿರಿಯ ಹೆಂಡತಿಯ ಮಕ್ಕಳ ಈ ಕೆಟ್ಟಗುಣ ಗುಂಡಣ್ಣನವರಿಗೂ ಗೊತ್ತಾಗಿತ್ತು. ಆದರೆ 'ತಾನು ಎರಡನೆಯ ಮದುವೆ ಮಾಡಿಕೊಂಡುದು ತಪ್ಪು ಇರಬಹುದೇನೋ, ಎಂಬ ಭಾವ ಅವರಿಗೂ ಈಚಿಗೆ ಬೆಳೆಯುತ್ತಿದ್ದುದರಿಂದ ಅವರೂ ಮಾತನಾಡದೆ ಸುಮ್ಮಗಿದ್ದುಬಿಟ್ಟಿದ್ದರು.

ಬಾಲ್ಯದಲ್ಲಿ ಹುಡುಗರಿಗೆ ಯಾವ ಆದರಣೆ ಪೋಷಣೆ ದೊರೆಯಬೇಕಾಗಿದ್ದಿತೋ ಅವೊಂದೂ ಆತನಿಗೆ ದೊರೆಯಲಿಲ್ಲ. ಸುಂದರರಾಜನೂ ತನ್ನ ಇತರ ಅಣ್ಣಂದಿರಂತೆ ಕನ್ನಡ ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದನು. ಅವರೂ ಭೂಮಿಯನ್ನು ಕೆರೆಯುತ್ತಾ ದನಗಳನ್ನು ಮೇಯಿಸುತ್ತಾ ಊರಿನಲ್ಲಿ ಉಳಿದಿದ್ದಂತೆ ತಾನೂ ಉಳಿದನು. ಅವನ ಮೂವರು ಅಣ್ಣಂದಿರಿಗೂ ಮದುವೆಯಾಗಿತ್ತು.

ಸುಂದರರಾಜ ಹೀಗೆ ಅವಿದ್ಯಾವಂತನಾಗಿದ್ದರೂ ಅವನ ಪೂರ್ವಪುಣ್ಯದಿಂದ ಅವನಿಗೆ ಸಂಸ್ಕೃತಿ ಒಲಿದಿತ್ತು. ಆ ತುಂಬು ಸಂಸಾರದ ವೃಕ್ಷಕ್ಕೆ ಅವನೇ ಪುಷ್ಪವಾಗಿ ತೋರುತ್ತಿದ್ದನು. ಅವನ ಅಣ್ಣಂದಿರನ್ನೂ ತಂದೆಯನ್ನೂ, ರಂಭಾಪುರಿಯ ಇತರ ಬ್ರಾಹ್ಮಣರನ್ನೂ ನೋಡಿದಕೂಡಲೇ "ಇವರು ದಡ್ಡರು. ಒಳಿದು ಮಾಡಿದುದಲ್ಲ ಕಡಿದು ಮಾಡಿದುದಲ್ಲ" ಎಂಬ ಭಾವನೆ ಬರುತ್ತಿದ್ದರೂ ಸುಂದರರಾಜನನ್ನು ನೋಡಿದರೆ, ಈತನ ಸಂಸ್ಕಾರ ಬೇರೆ ಎಂಬ ನಂಬಿಕೆ ಉಂಟಾಗುತ್ತಿದ್ದಿತು. ಅವನ ಮುಖದಲ್ಲಿಯೇ ಒಂದು ಬಗೆಯ ಸುಸಂಸ್ಕೃತಿಯ ಹೊಳಪೂ ದೂರದ ಸೌಂದರ್ಯಲೋಕ ದರ್ಶನದ ಅನುಭವ ನೋಟವೂ ತೋರುತ್ತಿದ್ದಿತು. ತನ್ನ ಅಣ್ಣಂದಿರಂತೆ ಅವನೂ ತೋಟವನ್ನು ಅಗೆಯಲು ಹೋಗುತ್ತಿದ್ದನು. ದನಗಳನ್ನು ಮೇಯಿಸಲು ಹೋಗುತ್ತಿದ್ದನು. ಆದರೆ ಅವರಮಟ್ಟಿಗೆ ಅವು ಬರಿಯ ಜೀವನದ ಪ್ರಶ್ನೆಗಳಾಗಿದ್ದವು. ಸುಂದರರಾಜನಿಗೆ ಅವು ಜೀವನದ ಮೂಲಕ ಮತ್ತೊಂದು ಆಧ್ಯಾತ್ಮ ಜಗತ್ತಿಗೆ ಮಾರ್ಗಗಳಾಗಿದ್ದವು. ತೋಟದ ಬಾಳೆಯ, ನೀಳವಾದ ರೇಶಿಮೆಯಂತಹ ಎಲೆಯನ್ನು ನೋಡಿ ಅವನ ಮನಸ್ಸು ಸೃಷ್ಟಿಯ ವೈಚಿತ್ರ್ಯದಲ್ಲಿ ಲೀನವಾಗುತ್ತಿತ್ತು. ಅವನ ಅಣ್ಣಂದಿರು ಬಾಳೆಯ ಗೊನೆಯನ್ನು ಕಡಿದು ಬಂದ ದುಡ್ಡಿನಿಂದ ಮನೆಯ ಬಂಗವನ್ನು ನೀಸುತ್ತಿದ್ದರು. ಸುಂದರರಾಜನಿಗೆ ಬಾಳೆಯು ಒಂದು ಜೀವನದ ಅದ್ಭುತವಾದ ಸಾರ್ಥಕ ಇತಿಹಾಸವಾಗಿ ತೋರುತ್ತಿತ್ತು. "ಬಾಳೆ ಒಂದು ಗೊನೆ ಬಿಟ್ಟು ಸತ್ತುಹೋಗುತ್ತದೆ. ಇದು ಹುಟ್ಟುವುದು ಉಪಕಾರಕ್ಕಾಗಿಯೇ ಇದರಿಂದಲೂ ಮನುಷ್ಯ ಎಷ್ಟೋ ಕಲಿಯಬಹುದು. ಬಾಳೋನಿಗೆ ಒಂದು ಮಾತು, ಬಾಳೆಗೆ ಒಂದು ಗೊನೆ. ಹಾಗೆಯೇ ತೆಂಗಿನಕಾಯಿ, ಅವನ ಅಣ್ಣಂದಿರಿಗೆ ಬರಿಯ ರೂಪಾಯಿಗೆ ಇಷ್ಟು ಕಾಯಿ ಕೊಪ್ಪರಿ. ಆದರೆ ಸುಂದರ

ರಾಜನಿಗೆ ತೆಂಗಿನ ವೃಕ್ಷದ ಬಾಳು ಅದ್ಭುತ ತ್ಯಾಗಜೀವನ. ಆ ವೃಕ್ಷದ ಗಾಂಭೀರ್ಯದಿಂದ ಅವನು ಮೋಹಿತನಾಗಿದ್ದನು. ಮೇಲಿನವರೆಗೆ ಒಂದೇ ಸಮನಾಗಿ ನೆಟ್ಟಗೆ ಹೋಗಿ, ಅಲ್ಲಿ ನಾಲ್ಕು ಕಡೆಗೂ ವಿಶಾಲವಾದ ಹಸಿರು ಗರಿಗಳನ್ನು ಬೀಸಿ ಫಲಗಳನ್ನು ಹೊತ್ತ ದೃಶ್ಯದ ಅದ್ಭುತ ಅನಿರ್ವಚನೀಯ ಸೌಂದರ್ಯ ಅವನನ್ನು ಆಕರ್ಶಿಸಿತ್ತು. ತೋಟದ ನೆಲದ ಹಸಿರು ಹುಲ್ಲಿನಮೇಲೆ ಕುಳಿತು, ಗಗನ ಚುಂಬಿಗಳಾದ, ಆನಂದದಿಂದ ನಲಿದಾಡುತ್ತಿರುವುವೋ ಎಂಬಂತೆ ತೂರಿಯಾಡುತ್ತಿರುವ ಫಲಭರಿತವಾದ ತೆಂಗಿನ ವೃಕ್ಷಗಳನ್ನೂ, ಅವುಗಳ ಮೇಲುಗಡೆ ದೂರದಲ್ಲಿ ಅಂತರಿಕ್ಷ ಸಮುದ್ರದಲ್ಲಿ ನಾನಾ ಬಣ್ಣ ನಾನಾ ಆಕಾರದಲ್ಲಿ ತೇಲುತ್ತಿರುವ ದೋಣಿ ಮೋಡಗಳನ್ನೂ ನೋಡಿ, ಅವನು ಆತ್ಮಾನಂದವನ್ನು ಹೊಂದುತ್ತಿದ್ದನು.

ಸುಂದರರಾಜನಿಗೆ ಸಂಗೀತದ ಮೇಲಿನ ಆಸೆಯೂ ಹಾಗೆಯೇ ಅವನ ಪೂರ್ವಾರ್ಜಿತ ಸಂಸ್ಕೃತಿಯಿಂದಲೇ ಉಂಟಾಗಿತ್ತು. ರಂಭಾಪುರಿಯಲ್ಲಿ ಯಾರೊಬ್ಬರ ಸಮೀಪಕ್ಕೂ, ಒಂದು ಮೈಲಿಯವರೆಗೆ ಸಂಗೀತ ಸೇರುತ್ತಿರಲಿಲ್ಲ. ಅದೊಂದು ಶಾಸ್ತ್ರ, ಕಲೆ ಎಂಬುದನ್ನೇ ಯಾರೂ ಅಲ್ಲಿ ಒಪ್ಪುವವರಾಗಿರಲಿಲ್ಲ. ಆದರೆ ಸುಂದರರಾಜನಿಗೆ ಮಾತ್ರ ಹಾಡುಗಾರಿಕೆ, ಹುಟ್ಟುಗುಣವಾಗಿ ಬಂದಿತ್ತು. ಅವನು ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿರಲಿಲ್ಲ ಹಾಗೆ ಅಭ್ಯಾಸಮಾಡಿಸುವವರು ಆ ಸುತ್ತಿನಲ್ಲಿ ಯಾರೂ ಇರಲಿಲ್ಲ. ಆದರೆ ಸುಂದರ ರಾಜನ ಕಂಠಸ್ವರ ಮಾತ್ರ ಅವನಿಗೆ ದೇವದತ್ತವಾಗಿ ಬಂದಿದ್ದಂತೆ ತೋರುತ್ತಿದ್ದಿತು. ದೇವರ ನಾಮಗಳು, ದಾಸರ ಪದಗಳು, ಕೀರ್ತನೆಗಳು ಅವನ ಬಾಯಿಂದ ಬಹಳ ಮಧುರವಾಗಿ ಹೊರಡುತ್ತಿದ್ದುವು. ಅವನು ಹಾಡುತ್ತಿದ್ದ "ಎಲ್ಲಿರುವೆ ತಂದೆ ಬಾರೊ?" ಎಂಬುದನ್ನು ಕೇಳಿ ಹಾಡುಗಾರಿಕೆಯಲ್ಲಿ ತಿರಸ್ಕಾರವಿದ್ದ ಅವನ ಜತೆಯವರೂ ಸಹ, ಒಂದು ಘಳಿಗೆ ಮುಗ್ಧರಾಗುತ್ತಿದ್ದರು. ಸುಂದರರಾಜ ತೋಟದಲ್ಲಿ ಕೆಲಸಮಾಡುತ್ತಿರುವಾಗಲೆಲ್ಲ ಹಾಡುತ್ತಲೇ ಇರುತ್ತಿದ್ದನು. ಅದರಿಂದ ಅವನಿಗೆ ಕೆಲಸದ ಶ್ರಮವೂ ಅಷ್ಟಾಗಿ ತೋರುತ್ತಿರಲಿಲ್ಲ.

ಕೊನೆಯಲ್ಲಿಯೂ ಈ ಗಾನದಾಸ್ಯವೇ ಅವನನ್ನು ಸೀತಾಲಕ್ಷ್ಮಿಗೆ ಗಂಟು ಹಾಕಿದುದು. ಮಲ್ಲಿಗೆಹಳ್ಳಿ ರಥೋತ್ಸವದ ಮೊದಲ ರಾತ್ರಿ, ದೇವಸ್ಥಾನದಲ್ಲಿ

ಕಲ್ಯಾಣೋತ್ಸವ, ರಾತ್ರಿ ರಾತ್ರಿಯೂ ನಡೆಯಿತಷ್ಟೆ. ಆಗ ಅರ್ಚಕ ಈ ಕಡೆ ಭಗವಂತನ ಕಲ್ಯಾಣದ ಮಂತ್ರಗಳನ್ನು ಹೇಳುತ್ತಿರುವಾಗ, ಸ್ತ್ರೀಯರ ಗುಂಪಿನಿಂದ ಹಾಡುಗಳ ಸುರಿಮಳೆಯಾಗುತ್ತಿದ್ದಿತು. ಹಾಡುಗಳನ್ನು ಹೇಳುತ್ತಿದ್ದವರಲ್ಲಿ ವಯಸ್ಸಾದ ಸುಮಂಗಲಿಯರೂ ವಿಧವೆಯರೂ ಹೆಚ್ಚಾಗಿದ್ದರು. ಅವರ ಹಾಡುಗಳೆಲ್ಲ ಮುಗಿದಮೇಲೆ ಇದ್ದಕ್ಕಿದ್ದಂತೆ ಅವರ ಮಧ್ಯೆ ಕೋಮಲಕಂಠದಿಂದ ಒಂದು ಧ್ವನಿ ಹೊರಟಿತು. ಇಂಪಾದ ಕೊರಲಿನ ಮಹಿಮೆ ಅಂಥಾದ್ದು. ಅದ್ಭುತ ಜ್ಯೋತಿ, ನೇತ್ರಗಳನ್ನು ಆಕರ್ಶಿಸುವಂತೆ ಆ ಗಾನ, ಜನರ ಕಿವಿಯನ್ನು ತನ್ನ ಕಡೆಗೆ ಎಳೆಯಿತು. ಆ ಗಾನದ ಹೊರತು ಅಲ್ಲಿ ಮತ್ತೇನೂ ಇರಲೇ ಇಲ್ಲ. ಆ ವಾತಾವರಣವನ್ನೆಲ್ಲ ಆ ಗಾನವೇ ಸಾರ್ವಭೌಮವಾಗಿ ಆವರಿಸಿಕೊಂಡಿತು. ಸೀತಾಲಕ್ಷ್ಮಿ ಒಂದು ಹಾಡನ್ನು ಹಾಡಿದಳು. ಸುತ್ತಲಿದ್ದವರು ಅಷ್ಟಕ್ಕೆ ಬಿಡಲಿಲ್ಲ. ಎರಡಾಯಿತು, ಮೂರಾಯಿತು, ಆರಾಯಿತು. ಬೆಳದಿಂಗಳಿನ ಸೇಚನವಾದಂತೆ ಗಾನಸುಧೆಯಲ್ಲಿ ಶ್ರೋತೃವೃಂದ ಸೊಕ್ಕಿಹೋಯಿತು. ಅರ್ಚಕರೂ ಸಹ ಮಂತ್ರವನ್ನು ಮರೆತು ಹಾಡನ್ನು ಕೇಳುತ್ತಾ ನಿಂತುಬಿಟ್ಟರು. ಆ ರಾತ್ರಿ ಭಗವಂತನ ದರ್ಶನಕ್ಕಿಂತ ಗಾನದ ಸೊಂಪು ಜನರ ಮನಸ್ಸನ್ನು ಹೆಚ್ಚಾಗಿ ಆಕರ್ಶಿಸಿತು. ಸೀತಾಲಕ್ಷ್ಮಿಯು ಪಿಟೀಲು ವಾದನದಲ್ಲಿ ಪ್ರವೀಣಳಾಗಿರುವಂತೆ ಬಾಯಿ ಹಾಡುಗಾರಿಕೆಯಲ್ಲಿಯೂ ಇಷ್ಟು ಅದ್ಭುತಳಾಗಿರುವಳೆಂಬುದು, ಅವಳ ಸಂಗೀತ ಗುರುವಾದ ಮುಖ್ಯೋಪಾಧ್ಯಾಯಿನಿಗೇ ತಿಳಿದಿರಲಿಲ್ಲ.

ಮಾರನೆಯ ದಿನ ಸುಂದರರಾಜನು ಪುಷ್ಪದಿಂದ ಆಕರ್ಶಿತವಾದ ಭ್ರಮರದಂತೆ ಸೀತಾಲಕ್ಷ್ಮಿಯ ಮನೆಯ ಮುಂದುಗಡೆ ನದಿಯ ಕಡೆಗೆ ಹೋಗುತ್ತಿದ್ದನು. ಬಾಗಿಲಿನಲ್ಲಿ ನಿಂತಿದ್ದ ರಾಮು, ಸ್ವಾಭಾವಿಕವಾಗಿ ಅವನನ್ನು ಒಳಕ್ಕೆ ಕರೆದನು. ಸುಂದರರಾಜನು ಒಬ್ಬ ವರನೆಂಬುದು ಎಷ್ಟೋ ದಿವಸಗಳಿಂದಲೂ ರಾಮುನಿಗೆ ಗೊತ್ತಾಗಿದ್ದಿತು. ರಾಮು, ಸೀತಾಲಕ್ಷ್ಮಿಯ ವಿವಾಹ ಪ್ರಸ್ತಾಪಮಾಡಿ, ವರನಿಲ್ಲವಲ್ಲ ಎಂದು ಹೇಳಿದಾಗೆಲ್ಲ, ಅವನ ನೆಂಟರೂ ಮಿತ್ರರೂ ಸುಂದರರಾಜನನ್ನೂ ತೋರಿಸುತ್ತಿದ್ದರು. ಸಾಧಾರಣವಾಗಿ ಹಳ್ಳಿಗಳಲ್ಲಿ ಸುತ್ತಮುತ್ತ ಇರುವ ವರಗಳು ಎಲ್ಲರಿಗೂ ಗೊತ್ತಿರುತ್ತವೆ. ಅಲ್ಲದೆ ರಂಭಾಪುರಿಯವರಿಗೆ ಹೆಣ್ಣುಕೊಟ್ಟ, ಹೆಣ್ಣು ತಂದುಕೊಂಡ ಅನೇಕ

ಕುಟುಂಬಗಳು ಮಲ್ಲಿಗೆಹಳ್ಳಿಯಲ್ಲಿದ್ದುದರಿಂದ ಎಲ್ಲರಿಗೂ ಸುಂದರರಾಜನ ವಿಚಾರ ಗೊತ್ತಾಗಿಯೇ ಇತ್ತು. ಆದರೆ ತಂದುಕೊಳ್ಳುತ್ತಾರೋ ಇಲ್ಲವೋ ಎಂಬ ಅನುಮಾನದಿಂದ ರಾಮು ಆ ವಿಚಾರವನ್ನು ಸುಂದರರಾಜನ ತಂದೆ ತಾಯಿಯರಲ್ಲಿ ಪ್ರಸ್ತಾಪಿಸಿರಲಿಲ್ಲ. ಹಿಂದೆ ಒಂದೆರಡು ಸಲ ಈ ವಿಚಾರವಾಗಿ ಗುಂಡಣ್ಣನವರನ್ನು [ಸುಂದರರಾಜನ ತಂದೆ] ಕೇಳಿ ಎಂದು ಆತ ರಂಭಾ ಪುರಿಯ ತನ್ನ ನೆಂಟರಿಗೆ ಹೇಳಿದಾಗ ಆ ನೆಂಟರಿಂದ "ತಂದೆ ತಾಯಿಗಳಿಲ್ಲದ ಹೆಣ್ಣನ್ನು ಮದುವೆಯಾಗಲು ಗುಂಡಣ್ಣನವರಿಗೂ ಅವರ ಹೆಂಡತಿಗೂ ಇಷ್ಟ ವಿಲ್ಲ" ಎಂದು ಸುದ್ದಿ ಬಂದಿತ್ತು. ಆದರೂ ರಾಮುವು, ವರಗಳ ಪಟ್ಟಿಯಿಂದ ಇನ್ನೂ ಸುಂದರರಾಜನನ್ನು ಕಿತ್ತುಹಾಕಿರಲಿಲ್ಲ.

ಆದರೆ ಇಂದು ಸುಂದರರಾಜ ತನ್ನ ಮನೆಮುಂದೆ, ರಥೋತ್ಸವದ ಗದ್ದಲ ವೈಭವವನ್ನೂ ನಹ ಕಡೆಗಣಿಸಿ ಸುಳಿದಾಗ ಅವನ ಮನಸ್ಸು ಸೀತಾ ಲಕ್ಷ್ಮಿಗಾಗಿ ಎಷ್ಟು ಹಸಿದಿತ್ತೆಂಬುದು ರಾಮುವಿಗೆ ಹೇಗೆ ಗೊತ್ತಾಗಬೇಕು! ಅವನು ಸ್ವಾಭಾವಿಕವಾಗಿ ಸುಂದರರಾಜನನ್ನು ಒಳಕ್ಕೆ ಕರೆದು, ಪ್ರೀತಿಯಿಂದ ಕೂರಿಸಿ ಇಡ್ಲಿಯನ್ನೂ ಕಾಫಿಯನ್ನೂ ತರುವಂತೆ ಹೆಂಡತಿಗೆ ಹೇಳಿದನು. ಆ ವೇಳೆಗೆ ಸರಿಯಾಗಿ ಸೂರ್ಯಮಂಡಲೋತ್ಸವದ ಅಡ್ಡೆ ಹೊರಲು ರಾಮುವನ್ನೂ ಶ್ರೀನಿವಾಸನನ್ನೂ ಕೂಗುತ್ತಾ ಸುಂದರರಾಜನ ಮಾವ ಒಳಕ್ಕೆ ಬಂದರು. ರಾಮುವು "ಬನ್ನಿ ಬನ್ನಿ ಒಂದೇ ಚೂರು ಇಡ್ಲಿ" ಎಂದನು. ಸುಂದರ ರಾಜನ ಮಾವ "ಇಲ್ಲ ಇಲ್ಲ ಸಾಧ್ಯವಿಲ್ಲ" ಎಂದರು. ರಾಮುವು "ಸಾಧ್ಯ ವಿಲ್ಲ ಅಂದ್ರೆ ಬಿಡ್ತೇವ್ಯೆ ಇವತ್ತು ರಥೋತ್ಸವ, ಇಂತಹ ದಿವ್ಸ ನೀವು ಸಿಕ್ಕ ಬೇಕಲ್ಲ" ಎಂದನು. ಮಾವನವರು ಸುಂದರರಾಜನನ್ನು ನೋಡಿ "ಮನೇಲಿ ಏನನ್ನೂ ತಿನ್ನದೆ ಹೋದ ಅಂತ ನಿಮ್ಮ ಅತ್ತೆ ಕೊರಗತಿದ್ದಳು. ನೀನು ಏಳು ಮನೆ ಚೀಲಿಯಾಗಿದ್ದೀಯೆ" ಎಂದು ನಕ್ಕರು. ರಾಮುವು "ಎಲ್ಲಿ ಬರ್ತಾನೆ! ನೋಡಿದರೆ ದೂರದ ನೆಂಟಸ್ತನವಾಗಬೇಕು. ಈಗಿನ ಹುಡುಗರಿಗೆ ಹಿಂದಲ ಬಾಂಧವ್ಯವೆಲ್ಲ ಮರತೇಹೋಗಿದೆ" ಎಂದನು. ಸುಂದರರಾಜನು "ಬರದೇ ಏನು" ಎಂದನು. ದೇವರ ಉತ್ಸವಕ್ಕಾಗಿ, ನೆಲವನ್ನು ನೀರಿನಿಂದ ಸೇಚನೆ ಮಾಡಿ ರಂಗೋಲೆ ಇಡಲು, ಸೀತಾಲಕ್ಷ್ಮಿ ಸೊಂಟದಮೇಲೆ ನೀರಿನ ಕೊಡ ವನ್ನಿಟ್ಟುಕೊಂಡು ಬಾವಿಕಡೆಯಿಂದ ಬಂದಳು. ಅವಳನ್ನು ಕಂಡಕೂಡಲೇ,

ಸುಂದರರಾಜನು, ಬಾಯಿಗೆ ತೆಗೆದುಕೊಂಡು ಹೋಗುತ್ತಿದ್ದ ಇಡ್ಲಿ ತುತ್ತನ್ನು ಹಾಗೆಯೇ ಹಿಡಿದುಕೊಂಡು, ಅವಳ ಕಡೆಯೇ ನೋಡುತ್ತಾ ಕುಳಿತುಬಿಟ್ಟನು. ಮಾವನವರು ಮಾತ್ರ ಸದರವಾಗಿ "ಸೀತು! ಭೇಷ್ ಎಲ್ಲಿ ಕಲಿತೆಯೇ ಅಷ್ಟೊಂದು ಹಾಡು, ಅಬ್ಬ ಜನವೆಲ್ಲ ಆನಂದದಲ್ಲಿ ಕುಣಿದಾಡಿಬಿಟ್ಟಿತು. ನಿನ್ನ ಹಾಡಿನಿಂದ ಕಲ್ಯಾಣೋತ್ಸವಾನೇ ಹೆಚ್ಚು ಚೆಂದವಾಗಿಬಿಟ್ಟಿತು. ಬರಿಯ ಪಿಟೀಲು ಕೊಯ್ ಕೊಯ್ ಎನ್ನಿಸುತ್ತಾಳೆ ಎಂದು ಕೇಳಿದ್ದೆ. ನನಗೆ ಬಾಯಿ ಹಾಡುಗಾರಿಕೆ ಇಲ್ಲದ ಬರಿಯ ಪಿಟೀಲು ಶಬ್ದ ಹೇಗೆ ಹೇಗೊ ಆಗುತ್ತೆ. ಮಧ್ಯೆ ಮಧ್ಯ ಬಾಯಲ್ಲಿ ಒಂದೆರಡು ಹಾಡನ್ನಾದರೂ ಆಡದಿದ್ದರೆ ಪಿಟೀಲನ್ನು ಕಿತ್ತು ಆಸಗೆ ಎಸೆದು ಬಿಡೋಣ ಅನ್ನಿಸುತ್ತೆ. ನನಗೆ ಪಿಟೀಲಿಗಿಂತ ಬಾಯಿ ಹಾಡುಗಾರಿಕೆಯೇ ಚೆಂದ, ಭೇಷ್ ಭೇಷ್ ಮದುವೆಯಾಗೋರಿಗೆ ಭರ್ಜರಿ ಹುಡುಗಿ" ಎಂದರು. ರಾಮುವು "ವರ ಎಲ್ಲಿದೆಯೋ ದೇವರಿಗೇ ಗೊತ್ತು. ಅಂದಹಾಗೆ ಸುಂದರರಾಜ ದೊಡ್ಡಮನಸ್ಸು ಮಾಡಿದರೆ ಆಗುತ್ತೆ. ತಾಯಿ ತಂದೆ ಇಲ್ಲದ ತಬ್ಬಲಿ ಹುಡುಗಿ, ಸರಿಯಾಗಿ ಮಾಡುತ್ತಾರೋ ಇಲ್ಲವೋ ಎಂದುಕೊಳ್ಳಬೇಡಯ್ಯ. ಸೀತು ನಮ್ಮ ತಂದೆ ತಾಯಿಯರ ಪ್ರೀತಿಯ ಹೆಣ್ಣು, ಶಕ್ತ್ಯಾನುಸಾರ ಚನ್ನಾಗಿಯೇ ಮಾಡುತ್ತೇವೆ. ನಮ್ಮ ಚಿಕ್ಕಮ್ಮನ ಸ್ವಲ್ಪ ದುಡ್ಡು ಇದಕ್ಕಾಗಿ ಇದೆ" ಎಂದನು.

ಸುಂದರರಾಜನ ಮಾವನವರು "ಹೌದು. ಅದೇನೋ ಕೇಳಪ್ಪ" ಎಂದರು. ರಾಮುವು "ನಮ್ಮ ಚಿಕ್ಕಮ್ಮನಿಗೆ ಸೀತಾಲಕ್ಷ್ಮಿ ಪ್ರಾಣ. ಚಿಕ್ಕಮ್ಮನಿಗೆ ಮದುವೆಯಾದ ಒಂದೇ ತಿಂಗಳಿಗೆ ವೈಧವ್ಯ ಬಂದಿತಂತೆ. ಮದುವೆಯ ವೇಳೆಗೇ ತಂದೆ ತಾಯಿಯರು ಸತ್ತಿದ್ದುದರಿಂದ, ಆಕೆಯೂ ನಮ್ಮ ಮನೆಗೇ ಬಂದು ನಮ್ಮ ತಾಯಿಯ ಜತೆಯಲ್ಲಿ ಇರತೊಡಗಿದಳು. ನಮ್ಮ ತಾಯಿಯನ್ನು ನೀವೇ ನೋಡಿದ್ದೀರಿ. ಅವಳಿಗೆ ಮೈ ಯಾವಾಗಲೂ ಚೆನ್ನಾಗಿರುತ್ತಿರಲಿಲ್ಲ. ನಮ್ಮ ಚಿಕ್ಕಮ್ಮ ಬಂದುದರಿಂದ ನಮ್ಮ ತಾಯಿಗೆ ಮನೆಯ ಕೆಲಸಗಳೆಲ್ಲ ಬಹಳ ಹಗುರವಾದುವು. ಚಿಕ್ಕಮ್ಮ ತನ್ನ ಅಪಾರವಾದ ವೈಧವ್ಯ ದುಃಖವನ್ನು ನುಂಗಿಕೊಂಡು ಒಂದು ಬಗೆಯ ಯೋಗಿನಿಯಂತೆ ನಮ್ಮ ಅಮ್ಮನಿಗೆ ಸಹಾಯಮಾಡತೊಡಗಿದಳು. ವರುಷೇ ವರುಷೆ ಅಮ್ಮನ ಬಾಣಂತನ, ತಂದೆ ವ್ಯವಸಾಯ ಮಾಡುತ್ತಿದ್ದುದರಿಂದ ಆಳುಗಳಿಗೆ ಅಡಿಗೆ

ದನಕರು ಎತ್ತುಗಳ ನಿಗಾ ಇವುಗಳಲ್ಲೆಲ್ಲ ಚಿಕ್ಕಮ್ಮ ಅಪ್ಪನಿಗೆ ಬಲಗೈ ಯಾಗಿದ್ದರು. ನಮ್ಮ ತಂದೆಯ ಸ್ವಭಾವವೂ ನಿಮಗೆ ಗೊತ್ತೇ ಇದೆ. ಯಾರಾದರೂ ಸಿಕ್ಕಿಬಿಟ್ಟರೆ ತಂದೆ ಪೂರ್ಣವಾಗಿ ಅವರ ಮೇಲೆಯೇ ಅವಲಂಬಿಸಿಬಿಡುತ್ತಿದ್ದರು. ಇದರಿಂದ ಚಿಕ್ಕಮ್ಮನಿಗೆ ಕಾರ್ಯದ ಹೊರೆ ಇನ್ನೂ ಹೆಚ್ಚಾಯಿತು. ಮಕ್ಕಳಾದ ನಮ್ಮನ್ನಂತೂ ಆಕೆ ತನ್ನ ಸ್ವಂತ ಮಕ್ಕಳಿ ಗಿಂತ ಹೆಚ್ಚಾಗಿ ಪ್ರೀತಿಸಿ ಸಲಹುತ್ತಿದ್ದುದರಿಂದ ನಮಗೆ ಇಬ್ಬರು ತಾಯಂದಿರು ದೊರೆತಂತೆ ಆಗಿತ್ತು. ಚಿಕ್ಕಮ್ಮ ಇಲ್ಲದಿದ್ದರೆ ಈ ಬಾಣಂತನಗಳ ಹೊಡೆತ ದಲ್ಲಿ ನಾವು ಬದುಕುವುದೇ ಕಷ್ಟವಾಗುತ್ತಿತ್ತೆಂದು ನಮ್ಮ ತಾಯಿ ಹೇಳು ತ್ತಿದ್ದರು.

"ಚಿಕ್ಕಮ್ಮನಿಗೆ ಮಕ್ಕಳನ್ನು ಕಂಡರೆ ಪ್ರಾಣ. ನಮ್ಮನ್ನು ಮಾತ್ರವೇ ಅಲ್ಲ. ಯಾವ ಮಕ್ಕಳನ್ನು ಕಂಡರೂ ಆಕೆ ನಮ್ಮನ್ನು ಮುದ್ದಾಡುವಷ್ಟೇ ಮುದ್ದಾಡುತ್ತಿದ್ದಳು. ಆಕೆಯಿಂದ ನಿತ್ಯ ತಿಂಡಿ ತೆಗೆದುಕೊಳ್ಳದ ಊರಿನ ಮಕ್ಕಳೇ ಇರಲಿಲ್ಲ. ಆಕೆ ಊರಿನ ಎಲ್ಲ ಮಕ್ಕಳಿಗೂ ಚಿಕ್ಕಮ್ಮನೇ ಆಗಿದ್ದಳು. ಮನೆಯಲ್ಲಿ ಮಕ್ಕಳು ಚಂಡಿ ಹಿಡಿದರೆ ತಾಯಂದಿರು ಆ ಮಕ್ಕಳನ್ನು ತಂದು ಚಿಕ್ಕಮ್ಮನ ಮುಂದೆ ಬಿಟ್ಟು ಹೋಗಿಬಿಡುತ್ತಿದ್ದರು. ಮನೆಯಲ್ಲಿ ತಿಂಡಿ ಇಲ್ಲದಿದ್ದಾಗ ತಾಯಂದಿರು, ಚಿಕ್ಕಮ್ಮನ ಮನೆಗೆ ಹೋಗು ಎಂದು ಮಕ್ಕಳನ್ನು ಅಟ್ಟಿಬಿಡುತ್ತಿದ್ದರು. ಚಿಕ್ಕಮ್ಮ ಎಲ್ಲ ಮಕ್ಕಳಿಗೂ ತಿಂಡಿ ಕೊಡುತ್ತಿದ್ದಳು. ಆ ಕಾಲದಲ್ಲಿ ಅವಳಿಗೆ "ನಾವು ತನ್ನ ಅಕ್ಕನ ಮಕ್ಕಳು ಇವರು ಬೇರೆಯವರ ಮಕ್ಕಳು" ಎಂಬ ವ್ಯತ್ಯಾಸವೇ ಇರುತ್ತಿರಲಿಲ್ಲ. ಮಕ್ಕಳು ತಮ್ಮ ಮನೆ ಯನ್ನು ಬಿಟ್ಟು ನಮ್ಮ ಮನೆಯಲ್ಲಿಯೇ ಇರುತ್ತಿದ್ದುವು. ಆಗ ನಮ್ಮ ಉಪಾಧ್ಯಾಯರಾಗಿದ್ದ ರಾಮಾಶಾಸ್ತ್ರಿಗಳು ಮನೆಗೆ ಬಂದಾಗ ಆ ಹುಡುಗರ ಗುಂಪನ್ನೂ ಗದ್ದಲವನ್ನೂ ನೋಡಿ "ಚಿಕ್ಕಮ್ಮ ನಿನ್ನ ಮನೆ ಒಂದು ನರ್ಸರೀ ಸ್ಕೂಲು" ಎಂದು ವಿನೋದಮಾಡುತ್ತಿದ್ದರು. ಹೊಸ ಒಡವೆ ಲಂಗಗಳನ್ನೂ ಅಂಗಿಗಳನ್ನೂ ಹಾಕಿಕೊಂಡ ಮಕ್ಕಳಿಗೆ ಅವನ್ನು ಚಿಕ್ಕಮ್ಮನಿಗೆ ತೋರಿಸಿದ ಹೊರತು ತೃಪ್ತಿಯುಂಟಾಗುತ್ತಿರಲಿಲ್ಲ.

ಚಿಕ್ಕಮ್ಮ ಹೀಗೆ ಸಂಸಾರ ನಿರ್ವಹಣೆಯಲ್ಲಿ ಮಾತ್ರ ನಿಷ್ಣಾತಳಾಗಿದ್ದು ದಲ್ಲದೆ ವ್ಯವಹಾರದಲ್ಲಿ ಸಹ ಒಳ್ಳೆಯ ದಕ್ಷಳಾಗಿದ್ದಳು. ಅವಳ ಗಂಡ ಇನ್ನೂ

ರೆನ್ಸ್ ಮಾಡಿದ್ದ ಸಾವಿರ ರೂಪಾಯಿ ಅವಳ ಕೈಯಲ್ಲಿತ್ತು. ನಮ್ಮ ತಂದೆಗೆ ಯಾವಾಗಲೂ ಹಣದ ತೊಂದರೆ ಇದ್ದೇ ಇತ್ತು. ಇವತ್ತಿಗೂ ನಮಗೂ ಇದೆ. ಶ್ಯಾನುಭೋಗರೆಂದಮೇಲೆ ಸರ್ಕಾರಿ ಹಣ ಉಪಯೋಗಿಸದ ಶ್ಯಾನುಭೋಗರೇ ಇಲ್ಲ. ಸರ್ಕಾರದ ಹಣ ಕೈಯಲ್ಲಿರುವಾಗ ನಮ್ಮ ತಂದೆಯವರದಂತೂ ವಿಪರೀತ ದರ್ಬಾರು. ಆ ಕಂದಾಯ ವಸೂಲಿಯ ನಾಲ್ಕು ತಿಂಗಳು ಅವರ ಹಣದ ಚೀಲ, ಮಳೆಗಾಲದ ನದಿಗಳಂತೆ ಭೋರ್ಗರೆಯುತ್ತಿದ್ದಿತು. ಕೆಲವು ಶ್ಯಾನುಭೋಗರಿಗೆ ಯಾವಾಗಲೂ ಸರ್ಕಾರಿ ಹಣವೇ ತಮ್ಮ ಸ್ವಂತ ಜಮಾ ಖರ್ಚು. ಅದು ಅಲ್ಲದೆ ಅವರಿಗೆ ಬೇರೆ ಜಮಾ ಖರ್ಚೇ ಇಲ್ಲ. ನಮ್ಮ ತಂದೆಯವರದು ಉದಾರ ಸ್ವಭಾವ. ಇತರರು ಕಷ್ಟದಲ್ಲಿರುವಾಗ ಇದು ಸರ್ಕಾರದ ಹಣವೆಂದು ಅವರು ಹಿಂದು ಮುಂದು ನೋಡುತ್ತಿರಲಿಲ್ಲ. ಕಂದಾಯದ ಹಣವನ್ನೂ ಸಹ ಕೊಟ್ಟೇಬಿಡುತ್ತಿದ್ದರು. ಕೊಡುವಾಗಲೇನೋ ಇರಸಾಲಿನ ವೇಳೆಗೆ ಹಿಂದಿರುಗಿಸಬೇಕೆಂದು ಹೇಳಿಯೇ ಅವರು ಕೊಡುತ್ತಿದ್ದರು. ತೆಗೆದು ಕೊಳ್ಳುತ್ತಿದ್ದವರೂ ಹಾಗೆ ವಾಗ್ದಾನಮಾಡಿಯೇ ತೆಗೆದುಕೊಳ್ಳುತ್ತಿದ್ದರು. ಆದರೆ ಹಣ ಒಂದು ಸಲ ನಮ್ಮ ಕೈ ಬಿಟ್ಟಮೇಲೆ ಮತ್ತೆ ಬಂದು ಸೇರುವುದು ಕಷ್ಟವೆಂಬ ಸಂಸ್ಕೃತ ಗಾದೆಯಂತೆ, ತೆಗೆದುಕೊಂಡು ಹೋದವರು, ತಿಂಗಳ ಕೊನೆಗೆ ಹಣವನ್ನು ಖಜಾನೆಗೆ ಭರ್ತಿಮಾಡುವ ವೇಳೆಗೆ ತಂದುಕೊಡುತ್ತಿರ ಲಿಲ್ಲ. ಆದರೂ ನಮ್ಮ ತಂದೆಯವರು ಧೈರ್ಯಗೆಡದೆ ಅಲ್ಲಿ ಇಲ್ಲಿ ಕಿತ್ತು ಹಣವನ್ನು ಹಾಕಿಬಿಡುತ್ತಿದ್ದರು. ಸ್ವಭಾವದಿಂದ ಉದಾರಿಯಾದ ಅವರು ಅನೇಕ ಸಲ ಹೀಗೆ ಜನರ ಮೋಸಕ್ಕೆ ಒಳಗಾದರೂ ಕಷ್ಟದಲ್ಲಿರುವವರಿಗೆ ಮತ್ತೆ ಮತ್ತೆ ಹಣ ಕೊಡುವುದು ನಡೆದೇ ಇದ್ದುದರಿಂದ ಒಂದೆರಡು ಸಲ ಸಕಾಲದಲ್ಲಿ ಸರ್ಕಾರಕ್ಕೆ ಹಣ ಕಟ್ಟಲು ಆಗಲಿಲ್ಲ. ಆಗ ಪೋಲೀಸಿನವರು ಮನೆಯ ಬಾಗಿಲಿಗೆ ಬಂದರು. ನಮ್ಮ ತಾಯಿಗೆ ಇಂತಹ ವಿಷಯಗಳಲ್ಲಿ ಬಹಳ ಭಯ. ಆ ಭಯದಿಂದ ಅವಳಿಗೆ ಬುದ್ಧಿಯೇ ಮಂಕಾಗಿಬಿಡುತ್ತಿದ್ದಿತು. ಆಕೆ ಗಡಗಡನೆ ನಡುಗುತ್ತ ಕುಳಿತುಬಿಟ್ಟಳು. ನಮ್ಮ ತಂದೆಗೆ ಸರ್ಕಾರಿ ಹಣ ಖರ್ಚುಮಾಡುವ ಅಭ್ಯಾಸವಾಗಿದ್ದರೂ, ಅದನ್ನು ಹೇಗೋ ಸರಿಮಾಡಿ ಹಾಕಿಬಿಡಬಹುದೆಂಬ ನಂಬಿಕೆ ಇದ್ದುದರಿಂದ, ಆ ಕೊನೆಯ ಘಳಿಗೆಯ ಅವಾಂತರದಿಂದ ಅವರಿಗೂ ದಿಕ್ಕೇತೋಚದಂತಾಯಿತು. ಆಗ ಅಲ್ಲಿಯವರಿಗೆ

ನಮ್ಮ ತಾಯಿಯಂತಿದ್ದ ಚಿಕ್ಕಮ್ಮ ನಿಜವಾಗಿ ನಮ್ಮ ಭಾಗದ ದೇವರೇ ಆದಳು. ತನ್ನಲ್ಲಿದ್ದ ಸಾವಿರ ರೂಪಾಯಿ ಗಂಟನ್ನು ತಂದು ನಮ್ಮ ತಂದೆ ಯವರ ಕೈಯಲ್ಲಿ ಕೊಟ್ಟಳು. ನಮ್ಮ ಮನೆ ಪೋಲೀಸಿನವರ ಕಾಟದಿಂದ ಬಿಡುಗಡೆಯಾಯಿತು.

ಅನಂತರ ಸಮಯವರಿತು ಚಿಕ್ಕಮ್ಮ ಸ್ವಲ್ಪ ಸ್ವಲ್ಪವಾಗಿ ನಿರ್ದಾಕ್ಷಿಣ್ಯ ವಾಗಿ ತನ್ನ ಸಾವಿರ ರೂಪಾಯಿಗಳನ್ನು ನಮ್ಮ ತಂದೆಯಿಂದ ತೆಗೆದುಕೊಂಡೇ ತೆಗೆದುಕೊಂಡಳು. ಅವಳ ಒಳ್ಳೆ ಸ್ವಭಾವವನ್ನು ಚೆನ್ನಾಗಿ ಅರಿತಿದ್ದ ನನ್ನಂಥ ವನಿಗೆ ಸಹ ಒಂದೊಂದು ಸಲ, "ಇವಳು ಯಾಕೆ ಹಣವನ್ನು ತಗಾದೆಮಾಡಿ ಹಿಂದಕ್ಕೆ ತೆಗೆದುಕೊಳ್ಳುತ್ತಾಳೆ!" ಎಂದು ಆಶ್ಚರ್ಯವಾಗುತ್ತಿತ್ತು. ಅಲ್ಲಿಂದ ಮುಂದೆ ಎರಡೇ ವರುಷಗಳಲ್ಲಿ ಚಿಕ್ಕಮ್ಮ ತೀರಿಕೊಂಡರು. ಅದು ನಮ್ಮ ತಂದೆ ಸ್ವರ್ಗಸ್ಥರಾದ ವರುಷದ ಹಿಂದಲ ವರುಷ. ಸೀತಾಲಕ್ಷ್ಮಿಗೆ ಮೂರು ವರುಷ ವಯಸ್ಸಾಗಿತ್ತು. ಸೀತಾಲಕ್ಷ್ಮಿ ಚಿಕ್ಕಮ್ಮನ ಪ್ರಾಣವಾಗಿದ್ದಳು. ಚಿಕ್ಕಮ್ಮ ತಾನು ಸಾಯುವುದಕ್ಕೆ ಎರಡು ದಿನ ಮುಂಚೆ ನಮ್ಮ ತಂದೆಯನ್ನು ಕರೆದು ಅವರ ಕೈಯಲ್ಲಿ ಒಂದು ಬ್ಯಾಂಕ್ ಪಾಸ್ ಬುಕ್ಕನ್ನು ಕೊಟ್ಟು "ಇದರಲ್ಲಿ, ನನ್ನ ಯಜಮಾನರು ತೀರಿಕೊಂಡಾಗ ಬಂದಿದ್ದ ಸಾವಿರ ರೂಪಾಯಿ ಇಟ್ಟಿದ್ದೇನೆ. ನಿಮಗೆ ಕೊಟ್ಟು ಮತ್ತೆ ಮತ್ತೆ ಹಿಂದಕ್ಕೆ ತೆಗೆದು ಕೊಳ್ಳುತ್ತಿದ್ದುದೆಲ್ಲ ಇದೇ ಹಣ. ನಿಮ್ಮಿಂದಲೂ ಒಂದು ಕಾಸನ್ನೂ ಸಹ ಬಿಡದೆ ವಸೂಲ್ಮಾಡಿದೆ. ಈ ಹಣವನ್ನು ಸೀತಾಲಕ್ಷ್ಮಿಯ ಹೆಸರಿನಲ್ಲಿ ಇಟ್ಟಿ ದ್ದೇನೆ. ಇವಳ ಮದುವೆಯ ಕಾಲಕ್ಕೆ ಇದನ್ನು ಹಿಂದಕ್ಕೆ ತೆಗೆದುಕೊಂಡು ಚಿನ್ನದ ಒಡವೆ ಮಾಡಿಸಿಕೊಡಿ. ಮದುವೆಯಾಗುವವನಿಗೆ ಅದೂ ಒಂದು ಆಸೆ ಇರಲಿ" ಹೀಗೆ ಚಿಕ್ಕಮ್ಮ ಹೇಳಿ ಸ್ವರ್ಗಸ್ಥಳಾದಳು. ಮಾರನೆಯ ವರುಷವೇ ನಮ್ಮ ತಂದೆಯೂ ತೀರಿಕೊಂಡರು. ಈಗ ಹಣ ಬ್ಯಾಂಕಿನಲ್ಲಿ ಬಡ್ಡಿ ಸಹ ಸೇರಿ ಸುಮಾರು ಸಾವಿರದ ನಾಲ್ಕುನೂರು ರೂಪಾಯಿಗಳು ಇವೆ."

ರಾಮುವು ಮೇಲಿನ ಸಂಗತಿಗಳನ್ನೆಲ್ಲ ಹೇಳುತ್ತಿರುವಾಗ ಸುಂದರ ರಾಜನ ಮಾವಂದಿರು ಅದನ್ನು ಲಕ್ಷ್ಯವಿಟ್ಟು ಕೇಳುತ್ತಿದ್ದರೂ ಸುಂದರರಾಜನಿಗೆ ಮಾತ್ರ "ಈ ಪುರಾಣವೆಲ್ಲ ಯಾರಿಗೆ ಬೇಕು. ನನಗೆ ಬೇಕಾಗಿರುವುದು ಸೀತಾಲಕ್ಷ್ಮಿಯೇ ಹೊರತು ಹಣವಲ್ಲವಲ್ಲ" ಎಂದು ಬೇಸರಿಕೆಯಾಗುತ್ತಿತ್ತು.

ಅಂತೂ ಸುಂದರರಾಜನ ಒಪ್ಪಿಗೆ ಪಡೆದ ರಾಮುವು ಅವನ ಮಾವಂದಿರನ್ನೇ ರಂಭಾಪುರಿಗೆ ಕರೆದುಕೊಂಡು ಹೋಗಿ ತನ್ನ ತಂದೆ ಗುಂಡಣ್ಣನವರ ಒಪ್ಪಿಗೆ ಪಡೆದು ಲಗ್ನವನ್ನು ಗೊತ್ತುಮಾಡಿಕೊಂಡು ಬಂದನು.

ಇಂದು ವಿವಾಹ ನಡೆಯುತ್ತಿತ್ತು.

೨

ಸೀತಾಲಕ್ಷ್ಮಿಯ ಮದುವೆ ಬಡತನದ ಮದುವೆಯಾದರೂ ಹಳ್ಳಿಯ ಮದುವೆಯಾದುದರಿಂದ ಊರಿನವರೆಲ್ಲ ನೆರೆದಿದ್ದರು. ಗಂಡಿನ ಊರು ಆದ ರಂಭಾಪುರಿ ಮಲ್ಲಿಗೆಹಳ್ಳಿಗೆ ಹತ್ತಿರವಾದ ಗ್ರಾಮವಾದುದರಿಂದ ಅಲ್ಲಿದ್ದ ಎರಡು ಕಡೆಯವರ ಬಳಗಗಳೂ ತಮ್ಮ ತಮ್ಮ ಸ್ವಂತ ಗಾಡಿಗಳಲ್ಲಿ ಬಾಳೆ ಹಣ್ಣು ಬಾಳೆ ಎಲೆ ತರಕಾರಿ ಹಾಲು, ಕೆಲವರು ಕರೆಯುವ ಎಮ್ಮೆ ಹಸುಗಳು ಇವುಗಳನ್ನೆಲ್ಲ ಹೊಡೆದುಕೊಂಡು ಬಂದಿದ್ದರು. ಮದುವೆಗೆ ಬರುವಾಗ ಪ್ರತಿಯೊಬ್ಬರೂ ಒಂದು ಚೊಂಬು ಹಾಲನ್ನೋ ಮೊಸರನ್ನೋ ತೆಗೆದುಕೊಂಡು ಬರುವುದು ಆ ಪ್ರಾಂತದವರ ವಾಡಿಕೆ.

ಮದುವೆಯ ಮನೆಯಲ್ಲಿ ಕೋಲಾಹಲ ಅಸಾಧ್ಯವಾಗಿದ್ದರೂ ಯುವಕ ಯುವತಿಯರ ದೃಷ್ಟಿಯೆಲ್ಲ ಸೀತಾಲಕ್ಷ್ಮಿಯ ಮೇಲೆಯೇ ಇತ್ತು. ವಿವಾಹಕ್ಕೆ ಅಲಂಕೃತಳಾದ ತುಂಬು ಯವ್ವನದ ಆಕೆ ಗಂಧರ್ವಕನ್ನಿಕೆಯಾಗಿ ಎಂದಿಗಿಂತಲೂ ಇಂದು ಹೆಚ್ಚು ಸುಂದರಿಯಾಗಿ ತೋರಿದಳು. ಅವಳನ್ನು ಮದುವೆಯಾಗಲು ಮೊದಲು ಒಪ್ಪದೆ ತಿರಸ್ಕರಿಸಿದ್ದ ವರಗಳು, ಈಗ ಆಕೆ ತಮ್ಮ ಕೈ ಮೀರಿಹೋದನಂತರ ಕೈ ಕೈ ಕಡಿದುಕೊಳ್ಳುತ್ತಿದ್ದರು. ಅವರಿಗೆಲ್ಲ ಸುಂದರ ರಾಜನ ಮೇಲೆ ಅಸಾಧ್ಯವಾದ ಹೊಟ್ಟೆಗಿಚ್ಚು ಉಂಟಾಯಿತು. ಸುಂದರರಾಜ ನಂತಹ ಹಳ್ಳಿಯ ಸಾಧಾರಣ ಯುವಕನಿಗೆ, ಇಂತಹ ರಾಣಿಯಾಗಲು ಅರ್ಹಳಾದ ಹುಡುಗಿ ದೊರೆತುದರಿಂದ ಅವರಿಗೆ ಸುಂದರರಾಜನಮೇಲೆಯೇ ಕೋಪ ವುಂಟಾಯಿತು.

ಯುವತಿಯರು ಗುಂಪು ಗುಂಪಾಗಿ ಕುಳಿತುಕೊಂಡು ಸೀತಾಲಕ್ಷ್ಮಿಯನ್ನು ಕುರಿತು ಚರ್ಚಿಸುತ್ತಿದ್ದರು. ಕಪ್ಪಗಿದ್ದ ಹುಡುಗಿಯರಂತೂ ನಿಸ್ಸಂದೇಹವಾಗಿ ಭಕ್ತರಂತೆ ಆಕೆಯನ್ನು ತುಂಬು ಬಾಯಿನಿಂದ ಹೊಗಳಿ ಹೊಗಳಿ

ದಣಿಯಲಿಲ್ಲ. ಆದರೆ ಸುಂದರಿಯರಿಗೆ ಸುಂದರಿಯರನ್ನು ಕಂಡರೆ ಅಸೂಯೆ ಸ್ವಾಭಾವಿಕ. ಅದು ಅವರ ಮಾತುಗಳಲ್ಲಿ ಒಡೆದು ತೋರುತ್ತಿತ್ತು.

"ಏನು ಶಾರದ ನೀನು ಬರುವುದು ಯಾಕೆ ಇಷ್ಟು ಹೊತ್ತು?" "ಅಲ್ಲವೇ ಲಿಲಾ. ನಿನಗೆ ಗೊತ್ತಾಗಬೇಡವೇ? ಶಾರದ ಸೀತಾಲಕ್ಷ್ಮಿಯಂತೆ ಕಾಣಲು ಹುಟ್ಟಿದಂದಿನಿಂದ ಪ್ರಯತ್ನಿಸುತ್ತಿಲ್ಲವೆ? ಅದರಲ್ಲಿಯೂ ಇವತ್ತು ಕೇಳಬೇಕೆ ಬೆಳಗಿನ ಝಾವದಿಂದಲೂ ಎದ್ದು ಸೀತಾಲಕ್ಷ್ಮಿಯಂತೆ ಅಲಂಕರಿಸಿಕೊಳ್ಳುವ ವೇಳೆಗೆ ಇಷ್ಟು ಹೊತ್ತಾಯಿತು."

"ನೀನು ಏನು ಬೇಕಾದರೂ ಹೇಳಿಕೊ. ನೀನು ಹರಟೆಮಲ್ಲಿ ಎಂಬುದು ಲೋಕಕ್ಕೇ ಗೊತ್ತಿದೆ."

"ಅಬ್ಬ ಶಾರದೆ! ನಿನಗೆ ಎಷ್ಟು ಕೋಪವೆ? ಚಪ್ಪಟೆ ಮೂಗಿದ್ದು ನಿನಗೆ ಇಷ್ಟು ಕೋಪವಲ್ಲ. ಇನ್ನೇನಾದರೂ ನಿನ್ನ ಮೂಗು ಸೀತಾಲಕ್ಷ್ಮಿಯ ಮೂಗಿನಂತೆ ನೀಳವಾಗಿ ಎಸಳಾಗಿ ಮಾಟವಾಗಿದ್ದಿದ್ದರೆ ಇನ್ನೆಷ್ಟು ಕೋಪ ಬರುತ್ತಿತ್ತೊ ನಿನಗೆ?"

"ಸಾಕು ಬಿಡೆ. ನಿನಗೆ ಯಾವಾಗ ನೋಡಲಿ ಸೀತಾಲಕ್ಷ್ಮಿಯನ್ನು ಹೊಗಳುವುದು ಇತರರನ್ನು ಜರೆಯುವುದು ಇದೇ ಕೆಲಸವಾಯಿತು ಅವಳನ್ನು ಹೆಗಲಿನಮೇಲೆ ಹೊತ್ತುಕೊಂಡು ಊರ ಸುತ್ತ ದೇವರಂತೆ ಮೆರವಣಿಗೆ ಮಾಡು. ಆಯಿತೆ? ಅವಳ ಹೊಗಳಿಕೆ ಇನ್ನು ಸಾಕು."

"ಆದರೂ ಶಾಮಲ, ನಿನಗೆ ಸೀತಾಲಕ್ಷ್ಮಿಯಮೇಲೆ ಇಷ್ಟು ಹೊಟ್ಟೆ ಗಿಚ್ಚು ಇರಬಾರದು. ಅವಳು ಚೆನ್ನಾಗಿರುವುದೂ ಅವಳ ತಪ್ಪೆ? ನೀನೇನೊ ನಿನ್ನ ಹೆಸರಿಗೆ ತಕ್ಕಹಾಗೆ ತೊಳೆದ ಕೆಂಡದಂತೆ ಫಳಫಳನೆ ಹೊಳೆಯುತ್ತಿದ್ದಿ. ನೀನು ಹೀಗಿದ್ದ ಮಾತ್ರಕ್ಕೆ ಇತರರನ್ನೆಲ್ಲ ಹಳಿಯಬೇಕೆಂಬುದು ಶಾಸ್ತ್ರವೆ? ನೀನು ಹೇಳಿದರೇನು ಬಿಟ್ಟರೇನು ಸೀತಾಲಕ್ಷ್ಮಿ ಒಳ್ಳೆ ಸುಂದರಿ."

"ಹೇಳು ಹೇಮು; ಇನ್ನೂ ಹೇಳು; ಈ ಶಾಮಲಳಿಗೆ ಬೇಕಾಗಿದೆ. ಇವಳಿಗೆ ಸೀತಾಲಕ್ಷ್ಮಿಯಮೇಲೆ ಇಷ್ಟು ಕೋಪಕ್ಕೆ ಕಾರಣವೇನು ಗೊತ್ತೆ? ಅವತ್ತು ಸೀತಾಲಕ್ಷ್ಮಿ ಇವಳನ್ನು ಕಂಡು 'ಶಾಮಲ ನಿನ್ನ ಮೈ ಮೇಲೆ ಒಂದು ಬೊಟ್ಟು ನೀರು ಬಿಟ್ಟು ಬೆಟ್ಟಿನಿಂದ ತೀದು ಸಾದಾಗಿ ಹಣೆಗೆ ಹಚ್ಚಿಕೊಳ್ಳ ಬಹುದು' ಎಂದಳಂತೆ. ಅಂದಿನಿಂದ ಅವಳಮೇಲೆ ಉರಿದು ಬೀಳುತ್ತಿದ್ದಾಳೆ.

"ಹೇಳಿಕೊಳ್ಳಲಿ. ನನಗೇನು? ಅದಕ್ಕೆ ಪ್ರತಿಯಾಗಿ ನಾನೂ ಅವಳನ್ನು ಕೇಳಿದೆ 'ನಿನ್ನ ಮೈಗೆ ನೀರುಬಿಟ್ಟು ತೇದರೆ ಗಂಧದ ಎಣ್ಣೆ ಬರುತ್ತೆ ಅಲ್ಲವೆ? ಬೇರೆ ಯಾಕೆ?' ಎಂದು. ಅಷ್ಟು ಸಾಲದೆ? ನನಗೆ ಅಂತಹ ರೂಪವಿಲ್ಲ ದಿದ್ದರೆ ಬೇಡ. ಆದರೆ ನನ್ನ ಹತ್ತಿರ ಇರುವ ಸೀರೆಗಳೂ, ಒಡವೆಗಳೂ ಇನ್ನಾರ ಹತ್ತಿರ ಇವೆ. ಲೆಕ್ಕವಿಲ್ಲದಷ್ಟು. ನನ್ನ ಸೀರೆ ನೋಡಿ ನೀವೆಲ್ಲ ಹೊಟ್ಟೆ ಕಿಚ್ಚುಪಡೋದು ನನಗೂ ತಿಳಿದೆ ಇಲ್ಲ. ಬರಿಯ ಸೌಂದರ್ಯ ಯಾರಿಗೆ ಬೇಕು?"

"ಹಾಗೆ ಒಂದೇ ಏಟಿಗೆ ಹಾರಿಸಿಬಿಡಬೇಡ ಶಾಮಲಾ. ಹಣವಿದ್ದರೂ ಹೆಣ್ಣುಗಳಿಗೆ ಸೌಂದರ್ಯವೇ ಮುಖ್ಯ."

"ಹೌದು ಲಲಿತಾ. ನಾನೂ ಅದನ್ನೇ ಒಪ್ಪುತ್ತೇನೆ. ಹಣ ಎಷ್ಟು ಇದ್ದರೂ ಎಷ್ಟು ಅಲಂಕಾರ ಮಾಡಿಕೊಂಡರೂ ನಿಜವಾದ ಸೌಂದರ್ಯವಿಲ್ಲ ದಿದ್ದರೆ ಅದೆಲ್ಲ ವ್ಯರ್ಥವೆ?"

"ಯಾಕೆ ಹೀಗೆ ಒಂದೇ ಉಸಿರಿಗೆ ಕೂಗ್ತೀರಿ. ನಿಮ್ಮ ಧ್ವನಿ ಕೇಳಿದರೇ ಗಾಬರಿಯಾಗುತ್ತೆ. ನಾವೇನೋ ಜಗಳ ಮಾಡ್ತ ಇದೀವಿ ಅಂತ ಎಲ್ಲ ಈ ಕಡೆಯೇ ನೋಡ್ತಾರೆ."

"ಅಬ್ಬ. ಇವಳು ಈಗ ನಮ್ಮ ಧ್ವನಿಮೇಲೆ ಬೀಳ್ತ ಇದಾಳೆ. ಎಲೆ ವಿಜಯ. ನಿನ್ನ ಧ್ವನಿ ಏನೂ ಸಂಗೀತವಲ್ಲ! ನಮಗೂ ಗೊತ್ತು. ನೀನೇನೊ ಈಗ ಆರು ತಿಂಗಳಿಂದ ಸೀತಾಲಕ್ಷ್ಮಿಯ ಹಿಂದೆ ಮುಂದೆ ತಿರಗತಾ, ಹಾಡುವಾಗ ಅವಳ ಮೊಖ ನೋಡ್ತ ಹಲ್ಗಿರೀತಿದೀಯ. ಆದರೆ ನಿನಗೆ ಸಂಗೀತ ಬಂದು ಬಿಡಲಿಲ್ಲ. ಸೀತಾಲಕ್ಷ್ಮಿ ಮಾತ್ರ ಎಷ್ಟು ಮಾತನಾಡಿದರೂ ನಿನಗೆ ಬೇಜಾ ರಾಗೊಲ್ಲ. ನಮ್ಮ ಮಾತು ಕಿವೀಗೆ ಬಿದ್ರೇ ರೇಗ್ತೀಯ. ಆಗಲಿ ಆಗಲಿ. ನಿನ್ನೊಂದಿಗೆ ಮಾತನಾಡೋಕೆ ಯಾವಾಗಲೂ ಸೀತಾಲಕ್ಷ್ಮಿಯೇ ಇರೊಲ್ಲ. ಮದುವೆಯಾದ ಕೂಡಲೇ ಅವಳು ಗಂಡನ ಮನೆಗೆ ಹೋಗ್ತಾಳೆ. ಆಮೇಲೆ ನೀನು ನಮ್ಮ ಹತ್ತಿರವೇ ಮಾತಾಡೋಕೆ ಬರಬೇಕಮ್ಮ. ನಮ್ಮನ್ನ ಬಿಟ್ರೆ ನಿನಗೆ ಗತಿಯೇ ಇಲ್ಲ."

ಈ ಯುವತಿಯರ ಸಂವಾದದಲ್ಲಿಯೂ, ಯುವಕರು ಮರ್ಯಾದೆ ಮೀರ ದಂತೆ ಕದ್ದು ಕದ್ದು ಸೀತಾಲಕ್ಷ್ಮಿಯನ್ನು ನೋಡುವುದರಲ್ಲಿಯೂ ವಿವಾಹ

ಸಮಾರಂಭ ಕಳೆದುಹೋದುದು ಅಲ್ಲಿ ಸೇರಿದ್ದವರಿಗೇ ತಿಳಿಯಲಿಲ್ಲ. ಒಂದು ಒಳ್ಳೆಯ ಪದಾರ್ಥವಾಗಲಿ, ಗುಣವಾಗಲಿ ಇದ್ದರೆ ಉಳಿದ ಯಾವ ಅವಗುಣವೂ ಕುಂದೂ ಲೆಕ್ಕಕ್ಕೆ ಬರುವುದಿಲ್ಲವೆಂಬುದಕ್ಕೆ ಸೀತಾಲಕ್ಷ್ಮಿಯ ಸೌಂದರ್ಯವೇ ಒಂದು ಉದಾಹರಣೆಯಾಯಿತು. ಸುಂದರರಾಜನಿಗಂತೂ ಯಾವ ಮಾತೂ ಬೇಕಿರಲಿಲ್ಲ. ಅವನು ಒಂದು ಬಗೆಯ ಮದ್ಯವನ್ನು ಸೇವಿಸಿದವನಂತೆ, ಕನಸಿನಲ್ಲಿದ್ದವನಂತೆ ಅರ್ಧ ನಿದ್ರೆ ಅರ್ಧ ಎಚ್ಚರವಾಗಿ ಆ ರೂಪಮಧುವನ್ನು ಪಾನಮಾಡುತ್ತಿದ್ದನು. ಆ ರಾತ್ರಿ ಉಂಜಲು ಉರುಟಣೆ ಮುಂತಾದ ಶಾಸ್ತ್ರಗಳು ನಡೆದವು. ಅದಾದನಂತರ ಮನೆಯವರು ಊಟದ ಸಂಭ್ರಮದಲ್ಲಿ ತೊಡಗಿದರು. ಉಂಜಲು ಉರಟಣೆಗಳಲ್ಲಿ ಸ್ತ್ರೀಯರೆಲ್ಲ ಬೇಕಾದಂತೆ ಹಾಡಿದ್ದರು. ಮೈಸೂರಿನಿಂದ ಬಂದಿದ್ದ ದೂರದ ಬಂಧುಗಳಾದ ಸಂಗೀತ ವಿದ್ವಾಂಸರೊಬ್ಬರು ಅಸಂಖ್ಯಾತವಾಗಿ ಹಾಡುಗಳನ್ನು ಹಾಡಿ ಜನತೆಯನ್ನು ಸಂತೋಷದಲ್ಲಿ ತೇಲಿಸಿಬಿಟ್ಟರು. ಅವರು ಗಾತ್ರದಲ್ಲಿಯೂ ಒಳ್ಳೆಯ ಪುಷ್ಟರಾದ ಆಳು ಆಗಿದ್ದುದಲ್ಲದೆ ಅವರ ಧ್ವನಿಯೂ ಒಳ್ಳೆಯ ಗಂಭೀರವಾದ ಗಂಟೆಯ ಶಬ್ದದಂತೆ ಇತ್ತು. ಅವರು ತಾ ನಾ ನಾ ಎಂದು ಪ್ರಾರಂಭಿಸಿದ ಕೂಡಲೇ ನಿಜವಾಗಿ ಮನೆಯ ಸೂರು ಹಾರಿಹೋಗುತ್ತದೆಯೋ ಎಂಬ ಶಬ್ದವುಂಟಾಗುತ್ತಿದ್ದಿತು. ಅರ್ಧಮರ್ಧ ತೂಕಡಿಸುತ್ತಿದ್ದವರಿಗೆ ಬೆಚ್ಚಿ ಬಿದ್ದಂತೆ ಎಚ್ಚರವಾಗಿಬಿಡುತ್ತಿದ್ದಿತು. ಧ್ವನಿಯೂ ದೇಹವೂ ಹಾಗೆ ದಪ್ಪನಾಗಿದ್ದ ಮಾತ್ರಕ್ಕೆ ಅವನ ಗಾನ ಮಾಧುರ್ಯ ಕಡಿಮೆ ಇರಲಿಲ್ಲ. ನಿಗರ್ವಿಗಳಾದ ಆ ವಿದ್ವಾಂಸರು ಹಳ್ಳಿಯವರಿಗೆ ಸಂಗೀತ ತಿಳಿಯದು ಎಂಬುದನ್ನು ಮರೆತು, ಸಂಗೀತ ರಸಿಕ, ವಿದ್ವಾಂಸರ ಕಛೇರಿಯಲ್ಲಿ ಹಾಡುವಂತೆ ರಾಗ ಲಾಪನೆ ವರ್ಣ ತಂ ತ ತೋಂ ಕೀರ್ತನೆ, ಹೀಗೆ ಶಾಸ್ತ್ರೋಕ್ತವಾಗಿ ಹಾಡತೊಡಗಿದರು. ಆ ಹಳ್ಳಿಯ ಪ್ರಾಣಿಗಳ ಮುಂದೆ ಹಾಗೆ ಹಾಡಿ ಅವರಿಂದಲೂ ಭೇಷ್ ಎನ್ನಿಸಿಕೊಂಡು ಅವರಿಗೆ ಒಂದು ಅದ್ಭುತವಾದ ಮಂಕನ್ನು ಎರಚುವುದೇ ಅವರಿಗೆ ಒಂದು ಆನಂದವಾಯಿತು. "ಇವರದು ನಿಜವಾದ ಆನಂದ, ನಿಜವಾದ ಭಕ್ತಿ. ಇವರಲ್ಲಿ ತಪ್ಪು ಕಂಡುಹಿಡಿಯುವ ಭಾವವಿಲ್ಲ. ನಿಜವಾದ ಆನಂದಾನುಭವ ಮಾತ್ರ. ಇವರ ಮುಂದೆ ನಾನು ಹಾಡುವುದು ಇವರಿಗೆ ಸುಖವನ್ನುಂಟುಮಾಡುವುದಕ್ಕೇ ಹೊರತು ನನ್ನ

ಪಾಂಡಿತ್ಯ ಪ್ರದರ್ಶನಕ್ಕಲ್ಲ ಎಂದು ಅವರು ಹಾಡತೊಡಗಿದರು. ಸ್ವಾಭಾವಿಕವಾಗಿ ಹೀಗೆ ಹಾಡತೊಡಗಿದುದರಿಂದ ಅವರ ಸಂಗೀತ, ಹಿಂದೆಂದೂ ಆಗದಷ್ಟು ಚೆನ್ನಾಗಿ ಆದುದು ಅವರಿಗೇ ಅನುಭವಕ್ಕೆ ಬಂದಿತು. ಮೊದಲು ಮೊದಲು ದೇವರ ನಾಮಗಳು, ಅನಂತರ ತ್ಯಾಗರಾಜ ಕೀರ್ತನೆಗಳು, ಮಧ್ಯೆ ಮಧ್ಯೆ ಬೇಸರವಾದಾಗ ನಾಟಕ ಸಿನಿಮಾಗಳ ಮಟ್ಟು, ವಿನೋದದ ಹಾಡುಗಳು; ಸಂಗೀತ ವಿದ್ವಾಂಸರು ಮೊದಲನೆಯ ದರ್ಜೆಯ ಗಾನ ಗಂಧರ್ವರಾಗಿಲ್ಲದಿದ್ದರೂ ಪಟ್ಟಣದಲ್ಲಿ ನುರಿತ ಗಾಯಕರಾದುದರಿಂದ ಅವರಿಗೆ ಎಲ್ಲ ವಿಷಯಗಳಲ್ಲಿಯೂ ಪರಿಶ್ರಮವಿತ್ತು. ಹಳ್ಳಿಯವರಿಗಂತೂ ಇಂತವರು ಅಪರೂಪವಾಗಿದ್ದುದರಿಂದ ಅವರ ಆನಂದಕ್ಕೆ ಮೇರೆಯೇ ಇರಲಿಲ್ಲ.

ಈ ಸಂಭ್ರಮದಲ್ಲಿ ವಧುವಾದ ಸೀತಾಲಕ್ಷ್ಮಿಯನ್ನು ಒಂದೆರಡು ಹಾಡು ಹಾಡೆಂದು ಒತ್ತಾಯಪಡಿಸುವುದಕ್ಕೇ ಬಂದಿದ್ದವರಿಗೆ ಅವಕಾಶವಾಗದೆ ಹೋಯಿತು. ಸೀತಾಲಕ್ಷ್ಮಿಯ ಪಾಂಡಿತ್ಯವೂ ನಹ ಹಳ್ಳಿಯವರಿಗೆ ತಿಳಿದಿರಲಿಲ್ಲ. ಅವಳ ಜತೆಯ ಹುಡುಗಿಯರಿಗೆ ಅವಳಿಗೆ ಪಿಟೀಲು ಬರುತ್ತದೆಂದು ಗೊತ್ತಿತ್ತು. ಆದರೆ ಅದು ಎಷ್ಟರಮಟ್ಟಿಗೆ ಬರುತ್ತಿತ್ತೊ ಅವರಿಗೆ ತಿಳಿದಿರಲಿಲ್ಲ. ಪ್ರಾಯಶಃ ಮದುವೆ ಮಂಟಪದಲ್ಲಿ ಪಿಟೀಲನ್ನು ಪ್ರದರ್ಶಿಸಿ ಕೊಯ್ ಕೊಯ್ ಎನ್ನಿಸುವಷ್ಟು. ಗಂಡನನ್ನು ಆಕರ್ಷಿಸುವಷ್ಟು ಮಾತ್ರ ಇರಬಹುದೆಂದು ಅವರು ಭಾವಿಸಿದ್ದರು. ಅವರು ಒಂದೆರಡು ಸಲ "ಸೀತಾಲಕ್ಷ್ಮಿ ಒಂದು ಹಾಡು ಬಾರಿಸಲಿ" ಎಂದು ಹೇಳಿದರು. ಸೀತಾಲಕ್ಷ್ಮಿ ಸಂಕೋಚದಿಂದ ಆಚೆ ಈಚೆ ನೋಡುವಷ್ಟರಲ್ಲಿಯೇ, ಮೈಸೂರಿನ ವಿದ್ವಾಂಸರ ಸುತ್ತ ಕುಳಿತಿರುತಿದ್ದವರು ಅವರನ್ನು ಎಲ್ಲಿ "ನಾ ನಿನ್ನ ಧ್ಯಾನದೊಳಿರಲು" ಹಾಡಿ ಎನ್ನುತ್ತಿದ್ದರು. ಕೂಡಲೇ ವಿದ್ವಾಂಸರು ಎಲ್ಲ ಇತರ ಸದ್ದುಗಳನ್ನೂ ಅಡಗಿಸಿ ಆ ಹಾಡನ್ನು ಪ್ರಾರಂಭಿಸಿಬಿಡುತ್ತಿದ್ದರು. ಹೀಗೆ ಅವರ ಹಾಡು ಆದನಂತರ ಮತ್ತೆ ಸೀತಾಲಕ್ಷ್ಮಿಯನ್ನು ಒಪ್ಪಿಸಬೇಕಾದರೆ ಇನ್ನು ಅರ್ಧ ಗಂಟೆ. ಹೇಳಿದಕೂಡಲೇ ಪ್ರಾರಂಭಿಸಿಬಿಡಲು, ಅವಳ ಬಾಯಿ ಹಾಡುಗಾರಿಕೆ ಅವರಿಗೆ ಬೇಕಿರಲಿಲ್ಲ. ಪಿಟೀಲು ಪಿಟೀಲು ಎಂದು ಅವರು ಕೂಗುತ್ತಿದ್ದರು. ದೂರದಲ್ಲಿಟ್ಟಿದ್ದ ಪಿಟೀಲನ್ನು ನೋಡಿ ಅವಳು ಅದನ್ನು ತನ್ನೆಡೆಗೆ ತರಿಸಬೇಕೆಂದು ಯೋಚಿಸುತ್ತಿರುವಷ್ಟರಲ್ಲಿಯೇ ವಿದ್ವಾಂಸರ ಪ್ರೋತ್ಸಾಹಕರು

"ಆಡು ರಾಟೆ" ಎಂದು ಗಾಯಕರನ್ನು ಕೇಳಿಕೊಳ್ಳುತ್ತಿದ್ದರು. ಅವರು ಕೂಡಲೇ ನಿಗರ್ವಿಯಾಗಿ "ರಾಟೆ ಆಡಿಸುತ್ತಿದ್ದರು." "ಸೀತಾಲಕ್ಷ್ಮಿ ನಮ್ಮೂರಿನವಳೇ. ಇವಳಿಂದ ಯಾವಾಗ ಬೇಕಾದರೂ ಹಾಡಿಸಬಹುದು. ಮೈಸೂರಿನ ವಿದ್ವಾಂಸರು ನಾಳೆ ಊರಿಗೆ ಹೊರಟುಹೋಗುತ್ತಾರೆ. ಇವತ್ತೆಲ್ಲ ಅವರ ಹಾಡೇ ಆಗಲಿ" ಎಂದು ಪ್ರೇಕ್ಷಕರು ಗಾಯಕರನ್ನು ಹುರಿದುಂಬಿಸಿದರು.

ಆ ಸಂಭ್ರಮದಲ್ಲಿ ಸ್ವಲ್ಪ ಅಸಮಾಧಾನವಾಗಿದ್ದುದು ಸೀತಾಲಕ್ಷ್ಮಿಯ ಸಂಗೀತದ ಉಪಾಧ್ಯಾಯಳಾದ, ಕಮಲಮ್ಮನಿಗೂ ಮತ್ತು ಹೊಸ ಅಳಿಯ ಸುಂದರರಾಜನಿಗೂ ಮಾತ್ರ. ಕಮಲಮ್ಮನಿಗೆ, ತನ್ನ ಶಿಷ್ಯಳ ಪಿಟೀಲು ಪ್ರಾವೀಣ್ಯ ಆ ಮೈಸೂರು ದಪ್ಪಯ್ಯನವರಿಗೆ [ದಪ್ಪ+ಅಯ್ಯ] ತಿಳಿಯಲಿ ಎಂಬ ಆಸೆ ಇತ್ತು. ಇದುವರೆಗೆ ನಿಜವಾದ ಯಾವ ಸಂಗೀತ ವಿದ್ವಾಂಸರೆದುರಿಗೂ ಸೀತಾಲಕ್ಷ್ಮಿ ಪಿಟೀಲನ್ನು ನುಡಿಸಿರಲಿಲ್ಲವಾಗಿ, ಆಕೆಯ ವಿದ್ಯದ ಅರೆಕೊರೆಗಳನ್ನು ತಿದ್ದಲು ಕಮಲಮ್ಮನಿಗೆ ಸಾಧ್ಯವಾಗಿರಲಿಲ್ಲ. ಅಲ್ಲದೆ ನಿಜವಾದ ವಿದ್ಯವಲ್ಲದಿದ್ದರೂ ಆ ವಿದ್ಯವನ್ನು ಹೆಚ್ಚು ಆಕರ್ಷಣೀಯವಾಗಿ ಮಾಡುವ ಆಧುನಿಕ ಕೈಚಳಕ, ತಂತ್ರ, ಥಾಟ್, ಝೋಕು ಇವು ಪಟ್ಟಣದ ವಿದ್ವಾಂಸರಿಗೆ ಪರಿಚಯವಿದ್ದುದರಿಂದ ಅವುಗಳನ್ನು ಸೀತಾಲಕ್ಷ್ಮಿಗೆ ಪರಿಚಯಮಾಡಿಸಿದರೆ, ನಿಜವಾದ ನಿಪುಣೆಯಾದ ಆಕೆಯ ವಿದ್ಯೆ ಹೆಚ್ಚು ಪೂರ್ಣವೂ, ಪುಷ್ಟವೂ, ಆಕರ್ಷಣೀಯವೂ ಆಗುವುದೆಂಬುದು ಕಮಲಮ್ಮನಿಗೆ ಗೊತ್ತಿತ್ತು. ಆದರೆ, ಮೈಸೂರಿನ ಗಾಯಕರ ದಪ್ಪ ಧ್ವನಿಯ ಕೀರ್ತನೆಗಳನ್ನು ಕೇಳುವುದರಲ್ಲಿ ತಲ್ಲೀನರಾಗಿದ್ದ ಜನರ ಆರ್ಭಟದ ಮುಂದೆ ಕಮಲಮ್ಮನ ಬಾಯಿಂದ ಮಾತೇ ಹೊರಡುವಂತಿರಲಿಲ್ಲ. ಹೆಂಗಸರ ನಡುವೆ ಕುಳಿತಿದ್ದ ಕಮಲಮ್ಮನ ಮನೋಭಾವ ಸೀತಾಲಕ್ಷ್ಮಿಗೆ ಗೊತ್ತಾಯಿತು. ಆದರೆ ಅವಳು ಏನನ್ನೂ ಮಾಡುವಂತೆ ಇರಲಿಲ್ಲ.

ಸುಂದರಿಯಾದ ಹೆಂಡತಿಯ ಹೆಮ್ಮೆ ಯಾವ ಗಂಡನಿಗೂ ಸ್ವಾಭಾವಿಕ. ಅದರಲ್ಲಿಯೂ ಹೊಸದಾಗಿ ಮದುವೆಯಾಗುವವರಿಗೆ ತಮ್ಮ ಹೆಂಡತಿಯನ್ನು ತಾವು ಮೆಚ್ಚುವುದು ಮಾತ್ರವಲ್ಲದೆ ಇತರರೂ ಮೆಚ್ಚಬೇಕೆಂಬುದು ಆಸೆ. ಈ ಆಸೆ ಸುಂದರರಾಜನಿಗೂ ಸ್ವಾಭಾವಿಕವಾಗಿ ಇತ್ತು. ತನ್ನ ಹೆಂಡತಿ ಪಿಟೀಲನ್ನು ಪ್ಯಾರದಿಂದ ಹಿಡಿದುಕೊಂಡು, ಪಲ್ಲವದಂತಹ ನಸುಗೆಂಪಾದ ಬೆರಳು

ಗಳನ್ನು ಅದರ ತಂತಿಗಳಮೇಲೆ ಠೀವಿಯಿಂದ ಕುಣಿಸುತ್ತ ಮಿಡಿನಾಗರದಂತೆ ಆಚೆ ಈಚೆ ಬಾಗುತ್ತ ಬಳಕುತ್ತ ಜಡೆಮುಡಿಯ ತೆಕ್ಕೆಯಿಂದ ಕುಸುಮ ಸೌರಭವನ್ನು ತೀಡುತ್ತ ಜನರ ಕಣ್ಮನಗಳನ್ನು ಸೆರೆಹಿಡಿಯುವ ನೋಟವನ್ನು ಅವನು ಕಾತರನಾಗಿ ನಿರೀಕ್ಷಿಸುತ್ತಿದ್ದನು. ಆಕೆಯ ಹಾಡಿನ ಚೈತನ್ಯದಾಯಕ ಪ್ರಭಾವವನ್ನು, ಅಂದು ಕಲ್ಯಾಣೋತ್ಸವದ ದಿನ ಗುಡಿಯಲ್ಲಿ ಅನುಭವಿಸಿ, ದೇವರ ಕಲ್ಯಾಣವನ್ನು ಮರೆತು ತನ್ನ ಕಲ್ಯಾಣವನ್ನೇ ಕುರಿತು ಯೋಚಿಸ ತೊಡಗಿದ್ದ ಅಂದಿನಿಂದ, ಸೀತಾಲಕ್ಷ್ಮಿಯನ್ನು ರೂಪಿಗಾಗಿ ಮಾತ್ರವೇ ಅಲ್ಲ. ಗಾನಕ್ಕಾಗಿಯೂ ಭೇಷ್ ಭೇಷ್ ಎನ್ನಿಸಬೇಕೆಂಬುದು ಅವನ ಆಸೆಯಾಗಿತ್ತು. ತನ್ನ ಹೆಂಡತಿಯ ಸಂಗೀತ ಪಾಂಡಿತ್ಯ ಮೈಸೂರು ಗಾಯಕರ ಮೆಚ್ಚುಗೆಗೂ ಬರಬೇಕೆಂಬುದು ಅವನ ಆಸೆಯಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಮಲ್ಲಿಗೆಹಳ್ಳಿ, ರಂಭಾಪುರಿ ಈ ಗ್ರಾಮಗಳಲ್ಲಿ ಸ್ವಲ್ಪವಾದರೂ ಸಂಗೀತವನ್ನು ಆಸ್ವಾದಿಸಿ ಅನು ಭವಿಸುವ ಶಕ್ತಿ ಇದ್ದುದು ಅವನಿಗೊಬ್ಬನಿಗೇಯೆ. ಮೈಸೂರಿನ ಗಾಯಕರಿಗೆ ಸಂಗೀತದ ಪರಿಶ್ರಮ ಚೆನ್ನಾಗಿದ್ದರೂ, ಸಂಗೀತವಿದ್ಯೆಶಾಸ್ತ್ರ ಅವರಿಗೆ ಪರಿ ಪೂರ್ಣ ಪರಿಶ್ರಮವಿದ್ದರೂ, ಅವರ ಹಾಡುಗಾರಿಕೆಯ ಮಾಧುರ್ಯ ಅವರ ಪಾಂಡಿತ್ಯದಷ್ಟು ಉಚ್ಚ ದರ್ಜೆಯದಲ್ಲವೆಂಬುದು ಅವನಿಗೊಬ್ಬನಿಗೇ ಗೊತ್ತಾ ದುದು. ಇವರು ಗಾಯಕರಾಗಿರುವುದಕ್ಕಿಂತ ಗಾಯಕರನ್ನೇ ತಯಾರಿಸುವು ದರಲ್ಲಿ ಬಹಳ ನಿಪುಣರೆಂದು ಅವನಿಗೆ ಅವರ ಮೊದಲನೆಯ ಹಾಡನ್ನು ಕೇಳಿ ದಾಗಲೇ ಗೊತ್ತಾಯಿತು. ಆದರೂ ಆ ವಿದ್ವಾಂಸರ ಬಾಯಿಂದ ಸೀತಾ ಲಕ್ಷ್ಮಿಯ ಪ್ರಶಂಸೆಯನ್ನು ಹೊರಡಿಸಿದರೆ, ಸಂಗೀತ ಏನೂ ತಿಳಿಯದ ತನ್ನ ಹಳ್ಳಿಯ ಬಂಧುಗಳಿಗೆಲ್ಲಾ ಅವಳ ನಿಜವಾದ ಬೆಲೆ ಗೊತ್ತಾಗುವುದೆಂಬುದು ಅವನ ಉದ್ದೇಶವಾಗಿತ್ತು. ಆದರೆ ಅದು ಸಾಧ್ಯವಾಗಲೇ ಇಲ್ಲ. ಉಂಜಲು ಉರುಟಣೆ ಮುಕ್ತಾಯವಾದುವು.

ಆ ರಾತ್ರಿ ಊಟವಾದನಂತರ ಗಂಡಸರೆಲ್ಲ ಕುಳಿತು ಎಲೆ ಅಡಿಕೆ ಹಾಕಿ ಕೊಳ್ಳುತ್ತಿದ್ದರು. ಆದರೆ ಅವರು ಊಟಕ್ಕೆ ಕುಳಿತುಕೊಂಡ ಕೂಡಲೇ, ಚಿಕ್ಕ ಹುಡುಗ ಹುಡುಗಿಯರೆಲ್ಲ ಸೀತಾಲಕ್ಷ್ಮಿಯನ್ನು ಬಲಾತ್ಕಾರವಾಗಿ ಮಗ್ಗಲಿನ ಕೊಠಡಿಯೊಳಕ್ಕೆ ಕರೆದುಕೊಂಡು ಹೋಗಿ ಅವಳ ಮುಂದೆ ಪಿಟೀಲನ್ನು ಇಟ್ಟರು. ಹುಡುಗರ ಬೇಡಿಕೆಯನ್ನು ಮೀರಲಾರದೆ ಸೀತಾ

ಲಕ್ಷ್ಮಿ ಪಿಟೀಲನ್ನು ತೆಗೆದುಕೊಂಡು ಬಾರಿಸತೊಡಗಿದಳು. ಒಂದಾದ ಮೇಲೆ ಒಂದರಂತೆ ಹುಡುಗರೂ ಆ ಹಾಡು ಈ ಹಾಡು ಹೀಗೆ ಕೇಳುತ್ತಲೇ ಹೋದರು. ಮೊದಮೊದಲು ಸಂಕೋಚವಾಗಿದ್ದುದು, ಬರಬರುತ್ತಾ ಸೀತಾ ಲಕ್ಷ್ಮಿಗೆ ಧೈರ್ಯವೂ ಸ್ವಾಭಾವಿಕವಾದ ಸಂಗೀತಾವೇಶವೂ ಉಂಟಾಗಿ ಅವಳು ಗಾನವಾಹಿನಿಗೆ ಈಡಾದಳು. ಅವಳಿಗೆ ಅಂದಿನ ಮದುವೆ, ಎದುರಿಗಿದ್ದ ಹುಡುಗರು ಪಕ್ಕದ ಕೊಠಡಿಯಲ್ಲಿದ್ದ ಜನ ಎಲ್ಲ ಮರೆತು ಹೋಗಿ, ಪಿಟೀಲು ಒಂದೇ ಜಗತ್ತಿನಲ್ಲಿ ಉಳಿದ ವಸ್ತುವಾಯಿತು. ಅವಳು ನಾನಾ ರಾಗಗಳಲ್ಲಿ, ನೀರಿನಲ್ಲಿ ಮೀನು ಈಜುವಂತೆ ಸರಾಗವಾಗಿ ಆಲಾಪನೆಮಾಡತೊಡಗಿದಳು. ಹೀಗೆ ಆಕೆ ಪಿಟೀಲಿನ ಗಾನಮಾಧುರ್ಯದಲ್ಲಿ ಲೀನಳಾಗಿ ತನ್ನ ಗಾನದ ರುಚಿಯನ್ನು ತಾನೇ ಅನುಭವಿಸುತ್ತ ಬಾಹ್ಯ ಪ್ರಪಂಚದ ಜ್ಞಾನವನ್ನೇ ಮರೆತಂತೆ ಇರುವಾಗ, ಆಕೆಗೆ ತನ್ನ ಗಂಡ ಸುಂದರರಾಜನೂ, ಮೈಸೂರಿನ ವಿದ್ವಾಂಸರೂ ಇತರ ನೆಂಟರೂ ಒಳಕ್ಕೆ ಬಂದು ಮಾತನಾಡದೆ ಕುಳಿತುದು ಗೊತ್ತಾಗಲೇ ಇಲ್ಲ. ಊಟಮಾಡಿ ಎಲೆ ಅಡಿಕೆ ಹಾಕಿಕೊಳ್ಳುತ್ತಾ ನೆರೆಯ ಕೋಣೆಯಲ್ಲಿ ಕುಳಿತಿದ್ದ ಅವರಿಗೆ ಸೀತಾಲಕ್ಷ್ಮಿಯ ಪಿಟೀಲಿನ ಧ್ವನಿ ಕೇಳಿಸಿತ್ತು. ಒಂದೆರಡು ನಿಮಿಷಗಳಲ್ಲಿಯೇ ಮೈಸೂರಿನ ವಿದ್ವಾಂಸರಿಗೆ ಅದು ನುರಿತ ಕೈ ಎಂಬುದು ಗೊತ್ತಾಗಿತ್ತು. ಅವರು ಸುಂದರರಾಜನಿಗೆ "ಏನಯ್ಯ ನೀನು ನಿನ್ನ ಹೆಂಡತಿ ಗಾನಮೋಹಿನಿ ಎಂದು ಹೇಳಲಿಲ್ಲವಲ್ಲ. ಅವಳ ರೂಪವನ್ನು ನೋಡಿ ಬರಿಯ ಗ್ರಾಮಮೋಹಿನಿ ಎಂದು ಮಾತ್ರ ಅರಿತಿದ್ದೆ. ನಿನ್ನ ಅದೃಷ್ಟವೇ ಅದೃಷ್ಟ" ಎಂದು ಹೇಳಿಕೊಂಡು, ಸೀತಾಲಕ್ಷ್ಮಿಯಿದ್ದ ಕೊಠಡಿಗೆ ಬಂದು ಕುಳಿತಿದ್ದರು. ಅವರ ಅರಿವೇ ಇಲ್ಲದೆ ಸೀತಾಲಕ್ಷ್ಮಿಯು ಕಲ್ಯಾಣಿ, ಆನಂದ ಭೈರವಿ, ಹಂಸಧ್ವನಿ, ತೋಡಿ, ಮುಂತಾದ ಹಳೆಯ ರಾಗಗಳನ್ನೂ, ಅನೇಕ ಹೊಸ ಹೊಸ ರಾಗ ಮಟ್ಟುಗಳನ್ನೂ ಹಾಡಿ ಪಿಟೀಲನ್ನು ಕೆಳಗಿಟ್ಟಕೂಡಲೇ ಸಂಗೀತ ವಿದ್ವಾಂಸರು ಗಟ್ಟಿಯಾಗಿ ಚಪ್ಪಾಳೆ ತಟ್ಟಿ ಭೇಷ್ ಭೇಷ್ ಎಂದರು. ತನ್ನ ಸೃಷ್ಟಿಯ ಸಂಗೀತ ಲೋಕದಲ್ಲಿ ಮೈ ಮರೆತು ವಿಹರಿಸುತ್ತಿದ್ದ ಸೀತಾ ಲಕ್ಷ್ಮಿ ಆ ಶಬ್ದಗಳನ್ನು ಕೇಳಿ ಬೆಚ್ಚಿಬಿದ್ದಳು. ಅವಳಿಗೆ ಅಲ್ಲಿ ತನ್ನ ಗಂಡನನ್ನೂ ಇತರರನ್ನೂ ನೋಡಿ ಬಹಳ ನಾಚಿಕೆಯೂ ಸಂಕೋಚವೂ ಆಗಿ ಅವಳು ಪಿಟೀಲನ್ನು ಮೆಲ್ಲಗೆ ಕೆಳಗಿಟ್ಟು ಓಡಿಬಿಟ್ಟಳು. ಅನಂತರ ಸಂಗೀತ ವಿದ್ವಾಂ

ಸರು ಬಹಳ ಹೊತ್ತು ಆಕೆಯ ಶಕ್ತಿಯನ್ನೇ ಕೊಂಡಾಡುತ್ತಾ "ಈಗಿನ ಕಾಲದಲ್ಲಿ ಗಂಡನನ್ನು ಆಕರ್ಶಿಸುವುದಕ್ಕಾಗಿಯೇ ಸಂಗೀತವನ್ನು ಅರ್ಧ ಮರ್ದ ಕಲಿಯುವುದು ಪದ್ಧತಿಯಾಗಿರುವಾಗ ಈ ಹಳ್ಳಿಯ ಹುಡುಗಿ ಹೀಗೆ ಗಾನ ಮೋಹಿನಿಯಾಗಿರುವುದು ಸರಸ್ವತಿಯ ವರಪ್ರಸಾದವೇ ಹೊರತು ಬೇರೆಯಲ್ಲವೆಂದು" ಹೊಗಳಿದರು. "ಆಹಾ ಇಂತಹ ಶುದ್ಧ ಅಪರಂಜಿ ಪಟ್ಟಣದಲ್ಲಿದ್ದರೆ, ಇದಕ್ಕೆ ಜಗತ್ಪ್ರಸಿದ್ಧವಾದ ಕೀರ್ತಿ ಬರುತ್ತೆ" ಎಂದು ಬಾಯಿ ತುಂಬ ಹೊಗಳಿದರು. ಮರುದಿವಸ ಬೆಳಿಗ್ಗೆ ಸಂಗೀತ ವಿದ್ವಾಂಸರು ಪಾಠ ಶಾಲೆಯ ಮುಖ್ಯೋಪಾಧ್ಯಾಯಿನಿ ಕಮಲಮ್ಮನವರ ಬಳಿಗೆ ಹೋಗಿ ಆಕೆ ಯನ್ನೂ ಪ್ರಶಂಸಿಸಿದರು. 'ನಿಮ್ಮ ಯೋಗ್ಯತೆಗೆ ಸರಿಯಾದ ಶಿಷ್ಯೆ ನಿಮಗೆ ದೊರತಿದ್ದಾಳೆ. ಇಂತಹ ಜೋಡಿ ಸೇರುವುದು ಅಪರೂಪ. ಪೂರ್ವಜನ್ಮ ಸುಕೃತವೂ ಹೌದು. ಒಳ್ಳೆಯ ಗುರುವಿಗೆ ಸತ್ ಶಿಷ್ಯ ದೊರಕುವುದು ಅಪರೂಪ. ಯೋಗ್ಯನಾದ ಶಿಷ್ಯನಿಗೆ ಸುದ್ಗುರು ದೊರೆಯುವುದೂ ಹಾಗೆಯೇ. ಇಲ್ಲಿ ಅರ್ಹಳಾದ ಗುರುವಿಗೆ ಅರ್ಹಳಾದ ಶಿಷ್ಯೆ ದೊರೆತುದರಿಂದ ನೀವಿಬ್ಬರೂ ಧನ್ಯರಾದಿರಿ. ನಿಮ್ಮಿಬ್ಬರಿಗೂ ಕೃತಕೃತ್ಯತೆಯುಂಟಾಯಿತು. ಭಗವಂತ ನಿಮಗೆ ಕೊಟ್ಟ ವಿದ್ಯೆಯನ್ನು ಸರಿಯಾದ ಪಾತ್ರದಲ್ಲಿ ದಾನಮಾಡಿದಿರಿ. ಸಮಾಜಕ್ಕೂ ಭಗವಂತನಿಗೂ ನಿಮ್ಮ ಋಣ ತೀರಿತು" ಎಂದು ಹೊಗಳಿ ದರು. ಕಮಲಮ್ಮನಿಗೆ ಹಿಡಿಸಲಾರದ ಆನಂದವುಂಟಾಯಿತು. ವಿದ್ವಾಂಸರು ಹೇಳಿದ ಮಾತು ಒಂದೂ ಅತಿಶಯೋಕ್ತಿಯಲ್ಲವೆಂದು ಆಕೆಗೆ ತಿಳಿದಿದ್ದರೂ ಅದನ್ನು ಕೇಳಿ, ಸೀತಾಲಕ್ಷ್ಮಿಯ ಸಂಗೀತವನ್ನು ಕೇಳಿದಷ್ಟೇ ಆನಂಡ ಆಕೆಗೆ ಉಂಟಾಯಿತು.

ಹೀಗೆ ಎಲ್ಲರ ಹರ್ಷಗಳೊಡನೆ ಸೀತಾಲಕ್ಷ್ಮಿ ಸುಂದರರಾಜರ ವಿವಾಹಕ್ಕೆ ಮಂಗಳವಾಯಿತು.

## ೩

ಜಲಜಾಕ್ಷಿ ಸೀತಾಲಕ್ಷ್ಮಿಯ ಅಕ್ಕ. ಆಕೆಯ ಗಂಡ ನರಸಿಂಹ ಮಲ್ಲಿಗೆ ಹಳ್ಳಿಗೆ ಸುಮಾರು ಮುವ್ವತ್ತು ಮೈಲಿ ದೂರದ ಒಂದು ಹಳ್ಳಿಯಲ್ಲಿ ಸಣ್ಣ ಜಮೀನುದಾರ. ಜಮೀನ್‌ದಾರರೆನ್ನುವುದಕ್ಕಿಂತ ಹೆಚ್ಚಾಗಿ ಅವನನ್ನೂ ರೈತ

ನೆನ್ನುವುದೇ ಹೆಚ್ಚು ಉಚಿತವಾಗುವುದು. ಯಾಕೆಂದರೆ ಅವನಿಗೆ ಇದ್ದುದು ಒಂದು ತುಂಡು ಹೊಲ, ಒಂದು ತುಂಡು ಗದ್ದೆ, ಒಂದು ಸಣ್ಣ ತೋಟ. ಮನೆಯಲ್ಲಿ ಒಂದು ಜತೆ ಗಿಡ್ಡ ಹೋರಿಗಳನ್ನೂ ಮೂರು ನಾಲ್ಕು ಬರಡು ಬಡಕಲು ರಾಸುಗಳನ್ನೂ ಇಟ್ಟುಕೊಂಡು ತನ್ನ ವ್ಯವಸಾಯವನ್ನು ಅವನು ತಾನೇ ಮಾಡಿಕೊಳ್ಳುತ್ತಿದ್ದನು. ಅವನದೂ ಬಹಳ ಕಷ್ಟದ ಮತ್ತು ಕಾರ್ಪಣ್ಯದ ಬಾಳು ಆಗಿತ್ತು. ಆ ಬಾಳಿನಲ್ಲಿ ಆನಂದಕ್ಕಿಂತ ಬೇಸರಿಕೆಯ ದುಡಿಮೆಯೇ ಹೆಚ್ಚಾಗಿತ್ತು.

ನರಸಿಂಹ ಸ್ವಭಾವದಿಂದ ಅಸಂಸ್ಕೃತ. ಅವನು ಕಲಿತ ವಿದ್ಯೆ ಅವನ ಹಳ್ಳಿಯ ಪ್ರಾಥಮಿಕ ಶಾಲೆಯ ನಾಲ್ಕನೆಯ ತರಗತಿ. ಅವನಿಗೆ ಯಾವಾಗಲೂ ವಿದ್ಯೆಯ ಕಡೆಗೆ ಮನಸ್ಸು ಹೋಗಲೇ ಇಲ್ಲ. ಆ ಹಳ್ಳಿಯಲ್ಲಿ ಅವನಿಗಿಂತ ಹೆಚ್ಚು ವಿದ್ಯಾವಂತರು ಯಾರೂ ಇಲ್ಲದುದರಿಂದ ಅವನಿಗೆ ತನ್ನ ಅಜ್ಞಾನದ ವಿಷಯದಲ್ಲಿ ಅತೃಪ್ತಿಯೂ ಉಂಟಾಗಲಿಲ್ಲ. ತನ್ನ ದನ ಕರು ಗಿಡಗಳ ಜತೆಯಲ್ಲಿ ಅವನೂ ಸ್ವಾಭಾವಿಕವಾಗಿ ಬೆಳೆಯುತ್ತಿದ್ದನು. ಅವನನ್ನು ನೋಡಿದ ಕೂಡಲೇ "ಇದೊಂದು ಕೊರಡು. ಇದರೊಂದಿಗೆ ಎಷ್ಟು ತಲೆ ಕುಟ್ಟಿಕೊಂಡರೂ ವ್ಯರ್ಥ" ಎಂಬ ಭಾವ ಬರುತ್ತಿತ್ತು.

ಸೀತಾಲಕ್ಷ್ಮಿಯ ಮದುವೆಯಾದ ನಂತರ ನರಸಿಂಹನು ಎರಡು ವಾರ ಮಲ್ಲಿಗೇಹಳ್ಳಿಯಲ್ಲಿಯೇ ಇದ್ದು ಅನಂತರ ಹೆಂಡತಿಯೊಡನೆ ತನ್ನ ಹಳ್ಳಿಗೆ ಬಂದನು. ಆ ಎರಡು ವಾರಗಳಲ್ಲಿ ಅವನಿಗೂ ಸುಂದರರಾಜನಿಗೂ ಅಂತಹ ಹೆಚ್ಚು ಸ್ನೇಹ ಬೆಳೆಯಲಿಲ್ಲ. ನರಸಿಂಹ ಒಂದು ದೃಷ್ಟಿಯಿಂದ ದನವೇ ಆಗಿದ್ದನು. ಅವನೊಂದಿಗೆ ಮಾತನಾಡುವುದಾಗಲಿ, ಚರ್ಚಿಸುವುದಾಗಲಿ, ಯಾವುದೂ ಇರಲಿಲ್ಲ. ಸುಂದರರಾಜನೂ ಅವನಂತೆಯೇ ಭೂಮಿಯ ಮಗನಾಗಿ ಬೆವರಿನ ಆಳಾಗಿದ್ದರೂ ಅವನಿಗೂ ಸುಂದರರಾಜನಿಗೂ ಯಾವ ರೀತಿಯಲ್ಲಿಯೂ ಸಮಾನತೆ ಇರಲಿಲ್ಲ. ಸುಂದರರಾಜನಿಗೆ ಉತ್ತಮವಾದ ಜೀವನದ ಆಕರ್ಷಣೆ ಇತ್ತು. "ತಾನು ವಿದ್ಯಾವಂತನಾಗಲಿಲ್ಲ. ಆಗಬೇಕಾಗಿತ್ತು. ತನ್ನ ಸಂಗೀತ ಇನ್ನೂ ಚೆನ್ನಾಗಿ ಬೆಳೆಯಬಹುದಾಗಿತ್ತು. ತಾನೂ ಸುಖವಾಗಿದ್ದು ನಾಲ್ಕು ಜನಕ್ಕೆ ಉಪಕಾರಿಯಾಗಬೇಕು. ನನ್ನ ಸಂಸ್ಕೃತಿ ಸಾಲದು. ಸೀತಾಲಕ್ಷ್ಮಿಗೆ ಅರ್ಹನಾದ ಗಂಡನಾಗಬೇಕು"

ಎಂಬ ಅತೃಪ್ತಿ ಅವನಿಗೆ ದಿನ ದಿನಕ್ಕೆ ಬೆಳೆಯುತ್ತಿದ್ದಿತು. ಮದುವೆಯಾದ ಮೇಲಂತೂ ಅವನ ಸ್ವಭಾವವೇ ಬದಲಾಯಿಸಿತು. ತಾನು ಯಾವುದೋ ದೇವತಾ ಸಾನ್ನಿಧ್ಯವಲ್ಲಿರುವಂತೆಯೂ ಅದರಿಂದ ಶುಚಿಯೂ ಅಕೃತೃಮಿಯೂ ಆಗಿರಬೇಕೆಂದೂ ಅವನು ಭಾವಿಸಿಕೊಂಡನು. ಅವನ ನಡೆ ನುಡಿ ಮುಖ ಭಾವ ಎಲ್ಲದರಲ್ಲಿಯೂ ಒಂದು ವಿಧವಾದ ಉತ್ತಮನಾಗಬೇಕೆಂಬ ನಮ್ರತೆಯ ಆಕಾಂಕ್ಷೆ ಅತೃಪ್ತಿಗಳು ಕಾಣುತ್ತಿದ್ದವು.

ನರಸಿಂಹನಿಗೆ ಆ ಬಗೆಯ ಭಾವನೆ ಅತೃಪ್ತಿ ಆದರ್ಶ ಯಾವುದೂ ಇರಲೇಇಲ್ಲ. ಅವು ಇವೆ ಎಂಬುದೂ ಅವನಿಗೆ ಅರ್ಥವಾಗಿರಲಿಲ್ಲ. ಅವನಿಗೆ ತನ್ನ ದೇಹದ ಹೊರತು ಮತ್ತಾವುದೂ ಅರ್ಥವಾಗಿರಲಿಲ್ಲ. ಆ ದೇಹವನ್ನು ಸಹ ಅವನು ಶುದ್ಧವಾಗಿಟ್ಟಿರಲಿಲ್ಲ. ನಿತ್ಯ ಅವನು ಸ್ನಾನಮಾಡುತ್ತಿದ್ದರೂ ಅವನ ದೇಹ ಒಂದು ತಿಂಗಳ ಹಿಂದೆ ಸ್ನಾನಮಾಡಿದಂತೆ ತೋರುತ್ತಿತ್ತು. ಅವನ ಬಟ್ಟೆಗಳ ಗತಿಯೂ ಅದೇ ಆಗಿತ್ತು. ಅವನ ಹಲ್ಲು ಯಾವಾಗಲೂ ಕೆಂಪಾಗಿಯೇ ಇರುತ್ತಿದ್ದಿತು. ದಿವಸಕ್ಕೆ ಅವನು ಇಪ್ಪತ್ತು ಸಲವಾದರೂ ಎಲೆ ಅಡಿಕೆ ಹಾಕಿಕೊಳ್ಳುತ್ತಿದ್ದನು. ಬೆಳಗ್ಗೆ ಎದ್ದ ಕೂಡಲೇ ಅವನು ಮಾಡುತ್ತಿದ್ದ ಮೊದಲನೆಯ ಕೆಲಸ ಅದೇಯೆ. ಈಚೆಗೆ ಅವನು ಹೊಗೆಯ ಸೊಪ್ಪನ್ನು ಜೇರೆ ಪ್ರಾರಂಭಿಸಿದ್ದನು. ಹೀಗೆ ಬೇರೆ ಬೇರೆ ಸ್ವಭಾವದವರಾದ ಅವನಿಗೂ ಸುಂದರರಾಜನಿಗೂ ಸ್ನೇಹವುಂಟಾಗದುದು ಆಶ್ಚರ್ಯವಲ್ಲ. ತನ್ನ ಸ್ವಭಾವ ಬೇರೆ. ಸುಂದರರಾಜನ ಸ್ವಭಾವ ಬೇರೆ ಎಂಬುದು ಸಹ ಅರ್ಥವಾಗು ವಂತಿರಲಿಲ್ಲ ನರಸಿಂಹನಿಗೆ.

ಸೀತಾಲಕ್ಷ್ಮಿಯ ಮದುವೆಗೆ ಹೋದಾಗಲೇ ಜಲಜಾಕ್ಷಿಗೆ ಎರಡನೆಯ ಗರ್ಭ. ಆಕೆಗೆ ಯಾವಾಗಲೂ ಗರ್ಭದ್ದೇ ಯೋಚನೆ. ಯೋಚನೆಗೆ ಮುಖ್ಯ ಕಾರಣ ಬಾಣಂತನವನ್ನು ಮಾಡುವವರು ಯಾರೂ ಇಲ್ಲವಲ್ಲ ಎಂಬುದೇ ಆಗಿತ್ತು. ತಾಯಂದಿರನ್ನಿಟ್ಟುಕೊಂಡಿರುವ ಭಾಗ್ಯಶಾಲಿಗಳಾದ ಹೆಣ್ಣುಗಳನ್ನು ನೋಡಿ ಜಲಜಾಕ್ಷಿ "ಅಯ್ಯೋ ನನ್ನ ಅದೃಷ್ಟವೇ" ಎಂದು ಕೊರಗುತ್ತಿದ್ದಳು. ಅತ್ತ ಗಂಡನ ಮನೆಯಲ್ಲಿ ಅತ್ತೆ ಮಾವ ಇರಲಿಲ್ಲ. ಗಂಡ ಕೊರಡು. ಮೊದ ಲನೆಯ ಪ್ರಸವ ಮಲ್ಲಿಗೆಹಳ್ಳಿಯಲ್ಲಿ ಅಣ್ಣನ ಮನೆಯಲ್ಲಿಯೇ ಆಯಿತು. ಆಕೆಯ ಅಣ್ಣಂದಿರಾದ ಶ್ರೀನಿವಾಸ, ರಾಮು ಇಬ್ಬರೂ ಬಡವರೇ ಆದರೂ

"ಪಾಪ ತಾಯಿಲ್ಲ. ಇದ್ದರೆ ಎಷ್ಟು ಸಂಭ್ರಮಗೊಳ್ಳುತ್ತಿದ್ದರೋ" ಎಂದು ಹೇಳಿ ಜಲಜಾಕ್ಷಿಯನ್ನು ಬಾಣಂತನಕ್ಕೆ ಮನೆಗೆ ಕರೆತಂದರು. ಹಿರಿಯ ಅತ್ತಿಗೆ ರಾಮನ ಹೆಂಡತಿ ಬಾಣಂತನದ ಆರೈಕೆಗಳನ್ನು ಶ್ರದ್ಧೆಯಿಂದಲೇ ಮಾಡಿದಳು. ಆದರೂ ಆ ಪ್ರಸವ ಜಲಜಾಕ್ಷಿಗೆ ಸುಖವಾಗಲಿಲ್ಲ. ಒರಟನಾದ ನರಸಿಂಹನಿಗೆ ಯಾವ ಸೂಕ್ಷ್ಮ ವಿಚಾರಗಳೂ ತಿಳಿಯುವಂತೆ ಇರಲಿಲ್ಲ. ಅವನು ಒಂಬತ್ತು ತಿಂಗಳವರೆಗೆ ಅವಳನ್ನು ಹಳ್ಳಿಯಲ್ಲಿ ಮನೆಯಲ್ಲಿ ಗೇಯಿಸಿಕೊಂಡಿದ್ದು, ಅನಂತರ ಪ್ರಯಾಣಮಾಡುವುದೂ ಸಹ ಕಷ್ಟವಾಗಿದ್ದ ಆ ತುಂಬಿದ ಗರ್ಭಿಣಿಯನ್ನು, ಸಮ ನೆಲವಲ್ಲದ ಕಾಡು ಮೇಡು ದಾರಿಯಲ್ಲಿ ಎತ್ತಿನ ಗಾಡಿಯಲ್ಲಿ ಕರೆದುಕೊಂಡು ಬಂದು ಮಲ್ಲಿಗೆಹಳ್ಳಿಗೆ ಬಿಟ್ಟಿದ್ದನು. ಜಲಜಾಕ್ಷಿ ಅಲ್ಲಿಯವರೆಗೆ ಮನೆಯ ವ್ಯವಸಾಯದ ಕಾರ್ಯಗಳು ದನ, ಕರು, ಅಡಿಗೆ ಈ ಎಲ್ಲ ಕೆಲಸಗಳನ್ನೂ ತಾನೇ ಮಾಡಬೇಕಾಗಿತ್ತು. ಮನೆಯಲ್ಲಿ ಗಂಡಹೆಂಡರ ಹೊರತು ಮತ್ತೊಂದು ಜೀವವೂ ಇರಲಿಲ್ಲ. ಕೊನೆಗೂ ಜಲಜಾಕ್ಷಿಯೇ ಬಲಾತ್ಕರಿಸಿ ಗಾಡಿ ಹೂಡಿಸಬೇಕಾಯಿತು. ನರಸಿಂಹ ಅಂತಹ ತುಂಬು ಗರ್ಭಿಣಿಯನ್ನು ಒಬ್ಬಳನ್ನೇ ಕಳುಹಿಸಬೇಕೆಂದು ಯೋಚಿಸಿದ್ದನು. ಆದರೆ ಕೊನೆಯ ಘಳಿಗೆಯಲ್ಲಿ ಗಾಡಿ ಹೊಡೆಯುವ ಆಳು ಬಾರದುದರಿಂದ ಅವನೇ ಗಾಡಿ ಹೊಡೆದುಕೊಂಡು ಹೊರಟನು.

ಈ ಎಲ್ಲ ಶ್ರಮಗಳೂ ಒಟ್ಟುಗೂಡಿ ಆ ಸಲ—ಮೊದಲನೆಯ ಪ್ರಸವವೇ ಸುಖವಾಗಲಿಲ್ಲ. ನರಸಿಂಹ ಪ್ರಸವವಾಗುವುದಕ್ಕೆ ಮುಂಚೆ ಹಳ್ಳಿಗೆ ಹೊರಟೇ ಹೋದನು. ಜಲಜಾಕ್ಷಿಗೆ ನೋವು ಬಹಳ ಹೆಚ್ಚಾಗಿ ಅವಳ ಪ್ರಾಣಕ್ಕೇ ಸಂಚಕಾರವೆಂದು ಸಹ ವೈದ್ಯರು ಕೈ ಬಿಟ್ಟಿದ್ದರು. ಕೊನೆಯಲ್ಲಿ ದೇವರ ದಯದಿಂದ, ಹುಟ್ಟಿದ ಮಗು ಮೂರು ತಿಂಗಳಿಗೇ ಸತ್ತುಹೋಯಿತು. ಎಲ್ಲರಿಗೂ ಶ್ರಮವಾದರೂ ಯಾರಿಗೂ ಸುಖವಾಗಲಿಲ್ಲ. ಈ ಎರಡನೆಯ ಗರ್ಭವನ್ನು ಧರಿಸಿದಂದಿನಿಂದ ಜಲಜಾಕ್ಷಿ "ಭಗವಂತ ಇದರಿಂದ ಈ ಸಲ ಪಾರಾದರೆ ಸಾಕಲ್ಲ. ಇದು ಯಾಕೆ ಬಂತೋ" ಎಂದು ಕೊರಗುತ್ತಿದ್ದಳು. ಎರಡನೆಯ ಬಾಣಂತನಕ್ಕೆ ಅಣ್ಣನ ಮನೆಗೆ ಬರುವುದಂತೂ ಅವಳಿಗೆ ಇಷ್ಟವಿರಲಿಲ್ಲ. ಆದರೆ ಗಂಡನ ಮನೆಯಲ್ಲಿ ಗಂಡನ ಹೊರತು ಬೇರೆ ಯಾರೂ ಇರಲಿಲ್ಲ.

ಜಲಜಾಕ್ಷಿಯ ಎರಡನೆಯ ಬಾಣಂತನ ತವರು ಮನೆಯಲ್ಲಿ ಹೇಗೂ ಆಗುವುದಾಗಿರಲಿಲ್ಲ. ಮೊದಲನೆಯದಾಗಿ ಜಲಜಾಕ್ಷಿಗೇ ಇಷ್ಟವಿರಲಿಲ್ಲ. ಎರಡನೆಯದಾಗಿ ರಾಮನ ಹೆಂಡತಿ ಶ್ರೀನಿವಾಸನ ಹೆಂಡತಿ ಇಬ್ಬರೂ "ನಾವು ಈ ಸಲ ಎರಡೆರಡು ತಿಂಗಳು ನಮ್ಮ ತವರು ಮನೆಗೆ ಹೋಗುತ್ತೇವೆ" ಎಂದು ಹೇಳತೊಡಗಿದರು. ಇದರ ಅರ್ಥ ಅವರ ಪತಿಗಳಿಗೆ ತಿಳಿಯದೆ ಹೋಗಲಿಲ್ಲ. ಆ ವರುಷ ಸೀತಾಲಕ್ಷ್ಮಿಯ ಮದುವೆ ಖರ್ಚಿನಿಂದ ಅವರಿಗೂ ಸುಸ್ತಾಗಿತ್ತು. "ಈ ಸಲ ಹೇಗಾದರೂ ಮಾಡಿಕೊಳ್ಳಲಿ" ಎಂದು ಅವರೂ ಸುಮ್ಮನಾದರು.

ಜಲಜಾಕ್ಷಿಗೆ ಎಂಟು ತಿಂಗಳಾಯಿತು. ಮನೆಯಲ್ಲಿ ಅಡಿಗೆಯ ಕಾರ್ಯ ವ್ಯವಸಾಯಕ್ಕೆ ಸಹಾಯ ಎಲ್ಲವನ್ನೂ ಅವಳೇ ಮಾಡುತ್ತಿದ್ದಳು. ನರಸಿಂಹ ಏನೂ ತಿಳಿಯದವನಂತೆ ಪೆದ್ದನಂತೆ ಸುಮ್ಮನೆಯೇ ಇದ್ದನು. ಒಂದು ದಿನ ಜಲಜಾಕ್ಷಿಯು "ದಿನ ತುಂಬುತ್ತಾ ಇದೆ. ಸುಮ್ಮನೆ ಕುಳಿತಿದ್ದೀರಲ್ಲ ಏನು ಮಾಡುವುದು?" ಎಂದು ಕೇಳಿದಳು. ನರಸಿಂಹನು ಹೊಗೆಸೊಪ್ಪಿನ ರಸದ ಬಾಯಿನಲ್ಲಿ "ನಾನೇನು ಮಾಡಲಿ?" ಎಂದು ಕತ್ತನ್ನು ಹಿಂದಕ್ಕೆ ಬಾಗಿಸಿ ರಸ ಕೆಳಕ್ಕೆ ಬೀಳದಂತೆ ಹೇಳಿದನು. ಜಲಜಾಕ್ಷಿ ಒಂದು ಘಳಿಗೆ ಮತ್ತೆ ನಿರೀಕ್ಷಿಸಿದಳು. ನರಸಿಂಹನ ಬಾಯಲ್ಲಿ ಹೊಗೆಸೊಪ್ಪಿನ ರಸ ಮತ್ತೆ ತುಂಬಿಕೊಂಡಿತು. ಜಲಜಾಕ್ಷಿ ಎದುರಿಗೆ ನಿಂತಿರುವುದು ಗೊತ್ತೇ ಇಲ್ಲವೋ ಎಂಬಂತೆ ಅವನು ಎದ್ದು ತನ್ನ ತೋಟಕ್ಕೆ ಹೊರಟುಹೋದನು. ಜಲಜಾಕ್ಷಿಗೆ ದುಃಖ ಬಂತು. ಅವಳು ಒಂದು ಸಲ ಹೊಟ್ಟೆಯನ್ನು ಹೊಡೆದುಕೊಂಡು ಗೋಳೋ ಎಂದು ಅತ್ತುಬಿಟ್ಟಳು.

ಮಧ್ಯಾಹ್ನ ನರಸಿಂಹ ಬಂದು ಊಟಮಾಡಿ ಎಲೆ ಅಡಿಕೆ ಅಗಿದು ಗೋಡೆಗೆ ಗೋಣೀಚೀಲ ಬಾಗಿಸಿ ತಲೆದಿಂಬು ಮಾಡಿಕೊಂಡು ಮಲಗಿಬಿಟ್ಟನು. ತನಗೆ ಬಡಿಸುವಾಗ ಹೆಂಡತಿ ಏದುತ್ತಿದ್ದುದೂ ಅವಳಿಗೆ ಆಯಾಸವಾಗಿದ್ದುದೂ ಅವನ ದೃಷ್ಟಿಗೆ ಬಿದ್ದಂತೆಯೇ ತೋರಲಿಲ್ಲ, ಜಲಜಾಕ್ಷಿ ಇನ್ನೂ ಎರಡು ಮೂರು ದಿನಗಳು ಹಾಗೆಯೇ ಸುಮ್ಮನೆಯೇ ಇದ್ದಳು. ಮತ್ತೆ ನರಸಿಂಹ ಆ ಮಾತನ್ನೇ ಪ್ರಸ್ತಾಪಿಸಲಿಲ್ಲ. ನಾಲ್ಕನೆಯ ದಿನ ಅವಳು "ಏನು ಮಾಡೋಣ" ಎಂದು ಕೇಳಿದುದಕ್ಕೆ ಹೊಗೆಸೊಪ್ಪಿನ ಬಾಯಲ್ಲಿ, ತಾನು

“ಏನು ಮಾಡೋಣ” ಎಂದನು. ಈ ಪ್ರಶ್ನೆಯನ್ನು ತಾನೇ ಬಗೆಹರಿಸಬೇಕೆಂಬುದು ಜಲಜಾಕ್ಷಿಗೆ ಮಂದಟ್ಟಾಯಿತು. ಬುದ್ಧಿವಂತಳಾದ ಅವಳಿಗೆ ಗಂಡನಮೇಲೆ ಕೋಪ ಬಂತು. ಅವಳು ಬಯಸದಿದ್ದರೂ, ಅವಳ ಮನಸ್ಸಿಗೆ ಇದೊಂದು “ಶುದ್ಧ ದೈವ” ಎಂದು ತೋರಿತು. ಅವಳು “ಮಲ್ಲಿಗೆಹಳ್ಳಿಗೆ ಹೋಗಿ ಸೀತಾಲಕ್ಷ್ಮಿಯನ್ನಾದರೂ ಕರೆತನ್ನಿ. ನೀನೆ ಎನ್ನುವವರು ಸಹ ಈ ಹಾಳು ಹಳ್ಳಿಯಲ್ಲಿಲ್ಲವಲ್ಲ” ಎಂದಳು. ಅವಳಿಗೆ ಎಂದೂ ಇಲ್ಲದಷ್ಟು ದುಃಖ ಉಕ್ಕಿ ಬಂತು “ತಾನೇ ಹೇಳದೆ ಇವರಿಗೆ ತಿಳಿಯುವಂತಿಲ್ಲ” ಎಂದು ಗಂಡನಮೇಲೆ ತಿರಸ್ಕಾರ ಸಹ ಉಂಟಾಯಿತು. ನರಸಿಂಹನು ಒಂದು ಘಳಿಗೆ ಯೋಚಿಸಿ ನಾನು ಕರೆದರೆ ಅವಳು ಬರುತ್ತಾಳೆಯೇ” ಎಂದನು. ಜಲಜಾಕ್ಷಿಯು “ಇದೊಳ್ಳೆ ಚೆನ್ನಾಗಿದೆ. ಬರೋದಕ್ಕೆ ಕಾಯ್ಕೊಂಡು ಕೂತಿರ್ತಾಳೆ. ನಮ್ಮ ಕಷ್ಟಕಾಲ. ನಾವೇ ಹೋಗಿ ಹೇಳಿ ಅನುಸರಣೆಮಾಡಿ ದಮ್ಮಯ್ಯ ಪತ್ತಯ್ಯ ಎಂದು ಕರೆದುಕೊಂಡು ಬರಬೇಕು” ಎಂದಳು. ನರಸಿಂಹನು “ಸರಿ. ಹೋಗಿ ಕರೀತೀನಿ. ಬರದಿದ್ರೆ ನಾನೇನು ಮಾಡಲಿ. ಸುಮ್ನೆ ಹಿಂದಕ್ಕೆ ಬರ್ತೀನಿ” ಎಂದನು. ಜಲಜಾಕ್ಷಿಯು “ಹೇಳುವ ರೀತಿಯಲ್ಲಿ ಹೇಳಿದರೆ ಬಂದೇ ಬರುತ್ತಾರೆ. ಅದನ್ನೂ ಎಲ್ಲ ಇಲ್ಲಿಂದಲೇ ಹೇಳಿಕೊಡಬೇಕೆ? ಹೋಗಿ ನಮ್ಮಣ್ಣ ರಾಮನಿಗೆ ಅನುನಯವಾಗಿ ಹೇಳಿ. ಸೀತಾಲಕ್ಷ್ಮಿಗೂ ಒಳ್ಳೆ ಮಾತನಾಡಿ, ಕನಿಕರವುಂಟಾಗುವಂತೆ ಹೇಳಿ ಕರೆತನ್ನಿ” ಎಂದಳು. ತಾನು ಹೇಳಿದ ಯಾವ ಮಾತೂ ಗಂಡನ ತಲೆಯನ್ನು ಹೊಗಲಿಲ್ಲವೆಂಬುದು ಅವನ ಮುಖವನ್ನು ನೋಡಿದ ಕೂಡಲೇ ಆಕೆಗೆ ತಿಳಿಯಿತು ಆದುದರಿಂದ ಅವಳೇ ತನ್ನ ಅಣ್ಣ ರಾಮನಿಗೂ ಸೀತಾಲಕ್ಷ್ಮಿಗೂ ಒಂದೊಂದು ಕಾಗದವನ್ನು ಬರೆದು ಅವನ್ನು ನರಸಿಂಹನ ಕೈಲಿ ಕೊಟ್ಟು, ಗಾಡಿ ಸಮೇತ ಆತನನ್ನು ಮಲ್ಲಿಗೆಹಳ್ಳಿಗೆ ಅಟ್ಟಿದಳು. ಜಲಜಾಕ್ಷಿಗೆ ದಿನ ತುಂಬಿದ್ದರೂ, ಜಾಗ್ರತೆ ಹಿಂದಿರುಗಬೇಕೆಂಬ ಕಾತರ ನರಸಿಂಹನಿಗೆ ಇರಲಿಲ್ಲ. ಅವನು ಮಲ್ಲಿಗೆಹಳ್ಳಿಯಲ್ಲಿಯೇ ಗಾಡಿ ಸಮೇತ ಒಂದು ವಾರ ತಂಗಿದನು. ಕೊನೆಗೆ ರಾಮನೇ ಅವನನ್ನು ಬಲಾತ್ಕಾರದಿಂದ ಹೊರಡಿಸಬೇಕಾಯಿತು.

ಊರಿನಿಂದ ಹೊರಟ ಹತ್ತು ದಿನಗಳ ನಂತರ ನರಸಿಂಹನು, ಸೀತಾಲಕ್ಷ್ಮಿಯೊಡನೆ ತನ್ನ ಹಳ್ಳಿಗೆ ಹಿಂದಿರುಗಿದನು.

೪

ಸೀತಾಲಕ್ಷ್ಮಿ ಕಾರ್ಯದಲ್ಲಿ ಒಳ್ಳೆಯ ಪಾದರಸದಂತಿದ್ದಳು. ಹದಿನೆಂಟು ವಯಸ್ಸಿನ ಯುವತಿ. ಅವಳ ಅಚ್ಚುಕಟ್ಟು ಸಹ ಪ್ರಿಯವಾಗಿತ್ತು. ಆಕೆ ನರಸಿಂಹನ ಮನೆಗೆ ಬಂದಕೂಡಲೇ ಆ ಮನೆಯ ರೂಪವೇ ಬದಲಾಯಿಸಿತು. ಸೀತಾಲಕ್ಷ್ಮಿ ಎಲ್ಲಿಯೂ ಒಂದು ಚೂರು ಕಸ ಬಿದ್ದಿರಲೂ ಅವಕಾಶಕೊಡು ತ್ತಿರಲಿಲ್ಲ. ನರಸಿಂಹನ ಮನೆಯೂ ಅದರ ಆವರಣವೂ ಹಿಂದೆಂದೂ ಇಲ್ಲದಷ್ಟು ಸ್ವಚ್ಛವಾಯಿತು. ಹಿಂದೆ ನರಸಿಂಹನ ಮನೆ ಬಾಗಿಲಿನಲ್ಲಿ ಸಾಮಾನ್ಯವಾಗಿ ಎಂಜಲೆಲೆ ಕಸ ಇಲ್ಲದ ದಿನವೇ ಇರುತ್ತಿರಲಿಲ್ಲ. ಆ ಹಳ್ಳಿಯಲ್ಲಿ ಗ್ರಾಮ ಪಂಚಾಯ್ತಿ ಇದ್ದು ಕಂದಾಯ ವಸೂಲ್ಮಾಡುತ್ತಿದ್ದರೂ ಊರನ್ನು ಪಂಚಾಯ್ತಿ ಯವರು ಸ್ವಚ್ಛವಾಗಿಡುವುದರಕಡೆ ಲಕ್ಷ್ಯಕೊಟ್ಟಿರಲಿಲ್ಲ. ಪಂಚಾಯ್ತಿಯವರು ಕಂದಾಯ ತೆಗೆದುಕೊಂಡಮೇಲೆ ಗುಡಿಸುವುದು ಅವರ ಕೆಲಸ ಎಂದು ಕೊಂಡು ಜನ ಊರಿನಲ್ಲೆಲ್ಲ ಎಂಜಲೆಲೆ ಹಾರಾಡುತ್ತಿದ್ದರೂ ಸುಮ್ಮ ನಿದ್ದರು. ಸೀತಾಲಕ್ಷ್ಮಿ ನರಸಿಂಹನ ಮನೆಗೆ ಬಂದಕೂಡಲೇ ಎಂಜಲೆಲೆ ಗಳನ್ನು ಬೀದಿಯಲ್ಲಿ ಹಾಕುವುದನ್ನು ಬಿಟ್ಟು ತಿಪ್ಪೆಗೆ ಹಾಕತೊಡಗಿದಳು. ನರಸಿಂಹನ ಹಳೆಯಕಾಲದ ಛತ್ರದಂತಿದ್ದ ಮನೆಯನ್ನು ನಿರ್ದಯದಿಂದ ಒಂದು ಕಡೆಯಿಂದ ಗುಡಿಸಿ ಧೂಳುಹೊಡೆದು ' ಸುಮಾರು ಮೂರು ನಾಲ್ಕು ಗಾಡಿ ಕಸವನ್ನು ತಿಪ್ಪೆಗೆ ಹಾಕಿದಳು. " ಹೆಣ್ಣಿದ್ದ ಮನೆಗೆ ಕನ್ನಡಿ ಯಾಕೆ ? " ಎಂಬ ಮಾತು ಇಂತವರನ್ನು ಕಂಡು ಹುಟ್ಟಿದ್ದಿರಬಹುದು.

ಆಕೆ ಎಲ್ಲಕ್ಕಿಂತ ಹೆಚ್ಚಾಗಿ ನರಸಿಂಹನನ್ನೇ ಉಬ್ಬೆಗೆ ಹಾಕಿದಳು. ಹಳ್ಳಿಯ ಕೊಳಕೇ ಮೂರ್ತಿವೆತ್ತಂತಿದ್ದ ಆತನ ವಸ್ತ್ರಗಳು ಹಿಂದೆಂದೂ ಇಲ್ಲದಷ್ಟು ಬೆಳ್ಳಗಾದವು. ಸೀತಾಲಕ್ಷ್ಮಿಯ ಅಚ್ಚುಕಟ್ಟುತನವನ್ನು ಕಂಡು ನರಸಿಂಹನಿಗೆ ಅವಳಲ್ಲಿ ಭಯವುಂಟಾಯಿತು. ಜಗಲಿಯ ಮೇಲೆಯೂ ಬಾಗಿಲಿನಲ್ಲಿಯೂ ಎಲೆ ಅಡಿಕೆ ಹೊಗೆಸೊಪ್ಪಿನ ರಸವನ್ನು ಉಗುಳಿ ಓಕುಳಿ ಮಾಡುತ್ತಿದ್ದ ಅವನು ಈಗ ಉಗುಳಬೇಕಾದರೆ ದೂರಕ್ಕೆ ಹೋಗುತ್ತಿದ್ದನು. ಹಿಂದೆ ಹೊಗೆಸೊಪ್ಪನ್ನು ಹಾಕಿಕೊಳ್ಳುವುದು ಆವನಿಗೆ ಹೆಮ್ಮೆಯಾಗಿತ್ತು. ಈಗ ಅದು ನಾಚಿಕೆಯಾಯಿತು. ಜಲಜಾಕ್ಷಿ, ಹೊಗೆಸೊಪ್ಪನ್ನು ಕುರಿತ

ಅನೇಕವೇಳೆ ಅಪ್ರತ್ಯಕ್ಷವಾಗಿಯೂ, ಒಂದೆರಡು ಸಲ ನೇರವಾಗಿಯೂ ನರಸಿಂಹ ನಿಗೆ ಹೇಳಿದ್ದಳು. ಆದರೆ ನರಸಿಂಹ ಅದು ಕಿವಿಗೆ ಬಿದ್ದಂತೆಯೇ ತೋರಿಸಿಕೊಳ್ಳ ಲಿಲ್ಲ. ಅವನ ಚರ್ಮವಾದರೂ ಅಷ್ಟೇ ಒರಟಾಗಿತ್ತು. ಅಲ್ಲದೆ ಜಲ ಜಾಕ್ಷಿಯು, ಮನೆಯನ್ನೂ ವಾತಾವರಣವನ್ನೂ, ನೋಡುವವರಿಗೆ ಆದರ್ಶ ವಾಗುವಂತೆ ಇಟ್ಟಿರಲಿಲ್ಲ. ಆದರೆ ಸೀತಾಲಕ್ಷ್ಮಿ ಒಂದು ಮಾತನ್ನೂ ಆಡುತ್ತಿರ ಲಿಲ್ಲ. ಎಲ್ಲಿ ಕೊಳೆ ಇದ್ದರೆ ಅದನ್ನು ಎತ್ತಿ ತಿಪ್ಪೆಗೆ ಹಾಕುತ್ತಿದ್ದಳು. ಮೊದಲ ಎರಡು ದಿನ ಬೀದಿಯ ಬಾಗಿಲಿನಲ್ಲಿಯೂ ಜಗಲಿಯ ಮೇಲೆಯೂ ಎಲೆ ಅಡಿಕೆಯ ಲಾಕ್ಷಾರಸ ಬಿದ್ದುದನ್ನು ಸಗಣಿ ನೀರಿನಿಂದ ಸಾರಿಸಿದಳು. ನರಸಿಂಹನ ಮೇಲೆ ಯಾವಾಗಲೂ ಯಾರ ಮಾತೂ ಪರಿಣಾಮವನ್ನುಂಟುಮಾಡುತ್ತಿರಲಿಲ್ಲ. ಆದರೆ ಸೀತಾಲಕ್ಷ್ಮಿ ಯಾವ ಮಾತನ್ನೂ ಆಡದೆ ತನ್ನ ಗಾಂಭೀರ್ಯದಿಂದಲೇ ಅವನನ್ನು ಬದಲಾಯಿಸಿದ್ದಳು. ಗಂಡನಲ್ಲಿ ಉಂಟಾದ ಈ ಬದಲಾವಣೆ ಯನ್ನು ಕಂಡು ಜಲಜಾಕ್ಷಿಗೂ ಪ್ರಿಯವೂ ಆಶ್ಚರ್ಯವೂ ಉಂಟಾಯಿತು. ಜಲಜಾಕ್ಷಿಗೆ ದಿನ ತುಂಬುತ್ತಿದ್ದುದರಿಂದ ಸೀತಾಲಕ್ಷ್ಮಿ ಆಕೆಯನ್ನು ಒಂದು ಕೆಲಸಕ್ಕೂ ಬಿಡುತ್ತಿರಲಿಲ್ಲ. ಹಳ್ಳಿಯ ಆ ಮನೆಯ ಕೆಲಸ ಒಬ್ಬರು ಮಾಡು ವುದಕ್ಕಿಂತ ಹೆಚ್ಚಾಗಿದ್ದರೂ, ಆ ಕೆಲಸವನ್ನು ದಿನವೆಲ್ಲ ಮಾಡಿದರೂ ಜಲ ಜಾಕ್ಷಿಯಿಂದ ನಿರ್ವಹಿಸಲು ಕಷ್ಟವಾಗುತ್ತಿದ್ದರೂ, ಸೀತಾಲಕ್ಷ್ಮಿ ಒಂದು ಮಾಯದಿಂದಲೋ ಎಂಬಂತೆ ಕೆಲಸಗಳನ್ನೆಲ್ಲ ಅರಘಳಿಗೆಯಲ್ಲಿ ಮುಗಿಸಿ ವಿರಾಮವಾಗಿ ಕುಳಿತುಕೊಳ್ಳುತ್ತಿದ್ದಳು.

ನರಸಿಂಹನ ಹಳ್ಳಿಗೆ ಬರುವಾಗ ಸೀತಾಲಕ್ಷ್ಮಿ ಪಿಟೀಲನ್ನೂ ಜತೆಯಲ್ಲಿ ತಂದಿದ್ದಳು. ತನ್ನ ಗಂಡ ಸುಂದರರಾಜ ಪಿಟೀಲಿನ ಅಂತಹ ಭಕ್ತನಾಗಿ ದ್ದುದು ಮದುವೆಯ ದಿನದವರೆಗೆ ಸೀತಾಲಕ್ಷ್ಮಿಗೆ ತಿಳಿದಿರಲಿಲ್ಲ. "ತನ್ನಲ್ಲಿ ಒಂದು ಅನರ್ಘ್ಯವಾದ ರತ್ನವಿದೆ. ಇದೊಂದು ಸಂಜೀವಿನಿ. ಇದರಿಂದ ನಮ್ಮ ವರಲ್ಲಿ ನನ್ನ ಬೆಲೆ ಹೆಚ್ಚಿದೆ. ನನ್ನ ವಿದ್ಯಾಗುರು ಸಂಗೀತದ ಉಪಾಧ್ಯಾ ಯಿನಿ ಕಮಲಮ್ಮನವರಿಗೆ ಸಹ ನನ್ನ ಗಾನಮಾಧುರ್ಯ ತೃಪ್ತಿಯನ್ನುಂಟು ಮಾಡಿದೆ. ಇದು ದುಃಖದಲ್ಲಿ ನಮ್ಮನ್ನು ಕಾಯುವ ಅನುತಾಪ ಪೂರಿತ ಮಿತ್ರ. ಸುಖದಲ್ಲಿ ಆನಂದವನ್ನು ಇಮ್ಮಡಿಸುವ ಸಹೃದಯ ಬಂಧು" ಎಂದು ಆಕೆ ಅರಿತಿದ್ದಳೇ ಹೊರತು, ತನ್ನ ಬಾಳಿನ ಸ್ವಾಮಿಗೆ ಇದು ಇಂತಹ ದಿವ್ಯ

ಮೋಹಕತೆಯನ್ನುಂಟುಮಾಡುವುದೆಂದು ಆಕೆ ಭಾವಿಸಿರಲಿಲ್ಲ. ವಿವಾಹ ಸಮಯದಲ್ಲಿ ಸುಂದರರಾಜನು ಆಕೆಯ ಗಾನಮಾಧುರ್ಯದಿಂದ ಮುಗ್ಧನಾದು ದನ್ನು ಅವಳು ಕಂಡಾಗ ಅವಳಿಗೆ ಕೃತಕೃತ್ಯತೆಯುಂಟಾಯಿತು. ಬುದ್ಧ ದೇವನ ಕತೆಯಲ್ಲಿ ಒಂದು ಸಂದರ್ಭ ಬರುತ್ತದೆ. ಹೂ ಮಾರುವವನ ಬಳಿ ಇರುವ ಹೂವನ್ನು ಬುದ್ಧಗುರುವಿಗೆ ಅರ್ಪಿಸಬೇಕೆಂದು ಅನೇಕರು ಬಂದು ಕ್ರಯಮಾಡುತ್ತಾರೆ. ಹೂವಾಡಿಗ ಅದನ್ನು ಯಾರಿಗೂ ಕೊಡುವುದಿಲ್ಲ. ಕೊನೆಗೆ ರಾಜನೇ ಬಂದು ಹೂವನ್ನು ಹೆಚ್ಚು ಬೆಲೆಗೆ ಕೇಳುತ್ತಾನೆ. "ಹೀಗೆ ಇವರೆಲ್ಲ ಕೇಳಬೇಕಾದರೆ, ಇದನ್ನು ಸ್ವೀಕರಿಸುವವನ ಮಹಿಮೆ ಏನಿರಬಹು ದೆಂದು" ಯೋಚಿಸಿ ಹೂವಾಡಿಗನೇ ಹೂವನ್ನು ತೆಗೆದುಕೊಂಡು ಹೋಗಿ ಗುರುವಿಗೆ ಅರ್ಪಿಸಿ ಕೃತಕೃತ್ಯನಾಗುತ್ತಾನೆ. ಗಂಡನು ತನ್ನನ್ನು ಮೆಚ್ಚಿದಾಗ ಆ ಕೃತಕೃತ್ಯತೆಯ ಭಾವ ಸೀತಾಲಕ್ಷ್ಮಿಗೆ ಉಂಟಾಗಿದ್ದಿತು.

ಸೀತಾಲಕ್ಷ್ಮಿಯ ವಿವಾಹ ಜೀವನ ಹೀಗೆ ಅತ್ಯಂತ ಮಧುರವಾಗಿ ಪ್ರಾರಂಭವಾಗಿತ್ತು. ರಂಭಾಪುರಿಗೂ ಮಲ್ಲಿಗೆಹಳ್ಳಿಗೂ ಬಹಳ ಹತ್ತಿರವಿದ್ದುದ ರಿಂದ ಸುಂದರರಾಜ ಈ ಎರಡು ತಿಂಗಳಿನಲ್ಲಿ ಹೆಚ್ಚು ಕಾಲವನ್ನು ಮಲ್ಲಿಗೆ ಹಳ್ಳಿಯಲ್ಲಿಯೇ ಕಳೆದಿದ್ದನು. ಶ್ರೀನಿವಾಸ ರಾಮು ಇವರ ಜೀವನ ಮುಖ್ಯ ವಾಗಿ ತೋಟದಿಂದಲೇ ನಡೆಯುತ್ತಿದ್ದಿತೆಂದು ಹಿಂದೆಯೇ ಹೇಳಿದೆವಷ್ಟೆ. ಸ್ವಾಭಾವಿಕವಾಗಿ ತೋಟದಲ್ಲಿಯೂ ಬಯಲಿನಲ್ಲಿಯೂ ಕೆಲಸಮಾಡಿ ಅಭ್ಯಾಸ ಹೊಂದಿದ್ದ ಸುಂದರರಾಜ ಮಲ್ಲಿಗೆಹಳ್ಳಿಯ ಭಾವನೈದುನರ ತೋಟದಲ್ಲಿ ಕೆಲಸಕ್ಕೆ ಹೋಗುತ್ತಿದ್ದನು. ಒಂದೆರಡು ದಿನ ರಾಮು, ಶ್ರೀನಿವಾಸರು "ಬೇಡಣ್ಣ, ನೀನ್ಯಾಕೆ ಇಲ್ಲಿ ದುಡಿಯುತ್ತೀಯೆ. ನಮ್ಮ ಕೆಲಸ ನಾವು ಮಾಡಿ ಕೊಳ್ಳುತ್ತೇವೆ" ಎಂದು ತಡೆದರು. ಆದರೆ, ಸುಂದರರಾಜನು "ಯಾಕೆ? ನಾನು ಮನೆಯಲ್ಲಿಯೂ ಮಾಡುವುದು ಇದೇತಾನೆ? ನನಗೆ ಯಾವಾಗಲೂ ತೋಟ ದಲ್ಲಿ ಕೆಲಸಮಾಡುವುದೂ ಗಿಡಗಳ ಜತೆ ಇರುವುದೂ ಇಷ್ಟ" ಎಂದು ತೋಟಕ್ಕೆ ಹೋಗಿಬಿಡುತ್ತಿದ್ದನು. ಕೆಲಸ ಮುಗಿದ ನಂತರ ಶ್ರೀನಿವಾಸ, ರಾಮು ಮನೆಗೆ ಬಂದರೂ, ಸುಂದರರಾಜ ಬರುತ್ತಿರಲಿಲ್ಲ. ಆಗ ಸೀತಾಲಕ್ಷ್ಮಿಯೇ ಅವನಿಗೆ ಆಹಾರವನ್ನು ತೆಗೆದುಕೊಂಡು ತೋಟಕ್ಕೆ ಹೋಗುತ್ತಿದ್ದಳು. ಮೊದಲು ಸೀತಾಲಕ್ಷ್ಮಿ ಗಂಡನಿಗೆ ಆಹಾರವನ್ನು ತೆಗೆದುಕೊಂಡು ಹೋಗಿ ಕೊಟ್ಟು

ಅನಂತರ ತಾನು ಮನೆಗೆ ಬಂದು ಊಟಮಾಡುತ್ತಿದ್ದಳು. ನಾಲ್ಕಾರು ದಿನಗಳನಂತರ ಸೀತಾಲಕ್ಷ್ಮಿ ತನ್ನ ಊಟವನ್ನೂ ತೋಟಕ್ಕೇ ತಂದು, ಗಂಡನಿಗೆ ಊಟವಾದನಂತರ ತಾನು ಮಾಡುತ್ತಿದ್ದಳು. ಸುಂದರರಾಜನು ಒಂದೆರಡು ದಿನಗಳನಂತರ "ಇಬ್ಬರೂ ಒಟ್ಟಿಗೆ ಕುಳಿತು ಊಟಮಾಡಿಬಿಡೋಣ. ನನ್ನ ಊಟ ಆಗುವವರೆಗೆ ನೀನ್ಯಾಕೆ ಕಾಯಬೇಕು" ಎಂದು ಹೇಳಿದನು. ಹಳ್ಳಿಯಲ್ಲಿ ಇಂತಹ ಪದ್ಧತಿಗಳ ಪ್ರಚಾರವಿಲ್ಲ. ಮೊದಲ ದಿನ ಸೀತಾಲಕ್ಷ್ಮಿ ಇದಕ್ಕೆ ಒಪ್ಪಲಿಲ್ಲ. ಆದರೆ ಎರಡನೆಯ ದಿನ ಸುಂದರರಾಜನೇ ಬಾಳೆಗಿಡದ ನೆಳಲ ತಂಪಿನಲ್ಲಿ ಎರಡು ಎಲೆಗಳನ್ನು ಹಾಕಿ ಸೀತಾಲಕ್ಷ್ಮಿ ಬರುವುದನ್ನೇ ನಿರೀಕ್ಷಿಸುತ್ತಿದ್ದನು. ದೂರದಿಂದಲೇ ಎರಡು ಎಲೆಗಳನ್ನೂ ನೋಡುತ್ತಾ ಸೀತಾಲಕ್ಷ್ಮಿ ಮುಗುಳುನಗೆಯೊಂದಿಗೆ ಊಟದ ಕುಕ್ಕೆಯೊಡನೆ ಬಂದಳು. ಸ್ವಲ್ಪ ಮೊಂಡಾಟ ಮಾಡಿದನಂತರ ಇಬ್ಬರೂ ಒಟ್ಟಿಗೆ ಊಟಕ್ಕೆ ಕುಳಿತರು. ಅಂದಿನಿಂದ ಅದೇ ಪದ್ಧತಿಯಾಯಿತು. ಒಂದು ಬೆಳಿಗ್ಗೆ ಇದ್ದಕ್ಕಿದ್ದಂತೆ ಸುಂದರರಾಜನು ಗುದ್ದಲಿಯ ಜತೆಯಲ್ಲಿ ಸೀತಾಲಕ್ಷ್ಮಿಯ ಪಿಟೀಲನ್ನೂ ಹಿಡಿದುಕೊಂಡು ತೋಟಕ್ಕೆ ಹೊರಟನು. ಶ್ರೀನಿವಾಸನು ನಗುತ್ತ "ಏನು ಅಳಿಯಂದಿರೆ ಪಿಟೀಲಿನಿಂದ ನೆಲವನ್ನು ಅಗೆಯುತ್ತೀರಾ?" ಎಂದು ಕೇಳಿದನು. ಸುಂದರರಾಜನು ಅಷ್ಟೇ ಗೆಲುವಾಗಿ "ಗುದ್ದಲಿಯಿಂದ ಅಗೆದು ಆಯಾಸವಾದಾಗ ಪಿಟೀಲನ್ನು ಅಭ್ಯಾಸ ಮಾಡಿಕೊಳ್ಳುತ್ತೇನೆ" ಎಂದನು.

ಆ ಮಧ್ಯಾಹ್ನ ಊಟವಾದ ನಂತರ ಅರ್ಧ ಘಂಟೆ ವಿಶ್ರಾಂತಿಯಾದ ಕೂಡಲೇ ಸುಂದರರಾಜನು ಪಿಟೀಲನ್ನು ತಂದು, ಭಕ್ತನು ದೇವಿಯಮುಂದೆ ಪುಷ್ಪ ತಾಂಬೂಲವನ್ನಿಡುವಂತೆ ಇಟ್ಟನು. ಅವನ ಗಂಭೀರ ಮತ್ತು ಒಂದು ಬಗೆಯ ನಾಟಕೀಯ ನಮ್ರತೆಯನ್ನು ಕಂಡು ಸೀತಾಲಕ್ಷ್ಮಿಗೆ ನಗುವೂ ಸಂಕೋಚವೂ ಉಂಟಾಯಿತು. ಆದರೆ ಅವಳು ಹಾಗೆ ಬಯಲಿನಲ್ಲಿ ಗಂಡನ ಎದುರಿಗೆ ಎಂದೂ ಒಬ್ಬಳೇ ಪಿಟೀಲನ್ನು ನುಡಿಸಿರಲಿಲ್ಲ. ಸುತ್ತಲೂ ತಂಪನ್ನೂ, ಹಚ್ಚಹಸುರನ್ನೂ ಬೀರುತ್ತಿದ್ದ ಬಾಳೆ, ತೆಂಗು, ಅಡಿಕೆ ವೃಕ್ಷಗಳು, ವಿಳ್ಯದೆಲೆಯ ಹಂಬುಗಳು, ಪುಷ್ಪಗಳ ಮತ್ತು ಅಡಿಕೆ ಹೊಂಬಾಳೆಯ ಸುಗಂಧವನ್ನು ಹೊತ್ತು ತೀಡುವ ನದಿಯ ಜಲಕಣಗಳಿಂದ ಆರ್ದ್ರವಾದ ತಂಗಾಳಿ, ಎಲ್ಲೆಲ್ಲೂ ಮಧ್ಯಾಹ್ನದ ಮೌನವಿದ್ದರೂ—ಕತ್ತಲೆಯಲ್ಲಿ ಮಿಂಚಿನಂತೆ—ಆ ಮೌನವನ್ನು

ಕಲಕಿದ ಹಕ್ಕಿಗಳ ಹಾಡು. ಇಂತಹ ಒಂದು ಅನಂತವಾದ ಮೌನವಾದ ವಿಶಾಲ ಜಗತ್ತಿನಲ್ಲಿ ತಾವಿಬ್ಬರೇ ಇರುವಂತೆ ಸೀತಾಲಕ್ಷ್ಮಿಗೆ ಭಾಸವಾಗಿತ್ತು. ಹೇಮಾವತೀ ನದಿಯ ತುಂಬುಪ್ರವಾಹದ ಅಗಲವಾದ ಪಾತ್ರದಲ್ಲಿ ನಡು ನೀರಿನಲ್ಲಿ ದೂರದಲ್ಲಿ ನೋಡಿದ್ದ ಎರಡು ಕೊಕ್ಕರೆಗಳ ಜ್ಞಾಪಕ ಅವಳಿಗೆ ಬಂದಿತು. ಆಕೆ ಹೀಗೆ ಅಂತರ್ಮುಖಳಾಗಿದ್ದುದನ್ನು ನೋಡಿ ಸುಂದರ ರಾಜನು ಒಂದು ಸಲ ಪಿಟೀಲಿನ ಮೇಲೆ ಠಣ್ ಎಂದು ಕೈಯ್ಯಾಡಿಸಿದನು. ಸೀತಾಲಕ್ಷ್ಮಿ ಬೆಚ್ಚಿಬಿದ್ದಂತೆ ಸುಂದರರಾಜನನ್ನೂ ಪಿಟೀಲನ್ನೂ ನೋಡಿದಳು. ಯಾವಾಗಲೂ, ಸುತ್ತ ಅತ್ತಿಗೆ ಹುಡುಗಿಯರು ಉಪಾಧ್ಯಾಯಿನಿ ಕಮಲಮ್ಮ ಇವರೆದುರಿಗೆ ಮಾತ್ರವೇ "ನುಡಿಸಮ್ಮ ನುಡಿಸಮ್ಮ" ಎಂದು ಬಲಾತ್ಕಾರ ಮಾಡಿಸಿಕೊಂಡು ಪಿಟೀಲು ನುಡಿಸಿ ಅಭ್ಯಾಸವಾಗಿದ್ದುದು ಅವಳಿಗೆ. ಅಲ್ಲದೆ ಗಂಡನೊಂದಿಗೆ ಹೀಗೆ ಅವಳು ಎಂದೂ ನಿರ್ಜನಪ್ರದೇಶದಲ್ಲಿ—ಈಗ ನಾಲ್ಕಾರು ದಿನಗಳಲ್ಲಿ ಹೊರತು—ಕುಳಿತಿರಲಿಲ್ಲ. ಸಭಾಸದರಮುಂದೆ ಮೊದಲ ಸಲ ಉಪನ್ಯಾಸಮಾಡುವವನ ನುಡಿ ತೊದಲುತಿದ್ದಂತೆ ಅವಳ ಕೈ ನಡುಗತೊಡ ಗಿತ್ತು. ಆ ನಡುಕವನ್ನು ನೋಡಿ ಸುಂದರರಾಜನು "ಅಷ್ಟುಭಯ ಯಾಕೆ? ನಾನೇನು ನಿನ್ನನ್ನು ತಿನ್ನುತ್ತೀನೆಯೆ? ಒಂದು ಸಲ ಕಮಾನನ್ನು ಪಿಟೀಲಿನ ಮೇಲೆ ಎಳೆ. ಎಲ್ಲ ಭಯವೂ ಮಾಯವಾಗುವುದು" ಎಂದು ಪಿಟೀಲನ್ನೂ ಕಮಾನನ್ನೂ ಅವಳ ಕೈಗೆ ಎತ್ತಿಕೊಟ್ಟನು. ಆದರೂ ಸೀತಾಲಕ್ಷ್ಮಿಗೆ ಧೈರ್ಯ ಬರಲಿಲ್ಲ. ಆಗ ಸುಂದರರಾಜನು "ನಾ ನಿನ್ನ ಧ್ಯಾನದೊಳಿರಲು" ಎಂಬ ಹಾಡನ್ನು ತಾನೇ ನಿಧಾನವಾಗಿ ಹಾಡತೊಡಗಿದನು. ಸೀತಾಲಕ್ಷ್ಮಿ ಅವನ ಹಾಡಿನ ಗತಿಯನ್ನನುಸರಿಸಿ ಪಿಟೀಲನ್ನು ನುಡಿಸತೊಡಗಿದಳು. ನಾಲ್ಕಾರು ದಿನಗಳಲ್ಲಿ ತಾನು ಒಬ್ಬಳೇ ನುಡಿಸುವ ಧೈರ್ಯ ಸೀತಾಲಕ್ಷ್ಮಿಗೆ ಉಂಟಾಯಿತು. ಆದರೆ ಸುಂದರರಾಜನು ಹಾಡನ್ನು ತೊಡಗುವವರೆಗೆ ಆಕೆ ಪಿಟೀಲಿನಮೇಲೆ ಕಮಾನನ್ನು ಆಡಿಸುತ್ತಿರಲಿಲ್ಲ. ಅನಂತರ ಮಧ್ಯೆ ಅವನು ನಿಲ್ಲಿಸಿಬಿಟ್ಟರೂ ಅದರಕಡೆ ಲಕ್ಷ್ಯವೇ ಇಲ್ಲದೆ ತನ್ನ ಪಾಡಿಗೆ ತಾನು ನಾಲ್ಕಾರು ಹಾಡು, ಒಂದು ರಾಗಾಲಾಪನೆ, ಪಲ್ಲವಿ ಇವುಗಳನ್ನೆಲ್ಲ ನುಡಿಸುತ್ತಿದ್ದಳು. ಆನಂದದ ಭರದಲ್ಲಿ ಭಲಾ ಭಲಾ ಎಂದು ಸುಂದರರಾಜನು ಚಪ್ಪಾಳೆ ಹೊಡೆದಾಗ ಮಾತ್ರ ರಸಾನುಭವದಲ್ಲಿ ಲೀನಳಾಗಿದ್ದ ಅವಳಿಗೆ ಹೊರಜಗತ್ತಿನ ಜ್ಞಾನವುಂಟಾಗಿ.

ನಾಚಿಕೆಯಿಂದ ತಲೆ ತಗ್ಗಿಸಿಬಿಡುತ್ತಿದ್ದಳು. ಅಲ್ಲಿಗೆ ಅಂದಿನ ಪಿಟೀಲುವಾದನ ಮುಗಿದುಹೋಗುತ್ತಿತ್ತು.

ತೋಟದಿಂದ ಮನೆಗೆ ಪಿಟೀಲನ್ನು ತೆಗೆದುಕೊಂಡು ಹೋಗುವುದು ತನಗೆ ನಾಚಿಕೆಯಾದರೂ ಸೀತಾಲಕ್ಷ್ಮಿ "ನಾನೇ ತೆಗೆದುಕೊಂಡು ಹೋಗುತ್ತೇನೆ" ಎಂದು ಪ್ರತಿದಿನವೂ ಹೇಳುತ್ತಿದ್ದಳು. ಸುಂದರರಾಜನು "ಯಾಕೆ? ಬೇಡ. ಇದರ ಸಂಪರ್ಕದಿಂದಲಾದರೂ ನನಗೆ ಸ್ವಲ್ಪ ಸಂಗೀತ ಜ್ಞಾನವುಂಟಾಗಲಿ" ಎಂದು ತಾನೇ ತೆಗೆದುಕೊಂಡು ಹೋಗುತ್ತಿದ್ದನು. ಅವನ ಭಾವಂದಿರೂ ಉಳಿದ ಸ್ನೇಹಿತರೂ "ಏನಯ್ಯ ಸವ್ಯಸಾಚಿ, ಶಾಪಾದಪಿ ಶರಾದಪಿ ಎಂಬಂತೆ ಒಂದು ಕೈಲಿ ಗುದ್ದಲಿ ಒಂದು ಕೈಲಿ ಪಿಟೀಲು" ಎಂದು ಹಾಸ್ಯಮಾಡುತ್ತಿದ್ದರು. ಮಧುಪಾನದಿಂದ ಮತ್ತವಾದ ದುಂಬಿಯಂತೆ, ಸುಂದರರಾಜ ಅದಾವುದನ್ನೂ ಲಕ್ಷಿಸದೆ ಆ ಗಾನದ ಗುಂಗಿನಲ್ಲಿಯೇ ತಲ್ಲೀನನಾಗಿರುತ್ತಿದ್ದನು.

   

ನರಸಿಂಹನ ಮನೆಯಲ್ಲಿ ಒಂದು ದಿನ, ಮನೆ ಕೆಲಸವೆಲ್ಲ ಆದನಂತರ ಸೀತಾಲಕ್ಷ್ಮಿ ಪಿಟೀಲನ್ನು ಪೆಟ್ಟಿಗೆಯಿಂದ ಹೊರಕ್ಕೆ ತೆಗೆದಳು. ಪೆಟ್ಟಿಗೆಯ ಮುಚ್ಚಳದ ಒಳಗಡೆಗೆ ಅಂಟಿಸಿದ್ದ ಮದುವೆಯ ಕಾಲದಲ್ಲಿ ತೆಗೆದಿದ್ದ ತನ್ನ ಮತ್ತು ಸುಂದರರಾಜನ ಪೋಟೊ ಅವಳ ಕಣ್ಣಿಗೆ ಬಿತ್ತು. ಆ ಫೋಟೊವನ್ನು ನೋಡಿದಾಗಲೆಲ್ಲ ಅವಳಿಗೆ ಅದನ್ನು ತೆಗೆದ ಸಂದರ್ಭ ಜ್ಞಾಪಕ ಬರುತ್ತಿದ್ದಿತು. ಮೊದಲು ಫೋಟೊ ತೆಗೆಯುವವನನ್ನು ಕರೆಸಬೇಕೆಂದು ಸುಂದರರಾಜ ಹೇಳಿದಾಗ ಅವನ ತಂದೆಯವರು "ಹಳ್ಳಿಯಲ್ಲಿ ಇದೆಲ್ಲ ಯಾಕೆ"? ಎಂದುಬಿಟ್ಟರು. ಸುಂದರರಾಜನೂ ಆಗ ಸುಮ್ಮನಾದನು. ಎರಡು ಗಂಟೆಗಳ ನಂತರ ಫೋಟೊ ತೆಗೆಯುವವನು ಬಂದೇ ಬಂದನು. ಅವನನ್ನು ನೋಡಿದ ಕೂಡಲೇ ಸುಂದರರಾಜನು "ನಿಮ್ಮನ್ನು ಕರೆಸಬೇಕೆಂದು ಯೋಚಿಸಿದ್ದೆವು. ಆದರೆ ಯಾಕೆ ತೊಂದರೆ ಕೊಡೋಣ? ಎಂದು ಸುಮ್ಮನಾದೆವು. ಈಗ ನೀವಾಗಿಯೇ ಬಂದಿರಿ. ಬಹಳ ಒಳ್ಳೆಯದಾಯಿತು" ಎಂದನು. ಫೋಟೊಗ್ರಾಫರು "ಇದೇ ದಾರಿಯಲ್ಲಿ ಹೋಗುತ್ತಿದ್ದೆ. ಮುಂದಲ ಹಳ್ಳಿಗೆ ಹೋಗಬೇಕು ಬಂದೆ" ಎಂದನು. ಇದು ಸುಂದರರಾಜನ ತಂತ್ರವೆಂಬುದು

ಯಾರಿಗೂ ಅರ್ಥವಾಗದೆಹೋಗಲಿಲ್ಲ. ಆದರೆ ಅವನು ಮದುವೆಯ ಗಂಡು ಆದುದರಿಂದಲೂ, ಸೇರಿರುವ ಎಲ್ಲ ಸಂಸಾರದ ಬಂಧುಬಾಂಧವರ ಫ್ರೋಟೊ ವನ್ನೂ ಈಗ ತೆಗೆಸಿಬಿಡಬೇಕೆಂದೂ, ಎಲ್ಲರೂ ಒಟ್ಟಾಗಿ ಹೀಗೆ ಸೇರುವುದು ಅಪರೂಪವಾದುದರಿಂದ ಇಂತಹ ಫ್ರೋಟೊ ಇರಬೇಕೆಂದೂ ಅವನು ಹೇಳಿ ದುದೂ ಎಲ್ಲರಿಗೂ ಒಪ್ಪಿಗೆಯಾಯಿತು. ತಮ್ಮ ಕೈಯಿಂದ ಕಾಸು ಬೀಳದೆ ತಮಗೆ ಫ್ರೋಟೊ ಒಂದೊಂದು ಪ್ರತಿ ದೊರೆಯುವುದು ಹಿರಿಯರಿಗೆಲ್ಲ ಪ್ರಿಯ ವಾಗಿತ್ತು. ಆದುದರಿಂದ ಎಲ್ಲರೂ ಕೂಡಲೇ ಫ್ರೋಟೊಗ್ರಾಫ಼ರ ಸುತ್ತ ನೆರೆದು ಅವನು ತೋರಿಸಿದ ಸ್ಥಳದಲ್ಲಿ ಬೆಂಚು ಕುರ್ಚಿ ಜಮಖಾನ ಹಾಸಿ ಸಂಸಾರದ ಎಲ್ಲರ ಒಟ್ಟು ಫ್ರೋಟೊವನ್ನು ತೆಗೆಸಿದ್ದರು. ಆದರೆ ಸುಂದರರಾಜನಿಗೆ ಅದರಿಂದ ತೃಪ್ತಿಯುಂಟಾಗಿರಲಿಲ್ಲ. ಅವನು ಯಾರಿಗೂ ತಿಳಿಯದಂತೆ ಫ್ರೋಟೊಗ್ರಾಫರನನ್ನು ತೋಟಕ್ಕೆ ಕಳುಹಿಸಿ ಅಲ್ಲಿಗೆ ಪಿಟೀಲಿನೊಡನೆ ಸೀತಾ ಲಕ್ಷ್ಮಿಯನ್ನೂ ಕರೆದುಕೊಂಡು ಹೋದನು. ಆಕೆ ತನ್ನ ಪಕ್ಕದಲ್ಲಿ ನಿಂತು ಕೊಂಡು ಪಿಟೀಲನ್ನು ಕೈಯಲ್ಲಿ ಹಿಡಿದುಕೊಳ್ಳಬೇಕೆಂದು ಹೇಳಿದುದು, ಮೊದಲು ಸೀತಾಲಕ್ಷ್ಮಿಗೆ ಒಪ್ಪಿಗೆಯಾಗಲಿಲ್ಲ. ಕೊನೆಯಲ್ಲಿ ಅವಳು ಒಪ್ಪಿದಳು ಹೀಗೆ ತೆಗೆಸಿದ್ದ ಚಿತ್ರ ಅದು. ಆ ಚಿತ್ರ ಬಹಳ ಚೆನ್ನಾಗಿ ಬಿದ್ದಿತ್ತು. ಸೀತಾಲಕ್ಷ್ಮಿ ಪಿಟೀಲುಹಸ್ತಳಾಗಿ ಸಾಕ್ಷಾತ್ ಸರಸ್ವತಿಯಂತೆಯೇ ತೋರುತ್ತಿದ್ದಳು. ಸೀತಾಲಕ್ಷ್ಮಿ ಎದುರಿಗೆ ಇದ್ದರೂ ಸುಂದರರಾಜ ಆ ಫ್ರೋಟೊವನ್ನು ನೋಡಿ ನೋಡಿ ದಣಿದಿರಲಿಲ್ಲ. ಅವನು ಹಾಗೆ ನೋಡುತ್ತಿದ್ದುದು ಸೀತಾಲಕ್ಷ್ಮಿಗೆ ಸಹಿಸದೆ "ಇವರು ಯಾರ ಪಠವನ್ನು ಹೀಗೆ ಕದ್ದು ನೋಡುತ್ತಿದ್ದಾರೆ" ಎಂದು ಅಸೂಯೆಯಿಂದ ತಾನು ಹಿಂದಲಿಂದ ಇಣಕಿ ನೋಡಿ "ಇಷ್ಟೇಯೇ ?" ಎಂದು ನಕ್ಕಿದ್ದಳು. ಸುಂದರರಾಜ ಫ್ರೋಟೊವಿನ ಒಂದು ಪ್ರತಿಯನ್ನು ಪಿಟೀಲಿನ ಪೆಟ್ಟಿಗೆಯ ಮುಚ್ಚಳಕ್ಕೆ ಅಂಟಿಸಿ ಇನ್ನೊಂದನ್ನು ತಾನು ಇಟ್ಟುಕೊಂಡಿದ್ದನು. ಪಿಟೀಲಿನ ಪೆಟ್ಟಿಗೆಯನ್ನು ಬಿಚ್ಚಿದಕೂಡಲೇ ಅದು ಸೀತಾಲಕ್ಷ್ಮಿಯ ಕಣ್ಣಿಗೆ ...ದ್ದು ಅವಳಿಗೆ ಆ ಸರಸ ಸವಿನೆನಪುಗಳು ಉಂಟಾಗುತ್ತಿದ್ದವು. ಸುಂದರ ...ನು ಅಂತಹ ಕಲೆಗಾರನೆಂಬುದು ಆವರೆಗೆ ಸೀತಾಲಕ್ಷ್ಮಿಗೆ ಗೊತ್ತಾಗಿರ ... ಫ್ರೋಟೊದಲ್ಲಿ ಅವನು ತನ್ನ ಮುಖವನ್ನು ಸೀತಾಲಕ್ಷ್ಮಿಯ ಕಡೆ ಸ್ವಲ್ಪ ...ಸೆಯಿಂದಲೂ ಮೆಚ್ಚಿಕೆಯಿಂದಲೂ ಅವಳನ್ನೇ ನೋಡುತ್ತಿದ್ದನು.

   

ಅಂದು ಮನೆಯ ಕಾರ್ಯಗಳು ಬೇಗ ಮುಗಿದುದರಿಂದ ಸೀತಾಲಕ್ಷ್ಮಿ ಪಿಟೀಲಿನ ಪೆಟ್ಟಿಗೆಯನ್ನು ಬಿಚ್ಚಿದಳು. ತತ್‌ಕ್ಷಣ ಒಳಗಡೆ ಅಂಟಿಸಿದ್ದ ಫೋಟೊ ಅವಳ ಕಣ್ಣಿಗೆ ಬಿದ್ದಿತು. ಅದರ ದರ್ಶನದಿಂದಲೂ, ಆ ಸಂದರ್ಭಗಳ ನೆನಪಿನಿಂದಲೂ ಅವಳ ಮನಸ್ಸು ಆರ್ದ್ರವೂ ಪ್ರೇಮಪೂರ್ಣವೂ ಆಯಿತು. ಸುಂದರರಾಜನಲ್ಲಿ ಆಕೆಗೆ ಮೊದಲಿನಿಂದಲೂ ಇದ್ದ ಗೌರವವೂ, ಪ್ರೇಮವೂ ನೂರ್ಮಡಿಯಾದುವು. ಅಗಲಿದ ವೇದನೆಯೂ ಆಕೆಯ ಮುಖದಲ್ಲಿ ಒಡೆದು ತೋರಿತು. ಆಕೆ ಒಂದಾದಮೇಲೆ ಒಂದರಂತೆ ಸೌರಾಷ್ಟ್ರ, ವರಾಳಿ, ಅಠಾಣೆ, ಕಾನಡ ರಾಗಗಳ ಆಲಾಪನೆ ಮಾಡಿದಳು. ಆ ರಾಗಾಲಾಪನೆಗಳಾಗುತ್ತಿರುವಾಗ ಆಕೆಯ ಕಣ್ಣುಗಳಿಂದ ಆಕೆಗೇ ತಿಳಿಯದಂತೆ ನೀರು ಧಾರೆಧಾರೆಯಾಗಿ ಕೆಳಕ್ಕೆ ಸುರಿಯಿತು. ಅದು ಆನಂದಬಾಷ್ಪವೋ ದುಃಖಬಾಷ್ಪವೋ ಬಲ್ಲವರಾರು? ಅನಂತರ ಸೀತಾಲಕ್ಷ್ಮಿಯು ಕಾಮಾಚ್ ಮತ್ತು ಕಾಂಭೋದಿ ರಾಗಗಳನ್ನು ಹಾಡಲು ಪ್ರಯತ್ನಿಸಿದಳು. ಪಿಟೀಲಿನ ಮೇಲೆ ಕಮಾನು ಸರಿಯಾಗಿ ಓಡಾಡಲಿಲ್ಲ. ಅವಳ ಬೆರಳುಗಳು ಸರಿಯಾಗಿ ತಿರುಗಲಿಲ್ಲ. ಆಕೆ ನಿಟ್ಟುಸಿರುಬಿಟ್ಟು, ಮತ್ತೊಂದು ಸಲ ಫೋಟೊವನ್ನು ನೋಡಿ ಪಿಟೀಲನ್ನು ಆಚೆಗೆ ತೆಗೆದಿಟ್ಟಳು.

೨೩

ಜಲಜಾಕ್ಷಿ ಪ್ರಸುವಿಸಿ ಸಳವತ್ತೈದು ದಿನಗಳಾಗಿದ್ದವು. ಮೊದಲನೆಯ ಪ್ರಸವದಲ್ಲಿ ಅಷ್ಟು ಹಿಂಸೆಯಾಗಿದ್ದುದರಿಂದಲೂ ಆ ಹಳ್ಳಿಯು ವೈದ್ಯಶಾಲೆಯಿಂದ ಬಹಳ ದೂರವಾಗಿದ್ದುದರಿಂದಲೂ ಈ ಸಲ ಏನಾಗಬಹುದೋ ಎಂದು ಜಲಜಾಕ್ಷಿಯೂ, ನರಸಿಂಹನೂ ಬಹಳ ಹೆದರಿದ್ದರು. ಸ್ವಭಾವದಿಂದ ಧೈರ್ಯಶಾಲಿನಿಯೂ ಉತ್ಸಾಹಶೀಲಳೂ ಆದ ಸೀತಾಲಕ್ಷ್ಮಿಯು "ಭಯಪಡಬೇಡಿ ದೇವರು ಎಲ್ಲ ಒಳ್ಳೆಯದನ್ನು ಮಾಡುತ್ತಾನೆ" ಎಂದು ಪದೇಪದೇ ಧೈರ್ಯ ಹೇಳುತ್ತಿದ್ದರೂ ಜಲಜಾಕ್ಷಿಗೆ ಧೈರ್ಯವುಂಟಾಗಿರಲಿಲ್ಲ. ಆದರೆ ಸ್ವಾಭಾವಿಕವಾಗಿ ಸುಖಪ್ರಸವವಾದಮೇಲೆ ನರಸಿಂಹನೂ, ಜಲಜಾಕ್ಷಿಯೂ, ಸೀತಾಲಕ್ಷ್ಮಿಯನ್ನು ಹೊಗಳತೊಡಗಿದರು, "ನಿನ್ನ ಹಸ್ತಗುಣ ಅಂತಹುದು. ಎಲ್ಲ ಕಷ್ಟವೂ ಮಾಯವಾಯಿತು. ಈ ಮಗು ನನ್ನದಲ್ಲ ನಿನ್ನದು" ಎಂದು

ಜಲಜಾಕ್ಷಿ ಕೃತಜ್ಞತೆಯಿಂದ ಹೇಳುತ್ತಿದ್ದಳು. ಗಂಡುಮೊಗು ಲಕ್ಷಣವಾಗಿ ಗೆಲುವಾಗಿತ್ತು. ಏನೂ ಅರಿಯದೆ ಒರಟನಾಗಿ ಒಂದು ವಿಧವಾದ ದನದಂತೆ ಇದ್ದ ನರಸಿಂಹನಿಗೂ "ಸೀತಾಲಕ್ಷ್ಮಿ ಒಂದು ಬೇರೆ ಮಟ್ಟಕ್ಕೆ ಸೇರಿದವಳು" ಎಂಬ ಭಾವನೆಯುಂಟಾಗಿ ಆಕೆಯಲ್ಲಿ ಗೌರವವುಂಟಾಗಿತ್ತು. ಆಕೆಯ ಅಚ್ಚುಕಟ್ಟುತನವನ್ನು ನೋಡಿ ಅವನು ಬೆರಗಾದನು. ತನ್ನ ಗೌರವವನ್ನು ತೋರಿಸಲು ಅವನಿಗೆ ಮತ್ತಾವುದೂ ದಾರಿ ತಿಳಿಯದುದರಿಂದ ಒಂದು ಅದ್ಭುತ ವನ್ನು ನೋಡುವಂತೆ ಆಕೆಯನ್ನೇ ಪೆಚ್ಚುಪೆಚ್ಚಾಗಿ ನೋಡುತ್ತಿದ್ದನು. ಹೀಗೆ ನರಸಿಂಹ ತನ್ನನ್ನು ಒಂದೇ ದೃಷ್ಟಿಯಿಂದ ಕುರಿತು ನೋಡುತ್ತಿದ್ದುದು ಸೀತಾ ಲಕ್ಷ್ಮಿಗೆ ವಿನೋದವಾಗಿತ್ತೇ ಹೊರತು ಅದರಿಂದ ಆಕೆಗೆ ಯಾವಾಗಲೂ ಗಾಬರಿಯಾಗಲಿಲ್ಲ.

ನರಸಿಂಹನ ತೋಟದಲ್ಲಿ ಅಡಿಕೆಯನ್ನು ಕುಯ್ದು ರೇಖೆ ಮಾಡುವ ಕಾಲ ಸಮೀಪಿಸತೊಡಗಿತ್ತು. ಕೊಯ್ಯುವುದಕ್ಕೆ ಸುಮಾರು ಒಂದು ತಿಂಗಳು ಮುಂಚಿನಿಂದಲೂ ತೋಟದಲ್ಲಿ ಕಾವಲಿರಬೇಕಾಗಿತ್ತು. ರಾತ್ರಿಯ ವಿಷಯ ಹೇಗಾದರೂ ಇರಲಿ. ಹಗಲಿನಲ್ಲಿ ಮಾತ್ರ ಬೆಳಕು ಹರಿಯುವ ಹೊತ್ತಿನಿಂದ ಹಿಡಿದು ಕತ್ತಲೆಯಾಗುವವರೆಗೆ "ತೋಟದಲ್ಲಿ ಯಾವಾಗಲೂ ಕಾವಲಿದ್ದಾರೆ" ಎಂಬ ಭಾವ ಜನತೆಗೆ ಬರಬೇಕಾಗಿತ್ತು. ಹಾಗೆ ಹಗಲೆಲ್ಲ ನರಸಿಂಹ ತೋಟದಲ್ಲಿ ಕಾವಲಿರುವುದನ್ನು ನೋಡಿದರೆ ಜನರಿಗೆ "ಹೀಗೆ ಹಗಲೆಲ್ಲ ಕಾಯುವವನು ರಾತ್ರಿ ಕಾಯದೆ ಇರುತ್ತಾನೆಯೇ?" ಎಂಬ ಭಯ ಸ್ಪಷ್ಟ ವಾಗುತ್ತಿದ್ದಿತು. ಅಡಿಕೆ ಬಲಿಯುವುದಕ್ಕೆ ಮುಂಚಿತವಾಗಿ ನರಸಿಂಹ ಮನೆಗೆ ಬಂದು ಊಟಮಾಡಿಕೊಂಡು ಹೋಗುತ್ತಿದ್ದವನು ಬರಬರುತ್ತಾ ಊಟಕ್ಕೆ ಬರುವುದನ್ನೇ ಕಡಿಮೆಮಾಡಿದನು. ಕೆಲವು ದಿವಸ ರಾತ್ರಿಯೇ ಬಂದು ಊಟ ಮಾಡುತ್ತಿದ್ದನು. ಇದರಿಂದ ಸೀತಾಲಕ್ಷ್ಮಿಗೆ ಬೇಸರಿಕೆಯಾದರೂ ಏನು ಮಾಡುವುದಕ್ಕೂ ತೋಚದೆ ಆಕೆ ಸುಮ್ಮನಿದ್ದಳು.

ಒಂದು ದಿನ ಮಧ್ಯಾಹ್ನ ಮೂರು ಗಂಟೆಯಾದರೂ ನರಸಿಂಹ ಇನ್ನೂ ಊಟಕ್ಕೆ ಬಂದಿರಲಿಲ್ಲ. ಎರಡು ಗಂಟೆಯಾದನಂತರ ಬರದಿದ್ದರೆ ಆಮೇಲೆ ಅವನು ಬರುತ್ತಿದ್ದುದು ರಾತ್ರಿಗೇ. ಅಂದು ಯಾವುದೋ ಒಂದು ಸಣ್ಣ ಹಬ್ಬವೂ ಆಗಿತ್ತು. ಸೀತಾಲಕ್ಷ್ಮಿ ಪದ್ಧತಿಯಂತೆ ರುಚಿರುಚಿಯಾದ ಅಡಿಗೆ

ಗಳನ್ನು ಮಾಡಿದ್ದಳು. ಜಲಜಾಕ್ಷಿಗೆ ಹೊತ್ತಿಗೆ ಮುಂಚೆಯೇ ಊಟವಾಯಿತು. ಒಂದು ಗಂಟೆಯವರೆಗೆ ನಿರೀಕ್ಷಿಸಿ ಅನಂತರ ಸೀತಾಲಕ್ಷ್ಮಿಯೂ ವಿಧಿಯಿಲ್ಲದೆ ಊಟಮಾಡಿದಳು. ಅವಳ ಊಟದನಂತರ ಜಲಜಾಕ್ಷಿಯು "ಸೀತು ನಿತ್ಯಾ ಅವರು ಹೀಗೆ ಊಟಮಾಡಿದರೆ ಅವರ ಆರೋಗ್ಯ ಚೆನ್ನಾಗಿರುತ್ತ್ಯೇ? ತೋಟಕ್ಕೇ ಹೋಗಿ ಅವರಿಗೆ ಊಟ ಕೊಟ್ಟು ಬಾ. ನಾನು ಯಾವಾಗಲೂ ಮಾಡುತ್ತಿದ್ದುದೇ ಹೀಗೆ" ಎಂದಳು. ಸೀತಾಲಕ್ಷ್ಮಿಯು "ಹೂ" ಎಂದಳು. ಜಲಜಾಕ್ಷಿಯೇ "ಏನು ಮಾಡೋದಮ್ಮ, ಅವರು ಮನೆಗೆ ಬಂದುಬಿಟ್ಟರೆ ವರುಷಾಕಾಲ ಬೆಳೆಸಿದ ಅಡಿಕೆ ಘಳಿಗೆಗೆ ಸೂರೆಮಾಡ್ಕೊಂಡು ಹೋಗ್ಬಿಡ್ತಾರೆ. ನಿಮ್ಮ ರಂಭಾಪುರೀಲೂ ಹೀಗೆಯೇ ಮಲ್ಲಿಗೆಹಳ್ಳೀಲೂ ಹೀಗೆ. ರಂಭಾಪುರಿಯಲ್ಲಿ ಹೇಗೂ ನೀನು ತೋಟಕ್ಕೆ ಊಟ ಹೊರಲೇಬೇಕು. ಈಗಿನಿಂದಲೇ ಅಭ್ಯಾಸ ಆಗ್ಲಿ. ಇವತ್ತು ನೋಡು, ಹಬ್ಬ ಎಂತ ರುಚಿಯಾದ ಅಡಿಗೆ ಮಾಡಿದೆ. ತೊವ್ವೆ, ಪಲ್ಯ, ಪಾಯಸ, ಪನ್ನೀರಿನಂತ ಸಾರು. ಒಂದಕ್ಕಿಂತ ಒಂದು ಅಮೃತ. ಇದನ್ನೆಲ್ಲ ನಾವೇ ಇಲ್ಲಿ ಊಟಮಾಡಿಬಿಟ್ಟು ಅವರು ಅಲ್ಲಿ ಹಸಿದುಕೊಂಡು ಒಣಗಿಕೊಂಡಿರೋದೆ? ಹೋಗಿ ಅವರ ಊಟ ಕೊಟ್ಟು ಬಾಮ್ಮ" ಎಂದಳು. ಅಂದಿನಿಂದ ತೋಟಕ್ಕೆ ನರಸಿಂಹನಿಗೆ ಆಹಾರವನ್ನು ತೆಗೆದುಕೊಂಡು ಹೋಗುವುದೂ ಸೀತಾಲಕ್ಷ್ಮಿಯ ಕೆಲಸವಾಯಿತು. ಪ್ರಾರಂಭದ ಒಂದೆರಡು ದಿವಸ ನರಸಿಂಹನು "ಈ ಬಿಸಲಿನಲ್ಲಿ ಯಾಕೆ ಬಂದೆ. ರಾತ್ರಿಯವರೆಗೆ ಉಪವಾಸವಿರುವುದು ನನಗೇನೂ ಕಷ್ಟವಿಲ್ಲ. ನನಗೆ ಅಭ್ಯಾಸವಾಗಿದೆ" ಎಂದು ಗೊಣಗುಟ್ಟುತ್ತಿದ್ದನು. ಅನಂತರ ಯಾವ ಮಾತನ್ನೂ ಆಡದೆ ತನ್ನ ಪಾಡಿಗೆ ಊಟಮಾಡುತ್ತಿದ್ದನು.

ಹೀಗೆ ತೋಟಕ್ಕೆ ನರಸಿಂಹನಿಗೆ ನಿತ್ಯ ಊಟವನ್ನು ತೆಗೆದುಕೊಂಡು ಹೋಗಿ ಬಡಿಸುವುದೇ ಅನಂತರ ಸೀತಾಲಕ್ಷ್ಮಿಗೆ ಸ್ವಾಭಾವಿಕವಾಯಿತು. ಜಲಜಾಕ್ಷಿ ಪ್ರಸವಿಸಿದ ನಲವತ್ತೈದನೆಯ ದಿನ ಸೀತಾಲಕ್ಷ್ಮಿ ಒಳ್ಳೆಯ ಹಬ್ಬದ ಅಡಿಗೆ ಮಾಡಿದ್ದಳು. ಆವತ್ತು ಎಷ್ಟು ಹೊತ್ತಾದರೂ ಮನೆಗೆ ಊಟಕ್ಕೆ ಬರುವುದಾಗಿಯೂ, ಸೀತಾಲಕ್ಷ್ಮಿ ಅನ್ನವನ್ನು ತರಬೇಕಾದುದಿಲ್ಲವೆಂದೂ ಹೇಳಿ ನರಸಿಂಹ ತೋಟಕ್ಕೆ ಹೋಗಿದ್ದನು. ಆದರೆ ನಾಲ್ಕು ಗಂಟೆಯಾದರೂ ನರಸಿಂಹ ಊಟಕ್ಕೆ ಬರಲೇ ಇಲ್ಲ. ಪದ್ಧತಿಯಂತೆ ಜಲಜಾಕ್ಷಿ ಸೀತಾಲಕ್ಷ್ಮಿ

ಯನ್ನು ತೋಟಕ್ಕೆ ಕಳುಹಿಸಿದಳು. ಸೀತಾಲಕ್ಷ್ಮಿ ತೋಟಕ್ಕೆ ಬಂದಾಗ ನರಸಿಂಹ ಇನ್ನೂ ಒಂದು ವಿಳ್ಳೆದೆಲೆಯ ಬುಡವನ್ನು ಅಗೆಯುತ್ತಲೇ ಇದ್ದನು. ಸೀತಾಲಕ್ಷ್ಮಿ, ತೋಟದ ಸೋಗೆಗಳಿಂದ ಕಟ್ಟಿದ್ದ ಗುಡಿಸಿಲಿನಲ್ಲಿ ಕುಳಿತಳು. ಆಗಲೇ ಸಾಯಂಕಾಲವಾಗುತ್ತ ಬಂದಿತ್ತು. ತೆಂಗು ಅಡಿಕೆ ವೃಕ್ಷಗಳ ನೆಳಲುಗಳು ಎಂದಿಗಿಂತಲೂ ಸೀಳವಾಗಿ ಗದ್ದೆಯ ಬಯಲನ್ನೆಲ್ಲ ಆಕ್ರಮಿಸಿದಂತೆ ಬಿದ್ದಿದ್ದವು. ತೋಟದೊಳಗೆ ನೆರಳಾಗಿದ್ದರೂ ಸೂರ್ಯನ ಪ್ರಕಾಶ ಹೊರಗಡೆ ಇನ್ನೂ ಸ್ವಚ್ಛವಾಗಿ ಪ್ರಜ್ವಲಿಸುತ್ತಿತ್ತು. ಆ ಕಾಂತಿಯಲ್ಲಿ ತೋಟದ ಒಳಗಡೆಗೂ ಹೊರಗಡೆಗೂ ಇದ್ದ ವ್ಯತ್ಯಾಸ ಎದ್ದು ಕಾಣುತ್ತಿತ್ತು. ತೋಟದೊಳಗೆ ಕಪ್ಪಾಗಿ ನೀಳವಾಗಿ ಆಳವಾಗಿ ಪಚ್ಚೆನೆಯ ಹಸುರಿನ ರತ್ನಗಂಬಳಿಯನ್ನು ಹಾಸಿದಂತೆ ತೋರುತ್ತಿತ್ತು. ತೋಟದ ಹೊರಗೆ ಹೊಂಬಣ್ಣದ ಗದ್ದೆ ಪೈರಿನಮೇಲೆ ಬಿದ್ದಿದ್ದ ಬಿಸಿಲು, ಜೆಕ್ಕಿಯ ಪರದೆಯಮೇಲೆ ರತ್ನಕೆಲಸವನ್ನು ಮಾಡಿದಂತೆ ಕಾಣುತ್ತಿತ್ತು. ಗರುಡ ಗಿಡಗ ಮುಂತಾದ ಪಕ್ಷಿಗಳು ಅತ್ಯಂತ ಎತ್ತರದಲ್ಲಿ ಹಾರುತ್ತಿದ್ದವು. ತೋಟದೊಳಗೆ ಗಾಳಿ ಮೆತ್ತಗೆ ಬೀಸುತ್ತಿತ್ತು. ಜೇನು ಹುಳುಗಳು ಗುಂಪು ಗುಂಪಾಗಿ ಬಾಳೆಯನ್ನು ಮುತ್ತುತ್ತಿದ್ದವು. ಪ್ರಕೃತಿಯಲ್ಲಿ ಎಂದೂ ಇಲ್ಲದ ಒಂದು ಬಗೆಯ ಶಾಂತಿ ಅಲ್ಲಿ ಸೀತಾಲಕ್ಷ್ಮಿಗೆ ತೋರಿತು. ಆಗಿಂದಾಗ್ಗೆ ದೂರದಲ್ಲಿ ಮರೆಯಲ್ಲಿ ಒಂದೊಂದು ಅಡಿಕೆಪಟ್ಟೆ ಗರಿಯೊಂದಿಗೆ ಸದ್ದು ಮಾಡುತ್ತ ಕೆಳಕ್ಕೆ ಬೀಳುತ್ತಿದ್ದರೂ ಆ ಶಾಂತಿ ನಿಶ್ಶಬ್ದತೆಗೆ ಭಂಗ ಬಂದಿರಲಿಲ್ಲ.

ನರಸಿಂಹನು ಬಂದು ಎದುರಿಗೇ ಇದ್ದ ಭಾವಿಯಲ್ಲಿ ಕೈ ಕಾಲು ತೊಳೆದುಕೊಂಡು ಊಟಮಾಡಿದನು. ಅವನು ಹೆಚ್ಚು ಕೆಲಸಮಾಡಿ ದಣಿದಿದ್ದುದರಿಂದಲೂ ಅವನಿಗೆ ಅಂದು ಬಹಳ ಹಸಿವಾಗಿದ್ದುದರಿಂದಲೂ ಊಟ ಅವನಿಗೆ ಬಹಳ ರುಚಿಯಾಗಿತ್ತು. ಯಾವತ್ತು ಬಾಯಿಂದ ಮಾತೇ ಹೊರಡಿನದಿದ್ದ ಅವನೂ ಸಹ ಸ್ಫೂರ್ತಿಬಂದಂತೆ ಅಡಿಗೆಯ ರುಚಿಯನ್ನು ಹೊಗಳಿದನು. ಅಡಿಗೆಯ ರುಚಿಯನ್ನು ಹೊಗಳುತ್ತ ಹೊಗಳುತ್ತ ಸೀತಾಲಕ್ಷ್ಮಿಯನ್ನೇ ಹೊಗಳತೊಡಗಿದನು. ಸೀತಾಲಕ್ಷ್ಮಿಗೆ ಆಶ್ಚರ್ಯವಾಯಿತು. ನರಸಿಂಹ ಯಾವತ್ತೂ ಹಾಗೆ ಮಾತನಾಡಿರಲಿಲ್ಲ. ಅವನು ಬಾಯಿಗೆ ಹಾಕಿಕೊಂಡಿದ್ದ ಬೀಗ ಇಂದು ತಾನೇತಾನಾಗಿ ತೆರೆದುಕೊಂಡಿತ್ತು. ಆ ಹೊಗಳಿಕೆಯಿಂದ ಸೀತಾ

ಲಕ್ಷ್ಮಿಗೆ ಸಂತೋಷವೇ ಆದರೂ ಸುಂದರರಾಜನ ಧ್ಯಾನ ಇನ್ನೂ ಹೆಚ್ಚಾಯಿತು.

ಅದು ಸ್ವಾತಿ ಮಳೆಯ ಕಾಲ. ಇದ್ದಕ್ಕಿದ್ದಂತೆ ಮೋಡಗಳು ನೆತ್ತಿಯ ಮೇಲೆ ಒಟ್ಟಾಗತೊಡಗಿದವು. ಸೀತಾಲಕ್ಷ್ಮಿ ಮನೆಯನ್ನು ತಲಪುವುದರೊಳಗಾಗಿಯೇ ಜೋರಾದ ಅಡ್ಡಮಳೆ ಬರುವ ಸೂಚನೆ ತೋರಿತು. ಮೊದಲೇ ಕತ್ತಲೆಯಾಗಿದ್ದ ತೋಟದಮೇಲೆ ಕರಿಯ ಮುಸುಕನ್ನು ಮುಚ್ಚಿದಂತಾಯಿತು. ಸ್ವಾತಿಯ ಮಳೆ ಯಾವಾಗಲೂ ಜೋರು, ಅದಕ್ಕೆ ಗುಡುಗೂ, ಮಿಂಚೂ ಹೆಚ್ಚು. ಮಳೆ ಇದ್ದಕ್ಕಿದ್ದಂತೆ ಪ್ರಾರಂಭವಾಗಿ ಒಳ್ಳೆ ಬಿರುಸಾಗಿ ಬಿದ್ದು ಅಂತರಿಕ್ಷ ತತ್ಕ್ಷಣ ಸ್ವಚ್ಛವಾಗಿಬಿಡುವುದು. ಆದರೆ ಮಳೆ ಹೊಡೆಯುತ್ತಿರುವಾಗ ಮಾತ್ರ ಜಗತ್ತನ್ನೇ ತೇಲಿಸಿಬಿಡುವಂತೆ ತೋರುವುದು. ನರಸಿಂಹನ ಊಟವಾದ ಒಂದೆರಡು ನಿಮಿಷಗಳಲ್ಲಿಯೇ ಮಳೆ ರಪರಪನೆ ಪ್ರಾರಂಭವಾಯಿತು. ನರಸಿಂಹನೂ ಗುಡಿಸಲಿನ ಒಳಕ್ಕೆ ಬಂದನು. ನಂತರ್ಧಾರೆಯಾದ ಮಳೆ ಮಿಂಚುಗಳಿಂದ ಒಬ್ಬರ ಕಣ್ಣು ಒಬ್ಬರಿಗೆ ಕಾಣದಾಯಿತು. ಸೀತಾಲಕ್ಷ್ಮಿ ಗುಡಿಸಲಿನ ಮಧ್ಯದಲ್ಲಿ ಒರಗಿ ಕುಳಿತಿದ್ದಳು. ಮೊದಲು ಮೊದಲು ಮಳೆ ಪ್ರಾರಂಭವಾದಾಗ ನರಸಿಂಹ ಗುಡಿಸಲಿನ ಬಾಗಿಲಿನಲ್ಲಿ ಕುಳಿತಿದ್ದವನು ಮಳೆಯ ವೇಗ ಹೆಚ್ಚಿದಂತೆ ಗುಡಿಸಲಿನೊಳಕ್ಕೆ ಬರತೊಡಗಿದನು. ಆದರೂ ಮಳೆಯ ಇರಚಲು ಮುಗ್ಗುತ್ತಲೇ ಇದ್ದುದರಿಂದ ಅವನೂ [illegible] ಗುಡಿಸಲಿನ ಮಧ್ಯಕ್ಕೇ ಬಂದು ಸೀತಾಲಕ್ಷ್ಮಿಯ ಪಕ್ಕದಲ್ಲಿಯೇ ಕುಳಿತನು. ಆಗ ಅವರಿಬ್ಬರಿಗೂ ಮೈ ಸ್ಪರ್ಶವಾಯಿತು.

ಮನ್ಮಥನೂ ಕಲಿಯಂತೆ ಜನರು ಅನಾಗರಿಕರಾಗುವುದನ್ನೇ ಅವನೂ ಕಾಯುತ್ತಿದ್ದು ತನ್ನ ಕೆಲಸವನ್ನು ಸಾಧಿಸಿಕೊಂಡು ಬಿಡುತ್ತಾನೆ. ಸೀತಾಲಕ್ಷ್ಮಿಗೆ ಏನು ಎಲ್ಲಿ ಎಂದು ತಿಳಿಯುವುದಕ್ಕೆ ಮುಂಚೆಯೇ ನರಸಿಂಹ ಆಕೆಯ ಪಾತಿವ್ರತ್ಯವನ್ನು ಭಂಗಮಾಡಿಬಿಟ್ಟಿದ್ದನು.

೬

ಮಳೆ ನಿಂತಿತು. ಸೀತಾಲಕ್ಷ್ಮಿಯ ಮೈ ಗಡಗಡನೆ ನಡುಗುತ್ತಿತ್ತು. ಹಾವಿನಿಂದ ಅಗಿಯಲ್ಪಟ್ಟವಳಂತೆ ಆಕೆಯ ದೇಹ ಒಂದೇ ಏಟಿಗೆ ಬೆವತಿತು.

ವಿನಾಯಿತು ಎಂಬುದರ ಅರ್ಥವೇ ಆಕೆಗೆ ಆಗಲಿಲ್ಲ. ಪಾತ್ರೆಗಳನ್ನೆಲ್ಲ ತೆಗೆದು ಕೊಂಡು ಆಕೆ ನಿಧಾನವಾಗಿ ಮನೆಯ ಕಡೆಗೆ ಹೆಜ್ಜೆ ಹಾಕಿದಳು. ಜಲಜಾಕ್ಷಿಗೆ ಸಹ ಸೀತಾಲಕ್ಷ್ಮಿಯ ಮುಖವನ್ನು ನೋಡಿ "ಇವಳಿಗೆ ಏನೋ ಆಗಿದೆ ಎನ್ನಿಸಿತು." ಆದರೆ ಆಕೆಗೆ ಏನೂ ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಅವಳ ಬುದ್ಧಿ ಎಂದಿಗೂ ಚುರುಕಾದುದಾಗಿರಲಿಲ್ಲ.

ಆ ಸಂಜೆ ಸೀತಾಲಕ್ಷ್ಮಿಗೆ ಜ್ವರ ಬಂತು. ಜ್ವರ ಬರುವಾಗಲೇ ಅತಿ ಜೋರಾಗಿ ಬಂದು ಅಪ್ಪಳಿಸಿತು. ಮಾರನೆಯ ಬೆಳಗಿನ ಹೊತ್ತಿಗೆ ಅದು ಸನ್ನಿಯಾಯಿತು. ಸೀತಾಲಕ್ಷ್ಮಿ ಬಾಯಿಗೆ ಬಂದಂತೆ ಜ್ಞಾನಾಜ್ಞಾನದಲ್ಲಿ ಹರಟುತ್ತಿದ್ದಳು. "ದೇವರಿಗೆ ಮಾಡಿದ್ದ ನೇವೇದ್ಯ ನಾಯಿಯ ಪಾಲಿಗಾಯಿತು. ಅಯ್ಯೋ! ಅಯ್ಯೋ! ........ ಇದರಲ್ಲಿ ತಪ್ಪು ನನ್ನದಲ್ಲ ........ ಸೀತಾದೇವಿ ಯನ್ನು ಪರೀಕ್ಷಿಸಿದಂತೆ ಪರೀಕ್ಷಿಸಿ ........ ಅಗೋ ರಾವಣ ........ ಇವನು ಕಿರಾತ ದುಶ್ಯಾಸನ........ ಎಚ್ಚರಿಕೆಯ ಭಾಗ್ಯ ಯಾರಿಗೂ ಸ್ಥಿರವಲ್ಲ ........ ಇದು ಅಜ್ಞಾನ ಕೊಲ್ಲಬೇಡಿ, ಕೊಲ್ಲಬೇಡಿ, ಅಗ್ನಿ ಪರೀಕ್ಷೆ........"

ಹೀಗೆ ಸೀತಾಲಕ್ಷ್ಮಿ ಮೂರು ದಿನ ಒಂದೇ ಸಮನೆ ಹಗಲು ರಾತ್ರಿ ಎನ್ನದೆ ಸನ್ನಿಯಲ್ಲಿ ಹರಟಿದಳು. ಒಂದು ತೊಟ್ಟು ನೀರನ್ನಾಗಲಿ, ಹಾಲನ್ನಾಗಲಿ ಆಕೆ ಬಾಯಿಗೆ ಹಾಕಲಿಲ್ಲ. ನರಸಿಂಹ ಹತ್ತು ಮೈಲಿ ದೂರದ ಪಟ್ಟಣದಿಂದ ವೈದ್ಯರನ್ನು ಕರೆತಂದನು. ಅವರು ಪರೀಕ್ಷಿಸಿ "ಏನೂ ಭಯವಿಲ್ಲ ಎಲ್ಲೋ ಹೆದರಿದ್ದಾಳೆ. ಹಾವನ್ನು ಕಂಡಿರಬೇಕು. ಸ್ವಪ್ನದಲ್ಲಿ ಹಾವು ಅಗಿದಿರಬೇಕು. ಅಥವ ದೆಯ್ಯದ ಕಾಟ ಇದ್ದರೂ ಇರಬಹುದು. ಆದರೆ ದೇಹಕ್ಕೆ ಅಪಾಯವಿಲ್ಲ. ಮನಸ್ಸಿಗೆ ಯಾವ ಕಿರುಕುಳವನ್ನೂ ಕೊಡಬೇಡಿ. ಜ್ವರ ನಿಂತರೆ ಎಲ್ಲ ಸರಿ ಹೋಗುವುದು " ಎಂದರು. ವೈದ್ಯರ ಮಾತು ಸುಳ್ಳಾಗಲಿಲ್ಲ. ಎಂಟು ದಿನದ ನಂತರ ಜ್ವರ ಪೂರ್ಣವಾಗಿ ನಿಂತಿತು. ಸೀತಾಲಕ್ಷ್ಮಿ ಮೊದಲಿನಂತೆ ಆದಳು. ಆದರೆ ಅವಳ ಮನಸ್ಸು ಮಾತ್ರ ಅವಳ ಸ್ವಾಧೀನದಲ್ಲಿರಲಿಲ್ಲ.

ಜ್ವರ ಗುಣವಾದ ನಂತರ ಸೀತಾಲಕ್ಷ್ಮಿ ಮೊದಲಿನ ಸೀತಾಲಕ್ಷ್ಮಿಯಲ್ಲ ವೆಂಬುದು ಜಲಜಾಕ್ಷಿಗೆ ತತ್‌ಕ್ಷಣ ಹೊಳೆಯಿತು. ಸೀತಾಲಕ್ಷ್ಮಿಯ ಆನಂದ ಗೆಲುವು ಯವ್ವನ ಹಾಸ್ಯ ಚಟುವಟಿಕೆ ಜೀವನದ ಉತ್ಸಾಹ ಎಲ್ಲವನ್ನೂ ಜ್ವರವೇ ಹೊಡೆದುಕೊಂಡು ಹೋಗಿಬಿಟ್ಟಂತೆ ತೋರಿತು. ಆಕೆ ಯಾವಾಗಲೂ

ಆಲೋಚನಾಪರಳಾಗಿಯೇ ಇರುತ್ತಿದ್ದಳು. ಇದ್ದಕ್ಕಿದ್ದಂತೆ ಕಣ್ಣಿನಿಂದ ನೀರು ಧಾರೆಧಾರೆಯಾಗಿ ಸುರಿಯುತ್ತಿತ್ತು. ಕೂತಲ್ಲಿ ನಿಂತಲ್ಲಿ ಅವಳ ಮನಸ್ಸು ತನ್ನ ದೇಹವನ್ನು ಬಿಟ್ಟು ಎಲ್ಲಿಯೋ ವಿಹರಿಸುತ್ತಿತ್ತು. ಆಕೆ ಯಾರೊಂದಿಗೂ ಮಾತನಾಡುವುದನ್ನೂ ಸಹ ಬಿಟ್ಟಳು. ನರಸಿಂಹನನ್ನು ಕಂಡರೆ ಅವಳ ಮನಸ್ಸು ಸ್ವಾಭಾವಿಕವಾಗಿ ಕುಗ್ಗುತ್ತಿತ್ತು. ಅವನಲ್ಲಿ ಅವಳಿಗೆ ಕೋಪ ತಿರಸ್ಕಾರ ದ್ವೇಷ ಯಾವುದೂ ಇರಲಿಲ್ಲ. ಇದಾವುದಕ್ಕೂ ಅರ್ಹವಾದ ಪ್ರಾಣಿಯೇ ಅದಲ್ಲವೆಂದು ಆಕೆ ಭಾವಿಸಿದಳು. ಕೋಮಲವಾದ ಹೂವಿನ ಮೇಲೆ ಉರುಳುವ ಗಾಡಿಯ ಚಕ್ರಕ್ಕೆ ಯಾವ ಭಾವನೆಯಿದ್ದೀತು? ಆ ಹೂವಿನಲ್ಲಿ ಹೇಗೆಯೋ ಹಾಗೆ ಸೀತಾಲಕ್ಷ್ಮಿಗೆ ತನ್ನಲ್ಲಿಯೇ ಕನಿಕರವುಂಟಾಯಿತು. ಆಕೆ ತನ್ನನ್ನೇ ಮತ್ತೊಂದು ವ್ಯಕ್ತಿಯನ್ನು ನೋಡುವಂತೆ ನೋಡುತ್ತಾ "ಅಯ್ಯೋ ಇಂತಹ ಒಳ್ಳೆಯ ಬಾಳು ಹೀಗೆ ಆಗಿಹೋಯಿತಲ್ಲ" ಎಂದು ನಿಟ್ಟುಸಿರು ಬಿಡುವಳು. ನಿದ್ರೆ ಮಾಡುತ್ತಿರುವಾಗ ಇದ್ದಕ್ಕಿದ್ದಂತೆ ಚಿಟ್ಟನೆ ಚೀರುವಳು. "ಇಲ್ಲ ಇಲ್ಲ. ಅವನು ಪಿಶಾಚಿ, ಅಗ್ನಿಪರೀಕ್ಷೆ" ಎಂದು ಕಿರಚುತ್ತ ಎದ್ದು ಕೂರುವಳು. ಜಲಜಾಕ್ಷಿಗೆ ಇವೊಂದೂ ಅರ್ಥವಾಗುತ್ತಿರಲಿಲ್ಲ. ಆಕೆ ಸೀತಾಲಕ್ಷ್ಮಿಯ ತಲೆಯಮೇಲೆ ಕೈಯ್ಯಿಟ್ಟು "ಏನು? ಏನು?" ಎಂದು ಕೇಳುವಳು. ಒಂದೆರಡು ಘಳಿಗೆ ಸೀತಾಲಕ್ಷ್ಮಿಗೆ ಪ್ರಜ್ಞೆಯೇ ಇಲ್ಲದೆ ಅವಳು ಹೆಡೆಯಾಡಿಸುತ್ತಿರುವ ನಾಗರಹಾವನ್ನು ಹುಡುಗ ಭಯದಿಂದ ನೋಡುತ್ತಿರುವಂತೆ, ನರಸಿಂಹನ ಕಡೆಗೆ ಕೈ ತೋರಿಸುತ್ತಾ ಅವನನ್ನೇ ದುರದುರನೆ ನೋಡುವಳು. ಅನಂತರ ನಿಧಾನವಾಗಿ ತಾನು ಮಾಡುತ್ತಿರುವುದರ ಅರಿವಾಗಿ ನಿಟ್ಟುಸಿರು ಬಿಟ್ಟು ಸುಮ್ಮನಾಗುವಳು.

ಹೀಗೆ ಇಪ್ಪತ್ತು ದಿನಗಳು ಕಳೆದು ಹೋದವು. ಜ್ವರ ನಿಂತ ನಂತರವೂ ಪದ್ಧತಿಯಂತೆ ಸೀತಾಲಕ್ಷ್ಮಿಯೇ ಅಡಿಗೆ ಮಾಡಿ ಜಲಜಾಕ್ಷಿಗೂ ನರಸಿಂಹನಿಗೂ ಬಡಿಸುತ್ತಿದ್ದಳು. ಹಿಂದಲಂತೆಯೇ ಅಡಿಗೆ ರುಚಿಯಾಗಿರುತ್ತಿದ್ದರೂ ಅದರ ಕಡೆಗೆ ಸೀತಾಲಕ್ಷ್ಮಿಯ ದೃಷ್ಟಿ ಇರಲಿಲ್ಲ. ಆಕೆ ಯಾವುದೋ ದೂರದ ಗಾನವನ್ನು ಆಲಿಸುತ್ತಿರುವಂತೆ, ದೂರದಿಂದ ಬರುತ್ತಿರುವವರಾರನ್ನೋ ನಿರೀಕ್ಷಿಸುತ್ತಿರುವಂತೆ ಅಂತರ್ಮುಖಿಯಾಗಿಯೇ ಇರುತ್ತಿದ್ದಳು. ಇದ್ದಕ್ಕಿದ್ದಂತೆ ತಾನು ನಿರೀಕ್ಷಿಸಿದುದು ಪದ್ಧತಿಯಂತೆ ನಡೆಯಲಿಲ್ಲವೆಂಬುದು ಆಕೆಗೆ ಅನುಭವ

ವಾಯಿತು. ಅಥವ ತಾನು ನಿರೀಕ್ಷಿಸಿದುದು ನಡೆದೇಬಿಟ್ಟಿತೆಂದು ಆಕೆಗೆ ಭಯವೂ ಉಂಟಾಯಿತು. ಇನ್ನೊಂದು ತಿಂಗಳು ಕಳೆಯುವುದರೊಳಗಾಗಿ ಆಕೆಯ ಅನುಮಾನ ದೃಢವಾಯಿತು. ಗಂಡನಿಂದ ಪ್ರಥಮಾಲಿಂಗನ ಚುಂಬನವನ್ನೂ ಸಹ ಅನುಭವಿಸದಿದ್ದ ಆಕೆ ಗರ್ಭವತಿಯಾಗಿದ್ದಳು.

ತನ್ನ ಸ್ಥಿತಿಯನ್ನು ನೆನೆದುಕೊಂಡು ಸೀತಾಲಕ್ಷ್ಮಿಗೆ ಆಕಾಶವೇ ತಲೆಯ ಮೇಲೆ ಕಳಚಿಬಿದ್ದಂತಾಯಿತು. ಹೊಳೆಯಲ್ಲಾದರೂ ಮುಳುಗಿ ಪ್ರಾಣ ಕಳೆದುಕೊಳ್ಳೋಣವೆಂದು ಅವಳು ನದಿಗೆ ಹೋದಳು. ಆದರೆ ನದಿಯ ಆಳವಾದ ನೀಲವಾದ ಜಲರಾಶಿಯ ಮಡುವನ್ನು ನೋಡಿದಾಗ ಆ ಮುಗ್ಧೆಗೆ ನೀರಿಗೆ ಬೀಳುವ ಧೈರ್ಯವುಂಟಾಗಲಿಲ್ಲ. ಬಾಳನ್ನು ಬಾಳದೆ, ಯವ್ವನದ ಪ್ರಾರಂಭದಲ್ಲಿಯೇ ಹಾಗೆ ವ್ಯರ್ಥಮಾಡುವುದು ಅವಳಿಗೆ ತಾನು ಮಾಡಿದ ಪಾಪಕ್ಕಿಂತ ಹೆಚ್ಚು ಪಾಪವಾಗಿ ತೋರಿತು. ನರಸಿಂಹನಂತಹ ಪಿಶಾಚಿಗಳು ಜಗತ್ತಿನಲ್ಲಿದ್ದರೂ, ಜಗತ್ತು ಮರಣಕ್ಕಿಂತ ಹೆಚ್ಚು ಆಕರ್ಷಣೀಯವಾಗಿ ತೋರಿತು. ಸಾಯುವ ಯೋಚನೆ ಬಿಟ್ಟು ಸೀತಾಲಕ್ಷ್ಮಿ ಮನೆಗೆ ಹಿಂದಿರುಗಿದಳು.

## ೭

ಸೀತಾಲಕ್ಷ್ಮಿ ಜಲಜಾಕ್ಷಿಯ ಬಾಣಂತನಕ್ಕೆ ಅವಳ ಹಳ್ಳಿಗೆ ಹೋಗಿ ಆಗಲೇ ಆರು ತಿಂಗಳಾಗುತ್ತ ಬಂದಿತ್ತು. ಪ್ರಾರಂಭದಲ್ಲಿ ಅವರ ಅತ್ತಿಗೆ (ರಾಮುನ ಹೆಂಡತಿ) ಸೀತಾಲಕ್ಷ್ಮಿ, ಜಲಜಾಕ್ಷಿಯ ಪ್ರಸವವಾದ ನಂತರ ಒಂದೂವರೆ ತಿಂಗಳಿನಲ್ಲಿಯೇ ಹಿಂದಿರುಗುವಳೆಂದೂ, ಅನಂತರ ಸುಂದರ ರಾಜನು ಬಂದು ಅವಳನ್ನು ರಂಭಾಪುರಿಗೆ ಕರೆದುಕೊಂಡು ಹೋಗುವನೆಂದೂ ಹೇಳುತ್ತಿದ್ದಳು. ವಾಸ್ತವವಾಗಿ ಸೀತಾಲಕ್ಷ್ಮಿಯನ್ನು ನರಸಿಂಹನ ಮನೆಗೆ ಕಳುಹಿಸುವುದೇ ಸುಂದರರಾಜನಿಗೆ ಇಷ್ಟವಿರಲಿಲ್ಲ. ಅವನದು ನಿಜವಾದ ಪ್ರೇಮವಿವಾಹ. ಮದುವೆಯ ಆ ನಾಲ್ಕೈದು ದಿನಗಳಲ್ಲಿಯಂತೂ ಗಂಡ ಹೆಂಡಿರು ಒಬ್ಬರಲ್ಲೊಬ್ಬರು ಪೂರ್ಣವಾಗಿ ಬೆರೆತು, "ಇನ್ನು ನಾವು ಬೇರೆ ಬೇರೆ ಇರಲು ಸಾಧ್ಯವೇ ಇಲ್ಲವೆಂಬ" ಭಾವನೆ ಇಬ್ಬರಿಗೂ ಉಂಟಾಗಿತ್ತು. ಆದುದರಿಂದಲೇ ಸುಂದರರಾಜನು ಮದುವೆಯಾದ ನಂತರ ತನ್ನ ತಂದೆ, ತಾಯಿ ರಂಭಾಪುರಿಗೆ ಹೊರಟರೂ, ತಾನು ಮಾತ್ರ ಹೆಂಡತಿಯನ್ನು ಜತೆ

ಯಲ್ಲಿಯೇ ಕರೆದುಕೊಂಡು ಹೋಗುವ ಆಸೆಯಿಂದ—ಆ ಆಸೆಯನ್ನು ಬಾಯಲ್ಲಿ ವ್ಯಕ್ತಪಡಿಸದಿದ್ದರೂ—ಮಲ್ಲಿಗೆಹಳ್ಳಿಯಲ್ಲಿಯೇ ಉಳಿದಿದ್ದನು. ಆ ವೇಳೆಗೆ ಮದುವೆಗಾಗಿ ಬಂದಿದ್ದ ಜಲಜಾಕ್ಷಿಯೂ ತನ್ನ ಊರಿಗೆ ಹೊರಟಳು. ಹೊರಡುವಾಗಲೇ ಆಕೆ ಸೀತಾಲಕ್ಷ್ಮಿಯನ್ನು ತನ್ನ ಬಾಣಂತನಕ್ಕೆ ಕಳುಹಿಸಬೇಕಾಗುವುದೆಂಬ ಸೂಚನೆಯಿತ್ತಿದ್ದಳು. ಅವಳ ಅಣ್ಣ ರಾಮು ಎದುರಿಗೇ ಇದ್ದ ಸುಂದರರಾಜನಿಗೆ " ನೀನು ಒಪ್ಪಿದರೆ ಆಗಬಹುದು " ಎಂದನು. ಸುಂದರರಾಜನಿಗೆ ನಿಜವಾಗಿ ತಾನು ಒಪ್ಪುವ ಇಷ್ಟವಿರಲಿಲ್ಲ. ಹೀಗೆ ತನ್ನ ಒಪ್ಪಿಗೆಯನ್ನು ಕೇಳುತ್ತಾರೆಂಬುದು ಅವನಿಗೆ ಮೊದಲು ಗೊತ್ತಾಗಿದ್ದರೆ, ಅವನು ಖಂಡಿತ ಆ ಸ್ಥಳದಲ್ಲಿಯೇ ಇರುತ್ತಿರಲಿಲ್ಲ. ಎಷ್ಟು ಹೊತ್ತಿಗೆ ಹೆಂಡತಿಯನ್ನು ರಂಭಾಪುರಿಗೆ ಕರೆದುಕೊಂಡು ಹೋಗಿ, ಅಲ್ಲಿಯ ವಿಶಾಲವಾದ ಕೆರೆಯ ಕೆಳಗಿನ ತನ್ನ ತೋಟವನ್ನೂ ಕಬ್ಬುಗದ್ದೆ ಭತ್ತದ ಬಯಲನ್ನೂ ಆಕೆಗೆ ತೋರಿಸಿ, ಬಿಸಿಲಿನಲ್ಲಿ ಅಲೆದು ದಣಿದಾಂತ ಆಕೆಗೆ, ತಾನೇ ಮರ ಏರಿ ಕೆಡವಿದ ಕೆಂದಳನೀರನ್ನು ಕೊಟ್ಟೇನೋ, ಎಂಬ ಆಸೆಯಿಂದಲೇ ಅವನು ಮಲ್ಲಿಗೆಹಳ್ಳಿಯಲ್ಲಿ ನಿಂತಿದ್ದನು ಆದರೆ ಈಗ ರಾಮು ಆ ರೀತಿ ಒಪ್ಪಿಗೆ ಕೇಳಿದಾಗ " ಆಗುವುದಿಲ್ಲ" ವೆನ್ನುವುದು ಅವನಿಗೆ ಅಲ್ಪತನವಾಗಿ ತೋರಿತು. "ಇವರ ಏರ್ಪಾಡುಗಳನ್ನೆಲ್ಲ ತಲೆಕೆಳಕು ಮಾಡಲು, ಈ ಸಂಸಾರಕ್ಕೆ ಈಗತಾನೇ ಪ್ರವೇಶಮಾಡಿರುವ ನಾನು ಯಾರು? ಇನ್ನುಮೇಲೆ ಈ ಸಂಸಾರವೂ ನನಗೇ ಸೇರಿದುದು, ಯಾಕೆಂದರೆ ನಾನು ಇವರಿಗೆ ಸೇರಿದೆ. ಈ ಸಂಸಾರದವರೆಲ್ಲರೊಂದಿಗೂ ಸ್ನೇಹಬಾಂಧವ್ಯವನ್ನು ಬೆಳೆಸಿಕೊಳ್ಳುವುದು ನನ್ನ ಕರ್ತವ್ಯ. ಇವರ ಕಷ್ಟದಲ್ಲಿ ನಾನೂ ಒಂದಾಗಬೇಕು. ಹೆಂಡತಿಯನ್ನು ಕಳುಹಿಸುವುದಿಲ್ಲ ಎಂಬ ಸ್ವಾರ್ಥವನ್ನು ತೋರಿಸಬಾರದು. ಅವಳಮೇಲೆ ಅಂತಹ ಅಧಿಕಾರವನ್ನು ನಾನು ಸ್ಥಾಪಿಸಲು ಆಕೆ ನನ್ನ ಸ್ವತ್ತೇ. ಅವಳಿಗೆ ಇಷ್ಟವಿದ್ದರೆ ಹೋಗಲಿ" ಎಂದು ಸುಂದರರಾಜನು " ನನ್ನನ್ನು ಯಾಕೆ ಕೇಳುತ್ತೀರಿ. ನಿಮಗೆ ಹೇಗೆ ತೋರುತ್ತೋ ಹಾಗೆ ಮಾಡಿ " ಎಂದಿದ್ದನು. ಸೀತಾಲಕ್ಷ್ಮಿ ಹೊರಟುಹೋದ ನಾಲ್ಕಾರು ದಿನ ರಾಮುನ ಹೆಂಡತಿ ಊರವರೊಂದಿಗೆಲ್ಲ "ಸೀತಾಲಕ್ಷ್ಮಿತಾನೆ ಅಲ್ಲಿ ಎಷ್ಟುದಿವಸಇರುತ್ತಾಳೆ? ಒಂದು ತಿಂಗಳು ಅಥವ ಒಂದುವರೆ ತಿಂಗಳು ಆದರೆ ಹೆಚ್ಚು" ಎನ್ನುತ್ತಿದ್ದಳು. ಆದರೆ ಆಕೆ ಹೊರಟುಹೋಗಿ ಈಚೆಗೆ ಆರು ತಿಂಗಳಾಗುತ್ತ ಬಂದಿತ್ತು.

ಅದು ದೀಪಾವಳಿ ಇನ್ನೇನು ಎಂಟು ದಿನಗಳಿವೆ ಎನ್ನುವ ಕಾಲ. ಮಲ್ಲಿಗೆಹಳ್ಳಿಯ ವನಿತಾಮಣಿಯರು ಹೇಮಾವತಿ ನದಿಯ ಸೋಪಾನದಲ್ಲಿ ಮುಂಡಿಯವರೆಗಿನ ನೀರಿನಲ್ಲಿ ಸೀರೆಗಳನ್ನು ನೆನೆಸಿಕೊಂಡು ನಿಂತುಕೊಂಡು ಊರಿನ ಸುದ್ದಿಗಳನ್ನೆಲ್ಲ ಪದ್ಧತಿಯಂತೆ ಚರ್ಚಿಸುತ್ತಿದ್ದರು. ದೀಪಾವಳಿ, ಯಾವಯಾವ ಮನೆಗೆ ಯಾವಯಾವ ಅಳಿಯದೇವರ ಆಗಮನ, ಯಾವ ಮನೆಗೆ ಮೊದಲನೆ ದೀಪಾವಳಿಗಾಗಿ ಅಳಿಯನ ಆಗಮನ, ಅಲ್ಲಿಯ ಸಿದ್ಧತೆಗಳೇನು? ಯಾವ ಮನೆಗೆ ಅಳಿಯ ಎರಡನೆಯ ದೀಪಾವಳಿಗಾಗಿ ಬರುತ್ತಿದ್ದಾನೆ. ಇವೇ ಅಂದಿನ ಅವರ ಸಂವಾದಕೀಯಕ್ಕೆ ಒಳಗಾಗಿದ್ದ ವಾರ್ತಾ ಸಾರಾಂಶಗಳು. ವಯಸ್ಸಾಗಿದ್ದ ಪದ್ಮಾವತಿ ಎಂಬ ಗೃಹಿಣಿಯು ಹೀಗೆ ಪ್ರಾರಂಭಿಸಿದಳು.

ಪದ್ಮಾವತಿ—ಅಯ್ಯೋ! ಹೋಗಿಮ್ಮ. ನನ್ಗ ಯಾರಿಗೆ ಬೇಕಾಗಿದೆಯೋ ಈ ದೀಪಾವಳಿ ಹಬ್ಬ. ಆ ಅಳಿಯಂದಿರೆಲ್ಲ ದಂಡು ಕಟ್ಟಿಕೊಂಡು ಬಂದು ಕೂತುಬಿಟ್ಟರೆ ಅವರಿಗೆಲ್ಲ ಮಾಡೋರ್‍ಯಾರು? ನನಗಂತೂ ಸದ್ಯ ಏನೂ ಬೇಡ, ಯಾರೂ ಬೇಡ ಅನ್ನಿಸಿದೆ.

ಕಾವೇರಮ್ಮ—ಸರಿ ಬಿಡಿ. ನಿಮ್ಮ ಮಾತು ಚೆನ್ನಾಗಿದೆ. ಬಾ ಮಾಡ್ತೀನೆ ಅಂತ ನೀವು ಹೋಗಿ ಕಾಲು ಕಟ್ಟಿಕೊಂಡರೂ ನಿಮ್ಮ ಅಳಿಯ ಈಗ ಬರೋ ಹಾಗಿಲ್ಲ. ನೀವು ಹೇಳೋದ್ನ ಕೇಳಿದರೆ ನೀವೇನು ನೂರಾರು ಸಲ ದೀಪಾವಳಿ ಮಾಡಿ ಅಳಿಯನ್ಮನೆಯೋರಿಗೆಲ್ಲ ಔತಣಮಾಡಿದ ಹಾಗೆ ಹೇಳ್ತೀರಿ. ಎಲ್ಲ ನಿಮ್ಮ ಹಾಗ್ಯೆ ಇರೋಕಾಗುತ್ಯೆ?

ಪದ್ಮಾವತಿ—ಎಲೆ ಕಾವೇರಿ ಸಾಕು ಸುಮ್ಮನಿರು. ನನ್ಮಾತು ಅಂದರೆ ನಿನಗೆ ಯಾವತ್ತೂ ಆಗದು. ಒಂದು ಬಗೆಯ ಬೆಕ್ಕಿನಂತೆ ಗುರು ಗುರು ಗುರು ಎಂದು ಬರ್‍ತೀಯ ಹಾಗಾದರೆ ...

ಕಾವೇರಿ—ನಾಯಿಯನ್ನ ಕಂಡರೆ ಬೆಕ್ಕು ಗುರುಗುಟ್ಟಿಯೇ ಗುರುಗುಟ್ತುತ್ತೆ.

ಪದ್ಮಾವತಿ—ಹಾಗಾದರೆ ನಾನು ಹೆಣ್ಣು ಹೆರಲೇ ಇಲ್ಲ. ಮದುವೆ ಮಾಡಲೇ ಇಲ್ಲ. ದೀಪಾವಳಿಗೆ ಅಳಿಯನ್ನ ಕರಸಿ ಔತ್ನ ಮಾಡಲೇ ಇಲ್ಲ. ನೀನೊಬ್ಬಳೇ ನಿನ್ನ ನಾಲ್ಕು ಅಳಿಯಂದಿರನ್ನೂ ಕರೆಸಿ ಔತನಮಾಡಿದ್ದು.

ಕಾವೇರಿ—ನೀನು ಹೆಣ್ಣು ಹೆತ್ತಿಲ್ಲ ಅಂತ ಹೇಳಿದೋರ್‍ಯಾರು? ಅದಕ್ಕೆ ಸಾಕ್ಷಿ ಬೇರೆ ಬೇಕೆ? ನೀನು ದೀಪಾವಳಿ ಮಾಡಲಿಲ್ಲ ಅಂತ ನಾನು ಹೇಳಿದ್ನೆ. ನಿನ್ನ ಅಳಿಯ ನಿನ್ನಮೇಲೆ ಕೋಪಿಸಿಕೊಂಡು ದೀಪಾವಳಿ ದಿನ ಮಧ್ಯಾಹ್ನವೇ ಹೊರಟುಹೋಗಲಿಲ್ಲವೆ? ಆಗ ನೀನು 'ಕಾವೇರಮ್ಮನ ಹೆಮ್ಮೆಯಿಂದ ನನ್ನ ಅಳಿಯ ಕೋಪಿಸಿಕೊಂಡು ಹೋದ. ಅವಳು ಅಳಿಯನಿಗೆ ಚಿನ್ನದ ಉಂಗರ ಕೊಟ್ಟಳು. ನಾನು ಬರಿಯ ಪಂಚೆ ತಂದಿದ್ದೆ. ಈ ಹಣದ ಕೊಬ್ಬಿನವರ ಎದುರಿಗೆ ಬಡವರು ಇರಬಾರದು. ಆ ಹಣವೂ ಏನೂ ಕಷ್ಟಪಟ್ಟು ಸಂಪಾದಿಸಿದ್ದಲ್ಲ. ಎಲ್ಲ ಸಬ್ ರಿಜಿಸ್ಟ್ರಾರ್ ಆಫೀಸಿನ ಲಂಚ' ಎಂದೆಲ್ಲ ನೀನು ಹೇಳಲಿಲ್ಲವೆ? ಅನಂತರ ನಮ್ಮ ಮನೆಯವರು ಆ ಸಂಬಳದಲ್ಲಿ ಹೊಟ್ಟೆ ತುಂಬುವುದಿಲ್ಲವೆಂದು ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಂದಾಗ, ನೀನು "ಲಂಚ ತಿಂದದ್ದರಿಂದ ಅವರನ್ನು ಕೆಲಸದಿಂದ ತೆಗೆದುಹಾಕಿದರು. ಇನ್ನು ಅಳಿಯಂದಿರ ಎದುರಿಗೆ ಭಂಗಾರದ ಉಂಗುರದ ಜಂಭವನ್ನು ಮೆರೆಸುವುದನ್ನ ನೋಡ್ತೇನೆ' ಅಂತ ಅನ್ನಲಿಲ್ಲವೆ? ಅವನ್ನೆಲ್ಲ ನಾನು ಮರೆತಿಲ್ಲ ಕಣೆ. ಒಂದು ಹೆಣ್ಣಿಗೆ ಮದುವೆಮಾಡಿದ್ದಕ್ಕೇ ನಿನಗೆ ಇಷ್ಟು ಹೆಮ್ಮೆ ಇರಬೇಕಾದರೆ ನಾಲ್ಕು ಹೆಣ್ಣಿಗೂ ..... .. .. "

ಸುಂದರಮ್ಮ—ಬಿಡಿ ಕಾವೇರಮ್ಮನೋರೆ. ಅದೆಲ್ಲ ನಮಗೆಲ್ಲ ಗೊತ್ತಿದೆ. ಪದ್ಮಾವತಿಯಮ್ಮನವರು ಅಳಿಯನಿಗೆ ಆಮೇಲೆ ನೀವು ಮಾಡಿಸಿದುದಕ್ಕಿಂತ ಹತ್ತರಷ್ಟು ಜೋರಾದ ನಿಜವಾದ ವಜ್ರದ ಉಂಗುರವನ್ನೇ ಮಾಡಿಸಿದ್ದು .. ... .. ..

ಪದ್ಮಾವತಿ—ತಡಿ ತಡಿ. ಸುಂದರ, ನಿನಗೆ ಗೊತ್ತಿಲ್ಲ. ನೀನಿನ್ನೂ ಈಚಿನ ಹುಡುಗಿ. ಅದಕ್ಕೆ ಇವಳೇನು ಹೇಳಿದಳು ಗೊತ್ತೆ? ಇರೋದೊಂದ್ಹೆಣ್ಣು ಹಿಂದಿಲ್ಲ ಮುಂದಿಲ್ಲ. ಹೆತ್ತೋರ್ಗೆ ಹೆಗ್ಣ ಮುದ್ದು ಅಂತ ಏನ್ಮಾಡಿಸಿದ್ರು ಅದಕ್ಕೇಯೇ ...........

ಕಾವೇರಮ್ಮ—ತಡಿ ತಡಿ ಅವಕ್ಕೆ ನೀನೇನು ಹೇಳಿದೆ? ನಾನು ಮರೆತಿದೇನೆ ಅಂತ ತಿಳ್ಕೊಬೇಡ ಕಣೆ. ನೀನು ಹೇಳೋದು ಮರೆಯೋ ಮಾತಲ್ಲ. ಕಾವೇರಮ್ಮ ಮನೆತುಂಬ ಹೆಣ್ಮರಿ ಹಂದಿಗಳನ್ನೇ ಹೆತ್ತಿದ್ದಾಳೆ ಎಂದೆ.

ರುಕ್ಕಮ್ಮ—ಅದೆಲ್ಲ ಎಲ್ಲರಿಗೂ ತಿಳಿದಿದೆಯೆಲ್ಲ. ಇವತ್ತೂ ಮತ್ತೆ ಆ

ಮಾತು ಯಾಕೆ? ಅದು ಹೋಗಲಿ ಕಾವೇರಮ್ಮನವರೆ. ಅಳಿಯ ದೇವರು ಬರುತ್ತಾರೆಯೆ?

ಕಾವೇರಮ್ಮ—ಹೂ ಬರದೇ. ಉಂಟೆ? ಬರದಿರೋದಕ್ಕೆ ಅವರಿಗಾಗಿರುವ ತೊಂದರೆ ಏನು? ಲಲಿತನ್ನ ಕಂಡರೆ ಅವರಿಗೆ ಪ್ರಾಣ. ಹಿಂದೆ ವಾರಕ್ಕೆ ಒಂದು ಕಾಗದ ಬರಿಯುತ್ತಿದ್ದರು. ಆಮೇಲೆ ವಾರಕ್ಕೆ ಎರಡು ಆಯಿತು. ಈಗ ನಿತ್ಯ ಒಂದು ಕಾಗದ ಬರೆಯುತ್ತಿದ್ದಾರೆ. ನಿತ್ಯಾ ಅಷ್ಟಷ್ಟುದ್ದ ಕಾಗದ ಬರೆಯೋಕೆ ಅದೇನಿದೆಯೊ? ಬರದೆ ಅವನಿಗೇನು? ಕಾಲೇಜಿಗೆ ರಜ ಸಿಕ್ಕುತ್ತೆ. ಕೈಯ್ಯಲ್ಲಿ ದುಡ್ಡಿದೆ. ನಮ್ಮ ಮನೆಯೋರೆ ಹೋದವಾರ ಬೆಂಗಳೂರಿಗೆ ಹೋಗಿ, ಅಳಿಯನನ್ನು ಕರೆದುಕ್ಕೊಂಡು ಹೋಗಿ ಚಿನ್ನದ ಉಂಗುರ ಜವಳಿ ಎಲ್ಲನೂ ತಂದು, ಹರಿಪುರಕ್ಕೂ ಹೋಗಿ ಬೀಗರನ್ನೂ ಕರೆದು ಬಂದಿದ್ದಾರೆ. ನಮ್ಮ ಶಾರದನ ಗಂಡನ್ನೂ ಕರೆದು ಬಂದಿದ್ದಾರೆ. ಎಲ್ಲ ನರಕ ಚತುರ್ದಶಿಗೆ ಎರಡು ದಿನ ಮುಂಚೆಯೇ ಬರುತ್ತಾರೆ .. . ...."

ರಾಮುನ ಹೆಂಡತಿ ಮೇಲಿನಿಂದ ಸೊಂಟದಲ್ಲಿ ಬೆಳಗಿದ ಬರಿಯ ಕೊಡವನ್ನು ಹಿಡಿದುಕೊಂಡು ಸೋಪಾನವನ್ನು ಇಳಿಯುತ್ತಿರುವುದು, ಅವರ ಕಣ್ಣಿಗೆ ಬಿದ್ದಿತು. ಇದ್ದಕ್ಕಿದ್ದಂತೆ ಎಲ್ಲರೂ ಸ್ವಾಭಾವಿಕವಾಗಿ ತಟಕ್ಕನೆ ಸಂಭಾಷಣೆ ನಿಲ್ಲಿಸಿಬಿಟ್ಟರು. "ಏನನ್ನೋ ಮಾತನಾಡುತ್ತಿದ್ದವರು ನಿಲ್ಲಿಸಿದ್ದಾರೆ" ಎಂಬುದು ರಾಮುನ ಹೆಂಡತಿಗೆ ಗೊತ್ತಾಯಿತು. ಆದರೆ ಸಂಭಾಷಣೆ ಯಾವ ಬಗೆಯದಿರಬಹುದೆಂಬುದು ಅವಳಿಗೆ ತಿಳಿಯಲಿಲ್ಲ. ಪದ್ಮಾವತಿಯು ಅವಳನ್ನು "ಮನೆಯ ಕೆಲಸವೆಲ್ಲ ಆಯಿತೆ? ಎಂದಳು. ರಾಮುನ ಹೆಂಡತಿ " ಹೂ. ನನ್ನ ಕೈಲೂ ಏನೂ ಸಾಗ್ತಾ ಇಲ್ಲ. ಸತ್ಯವತಿ (ತಮ್ಮ ಶ್ರೀನಿವಾಸನ ಹೆಂಡತಿ) ಬೆಳಗ್ಗಿನಿಂದ ತಲೆನೋವು ಅಂತ ಮಲಗಿದ್ದಾಳೆ. ಮನೆಯವರೂ ಹಾಸನಕ್ಕೆ ಬೆಳಿಗ್ಗೆ ಹೋದವರು ಬಂದಿಲ್ಲ" ಎಂದು ಹೇಳಿ ಬಿಂದಿಗೆಯಲ್ಲಿ ನೀರು ತುಂಬಿಕೊಂಡು ನಿಲ್ಲದೆ ಹೊರಟುಹೋದಳು. ತಾನು ಅಲ್ಲಿ ನಿಲ್ಲದಿರುವುದಕ್ಕಾಗಿಯೇ ರಾಮುನ ಹೆಂಡತಿ ಸತ್ಯವತಿಯ ತಲೆನೋವಿನ ಸಬೂಬನ್ನು ಹೇಳಿಕೊಂಡು ಹೊರಟುದು ಅವರಾರಿಗೂ ತಿಳಿಯದೆ ಹೋಗಲಿಲ್ಲ. ಯಾಕೆಂದರೆ ಈಚೆಗೆ ಊರವರಲ್ಲಿ ಗುಸು ಗುಸು ಪ್ರಾರಂಭವಾದ ನಂತರ, ರಾಮುನ ಹೆಂಡತಿಯಾಗಲಿ

ಸತ್ಯವತಿಯಾಗಲಿ ಜನರೊಂದಿಗೆ ಯಾವ ಮಾತಿಗೂ ಹೆಚ್ಚಾಗಿ ಸೇರುತ್ತಿರಲಿಲ್ಲ. ರಾಮನ ಹೆಂಡತಿ ಹೊರಟುಹೋದಮೇಲೆ ಸಿಂಗಾರಮ್ಮನು.

ಸಂಗತಿಗಳು ಬಹಳ ಕೆಟ್ಟಂತೆ ಕಾಣುತ್ತವೆ. ಏನೇನೋ ಹೇಳಿಕೊಳ್ತಾರೆ. ನಿಜವೇ? ದೀಪಾವಳಿಗೆ ಸುಂದರರಾಜನಂತೂ ಬರುವಂತೆ ಇಲ್ಲ. ಹೆಂಡತಿಯೇ ಇಲ್ಲಿ ಇಲ್ಲದಮೇಲೆ ಇನ್ನು ಅವ ಬಂದು ಮಾಡುವುದೇನು.

ಪದ್ಮಾವತಿ [ಸಣ್ಣ ದನಿಯಲ್ಲಿ] ಅದೊಂದು ಶುದ್ಧ ಮಂಕು; ಈ ವಯಸ್ಸಿನಲ್ಲಿ ಹೆಂಡತೀನ ಇನ್ನೊಬ್ಬರ ಮನೆಗೆ ಕಳುಹಿಸೋದೆ? ಅದಕ್ಕೇ ಈಗ ಅನುಭವಿಸುತ್ತೆ.

ಕಾವೇರಮ್ಮ—ಕಳಿಸ್ದೆ ಹೆಂಡತೀನ ಪೆಟ್ಟಿಗೇಲಿ ಇಟ್ಕೊಂಡು ಬೀಗ ಹಾಕ್ಕೊಳೊಕೆ ಆಗತ್ಯೆ, ಬೀಗ ಹಾಕ್ಕೊಂಡ್ರೆ ತಾನೆ ಕೆಟ್ಟ ಚಾಳಿಯ ಹೆಂಗಸ್ನ ತಡೆಯೋಕಾಗುತ್ಯೆ. ಎಲ್ಲಿದ್ದರೂ ಆ ಚಿನ್ನಾಲಿಗಳು ಕಂಡ ಕಂಡ ಗಂಡಸರನ್ನ ಆಟ ಆಡಿಸ್ತಾರೆ.

ಶಾರದಮ್ಮ—ಅವಳದೇ ತಪ್ಪೊ ಅವನದೇ ತಪ್ಪೊ ಯಾರಿಗೆ ಗೊತ್ತು? ಅಲ್ಲೇನಾಗಿದೆಯೋ ನಾವೇನು ಹೋಗಿ ನೋಡ್ಕೊಂಡು ಬಂದಿದೇವ್ಯೆ? ಸೀತಾಲಕ್ಷ್ಮಿಗೆ ಹುಷಾರಿಲ್ಲ ಅಂತ ಕಾಗದ ಬಂದಿದೆಯಂತೆ.

ಪದ್ಮಾವತಿ—ವಹಿಸಿಕೊಂಡು ಬರಬೇಡ ಕಣೆ. ನಾನೆಲ್ಲ ಬಲ್ಲೆ. ಹುಷಾರಿಲ್ದೆ ಇರೋಕೆ ಅವಳಿಗೆ ಏನಾಗಿದೆಯೆ ಧಾಡಿ, ಹದಿನೆಂಟು ವರುಷದ ತುಂಬು ಯವ್ವನದ ಹುಡುಗಿಗೆ? ಏನಾಗಿದೆ ಅಂದ್ರೆ? ನನ್ನ ಕೇಳು ಹೇಳ್ತೀನಿ. ಬಸಿರಿಯಾಗಿದ್ದಾಳೆ.

ಸರಸ್ವತಿ—ನಿಮ್ಮ ದಮ್ಮಯ್ಯ ಪದ್ಮಮ್ಮನೋರೆ. ಗಟ್ಟಿಯಾಗಿ ಕೂಗಬೇಡಿ. ಯಾರಿಗಾದರೂ ಕೇಳಿಸೀತು. ನಮಗೆ ಯಾಕೆ ಆ ಸುದ್ದಿ? ಮಾಡಿದೋರ ಪಾಪ ಆಡಿದೋರ ಬಾಯಲ್ಲಿ ಅನ್ನೋಹಾಗೆ. ಇಷ್ಟರಮೇಲೆ ಮಾಡಿದೋರು ಎಷ್ಟು ಅನುಭವಿಸ್ತಿದಾರೋ ಪಾಪ ನಮಗೇನು ಗೊತ್ತು?

ಕಾವೇರಮ್ಮ—[ವ್ಯಂಗ್ಯವಾಗಿ] ಅನುಭವಿಸ್ತಾಳೆ. ಅನುಭವಿಸ್ತಾಳೆ. ಈ ಕಾಲದೋರೆಲ್ಲ ಹೀಗೆ ಮಾತ್ನಾಡೋ ಹೊತ್ತಿಗೇ ಎಲ್ಲ ಕೆಟ್ಟು, ಕುಲಗೆಟ್ಟಿದ್ದು. ನಮಗೆ ನಿಮ್ಮ ವಯಸ್ಸಾಗಿರುವಾಗ ಹೀಗೆಲ್ಲ ಆಗಿದ್ದರೆ, ಆ ರಂಡೇನ

ಹಿಡ್ಕೊಂಡು ಬಂದು ಸೀಳಿ ಚೂರು ಚೂರು ಮಾಡಿ ಸಿಗಿದು ತೋರಣ ಕಟ್ಟಿ ತಿದ್ರೊ. ಈ ಕಲಿಕಾಲದಲ್ಲಿ ದೇವರೂ ಇಲ್ಲ ಧರ್ಮವೂ ಇಲ್ಲ.

ರುಕ್ಮಮ್ಮ—ನೀವು ಹೇಳಿದ ಹಾಗೆ ಇದು ನಿಜವಾಗಿ ಆಗಿದೆ ಅಂತಲೇ ಇಟ್ಕೊಕೊಳ್ಳೋಣ. ಅವಳನ್ನೇನೋ ಸಿಗಿದು ತೋರಣಕಟ್ತ್ತಿ ಇದ್ರಿ. ಅವನಿಗೊ? ಅವನಿಗೇನೂ ಶಿಕ್ಷೆ ಇಲ್ವೊ?

ಪದ್ಮಾವತಿ—[ಹಾಸ್ಯವಾಗಿ] ಮಗು. ನೀನು ಇನ್ನೂ ಚಿಕ್ಕವಳು. ನಿನಗೆ ಇವ್ರೊಂದೂ ಅರ್ಥವಾಗುವುದಿಲ್ಲ. ಗಂಡಸರನ್ನ ಕೇಳೋರು ಯಾರು? ಅವರು ಹೇಗೆ ಕುಣಿದರೂ ನಡೆದು ಹೋಗುತ್ತೆ. ಕಡೇಲಿ ಕಷ್ಟ ಅನುಭವಿ ಸೋರು ಹೆಂಗಸರು. ಗಂಡಸು ಎಚ್ಚರ ತಪ್ಪಿ ನಡೆದರೂ "ಏನೋ ಆಗಿ ಹೋಯ್ತು" ಎನ್ನುತ್ತಾರೆ. ಹೆಂಗಸು ಎಚ್ಚರ ತಪ್ಪಿ ನಡೆದರೆ "ಬೀದಿಯ ನಾಯಿಯಾದರೂ ಅವಳಿಗಿಂತ ವಾಸಿ" ಎಂಬಂತೆ ಆಗುತ್ತದೆ.

ಶಾರದಮ್ಮ—ಇದು ಬಹಳ ಅನ್ಯಾಯಮ್ಮ. ನ್ಯಾಯ ಧರ್ಮ, ಹೆಣ್ಣು ಗಂಡು ಇಬ್ಬರಿಗೂ ಒಂದೇ ಸಮನಾಗಿರಬೇಕು. ಗಂಡು ತಪ್ಪು ಮಾಡಿದರೂ ಅವನಿಗೆ ಮರ್ಯಾದೆ. ಹೆಣ್ಣು ಮಾಡಿದರೆ ಮಾತ್ರ ಅವಳಿಗೆ ನರಕ. ಹೀಗೆ ಆಗುವ ಹೊತ್ತಿಗೇ ನಾವು ಹಾಳಾಗಿರುವುದು.

ಅಲ್ಲಿಂದ ಮುಂದೆ ಸಂಭಾಷಣೆಯೆಲ್ಲ ಸ್ತ್ರೀ ಪುರುಷರ ಹಕ್ಕುದಾರಿಯ ಮೇಲೆಯೇ ನಡೆಯಿತು. ಚಿಕ್ಕ ವಯಸ್ಸಿನವರೆಲ್ಲ "ಪುರುಷರು ರಾಕ್ಷಸರಾದು ದರಿಂದ ಅವನನ್ನು ಧ್ವಂಸಮಾಡಿ ಕಾಲಕೆಳಗೆ ಹಾಕಿ ತುಳಿಯ" ಬೇಕೆಂದರು. ಮಲ್ಲಿಗೆಹಳ್ಳಿಯಲ್ಲಿ—ನಾಲ್ಕು ದಿನ ಸ್ಥಾಪಿತವಾಗಿ ಕೆಲಸಮಾಡಿ ಈಚೆಗೆ ನಿಂತುಹೋಗಿರುವ ವನಿತಾ ಸಮಾಜದ ಕಾರ್ಯದರ್ಶಿನಿ—ಲೀಲಾವತಿಯವರು "ಎರಡು ಸಾವಿರ ವರುಷಗಳಿಂದ ಗಂಡಸರು ಹೆಂಗಸರನ್ನು ಗುಲಾಮಗಿರಿಯಲ್ಲಿ ಟ್ಟಿದ್ದಾರೆ. ನ್ಯಾಯವನ್ನು ತಿಳಿದ ಭಗವಂತನೆಂಬುವನೊಬ್ಬನಿದ್ದರೆ ಪುರುಷ ರನ್ನೆಲ್ಲ ನಾಲ್ಕು ಸಾವಿರ ವರುಷ ಸ್ತ್ರೀಯರ ಗುಲಾಮರನ್ನಾಗಿ ಮಾಡಬೇಕು" ಎಂದರು. ಶ್ರೀಮತಿ ವನಮಾಲೆಯು "ಇದಕ್ಕೆಲ್ಲ ಮೂಲ, ಪುರುಷ ನಿರ್ಮಿತ ವಾದ ಹಿಂದು ಧರ್ಮಶಾಸ್ತ್ರ. ಆದುದರಿಂದ ನಾವು ಆ ಶಾಸ್ತ್ರವನ್ನೆಲ್ಲ ಬೆಂಕಿಗೆ ಹಾಕಿ—ಅದನ್ನು ಪ್ರತಿಭಟಿಸುವ ಪುರುಷರನ್ನೂ ಅದರ ಜತೆಯಲ್ಲಿಯೇ ಹಾಕಿ— ಆಧುನಿಕ ಸ್ತ್ರೀಯರ ಒಂದು ಸಮಿತಿಯನ್ನು ನಿಯಮಿಸಿ, ಸ್ತ್ರೀಯರ ಸರ್ವಾಧಿ.

ಕಾರವನ್ನು ಸ್ಥಾಪಿಸುವ ಹೊಸ ಧರ್ಮಶಾಸ್ತ್ರವನ್ನು ಬರೆಸಬೇಕು. ಆ ಹಿಂದಲ ಮನು ಸತ್ತ, ಕೆಟ್ಟ" ಎಂದು ಗರ್ಜಿಸಿದಳು. ಹೀಗೆ ಸ್ತ್ರೀಯರೆಲ್ಲ ಚರ್ಚೆಯಲ್ಲಿ ಭಾಗ ವಹಿಸಿದರೂ "ಸೀತಾಲಕ್ಷ್ಮಿ ಜಾರಿದುದು ತಪ್ಪು" ಎಂಬುದರಲ್ಲಿ ಯಾರಿಗೂ ಅನುಮಾನವಿರಲಿಲ್ಲ. ಆದರೆ ಕೆಲವರು "ನರಸಿಂಹನ ತಪ್ಪು ಹೆಚ್ಚೆಂದೂ" ಇನ್ನು ಕೆಲವರು "ಸೀತಾಲಕ್ಷ್ಮಿಯ ತಪ್ಪೆ ಹೆಚ್ಚೆಂದೂ" ವಾದಿಸುತ್ತಿದ್ದರು. ಹಿರಿಯರಾದವರೆಲ್ಲ ನರಸಿಂಹನ ಪಕ್ಷಪಾತಿಗಳಾಗಿಯೇ ಇದ್ದರು.

❖ ❖ ❖ ❖

ಅಲ್ಲಿ ನರಸಿಂಹನ ಹಳ್ಳಿಯಲ್ಲಿ ಈ ಎಲ್ಲ ಸಂಭಾಷಣೆಗಳ ನಾಯಕಿ ಸೀತಾಲಕ್ಷ್ಮಿ, ದೀಪಾವಳಿ ಹಬ್ಬ ಹತ್ತಿರ ಹತ್ತಿರ ಬಂದಂತೆ ಚಿತ್ರಹಿಂಸೆಯನ್ನೇ ಅನುಭವಿಸತೊಡಗಿದಳು. ಅಬ್ಬ ತನ್ನ ಈ ಮೊದಲ ದೀಪಾವಳಿ ಹಬ್ಬಕ್ಕಾಗಿ ಎಷ್ಟು ದಿನದಿಂದ ಆಕೆ ಆಶೆ ಕಾತರಳಾಗಿದ್ದಳು! ಅವಳ ಬಾಳಿನಲ್ಲಿಯೇ ಅದೊಂದು ದೊಡ್ಡ ಸಂಭ್ರಮವಾಗುವದಾಗಿತ್ತು. ತಂದೆ ತಾಯಿಯರಿಲ್ಲದ ಆಕೆ, ತನ್ನ ದೀಪಾವಳಿಗಾಗಿ ತಾನೇ ಏರ್ಪಾಡಿನ ಮಂಡಿಗೆಗಳನ್ನು ಮಾಡಿ ಮನಸ್ಸಿನಲ್ಲಿ ತಿನ್ನುತ್ತಿದ್ದಳು. ಇದ್ದಕ್ಕಿದ್ದಂತೆ ತಾನು ಗರ್ಭಿಣಿಯಾದುದು, ಅವಳಿಗೆ ಅರಿವಾದ ಕೂಡಲೇ ಅವಳು ಸತ್ತಂತೆ ಆದಳು. ಅವಳ ಬುದ್ಧಿಶಕ್ತಿಯೆಲ್ಲ ಉಡುಗಿಹೋಗಿ ಅವಳೊಂದು ಜಡವಸ್ತುವಿನಂತೆಯೇ ಆದಳು. ಅಲ್ಲಿಂದ ಈಚೆಗೆ ಅವಳು ಒಂದು ಅರೆಜೀವದ ಪ್ರಾಣಿಯಾಗಿ ಕನಸಿನಲ್ಲಿ ವ್ಯವಹರಿಸುವಂತೆ ಜೀವಿಸುತ್ತಿದ್ದಳು. ದೀಪಾವಳಿ ಇನ್ನು ನಾಲ್ಕು ದಿನ, ಎನ್ನುವಾಗ ಅವಳ ಮನಸ್ಸು ಮತ್ತೆ ಚೇತನಗೊಂಡಿತು. ತಾನು ಎಷ್ಟು ಆಸೆಯಿಂದ ಬಯಸಿದ ನಿರೀಕ್ಷಿಸಿದ ದೀಪಾವಳಿ ಅದು. ಬಾಳಿಗೊಂದು ಗೊನೆ ಎಂಬಂತೆ ಬಾಳಿಗೊಂದು ದೀಪಾವಳಿ; ಈ ದೀಪಾವಳಿಯಲ್ಲಿ ಹೊಸ ಹೊಸ ಹಾಡುಗಳ ಪಿಟೀಲುವಾದನದಿಂದ ಗಂಡನನ್ನು ಹೇಗೆ ಆನಂದಸಾಗರದಲ್ಲಿ ತೇಲಿಸುವ ಕನಸುಕಂಡಿದ್ದಳು; ಬಗೆಬಗೆಯ ತಿನಸುಗಳಿಂದ ಆತನನ್ನು ಹೇಗೆ ತೃಪ್ತಿಪಡಿಸುವ ಆಸೆಯಿಟ್ಟುಕೊಂಡಿದ್ದಳು! "ಅಯ್ಯೋ ದೀಪಾವಳಿ ಹೋಗಿಬಿಡುತ್ತದೆ! ನಾವು ಮಾತ್ರ ಉಳಿಯುತ್ತೇವೆ. ನಮ್ಮ ಬಾಳಿನ ದೀಪಾವಳಿಯಿಂದ ನಾವು ವಂಚಿತರಾದೆವು" ಸೀತಾಲಕ್ಷ್ಮಿಗೆ ತನ್ನ ಮೇಲೆಯೆ! ಎಂದೂ ಇಲ್ಲದ ಕನಿಕರ ವುಂಟಾಯಿತು. ತನ್ನ ಬಾಳನ್ನೇ ಆಕೆ, ಮತ್ತೊಬ್ಬರ ಬಾಳನ್ನು ನೋಡುವಂತೆ

ನೋಡಿದಳು. ಒಂದು ಪ್ರಾಣಿಗೆ ತನ್ನ ಜೀವನದ ವಿಷಯಕದಲ್ಲಿಯೇ ಇಷ್ಟೊಂದು ಕನಿಕರವುಂಟಾಗಬಹುದೆಂದು ಆಕೆ ಭಾವಿಸಿರಲಿಲ್ಲ. ಆದರಂತೆ ಸುಂದರ ರಾಜನ ಮೇಲೆಯೂ ಅವಳಿಗೆ ಬಹಳ ಕನಿಕರವುಂಟಾಯಿತು. ಮಗು, ತನ್ನ ತಪ್ಪಿನಿಂದಲ್ಲದೆ ಆಟದ ಸಾಮಾನನ್ನು ಒಡೆದುಕೊಂಡು ಅಳುತ್ತಿರುವಾಗ ಅದರಮೇಲೆ ಉಂಟಾಗುವ ಆರ್ದ್ರಭಾವನೆ ಆಕೆಗೆ, ಸುಂದರರಾಜನ ಮೇಲೆ ಉಂಟಾಯಿತು. ಸುಂದರರಾಜನ ಪ್ರೇಮಪೂರ್ಣ, ಭಾವಪೂರ್ಣ ಸ್ವಭಾವ ವನ್ನು ಚೆನ್ನಾಗಿ ಅರಿತ ಆಕೆ, ತಾನೇ ನರಸಿಂಹನೆಂಬ ಬೇಡನ ಕೈಯಿಂದ ಹತ ವಾದ ಕ್ರೌಂಚವಾಗಿ ಭಾವಿಸಿ, ಸುಂದರರಾಜವಾಲ್ಮೀಕಿಯ ದುಃಖವನ್ನೂ ತನ್ನ ದುಃಖವನ್ನೂ ಏಕ ಕಾಲದಲ್ಲಿ ಅನುಭವಿಸಿದಳು. ಹಳ್ಳಿಯಲ್ಲಿ ರಾಮಾ ಯಣವನ್ನು ಕೇಳಿ ಕೇಳಿ ಅಭ್ಯಾಸವಾಗಿದ್ದ ಆಕೆ "ಕ್ರೌಂಚ ವಧ ಅಂದು ಮಾತ್ರ ನಡೆಯುತ್ತಿಲ್ಲ ಇಂದೂ ನಡೆಯುತ್ತಿದೆ" ಎಂದುಕೊಂಡಳು.

❖ ❖ ❖ ❖

ಈ ಸುದ್ದಿಗಳೆಲ್ಲ ಸುಂದರರಾಜನಿಗೂ ರಂಭಾಪುರಿಗೂ ತಲಪುವುದಕ್ಕೆ ಬಹಳ ಕಾಲ ಬೇಕಾಗಲಿಲ್ಲ. ಅವೆಲ್ಲ ಹತ್ತಿರಹತ್ತಿರದ ಹಳ್ಳಿಗಳು; ಮೂರು ಹೊತ್ತು ನೆಂಟರು ಹೋಗಿ ಬರುವ ಜಾಗ. ಸುಂದರರಾಜನಿಗೂ ಅವನ ಮನೆಯವರಿಗೂ ವಿಷಯ ಇಂಥದೆಂದು ಸ್ಪಷ್ಟವಾಗಿ ಗೋತ್ತಾಗದಿದ್ದರೂ, ನರಸಿಂಹನ ಹಳ್ಳಿಗೆ ಹೋದ ಸೀತಾಲಕ್ಷ್ಮಿ, ಆರು ತಿಂಗಳಾದರೂ ಊರಿಗೆ ಬರದುದರಿಂದ ಮುಖ್ಯವಾದ ವಿಷಯ, ಒಂದಕ್ಕೆ ಹತ್ತಾಗಿಯೇ ಅವರಿಗೆ ತಿಳಿ ಯಿತು. ಸುಂದರರಾಜನ ಸ್ಥಿತಿ, ಸೀತಾಲಕ್ಷ್ಮಿಯ ಸ್ಥಿತಿಯಂತೆಯೇ ಆಗಿತ್ತು. ತಾನು ಏನು ಮಾಡುತ್ತಿರುವೆನೆಂಬುದರ ಅರಿವಿಲ್ಲದೆ ಅವನು, ಹುಚ್ಚನಂತೆ ಊಟ, ನಿದ್ರೆ, ಉಡಪು, ಮನೆ, ತೋಟ ಯಾವುದರಕಡೆಗೂ ಲಕ್ಷ್ಯವಿಲ್ಲದೆ ಅಲೆಯುತ್ತಿದ್ದನು. "ಹಾಳು ರಂಡೆ ಸಾಯಲಿ. ಅಂತಹ ನಾಲ್ಕು ಹುಡುಗಿ ಯರನ್ನ ತಂದು ಕಟ್ಟ್ತೀನಿ. ನೀನು ಯಾಕೆ ಕೊರಗಬೇಕು" ಎಂದು ಸುಂದರ ರಾಜನ ತಂದೆ ಹೇಳಿದ ಮಾತು ಅವನಿಗೆ ಅರ್ಥವೇ ಆಗಲಿಲ್ಲ. ಸುಂದರ ರಾಜನಿಗೆ ತನ್ನ ಸುಖವನ್ನು ಕಸಿಯಲು ಇದು ವಿಧಿ ಹೂಡಿದ ವಿಕಟ ನರ್ತನ ವಾಗಿ ತೋರಿತು. ಅವನದು ಪ್ರೇಮದ ವಿವಾಹ. ಇದನ್ನು ಬೇರೆ ವಿವಾಹ ದಿಂದ ಸರಿಪಡಿಸುತ್ತೇನೆಂಬ ಹಿರಿಯರ ಮಾತನ್ನು ಕೇಳಿ, ಅವನಿಗೆ ಅವರ

ವಿಷಯದಲ್ಲಿಯೇ "ಅಯ್ಯೋ ಪಾಪ ಇವರಿಗೆ ತಿಳಿಯದು" ಎಂಬ ಪಶ್ಚಾತ್ತಾಪ ವುಂಟಾಯಿತು. ತನ್ನ ಅಭಿಪ್ರಾಯ ಹಿರಿಯರಾರಿಗೂ ಅರ್ಥವಾಗುವಂತೆ ಅವನಿಗೆ ತೋರಲಿಲ್ಲ. "ಲೋಕದಲ್ಲಿ ಇವಳೊಬ್ಬಳೇ ಅಲ್ಲ ಹೆಣ್ಣು" ಎಂದು ಅವರು ಗರ್ಜಿಸುತ್ತಿದ್ದರು. ಆದರೆ "ಲೋಕದಲ್ಲಿ ಇವಳೊಬ್ಬಳಲ್ಲದೆ ಬೇರೆ ಹೆಣ್ಣು ಇಲ್ಲ" ಎಂದು ಸಾರಿ ಸಾರಿ ಸಾವಿರ ಸಲ ಹೇಳಬೇಕೆಂಬುದು ಸುಂದರ ರಾಜನ ಇಷ್ಟ. "ನಿನಗೆ ಬೇಕಾದಾಗ ಬೇಕಾದ ಕಡೆಯಿಂದ ತಂದು ಇಟ್ಟು ಕೊಳ್ಳಲು ಹೆಣ್ಣೆಂಬುದು ಒಂದು ಪದಾರ್ಥವೆ? ನಿನ್ನ ಪುಣ್ಯದಿಂದ ನಿನಗೆ ಒಲಿದು ಬಂದ ಹೆಣ್ಣೇ ನಿನ್ನ ಪಾಲಿಗೆ ಲೋಕದಲ್ಲಿ ಹೆಣ್ಣು" ಒಲಿದು ಬಂದ ಹೆಣ್ಣು ಎಂಬ ಮಾತು ಸುಂದರರಾಜನಿಗೆ ಬಹಳ ಹಿತವಾದ ಮಾತು ಆಗಿ ತೋರಿತು. ಆ ಮಾತು ತನಗಾಗಿಯೇ ಹುಟ್ಟಿ ಬಂದುದೆಂದೂ ಅವನು ಭಾವಿಸಿದನು. ಸೀತಾಲಕ್ಷ್ಮಿ ನಿಜವಾಗಿ ಒಲಿದು ಬಂದ ಹೆಣ್ಣು. ಆದರೆ, ಅಯ್ಯೊ! ಅಯ್ಯೊ! ಎಂದು ಅವನು ತಲೆ ಚಚ್ಚಿಕೊಂಡನು. ಅವನು ಯಾರೊಂದಿಗೂ ಮಾತನಾಡುವುದನ್ನು ಬಿಟ್ಟುಬಿಟ್ಟನು. ಮನೆಗೆ ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ತೋಟದಲ್ಲಿಯೂ, ಬಯಲಿನಲ್ಲಿಯೂ ಊರಿನ ಸಮೀಪದ ಗುಡ್ಡಗಳ ಮೇಲೆಯೂ ಅಲೆದಾಡುತ್ತ ದಿನವನ್ನೆಲ್ಲ ಕಳೆಯುವನು. ದೀಪಾವಳಿಗೆ ಹದಿನೈದು ದಿನ ಮುಂಚೆ ಅವನಿಗೆ ಜ್ವರ ಪ್ರಾರಂಭವಾಯಿತು. ದಿನದಿನಕ್ಕೆ ಜ್ವರ ಉಲ್ಬಣಾವಸ್ಥೆಮುಟ್ಟಿ ದೀಪಾವಳಿಯ ಮೊದಲದಿನ ಸನ್ನಿಯಾಗಿ ಸುಂದರರಾಜ ಜ್ಞಾನಹೀನನಾದನು. ಆದರೆ, ಬಾಯಿನಿಂದ ಮಾತ್ರ ಒಂದು ಗಳಿಗೆಯೂ ಬಿಡುವಿಲ್ಲದೆ ಮಾತುಗಳ ಸುರಿಮಳೆಯನ್ನು ಸುರಿಸುತ್ತಲೇ ಇದ್ದನು. ಸೀತಾಲಕ್ಷ್ಮಿಯೊಂದಿಗೆ ಪ್ರೇಮ ಸಲ್ಲಾಪ, "ಈ ಗೀತೆ ಆ ಹಾಡು ನುಡಿಸು" ಎಂಬುದು; ಸೀತಾಲಕ್ಷ್ಮಿಯೊಡನೆ ಹಿಂದೆ ನಡೆಸಿದ್ದ ಮಾತುಕತೆಗಳ ಪುನರಾವರ್ತನ; ದೀಪಾವಳಿಗಾಗಿ ತಾವು ಕಟ್ಟಿಕೊಂಡಿದ್ದ ಬಗೆಬಗೆಯ ಕನಸು, ತಾನು ದೀಪಾವಳಿಯ ಸುಖಗಳನ್ನೆಲ್ಲ ಅನುಭವಿಸುತ್ತಿರುವಂತಹ ಮಾತು; ಹೀಗೆ ಸುಂದರರಾಜನ ಒಂದೇ ಸಮನಾದ ಈ ಸನ್ನಿ ಹರಟೆಯನ್ನು ಕೇಳಿ ಅವನ ಮನೆಯವರಿಗೆಲ್ಲ ಅವನ ಆಸೆಯೇ ಬಿಟ್ಟುಹೋಯಿತು.

ನಾಲ್ಕಾರು ದಿನಗಳ ನಂತರ ಸುಂದರರಾಜನು ಅಪಾಯದ ಗೆರೆಯನ್ನು ದಾಟಿದನು. ಜ್ಞಾನ ಹತೋಟಿಗೆ ಬಂದರೂ ಬುದ್ಧಿ ಹತೋಟಿಗೆ ಬರಲಿಲ್ಲ.

" ಮೊದಲು ಇವನಿಗೆ ಇನ್ನೊಂದು ಲಗ್ನ ಮಾಡಿದರೆ ಎಲ್ಲ ಸರಿ ಹೋಗುತ್ತೆ " ಎಂದುಕೊಂಡು ಆತನ ತಂದೆ ಆ ಯೋಚನೆಯಲ್ಲಿಯೇ ಮಗ್ನರಾದರು.

೮

ಹೀಗೆಯೇ ಇನ್ನೂ ಎರಡು ತಿಂಗಳು ಕಳೆದುಹೋಯಿತು. ಸೀತಾಲಕ್ಷ್ಮಿ ಎಂಟು ಎಂಟುವರೆ ತಿಂಗಳ ಗರ್ಭಿಣಿಯಾದಳು. ಮೊದಲೇ ಗೊತ್ತು ಮಾಡಿಕೊಂಡಿದ್ದ ಒಂದು ಪಿತೂರಿಯಿಂದಲೋ ಎಂಬಂತೆ ಅವಳ ವಿಷಯದಲ್ಲಿ ರಾಮುನ ಮನೆಯಲ್ಲಿ ಯಾರೂ ಮಾತೆತ್ತುತ್ತಿರಲಿಲ್ಲ. ಒಂದು ದಿನ ತೋಟದಲ್ಲಿ ರಾಮನೂ ಶ್ರೀನಿವಾಸನೂ ಒಟ್ಟಿಗಿರುವಾಗ ಇದ್ದಕ್ಕಿದ್ದಂತೆ ಶ್ರೀನಿವಾಸನು " ಹೀಗೆ ಬಿಟ್ಟುಕೊಂಡುಹೋದರೆ ಹೇಗೆ ? ಈಗ ಏನು ಮಾಡೋಣ ? ಎಂದು ಕೇಳಿದನು. ಶ್ರೀನಿವಾಸನು ಹೇಳುತ್ತಿರುವುದೇನೆಂಬುದು ರಾಮುನಿಗೆ ತತ್ ಕ್ಷಣ ಗೊತ್ತಾಯಿತು. ಈ ನಾಲ್ಕಾರು ತಿಂಗಳುಗಳಿಂದ ಅವರಿಬ್ಬರ ಮನಸ್ಸಿನಲ್ಲಿ ಸೀತಾಲಕ್ಷ್ಮಿಯ ಯೋಚನೆ ಹೊರತು ಮತ್ತೇನೂ ಇರಲಿಲ್ಲ. ಆದರೂ ರಾಮುನು ಏನೂ ತಿಳಿಯದಂತೆ " ಯಾವ ವಿಷಯ ನೀನು ಹೇಳುತ್ತಿರುವುದು " ಎಂದನು.

ಶ್ರೀನಿವಾಸ—ಇನ್ನಾವ ವಿಷಯ ನಮಗಿರುವುದು ? ಒಂದೇ ವಿಷಯ, ಸೀತಾಲಕ್ಷ್ಮಿ

ರಾಮು—ಈಗ ಏನು ಮಾಡಬೇಕೆಂಬುದು ನಿನ್ನ ಅಭಿಪ್ರಾಯ.

ಶ್ರೀನಿವಾಸ—ಗರ್ಭಿಣಿಯಾಗಿರೊ ಅವಳನ್ನ ಅಲ್ಲಿ ಹಾಗೆ ಬಿಟ್ಟಿರೋಕೆ ಆಗುತ್ಯೆ ? ಅಲ್ಲಿ ಆಸ್ಪತ್ರೆನೂ ಇಲ್ಲ. ಮೊದಲ ಪ್ರಸವ. ಏನಾದರೂ ಹೆಚ್ಚು ಕಡಿಮೆ ಆದರೆ ?

ರಾಮು—ಅಯ್ಯೊ ನಿನ್ನ ಪ್ರಸವದ ವೈಭವವೆ ? ಸೀಮಂತ ಪುತ್ರ ! ಅವಳ ಪ್ರಸವ ಯಾರಿಗೆ ಬೇಕು ? ಗಂಡನಿಗೆ ಬೇಕಿಲ್ಲ. ಅವಳಿಗೇ ಬೇಕಿಲ್ಲ. ಇನ್ನು ನರಸಿಂಹನಿಗೆ ಬೇಕೆನೋ ?

ಶ್ರೀನಿವಾಸ—ಪ್ರಸವ ಬೇಡವಾದರೂ ಈಗ ನಮ್ಮ ತಂಗಿಯನ್ನು ನಾವು ಬಿಡುವುದಕ್ಕಿಲ್ಲವಲ್ಲ. ಏನೂ ಅರಿಯದ ಆಕೆಗೆ ಈಗ ಯಾರು ದಿಕ್ಕು, ಬೇಸರಿಕೆಯಿಂದ ಹೊಳೆ ಕೆರೆ ಮಗುಚಿಕೊಂಡ ಪ್ರಾಣಬಿಟ್ಟಾಳು, ಅಂತ ನನಗೆಭಯ.

ರಾಮು—ನಿನಗೆ ಹೆಂಗಸರ ಸ್ವಭಾವ ತಿಳಿಯದು. ಪ್ರಾಣ ಬಿಡೋಳಾಗಿದ್ರೆ ಆಗಲೇ ಬಿಟ್ಟಿರೋಳು. ಮಗು ಹೊಟ್ಟೇಲಿರುವಾಗ ಎಂದಿಗೂ ಹೆಂಗಸು ಸಾಯೋದಿಲ್ಲ. ತನ್ನ ಅಪಮಾನನಾದರೂ ಸಹಿಸಿಕೊಂಡು, ತನ್ನ ಅಪಮಾನದ ಪತಾಕಿ ಆದ ಮೊಗೂನ ಸಾಕ್ತಾಳೆ ತಾಯಿ, ಅದೇ ತಾಯಿಯ ಕರುಳು. ಅದು ತಾಯಿಯ ಕರುಳಾಗದೆ ಇದ್ದಿದ್ದರೆ, ಈ ಲೋಕ ಈ ವೇಳೆಗೆ ಸತ್ತು ಸುಣ್ಣವಾಗಿ ನಿರ್ನಾಮವಾಗಿ ಎಷ್ಟೋ ಯುಗಗಳಾಗುತ್ತಿತ್ತು. ಆದ್ದರಿಂದ ಅವಳು ಸಾಯೋ ಯೋಚ್ನೆ ಬಿಡು. ಇಷ್ಟರಮೇಲೆ ದೇವರು ಮಾಡಿಸಿದ್ದಾಗಲಿ. ಏನೂ ಅರಿಯದವಳು ಅನ್ತೀಯ. ಯಾಕೆ ಅರಿಯದವಳು? ಅರಿಯದವಳಾಗಿದ್ದಿದ್ದರೆ, ನರಸಿಂಹನನ್ನು ಹಾಗೆ ಎಂದಿಗೂ ಮರುಳುಮಾಡ್ತ ಇರಲಿಲ್ಲ. ಇನ್ನು ಈಗ ನಮುಗ್ಯಾಕೆ ಆ ಸುದ್ದಿ? ಇಲ್ಲಿಂದ ಅವಳು ಹೊರಟು ಹೋಗಿದ್ದಾಳೆ. ನರಸಿಂಹನೇ ಬೇಕಾದ ಏರ್ಪಾಡು ಮಾಡಲಿ. ಇದರಲ್ಲಿ ನಾವು ತಲೆ ಇಡುವುದು ಬೇಡ.

ಶ್ರೀನಿವಾಸ—ಅಲ್ಲ ಅಣ್ಣ. ಇಲ್ಲಿಂದ ಅವಳು ಹೋಗೋದಕ್ಕೂ ನಾವೇ ತಾನೇ ಕಾರಣ. ಜಲಜಾಕ್ಷಿಯ ಬಾಣಂತನಕ್ಕೆ ಹೋಗಬೇಕೆಂದು ಕಳುಹಿಸಿದವರು ನಾವೇ ಅಲ್ಲವೆ? ನಮುಗೆ ಜಲಜಾಕ್ಷಿ ಹೇಗೆ ಬೇಕೋ ಇವಳೂ ಹಾಗೇ ತಾನೆ? ಆದರೆ ಅವಳ ಗ್ರಹಚಾರ. ಆದರೆ ಅಕ್ಕನ ಸೇವೆ ಮಾಡಬೇಕೆಂದು ಹೋದ ಅವಳ ಬಾಳು, ಗೋಳ ಕರೆ ಆಯಿತು. ಆದರೆ ನಮುಗೆ ಇದರಲ್ಲಿ ಏನೂ ಸಂಬಂಧವೇ ಇಲ್ಲವೇ? ಹೀಗೆ ನಮ್ಮ ತಂಗಿ ಅಲ್ಲಿ ನರಕಯಾತೆಯನ್ನನುಭವಿಸುವಾಗ ನಾವು ಏನೂ ಅರಿಯದವರಂತೆ, ಅಥವ ಆಕೆಗೂ ನಮುಗೂ ಸಂಬಂಧವೇ ಇಲ್ಲದಂತೆ ಇದ್ದುಬಿಡುವುದೆ? ಇದು ಬಹಳ ಕಾಠಿಣ್ಯ ಅಣ್ಣ. ಇದು ಮನುಷ್ಯತ್ವವೂ ಅಲ್ಲ.

ರಾಮು—ಹಾಗಾದರೆ ಈಗ ಏನು ಮಾಬೇಕೆನ್ನುತ್ತೀ?

ಶ್ರೀನಿವಾಸ—ಹೋಗಿ ನೋಡಿ ಯಾವುದಾದರೂ ಒಂದು ಒಳ್ಳೆಯ ಆಸ್ಪತ್ರೆಗೆ ಸೇರಿಸಿ, ಪ್ರಸವವಾಗುವವರೆಗೆ ಜತೆಯಲ್ಲಿದ್ದು ಉಪಚರಿಸಿ ಕರೆತರೋಣ, ಎಂದು ಯೋಚನೆ.

ರಾಮು—ಬೀದಿಲಿ ಹೋಗೋ ಮಾರಿನ ಮನೆಗೆ ಹೊಗಿಸಿಕೊಳ್ಳುವ ಈ ಪಾರುಪತ್ಯ ನಮುಗೆ ಬೇಡ. ಈ ಭೂತ ಎಬ್ಬಿಸಿದ ನರಸಿಂಹ, ಅವನ ಪಾಡಿಗೆ.

ಮಜ ಮಾಡ್ತ ಕುಳಿತಿರಲಿ. ನೀನು ಅವನ ಮಗುವಿಗೆ ಸೂಲಗಿತ್ತಿ ಹುಡಿಕ್ಕೊಂಡು ದೇಶ ತಿರುಗು. ಇದೆಲ್ಲ ಆಗೋ ಮಾತಲ್ಲ. ಈ ಗಂಟು ಹಾಕಿದೋನು ನರಸಿಂಹ. ಅವನೇ ಅದನ್ನ ಬಿಡಿಸಲಿ. ಇಲ್ಲಿಂದ ಸೀತಾಲಕ್ಷ್ಮೀನ ಕರ್‍ಕೊಂಡ್ಹೋದ, ಮತ್ತೆ ಸರಿಯಾಗಿ ಕರೆತಂದು ಬಿಡೋದು ಅವನ ಕೆಲಸ.

ಶ್ರೀನಿವಾಸ—ನರಸಿಂಹನ ವಿಚಾರ ಬಿಡಿ. ಸೀತಾಲಕ್ಷ್ಮಿ ನಮ್ಮ ತಂಗಿ ಅಲ್ಲವೆ? ಅವಳ ಯೋಗಕ್ಷೇಮವನ್ನು ನರಸಿಂಹನಿಗೆ ವಹಿಸಿ ನಾವು ಸುಮ್ಮನಿದ್ದರಾಯಿತೆ?

ರಾಮು—ಆಯಿತು ಅಂತ ಯಾರು ಹೇಳಿದ್ರು? ಅವಳನ್ನ ಯಾರು ಅಲ್ಲಿ ಹೋಗಿ ಗರ್ಭಿಣಿಯಾಗು ಅಂತ ಹೇಳಿದರು?

ಶ್ರೀನಿವಾಸ—ಅವಳು ತಾನೇ ಅಲ್ಲಿ ಗರ್ಭಿಣಿಯಾಗಲು ಬಯಸಿದಳೆ? ಈಗ ಆಗಿಬಿಟ್ಟಿದಾಳೆಲ್ಲ, ಮುಂದೇನು ಮಾಡೋಣ ಹೇಳಿ.

ರಾಮು—ಹೇಳೋದೇನು? ಆ ನರಸಿಂಹನನ್ನೇ ಕೇಳು. ಸೀತಾಲಕ್ಷ್ಮೀನೆ ಕೇಳು. ಕೇಳೋದೂ ಬೇಡ ಹೇಳೋದೂ ಬೇಡ. ನಿನ್ನ ಪಾಡಿಗೆ ಗಮ್ಮನೆ ಬಾಯಿ ಮುಚ್ಚಿಕೊಂಡಿರು.

ಶ್ರೀನಿವಾಸ—ಬಾಯಿ ಮುಚ್ಚಿಕೊಂಡಿದ್ದರೆ ಒಂದು ದಿನ ನಮ್ಮ ತಂಗಿ ಸತ್ತಳೆಂದು ಸುದ್ದಿ ಬರುತ್ತೆ. ನರಸಿಂಹನ ಸ್ವಭಾವ ನಿನಗೆ ಗೊತ್ತಿಲ್ಲದೆ ಇಲ್ಲ. ಅವನೊಂದು ದನ. ಕತ್ತೆ—ಅಲ್ಲ. ಮತ್ತಾವ ಪ್ರಾಣಿಯಾಗಿ ಹುಟ್ಟಲೂ ಅವನು ಅನರ್ಹನಾದುದರಿಂದ ದೇವರು ಅವನನ್ನು ಮನುಷ್ಯನನ್ನಾಗಿ ಹುಟ್ಟಿಸಿದ್ದಾನೆ. ತಾನು ಮಾಡಿರುವ ಕೆಲಸದ ಜವಾಬ್ದಾರಿ ಅವನಿಗೆ ಏನೇನೂ ತಿಳಿಯದು. ಒಂದು ಬಾಳನ್ನು ತಾನು ಹೀಗೆ ಮಣ್ಣುಗೂಡಿಸಿರುವುದು ಅವನ ಮನಸ್ಸಿಗೆ ಭಾರವಾಗಿದ್ದರೆ, ಒಂದು ಸಲವಾದರೂ ಇಲ್ಲಿ ಬಂದು ನಮ್ಮೊಂದಿಗೆ ಮಾತು ಕತೆ ಆಡದೆ ಇರುತ್ತಿದ್ದನೆ? ಆಗಾಗಲೇ ಬಂದು ಈ ವಿಚಾರ ಚರ್ಚಿಸದೆ ಇರುತ್ತಿದ್ದನೆ? ಮತ್ತೊಬ್ಬರ ಹೃದಯವನ್ನ ಅರಿಯುವ ಬುದ್ಧಿ ಆ ಕತ್ತೆಗೆ ಎಲ್ಲಿದೆ? ಆವತ್ತಿನಿಂದ ಇವತ್ತಿನವರೆಗೆ ಬಹುಶಃ ಅವನು ಸೀತಾಲಕ್ಷ್ಮಿಯೊಂದಿಗೆ ಒಂದು ಮಾತನ್ನೂ ಸಹ ಆಡಿರಲಾರ. ಅವನಿಗೆ ಕಣ್ಣಿದ್ದಿದ್ದರೆ ಸೀತಾಲಕ್ಷ್ಮಿಯ ಬೇಗುದಿಗೊಂಡ ಮುಖ ಅವನನ್ನು ಸುಮ್ಮನೆ ಇರಿಸುತ್ತಿತ್ತೇ? ಹೃದಯವಿದ್ದಿದ್ದರೆ, ತಾನು ಸೀಳಿದ ಆ ಹೃದಯದ ದುಃಖದೊಂದಿಗೆ ಪಾಲು

ಗಾರನಾಗುತ್ತಿರಲಿಲ್ಲವೆ? ಅವನೊಂದು ಕಲ್ಲು ಕೊರಡು, ಒಂದು ಹುಡುಗಿಯನ್ನು ಅವನಿಗೆ ಕೊಟ್ಟುದೇ ಸಾಕಾಗಿತ್ತು. ಎರಡು ಹುಡುಗಿಯರ ಹಣೆಬರಹವನ್ನೂ ತೊಡೆಯುವ ಬ್ರಹ್ಮನೇ ಅವನಾಗಬೇಕೆ? ಯಾಕೆ ಆಗಬೇಕು? ಸೀತಾಲಕ್ಷ್ಮಿಯ ಬಾಳನ್ನು ಮುಳುಗಿಸಲು ಅವನು ಯಾರು?

ರಾಮು—ಇನ್ನು ಹೊಸದಾಗಿ ಮುಳುಗಿಸುವುದೇನಿದೆ? ಆಗಲೇ ಮುಳುಗಿಸಿಯಾಯಿತು. ಅವಳ ಬಾಳು ಸ್ಮಶಾನವಾಯಿತು. ಇನ್ನು ಅವಳಿಗೆ ಉಳಿದಿರುವ ಆಶ್ರಯ ಯಮನೊಬ್ಬನೇ.

ಶ್ರೀನಿವಾಸ—ನರಸಿಂಹನಂತಹ ಪಿಶಾಚಿಗಾಗಿ ಮನುಷ್ಯರು ಸಾಯಬಾರದು; ಕೂಡದು. ಇವರನ್ನು ಜಯಿಸಿ ಬಾಳಬೇಕು.

ರಾಮು—ಅಪ್ಪ, ಸೀತಾಲಕ್ಷ್ಮಿಯೊಂದಿಗೆ ಬಾಳಬೇಕಾದವನು ನೀನಲ್ಲ. ಸುಂದರರಾಜ. ಅವನು ಬಾಳಬೇಕಾಗಿರುವುದು ಅವರ ತಂದೆ ತಾಯಿಗಳೊಡನೆ. ಈಗ ಸದ್ಯಕ್ಕೆ ನೀನು ಸುಮ್ಮನಿರು. ಹಣೆಯಲ್ಲಿ ಬರೆದಂತೆ ಆಗಲಿ ವಿಧಿಯ ಬರಹವನ್ನು ತಿದ್ದಲು ನಮ್ಮಿಂದ ಸಾಧ್ಯವೆ?

ರಾಮುನ ವಾದಸರಣಿ ಶ್ರೀನಿವಾಸನಿಗೆ ಒಪ್ಪಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ನರಸಿಂಹನ ತಪ್ಪಿಗಾಗಿ ತಾವು ಸೀತಾಲಕ್ಷ್ಮಿಯನ್ನು ಬಲಿ ಕೊಡುವುದು ಅವನಿಗೆ ಧರ್ಮವಾಗಿ ತೋರಲಿಲ್ಲ. ರಾಮುನಿಗೂ ಇದು ಧರ್ಮ ಅಧರ್ಮದ ಪ್ರಶ್ನೆ ಅಲ್ಲವೆಂಬುದೂ ಮುಖ್ಯವಾಗಿ ಇದು ತಮ್ಮೆಲ್ಲರ ಹೇಡಿತನವೆಂದೂ ಅವನಿಗೆ ಮಂದಟ್ಟಾಯಿತು. ಗರ್ಭಿಣಿಯಾದ ಸೀತಾಲಕ್ಷ್ಮಿಯನ್ನು ತಂದು ಮನೆಯಲ್ಲಿಟ್ಟುಕೊಳ್ಳಲು ರಾಮುನಿಗೆ ಊರಿನವರ ಭಯ. ರಾಮುನಂತೆ ತನಗೂ ಭಯ. ಭಯ, ಪ್ರೇಮವನ್ನು ಹೊಡೆದುಹಾಕುತ್ತದೆ. ಮನುಷ್ಯನಿಗೆ ಭಯಕ್ಕಿಂತ ದೊಡ್ಡ ಶತ್ರು ಬೇರೆ ಯಾವುದೂ ಇಲ್ಲ. ಒಂದು ಸಲ ಶ್ರೀನಿವಾಸನಿಗೆ, ರಾಮುನ ಈ ದೃಢನಿಶ್ಚಯ ವೈರಾಗ್ಯಬುದ್ಧಿ ವಿಧಿಯ ಸರ್ವಶಕ್ತಿಯಲ್ಲಿ ನಂಬಿಕೆ ಇವು ಧೀರತನದ ಲಕ್ಷಣಗಳಾಗಿ ತೋರಿದವು. ಆದರೆ ಮರುಕ್ಷಣದಲ್ಲಿಯೇ ಧೀರನಾಗಿದ್ದರೆ ಕಾರಣ್ಯವಿರಬೇಕಿತ್ತೆಂದು ತೋರಿ ಇದು ಬರಿಯ ಭಯವೆಂದು ಸ್ಪಷ್ಟವಾಯಿತು. ತನ್ನ ಮತ್ತು ರಾಮುನ ಮಕ್ಕಳ ಅನ್ನಕ್ಕಾಗಿದ್ದ ಒಂದೇ ಒಂದು ಊರ ಮುಂದಲ ಚಿನ್ನದಂತಹ ಗದ್ದೆಯ ತಾಕನ್ನು ಮಾರಿ ಮಾಡಿದ ಮದುವೆ. ಇದರ ಪರಿಣಾಮ ಹೀಗಾಯಿತಲ್ಲ

ಹಾಗಾದರೆ ಇದಕ್ಕೆ ಪ್ರತೀಕಾರವೇ ಇಲ್ಲವೆ? ಸೀತಾಲಕ್ಷ್ಮಿಯ ಬಾಳಿನಮೇಲೆ ಕಲ್ಲೆಳೆಯಲು ನರಸಿಂಹನೇ ಅವಳ ಬಾಳಿನ ವಿಧಿಯೇ. ಹೇಗಾದರೂ ಮಾಡಿ ಇದನ್ನು ಪ್ರತಿಭಟಿಸಬೇಕಲ್ಲ.... ಆದರೆ ತಾನು ಪ್ರತಿಭಟಿಸುವುದು ಹೇಗೆ? ಪ್ರತಿಭಟಿಸಬೇಕಾದವರು ಸುಂದರರಾಜ ಸೀತಾಲಕ್ಷ್ಮಿ ತಾನೆ? ಅವರಿಗೆ ಮನಸ್ಸಿದಯೆ? ಧೈರ್ಯವಿದೆಯೆ?

ಹೀಗೆ ಯೋಚಿಸುತ್ತ ಶ್ರೀನಿವಾಸನು ವಾದವನ್ನು ನಿಲ್ಲಿಸಿ ದುಃಖಕ್ಕೆ ತೆತ್ತ ಮನಸ್ಸುಳ್ಳವನಾಗಿ ತೋಟದ ಕಡೆ ಹೊರಟುಹೋದನು.

❖ ❖ ❖ ❖

ಸ್ವಲ್ಪ ಹೆಚ್ಚು ಕಡಿಮೆ ಅದೇ ದಿನ ನರಸಿಂಹನ ಹಳ್ಳಿಯಲ್ಲಿ ಅವನ ಮನೆಯಲ್ಲಿ ಅದೇ ಚರ್ಚೆ ನಡೆದಿತ್ತು. ಗಂಡನ ಸ್ವಭಾವ ತಿಳಿಯದ ಹೆಣ್ಣುಗಳು ಅಪೂರ್ವ. ಅವನ ಮಾತು, ನೋಟ, ಚೇಷ್ಟೆ, ನಡಿಗೆಗಳಿಂದಲೇ—ಎಷ್ಟು ಮುಚ್ಚಿಕೊಂಡರೂ — ಕ್ಷ ಕಿರಣದಂತೆ ಹೆಂಡತಿ ಗಂಡನ ಮನಸ್ಸಿನಲ್ಲಿರುವ ಪ್ರೇಮವ್ಯಾಪಾರ, ಪ್ರೇಮಚೇಷ್ಟೆಗಳನ್ನು ಕಂಡುಹಿಡಿಯುತ್ತಾಳೆ. ಆತನ ಉಳಿದ ವ್ಯವಹಾರ ಅವಳಿಗೆ ತಿಳಿಯದಿದ್ದರೂ, ಅದು ಖಂಡಿತ ತಿಳಿಯುತ್ತೆ. ಸೀತಾಲಕ್ಷ್ಮಿಯಮೇಲೆ ತನ್ನ ಗಂಡನಿಗೆ ಆಸೆ. ತನ್ನ ಮೇಲಿರುವುದಕ್ಕಿಂತ ಅಧಿಕ ಆಸೆ ಎಂಬುದು ಜಲಜಾಕ್ಷಿಗೆ ತಿಳಿದಿದ್ದಷ್ಟು ನರಸಿಂಹನಿಗೆ ತಿಳಿದಿರಲಿಲ್ಲ. ನರಸಿಂಹ ಸೂಕ್ಷ್ಮಮಧುರ ಭಾವಗಳಿಗೆ ಹೊರತಾದವನಾಗಿದ್ದರೂ, ಮುಂಗಾರು ಮಿಂಚಿನಂತೆ ಸೀತಾಲಕ್ಷ್ಮಿ ಫಳಾರನೆ ಆತನ ಮುಂದೆ ಸುಳಿದುಹೋದಾಗ ಅವನ ಇಚ್ಛೆಯೇ ಇಲ್ಲದೆ, ಅವನ ಪ್ರಯತ್ನವನ್ನೂ ಮೀರಿ ನಿಸರ್ಗದ ಆ ಆಕರ್ಷಣೆ, ಅಂತಹ ಶಕ್ತಿಯನ್ನು ಕರಗಿಸಿ ನೀರಾಗಿಸುತ್ತಿದ್ದುದನ್ನು ಕಂಡಿದ್ದ ಜಲಜಾಕ್ಷಿಗೆ, ಗಂಡನ ದೌರ್ಬಲ್ಯ ಗೊತ್ತಾಗಿತ್ತು. ಆದರೆ, ಒಂದು ಬಗೆಯ ಕರಡಿಯಂತಿದ್ದ ಅವನಿಗೆ, ಪ್ರೌಢಳಾಗಿ ಬೆಳೆದು ಸುಶಿಕ್ಷಿತಳಾಗಿ ಕಲಾ ಸಂಗೀತ ಪೂರ್ಣಳಾಗಿ ತನಗೆ ಅನುರೂಪನಾದ ವರನನ್ನು ಆಸೆಯಿಂದ ಮದುವೆಯಾಗಿ ಆ ಗಂಡನನ್ನು ತನ್ನ ಕಣ್ಣು ತುಟಿಗಳಿಂದ ಪೂಜಿಸಿ, ಮುದ್ದಿಸಿ ತೃಪ್ತಹೊಂದದ ನೋಟವನ್ನು ಯಾವಾಗಲೂ ಬೀರುತ್ತಿದ್ದ ಸೀತಾಲಕ್ಷ್ಮಿ, ಸೀತೆ ರಾವಣನನ್ನಿಟ್ಟಿದ್ದಂತೆ ನರಸಿಂಹನನ್ನು ದೂರವಿಡುವಳೆಂಬುದು ಅವಳ ನಂಬಿಕೆಯಾಗಿತ್ತು. ಆದರೆ, ಭೋರ್ಗರೆವ ನಿಸರ್ಗದ ಆಕರ್ಷಣೆಯ ಪ್ರವಾಹ, ಕಟ್ಟು

ತಡೆಗಳನ್ನು ಹರಿದು ನುಗ್ಗುವಾಗ, ಮನುಷ್ಯ ನಿಯಮಿತವಾದ ಕೃತಕ ಭೇದ ಗಳೊಂದೂ ಅದರ ಮುಂದೆ ನಿಲ್ಲದೆಂಬ ಅನುಭವ ಆಕೆಗಿರಲಿಲ್ಲ. ಹಾಗಿದ್ದಿದ್ದರೆ ನರಸಿಂಹ ಸೀತಾಲಕ್ಷ್ಮಿ ಇಬ್ಬರೇ ಒಟ್ಟಾಗಿರುವ ಯಾವ ಸಂದರ್ಭವನ್ನೂ ಜಲಜಾಕ್ಷಿ ಅಡ್ಡಿಪಡಿಸಿಯೇ ಬಿಡುತ್ತಿದ್ದಳು.

ಸೀತಾಲಕ್ಷ್ಮಿಯ ಮೇಲೆ ನರಸಿಂಹನ ಅತ್ಯಾಚಾರ ನಡೆದ ದಿನವೇ ಅದಾವ ಸಹಜ ಗುಣದಿಂದಲೋ ಜಲಜಾಕ್ಷಿಗೆ ನಡೆದ ಸಂಗತಿ ತಿಳಿದು ಹೋಯಿತು. ಅವಳೂ ಸೀತಾಲಕ್ಷ್ಮಿಯಂತೆ ಒಂದು ಎರಡು ತಿಂಗಳು ಮುಂದಿನ ಘಟನೆಗಳನ್ನೇ ನಿರೀಕ್ಷಿಸುತ್ತಾ ಮೌನವಾಗಿದ್ದಳು. ಮುಂದಿನ ಘಟನೆ ಅನಿರೀಕ್ಷಿತವಾದುದೇ ನಡೆದುದರಿಂದ ಅವಳಿಗೆ ಚಿಂತೆ ಪ್ರಾರಂಭವಾಯಿತು. ಜಲಜಾಕ್ಷಿ ವಿದ್ಯಾವತಿಯೂ ಅಲ್ಲ. ಸುಸಂಸ್ಕೃತಳೂ ಅಲ್ಲ. ಅವಳು ಹೇಗೆ ಹುಟ್ಟಿದಳೋ ಹಾಗೆಯೇ ಬೆಳೆದಿದ್ದ, ಒಂದೆರಡು ಮಕ್ಕಳನ್ನು ಹೆತ್ತಿದ್ದ ಹೆಣ್ಣು. ಆದರೆ ಅವಳು ಸ್ವಭಾವದಿಂದ ನರಸಿಂಹನಿಗಿಂತ ಸ್ವಲ್ಪ ಹೆಚ್ಚು ನಾಗರಿಕಳಾದವಳು. ಆದುದರಿಂದಲೇ ತಾನು ಮಾಡಿದ ಕಾರ್ಯದ ಪರಿಣಾಮ ನರಸಿಂಹನ ಮೇಲೆ ಆಗದಿದ್ದರೂ, ನರಸಿಂಹ ತಾನು ಮಾಡಿದ ಕಾರ್ಯ ತನ್ನದೇ ಅಲ್ಲವೇನೋ ಎಂಬಂತೆ ಏನೂ ತಿಳಿಯದವನಂತಿದ್ದರೂ, ದಿನಗಳು ಕಳೆದಂತೆಲ್ಲ ಜಲಜಾಕ್ಷಿಗೇ ಯೋಚನೆ ಹೆಚ್ಚಾಯಿತು. ಅವಳು ಸುಲಭವಾಗಿ ಎಲ್ಲ ತಪ್ಪನ್ನೂ ಸೀತಾಲಕ್ಷ್ಮಿಯ ಮೇಲೆಯೇ ಹಾಕಿದಳು. 'ಆಕೆ ಇಂತಹ ಬಿನ್ನಾಣದಿಂದ ಅವರೆದುರಿಗೆ ಒಂಟಿಯಾಗಿ ಯಾಕೆ ತಿರುಗಬೇಕು? ಹೆಣ್ಣು ಆಕರ್ಷಣೆ ತೋರಿಸದೆ ಗಂಡು ಎಂದಿಗೂ ಅದರ ಬಲೆಗೆ ಬೀಳುವುದಿಲ್ಲ" ಇನ್ನೂ ಹೆಚ್ಚು ವಿಚಿತ್ರವೆಂದರೆ ಪ್ರಾಯಶಃ ಸೀತಾಲಕ್ಷ್ಮಿ ಜಲಜಾಕ್ಷಿಯ ತಂಗಿಯಾಗಿಲ್ಲದೆ, ಜಲಜಾಕ್ಷಿಗೆ ತಂಗಿಯ ಮೋಹಕ ರೂಪಿನಮೇಲೆ ಅಂತಹ ಹೊಟ್ಟೆಕಿಚ್ಚು ಇಲ್ಲದಿದ್ದಿದ್ದರೆ, ಜಲಜಾಕ್ಷಿಗೆ ನರಸಿಂಹನ ತಪ್ಪು ದೊಡ್ಡದಾಗಿ ತೋರುತ್ತಿತ್ತೇನೋ? ಜಲಜಾಕ್ಷಿಗೆ ಸೀತಾಲಕ್ಷ್ಮಿಗಿಂತ ಹೆಚ್ಚಾಗಿ ನರಸಿಂಹನ ಮೇಲೆಯೇ ಕನಿಕರವುಂಟಾದುದು ಇನ್ನೂ ಹೆಚ್ಚಿನ ಆಶ್ಚರ್ಯ. ಹೀಗೆ ಸೀತಾಲಕ್ಷ್ಮಿಯನ್ನೇ ಜಲಜಾಕ್ಷಿ ಅಪರಾಧಿಯಾಗಿ ಎಣಿಸಿದುದರಿಂದ, ಆಕೆಯ ವಿಷಯದಲ್ಲಿ ಅವಳ ನಡತೆ. ಆ ಮನೋಭಾವನೆಗೆ ತಕ್ಕಂತೆ ಇತ್ತು. ಒಂದೆಡೆ ನರಸಿಂಹನಂತಹ ಪಶು ಮತ್ತೊಂದೆಡೆ ಜಲಜಾಕ್ಷಿಯಂತಹ, ಮೊದಲೇ ತನ್ನದೇ ತಪ್ಪೆಂದು

ತೀರ್ಮಾನಿಸಿರುವ ಜಡ್ಜ್. ಈ ಇಬ್ಬರ ನಡುವೆ ಸಿಕ್ಕಿದ ಸೀತಾಲಕ್ಷ್ಮಿಯ ತಲೆ, ಎರಡು ಒನಕೆಗಳ ಪೆಟ್ಟಿಗೆ ಸಿಕ್ಕಿದ ಒರಳಿನ ತಲೆಯಾಗಿತ್ತು.

ಸೀತಾಲಕ್ಷ್ಮಿಗೆ ಎಂಟು ತಿಂಗಳಾಗುತ್ತ ಬಂದಿದ್ದರೂ ನರಸಿಂಹ ತನ್ನ ಪಾಡಿಗೆ ತಾನು ಏನೂ ಅರಿಯದವನಂತೆಯೇ ಇದ್ದನು. ಈಚೆಗೆ ಒಂದೇ ದಿನವಾಗಲಿ ಅವನು ಸೀತಾಲಕ್ಷ್ಮಿಯೊಂದಿಗೆ ಪ್ರೇಮದ ಮಾತನ್ನಾಗಲಿ ಚೇಷ್ಟೆಯನ್ನಾಗಲಿ ತೋರಿಸಲಿಲ್ಲ. 'ನಾನು ಮಾಡಿದುದು ಅಕಾರ್ಯ. ಪಶ್ಚಾತ್ತಾಪವಾಗಿದೆ' ಎಂಬ ಭಾವನೆ ಅವನ ಮುಖದಲ್ಲಿ ಹೊಳೆಯಲೇ ಇಲ್ಲ. "ನನ್ನದಲ್ಲ ತಪ್ಪು ನಿನ್ನ ರೂಪರಾಶಿ ಅಂಥದ್ದು. ನನ್ನ ಕೈ ಮೀರಿ ಹೋಯಿತು. ಈಗ ಏನು ಮಾಡಲಿ?" ಎಂಬ ಭಾವನೆ ಸಹ ಇಲ್ಲ. ತೋಟದಲ್ಲಿ ಕ್ರೌಂಚ ವಧವಾದ ನಂತರ ಅಂದಿನಿಂದ ಇಂದಿನವರೆಗೆ ನರಸಿಂಹ ಸೀತಾಲಕ್ಷ್ಮಿಯೊಡನೆ ಒಂದಾದರೂ ಮಾತನಾಡಿರಲಿಲ್ಲ. ಬಸವನ ಹುಳುವಿನ ಮೇಲೆ ಹರಿದು ಕೊಂಡು ಹೋದ ರೋಣಗಲ್ಲಿನಂತೆಯೇ ಇದ್ದನು ಅವನು. ಅವನನ್ನೂ ತನ್ನ ಬೀಳನ್ನೂ ನೆನೆಸಿಕೊಂಡಾಗಲೆಲ್ಲ ಸೀತಾಲಕ್ಷ್ಮಿಯ ದುಃಖ ಉಕ್ಕಿ ಉಕ್ಕಿ ಬರುತ್ತಿತ್ತು.

ಜಲಜಾಕ್ಷಿ, ತಪ್ಪನ್ನು ಸೀತಾಲಕ್ಷ್ಮಿಯ ಮೇಲೆಯೇ ಹಾಕಿಬಿಟ್ಟಿದರಿಂದ ಮುಂದಲ ಹಣೆಪಾಡು ಅವಳದೇ ಎಂದು ಸುಮ್ಮನಿದ್ದಳು. ನರಸಿಂಹನೂ ಹಾಗೆಯೇ ಇದ್ದುದರಿಂದ ಸೀತಾಲಕ್ಷ್ಮಿಗೆ ಅವನಲ್ಲಿ ಉಂಟಾಗಿದ್ದ ಅಸಮಾಧಾನಕ್ಕಿಂತ, ಜಲಜಾಕ್ಷಿಯ ಕಾಠಿಣ್ಯವನ್ನು ನೋಡಿ ಹೆಚ್ಚು ದುಃಖ ವುಂಟಾಯಿತು. "ತನ್ನ ರೂಪು ಯೌವ್ವನ ತನ್ನ ಸ್ವಂತ ಅಕ್ಕನಿಗೇ ಹೊಟ್ಟೆ ಉರಿ" ಎಂಬುದು ಅವಳಿಗೆ ಇದ್ದಕ್ಕಿದ್ದಂತೆ ಹೊಳೆಯಿತು. ಅದರಿಂದ ಅವಳಿಗೆ ಆ ದುಃಖದಲ್ಲಿಯೂ ಒಂದು ಬಗೆಯ ಸಮಾಧಾನವೇ ಆಯಿತು. ಜಲಜಾಕ್ಷಿಯು, ರಾಮನಾಗಲಿ ಶ್ರೀನಿವಾಸನಾಗಲಿ ಬಂದು ಸೀತಾಲಕ್ಷ್ಮಿಯನ್ನು ಕರೆದುಕೊಂಡು ಹೋಗುತ್ತಾರೆಂದೇ ಭಾವಿಸಿದಳು. ರಾಮನಲ್ಲಿ ಅಲ್ಲದಿದ್ದರೂ ಶ್ರೀನಿವಾಸನಲ್ಲಿ ಅವಳಿಗೆ ಆ ನಂಬಿಕೆ. ಕೋಮಲ ಹೃದಯದ ಶ್ರೀನಿವಾಸ ತಂಗಿಯ ಅವಸ್ಥೆಯನ್ನು ನೋಡಿಕೊಂಡು, ಸುಮ್ಮನಿರಲಾರನೆಂದೇ ಅವಳು ಭಾವಿಸಿದ್ದಳು. "ಬಂದು ಕರೆದುಕೊಂಡು ಹೋಗಿ" ಎಂದು ಸಹ ಜಲಜಾಕ್ಷಿ ಶ್ರೀನಿವಾಸನಿಗೆ ಕಾಗದ ಬರೆಸಿದಳು. ಆದರೆ ಶ್ರೀನಿವಾಸ ತನಗೆ

ಜಲಜಾಕ್ಷಿಯಿಂದ ಕಾಗದ ಬಂದುದನ್ನು ರಾಮನಿಗೆ ಹೇಳದೆ ಸುಮ್ಮನೆ ವಿಷಯ ವನ್ನು ಪ್ರಸ್ತಾಪಿಸಿ ತಟಸ್ಥನಾಗಿಬಿಟ್ಟನು.

ಕೊನೆಗೂ ತಾನೇ ಸಂಭಾಷಣೆಯನ್ನು ಪ್ರಾರಂಭಿಸದೆ ವಿಧಿಯಿಲ್ಲವೆಂದು ಜಲಜಾಕ್ಷಿಗೆ ಮಂದಟ್ಟಾಯಿತು. ಅದು ಸಂಜೆ. ಸೀತಾಲಕ್ಷ್ಮಿ ಹಿತ್ತಲಿನ ಮಲ್ಲಿಗೆ ಬಳ್ಳಿಯ ಬಳಿ ಬಿಸಿಲು ಕಾಯಿಸಿಕೊಳ್ಳುತ್ತ ಕುಳಿತಿದ್ದಳು. ಇತ್ತೀಚೆಗೆ ಅದೇ ಅವಳ ದಿನಚರಿಯಾಗಿತ್ತು. ತೋಟಕ್ಕೆ ಹೋಗಿದ್ದ ನರಸಿಂಹ ಒಂದು ಹೊರೆ ಸೋಗೆಯನ್ನು ಹೊತ್ತುಕೊಂಡು ಬಂದು ಕೊಟ್ಟಿಗೆಯಲ್ಲಿ ಹಾಕಿ ಉಸ್ಸಪ್ಪ ಎಂದು ಕುಳಿತನು. ಹಿತ್ತಲಿನ, ದೂರದ ಮತ್ತೊಂದು ತುದಿಯಲ್ಲಿ ಸೀತಾಲಕ್ಷ್ಮಿ ಕುಳಿತುದು ಕಾಣುತ್ತಿದ್ದಿತು. ಜಲಜಾಕ್ಷಿ. ನರಸಿಂಹನ ಎದುರಿಗೆ ಬಂದು ಸ್ವಲ್ಪ ದೂರದಲ್ಲಿ ಕುಳಿತಳು. ಅವರಾಡುವ ಮಾತುಗಳು ಕಿವಿಗೆ ಬೀಳದಷ್ಟು ದೂರದಲ್ಲಿದ್ದಳು ಸೀತಾಲಕ್ಷ್ಮಿ. ಜಲಜಾಕ್ಷಿ ಮೃದುವಾಗಿ "ಈಗ ಏನು ಮಾಡೋಣ?" ಎಂದಳು. ನರಸಿಂಹನು ಏನೂ ಅರಿಯದವನಂತೆ "ಯಾವುದಕ್ಕೆ" ಎಂದನು. ಜಲಜಾಕ್ಷಿಗೆ ಸಹಿಸಲಸಾಧ್ಯವಾದ ಕೋಪ ಬಂತು. "ಯಾವುದಕ್ಕೆ ಅನ್ನುತ್ತಾರೆ? ಇನ್ನೇನು ಇರುವುದು" ಎಂದುಕೊಂಡು "ಯಾವುದಕ್ಕೆ? ನೀವು ಮಾಡಿ ಕೂರಿಸಿರುವ ರಾಧಾಂತಕ್ಕೆ" ಎಂದಳು. ಆದರೂ ನರಸಿಂಹನಿಗೆ ಹೊಳೆಯಲೇ ಇಲ್ಲ. ದೇವರು ಅವನನ್ನು ಸೃಷ್ಟಿ ಮಾಡುವಾಗ ಅವನಿಗೆ ಬುದ್ಧಿಯನ್ನೇ ಮರೆತಿದ್ದ. ಅವನು ಇನ್ನೂ ಮಂಕ ನಾಗಿಯೇ ಹೆಂಡತಿಯ ಕಡೆ ನೋಡಿದ. ಜಲಜಾಕ್ಷಿ ಕೋಪದಿಂದ ದೂರದಲ್ಲಿ ಕುಳಿತಿದ್ದ ಸೀತಾಲಕ್ಷ್ಮಿಯ ಕಡೆಗೆ ಕೈ ತೋರಿಸಿ "ಅಲ್ಲಿ ಮಾಡಿಕೂರಿಸಿದ್ದೀರೆಲ್ಲ ಆ ಸಂಭ್ರಮಕ್ಕೆ" ಎಂದಳು. ನಿಧಾನವಾಗಿ ವಿಷಯ ಹೊಳೆದು ನರಸಿಂಹನ ಕಣ್ಣುಗಳಲ್ಲಿ ಬೆಳಕು ಬಂದಂತಾಯಿತು. ಆತ ಉಗುಳು ನುಂಗುತ್ತಾ "ಆಂ, ಆಂ, ಹೂ, ಏನು ಮಾಡೋಣ" ಎಂದನು. ಜಲಜಾಕ್ಷಿ ಇನ್ನಷ್ಟು ಕೋಪ ದಿಂದ "ಅವಳನ್ನು ನೋಡಿದರೆ ನಿಮಗೆ ಕಾಣುವುದಿಲ್ಲವೆ? ಇನ್ನು ಹೆಚ್ಚು ಕಾಲ ತಡೆಯುವುದಿಲ್ಲ. ಈಗಲೇ ಸರಿಯಾದ ಏರ್ಪಾಡು ಮಾಡಬೇಕು" ಎಂದಳು. ನರಸಿಂಹನು "ಕರೆದುಕೊಂಡು ಹೋಗಿ ಮಲ್ಲಿಗೆಹಳ್ಳಿಗೆ ಬಿಟ್ಟು ಬರಲೇ" ಎಂದು ಕೇಳಿದನು. ಜಲಜಾಕ್ಷಿ "ನೀವು ಬಿಟ್ಟು ಬರುತ್ತೀರಿ. ಆದರೆ ಕರೆದುಕೊಳ್ಳುವವರು ಅಲ್ಲಿ ಯಾರು ಇಲ್ಲ" ಎಂದಳು. ನರಸಿಂಹನು

"ಹಾಗಾದರೆ ಎಲ್ಲಿಗೆ ಕರೆದುಕೊಂಡು ಹೋಗಲಿ ?" ಎಂದನು. ಜಲಜಾಕ್ಷಿ "ನನ್ನನ್ನು ಕೇಳಿದರೆ ನಾನೇನು ಹೇಳಲಿ ? ಯಾವುದಾದರೂ ಆಸ್ಪತ್ರೆಗಾದರೂ ಸೇರಿಸಿಬಿಟ್ಟು ಬನ್ನಿ" ಎಂದಳು. ನರಸಿಂಹನಿಗೆ ಆ ಮಾತೇ ಈಜುಬರದವನನ್ನು ನೀರಿನಲ್ಲಿ ಕೆಡವಿದಂತಾಯಿತು. ಅವನು ಯಾವಾಗಲೂ ಆಸ್ಪತ್ರೆಗೆ ಹೋದವನೇ ಅಲ್ಲ. ಆ ಡಾಕ್ಟರುಗಳನ್ನು ಕಂಡರೇ ಅವನಿಗೆ ಹೆದರಿಕೆಯಾಗುತ್ತಿದ್ದಿತು. ಅವರ ಠೀವಿ ಜೋರು ಆ ದಾದಿಯರ ಥಳಕು, ಜರಬು, ನರಸಿಂಹನಿಗೆ ಅವರೇ ಒಂದು ಬೇರೆ ಜಗತ್ತಿನವರಾಗಿ ತೋರುತ್ತಿದ್ದರು. ಮತ್ತು ಆಸ್ಪತ್ರೆಗೆ ಹೋದವರಾರೂ ಜೀವದೊಂದಿಗೆ ಹಿಂದಿರುಗುವುದಿಲ್ಲವೆಂದೂ ಅವರು ಹಾಗೆ ಸಾಯಲು ಡಾಕ್ಟರುಗಳ ಯಮಚಿಕಿತ್ಸೆಯೇ ಕಾರಣವೆಂದೂ ಹಳ್ಳಿಯವರು ಹೇಳುತ್ತಿದ್ದ ಮಾತಿನಲ್ಲಿ, ನರಸಿಂಹನಿಗೂ ಮೂಢನಂಬಿಕೆ ಇತ್ತು. ಆ ರಾಕ್ಷಸರ ಕೈಗೆ ಸೀತಾಲಕ್ಷ್ಮಿಯನ್ನು ಒಪ್ಪಿಸಲು ಅವನಿಗೆ ಮನಸ್ಸೇ ಬರಲಿಲ್ಲ. ಅವನಿಗೆ ಆಸ್ಪತ್ರೆಯ ಭಯ ಎಷ್ಟಿದ್ದಿತೆಂದರೆ, ತನ್ನ ನಡತೆಯ ಫಲವಾಗಿ ಸೀತಾಲಕ್ಷ್ಮಿ ಆಸ್ಪತ್ರೆಗೆ ಹೋಗಬೇಕಾಗಿ ಬರಬಹುದೆಂದು ಅವನಿಗೆ ಹಿಂದೆ ತಿಳಿದಿದ್ದರೆ, ಅವನು ತನ್ನ ನಡತೆಯನ್ನೇ ಬದಲಾಯಿಸಿಕೊಂಡುಬಿಡುತ್ತಿದ್ದನೇನೋ!

ನರಸಿಂಹನು ಒಂದು ಗಳಿಗೆ ಯೋಚಿಸಿದನು. ಅವನು ಯೋಚಿಸುವುದೇ ಅಪರೂಪವಾಗಿದ್ದುದರಿಂದಲೂ ಅವನಿಗೆ ಯೋಚನಾಶಕ್ತಿಯೇ ಇಲ್ಲವೆಂದು ಜಲಜಾಕ್ಷಿ ಭಾವಿಸಿದ್ದುದರಿಂದಲೂ ಆಕೆಯ ಕೋಪ ಇನ್ನೂ ಹೆಚ್ಚಿತು. ತನಗೆ ಸರಿಯಾದ ಪ್ರತ್ಯುತ್ತರವನ್ನು ಕೊಡಲಾರದುದಕ್ಕೇ ಆತ ಹೀಗೆ ಯೋಚನೆ ನಟಿಸುವನೆಂದೂ ಅವಳು ಭಾವಿಸಿದಳು. ವಾಸ್ತವವಾಗಿ ನರಸಿಂಹನ ಮನಸ್ಸು ಇದ್ದಕ್ಕಿದ್ದಂತೆ ಬಹಳ ತಿಳಿಯಾಗಿತ್ತು. ತನ್ನ ಮನಸ್ಸು ಅಷ್ಟು ತಿಳಿಯಾಗಿರುವುದು ಗೊತ್ತಿದ್ದರೆ ಅವನಿಗೇ ಆಶ್ಚರ್ಯವಾಗುತ್ತಿತ್ತು. ಹುಡುಗ ತನ್ನ ಸ್ಲೇಟನ್ನು ಮನಸ್ಸಿಗೆ ಬಂದಂತೆ ಬಳಪದಿಂದ ಗೀಚುವಂತೆ ಅವನ ಮನಸ್ಸಿನ ಮೇಲೆ ಆಲೋಚನಾ ತರಂಗಗಳ ಗೀಚಾಟ ನಡೆದಿರಲಿಲ್ಲ. ಆದುದರಿಂದ ಅದು ಸ್ವಚ್ಛವಾಗಿತ್ತು. ಅದೇ ಅವನ ಶಕ್ತಿಯೂ ದೌರ್ಬಲ್ಯವೂ ಆಗಿತ್ತು. ನರಸಿಂಹನು "ಇಲ್ಲಿಯೇ ಯಾಕೆ ಆಗಬಾರದು!" ಎಂದನು. ಅವನ ಮಾತು ಜಲಜಾಕ್ಷಿಗೆ ಅರ್ಥವಾದರೂ ಆ ಅರ್ಥವನ್ನು ಒಪ್ಪಲು ಅವಳು ಸಿದ್ಧಳಾಗಿರ

ಲಿಲ್ಲವಾಗಿ "ಇಲ್ಲಿಯೇ ಏನಾಗಬಾರದು?" ಎಂದು ಕೇಳಿದಳು. ನರಸಿಂಹನು "ಮತ್ತೇನು? ಸೀತಾಲಕ್ಷ್ಮಿಯ ಪ್ರಸವ" ಎಂದನು. ಜಲಜಾಕ್ಷಿಯು "ಚೆನ್ನಾಗಿದೆ. ನೀವು ಇದೆಲ್ಲ ರಾದ್ಧಾಂತ ಮಾಡಿದುದೂ ಅಲ್ಲದೆ ಇನ್ನು ಲೋಕಕ್ಕೆಲ್ಲ ಅದನ್ನು ಟಾಮ್ ಟಾಮ್ ಮಾಡಬೇಕು" ಎಂದಳು. ನರಸಿಂಹನು "ಇದು ಹಳ್ಳಿಯ ಕೊಂಪೆ. ಬರೋರೂ ಇಲ್ಲ. ಹೋಗೋರೂ ಇಲ್ಲ. ಯಾರು ಏನು ಅಂತ ನಮ್ಮನ್ನ ಮಾತನಾಡಿಸೋರೂ ಇಲ್ಲ. ಅಲ್ಲದೆ ಈ ಊರಲ್ಲಿ ನಮ್ಮ ಜನ ಯಾರೂ ಇಲ್ಲವೂ ಇಲ್ಲ. ಯಾವ ಆಸ್ಪತ್ರೆಗೆ ಹೋಗೋದಕ್ಕಿಂತಲೂ ಇಲ್ಲಿಯೇ ಗುಟ್ಟಾಗಿ ಮಾಡಿಬಿಡಬಹುದು" ಎಂದನು. ಜಲಜಾಕ್ಷಿಯು "ಹೌದು ಬಾಣಂತನ ಮಾಡೋರಾರು" ಎಂದಳು. ನರಸಿಂಹನು ಸ್ವಾಭಾವಿಕವಾಗಿ "ನೀನು" ಎಂದನು. ಒಂದು ಗಳಿಗೆ ಬಿಟ್ಟು "ನೀನು ನಾನು" ಎಂದನು. ನಾನು ಎಂದುದನ್ನು ಕೇಳಿ ಜಲಜಾಕ್ಷಿಗೆ ಬಹಳ ಕೋಪ ಬಂತು. "ನೀವು" ಹೌದು. ನೀವು ಮಾಡುವುದನ್ನು ಆಗಲೇ ಮಾಡಿ ಆಗಿದೆಯಲ್ಲ!" ಎಂಬ ಮಾತು ಅವಳ ಬಾಯಲ್ಲಿ ಬಂತು. ಆದರೆ, ಅದು ಸ್ತ್ರೀಯ ಬಾಯಿಂದ ಹೊರಡುವುದು ಅನುಚಿತವಾದ್ದೆಂದು ಅವಳು ಕಷ್ಟದಿಂದ ಅದನ್ನು ತುಟಿಯಿಂದ ಹೊರಕ್ಕೆ ಬಿಡದೆ ಅಮುಕಿ ಹಿಡಿದಳು. "ಬಸುರಿಯಾಗೋರ್ಗೆಲ್ಲ ಬಾಣಂತನ ಮಾಡೋಕಲ್ಲ ನಾನಿಲ್ಲಿರೋದು" ಎಂದಳು. ನರಸಿಂಹನು "ಅವಳು ನಿನ್ನ ಬಾಣಂತನ ಮಾಡಲಿಲ್ಲವೆ? ನೀನು ಯಾಕೆ ಅವಳಿಗೆ ಮಾಡೋಕಾಗದು?" ಎಂದನು. ಜಲಜಾಕ್ಷಿಯು "ಅವಳು ಮಾಡಿದ್ದು ಸಾಕು. ಅವಳು ಮಾಡೋಕೆ ಬರೊಹೊತ್ಗೆ ಹೀಗೆಲ್ಲ ರಂಪವಾದ್ದು" ಎಂದಳು. ನರಸಿಂಹನು "ಅವಳೂ ನಿನ್ನ ತಂಗಿ ತಾನೆ" ಎಂದನು. ಜಲಜಾಕ್ಷಿ ಕೋಪದಿಂದ "ಆ ಮಾಟಗಾತಿ ತಂಗಿಯೇ? ಬಿನ್ನಾಣಗಿತ್ತಿ. ಅಬ್ಬ ನಿಮ್ಮ ಭಯಕ್ಕೆ ಸುಮ್ಮನಿದ್ದೇನೆ. ಇಲ್ಲದಿದ್ದಿದ್ದರೆ ವಿಷ ಹಾಕಿ ಅವಳನ್ನು ಕೊಂದು ಈ ವೇಳೆಗೆ ಎಷ್ಟೋ ದಿನಗಳಾಗಿರುತ್ತಿದ್ದಿತು" ಎಂದಳು.

ಆಗಿನ ಅವಳ ಮುಖಭಾವವನ್ನೂ ರೌದ್ರಾಕಾರವನ್ನೂ ನೋಡಿ ನರಸಿಂಹನಿಗೆ ಸಹ ನಿಜವಾಗಿ ಗಾಬರಿಯಾಯಿತು. ಜಲಜಾಕ್ಷಿ ಕೋಪದಿಂದ ಹೆಡೆ ತುಳಿಸಿಕೊಂಡ ನಾಗರಹಾವಿನಂತೆ ಬುಸುಗುಟ್ಟುತ್ತಿದ್ದಳು. ನರಸಿಂಹನಂತಹ, ಸೂಕ್ಷ್ಮಭಾವಗಳ ಪರಿಶೀಲನೆಯಿಲ್ಲದವನಿಗೂ ಸಹ, ಅವಳ ಮುಖದಲ್ಲಿ

ವಿಕಾರವಾದ ಕ್ರೌರ್ಯ ಭೀಭತ್ಸಗಳು ಕಾಣಿಸಿದವು. ಮತ್ತೊಂದು ಹೆಣ್ಣಿನ ಸಮಾಚಾರದಲ್ಲಿ ತನ್ನ ಹೆಂಡತಿ ಎಂತಹ ಪಿಶಾಚಿಯಾಗಬಹುದೆಂಬುದನ್ನು ಅವನು ಅಲ್ಲಿಂದಮುಂದೆ ಮರೆಯಲಿಲ್ಲ. ಅವನು ತನಗೇ ಅಪರೂಪವಾಗಿದ್ದ ಕನಿಕರಭಾವದಿಂದ ಒಂದು ಸಲ, ದೂರದಲ್ಲಿ ಕುಳಿತಿದ್ದ ಸೀತಾಲಕ್ಷ್ಮಿಯನ್ನು ನೋಡಿದನು. ದೈವವಶದಿಂದ ತನ್ನ ಕೋಪದಲ್ಲಿಯೇ ತಾನು ಏಮುತ್ತಿದ್ದ ಜಲಜಾಕ್ಷಿ ಆ ನೋಟವನ್ನು ನೋಡಲಿಲ್ಲ. ನೋಡಿದ್ದರೆ ಅವಳು ಹಿಂದೆ ಸೀತಾಲಕ್ಷ್ಮಿಗೆ ಮಾಡಬೇಕೆಂದಿದ್ದುದನ್ನು ಮಾಡಲು ಅಂದೂ ಹಿಂಜರಿಯು ತ್ತಿರಲಿಲ್ಲ. ಆ ದಿನ ನರಸಿಂಹನಿಗೆ ಸಹ ಮತ್ತೊಂದು ಹೊಸ ಭಾವ ಹೊಳೆದಿತ್ತು. ಇವಳು ನನಗೂ ಸಹ ವಿಷಹಾಕಲು ಹಿಂಜರಿಯುವುದಿಲ್ಲ" ವೆಂಬುದು. ಈ ಭಾವನೆಯಿಂದ, ತನ್ನದು ತನ್ನ ಸಂಸಾರ ತನ್ನ ಆಸ್ತಿ ಎಂದು ಕೊಂಡಿದ್ದ ಅವನ ಮನಸ್ಸಿನಮೇಲೆ ಒಂದು ವಿಚಿತ್ರ ಪರಿಣಾಮವುಂಟಾಯಿತು. ಆ ಪರಿಣಾಮದ ಮುಖ್ಯ ಅಂಶ ತನ್ನ ಹೆಂಡತಿ ಪಿಶಾಚಿ ಎಂಬುದೇ ಆಗಿತ್ತು. ಅವಳು ಅಸೂಯೆಯಿಂದ ಹಾಗಾಗಿದ್ದಾಳೆ ಎಂಬುದನ್ನು ಅವನು ಮರೆತು "ಇಂತಹ ಹೆಂಗಸು ಏನು ತಾನೇ ಮಾಡುವುದಿಲ್ಲ? ತನ್ನ ಸ್ವಾರ್ಥದ ಮುಂದೆ ಇವಳಿಗೆ ಗಂಡ, ಮಕ್ಕಳು, ಮನೆ, ಮನೆತನ ಯಾವುದೂ ಇಲ್ಲ" ಎಂದು ಕೊಂಡನು. ಹೆಂಡತಿಯ ಆ ನಡತೆ, ಮುಂದೆ ಅವನ ಜೀವಮಾನದಲ್ಲೆಲ್ಲ ಅವನಿಗೆ ಒಂದು ಸಂಸ್ಕಾರ ಮಾಡಿತು. "ನಾನು ನಾನಾಗಿರಕೂಡದು. ನಾನು ಇವಳ ಇಷ್ಟದಂತೆ ಇರಬೇಕು. ಇವಳ ಆಟಕ್ಕೆ ನಾನೊಂದು ತಾಳ. ಇಲ್ಲದಿದ್ದರೆ ನಾನು ಸತ್ತರೂ ಇವಳಿಗೆ ಚಿಂತೆಯಿಲ್ಲ. ಇವಳ ಇಷ್ಟದಂತೆ ನಡೆಯದಿದ್ದರೆ ಮಾತ್ರ ನಾನು ಇದ್ದರೂ ಸತ್ತಂತೆ." ಮುಂದಲ ದಿನಗಳಲ್ಲಿ ನರಸಿಂಹನಿಗೆ ಸಂಸಾರವ್ಯಾಮೋಹ ಹೆಚ್ಚಿದಾಗಲೆಲ್ಲ, ಸಂಸಾರಕ್ಕಾಗಿ ತಾನು ಸ್ವಾರ್ಥಪರನಾಗಿ ಇತರರ ಗಂಟನ್ನು ಸಹ ಅಪಹರಿಸುವ ಬುದ್ಧಿ ಪ್ರಬಲ ವಾದಾಗಲೆಲ್ಲ ಅವನಿಗೆ ತತ್‌ಕ್ಷಣ ಮನೆಯಲ್ಲಿ ಕುಳಿತಿದ್ದ ಆ ಮಾರಮ್ಮನ ಜ್ಞಾಪಕ ಬಂದು "ಛೀ! ಇದಕ್ಕಾಗಿಯೇ ಇದೆಲ್ಲ" ಎಂದು ಉದಾಸೀನದಿಂದ ಸುಮ್ಮನಾಗಿಬಿಡುತ್ತಿದ್ದನು. ಅಲ್ಲಿಂದ ಮುಂದೆ ತನ್ನ ಬಾಳು ಒಂದೇ ಗಳಿಗೆಯಲ್ಲಿ ಹೇಗೆ ಪರಿವರ್ತನೆಹೊಂದಿತು ಎಂಬುದು ನರಸಿಂಹನಿಗೇ ಆಶ್ಚರ್ಯವಾಗಿತ್ತು. ಯಾವ ವಿಶ್ವವಿದ್ಯಾಲಯವೂ ಕೊಡದಿದ್ದ ಸಮಬುದ್ಧಿ,

ಅವನಿಗೆ ಹೆಂಡತಿಯ ನಿಜಸ್ವರೂಪದ ಒಂದು ಗಳಿಗೆಯ ದರ್ಶನದಿಂದ ಉಂಟಾಗಿತ್ತು.

ನರಸಿಂಹನಿಗೆ "ಅವಳ ಹೊಟ್ಟೆಯಲ್ಲಿರುವುದೂ ನನ್ನ ಮಗು ತಾನೆ? ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಾತ್ರಕ್ಕೆ ಅದು ದೇವಲೋಕದ ಶಿಶು, ಸೀತಾಲಕ್ಷ್ಮಿಯ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ ನರಕದ ರಾಕ್ಷಸನಾಗಿ ಬಿಡಲಿಲ್ಲ. ಮುಚ್ಚು ಬಾಯಿ" ಎನ್ನಬೇಕೆನ್ನಿಸಿತು. ಆದರೆ "ಇದು ರಾದ್ಧಾಂತವಾಗುತ್ತೆ. ಇವಳು ಹಾ ಹೂ ಎಂದು ವೇಷ ತಾಳುತ್ತಾಳೆ. ಬಡಿದುಕೊಳ್ಳುತ್ತಾಳೆ. ಹೊಟ್ಟೆ ಚಚ್ಚಿಕೊಳ್ಳುತ್ತಾಳೆ. ನನಗೆ ಕೋಪ ಬಂದರೆ ಮೈಮೇಲೆ ಜ್ಞಾನ ವಿರುವುದಿಲ್ಲ. ಸಿಕ್ಕಿದ್ದರಲ್ಲಿ ಕಣ್ಣು ಮುಖ ನೋಡದೆ ಬಾರಿಸಿಬಿಡುತ್ತೇನೆ. ನಾನು ಸೀತಾಲಕ್ಷ್ಮಿಗೆ ಮಾಡಿದ ಅನ್ಯಾಯದಿಂದಲೂ ನನಗೆ ಜಗತ್ತು ಬೇಸರಿಕೆ ಯಾಗದಷ್ಟು ಇವಳ ಈ ಗೋಳಿನಿಂದ ಆಗಿದೆ. ಈಗ ಇನ್ನು ಹೆಚ್ಚುಹೊತ್ತು ನಾನು ನನ್ನ ಅಸಮಾಧಾನ ತೋರಿಸುತ್ತ ಇಲ್ಲಿ ನಿಂತರೆ ಸೀತಾಲಕ್ಷ್ಮಿಯನ್ನು ಇವಳು ಏನು ಮಾಡುವುದಕ್ಕೂ ಹೇಸುವುದಿಲ್ಲ. ಪಾಪ ಬಡಪಾಯಿ, ಅಕ್ಕ ಅಕ್ಕ ಎಂದುಕೊಂಡು ಇವಳ ಹಿಂದೆ ಮುಂದೆ ತಿರುಗುತ್ತಿದೆ. ಇವಳ ಹೃದಯದಲ್ಲಿ ಉರಿಯುತ್ತಿರುವ ಕಾರ್ಕೋಟಕ ವಿಷ ಅದಕ್ಕೇನು ಗೊತ್ತು?"

ತನ್ನ ಮನಸ್ಸು ಹೀಗೆ ಇದ್ದಕ್ಕಿದ್ದಂತೆ ಆರ್ದ್ರಭಾವನೆ ಹೊಂದಿದ್ದು ನರಸಿಂಹನಿಗೇ ಆಶ್ಚರ್ಯವಾಗಿತ್ತು. ತನ್ನ ಸುಖಕ್ಕೆಲ್ಲ ಭಾಗಿಯಾಗಿ ತನ್ನ ಆಸ್ತಿಗೆಲ್ಲ ಭೋಗಿಯಾಗಿ ತಪ್ಪ ದುಡಿತ ಸ್ವಾರ್ಥ ದುರಾಸೆಗಳಿಗೆಲ್ಲ ಕಾರಣಳಾದ ತನ್ನ ಹೆಂಡತಿ, ತನ್ನ ಸುಖದುಃಖದಲ್ಲಿ ಭಾಗಿಯಾಗಬೇಕಾದ ಹೆಂಡತಿ, ಸುಖದಲ್ಲಿ ಮಾತ್ರ ಭಾಗಿಯಾಗಿ ತನ್ನ ದುಃಖದಲ್ಲಿ ತನ್ನ ಮೇಲಿನ ಜಡ್ಡಿಯಂತೆ ಹೀಗೆ ಕುಳಿತುದನ್ನು ನೋಡಿ ಹಿಂದೆ ವಾಲ್ಮೀಕಿ ವ್ಯಾಧನಿಗೆ ಆಗಿದ್ದಂತೆ ಆಯಿತು ನರಸಿಂಹನಿಗೆ. ಆ ಗಳಿಗೆಯಿಂದ ಮುಂದೆ ತನ್ನ ಹೆಂಡತಿ ಸುಖದುಃಖದಲ್ಲಿ ಸಮಭಾಗಿ ಎಂಬುದನ್ನು ಅವನು ಮರೆತು—ಸುಖ ಬಂದರೆ ಇವಳಿಗೆ ಬೇಕು. ದುಃಖ ಬಂದರೆ ನಾನೊಬ್ಬನೇ—ಎಂದುಕೊಂಡು ಸೀತಾಲಕ್ಷ್ಮಿಯನ್ನು ಕುರಿತ ಮುಂದಲ ಏರ್ಪಾಡಿನ ಯೋಚನೆಯಲ್ಲಿ ತೊಡಗಿದನು. ಅಲ್ಲಿಂದ ಮುಂದೆ ಅವನು ಹೆಂಡತಿಯೊಡನೆ ಈ ವಿಷಯವನ್ನು ಕುರಿತು ಚರ್ಚಿಸಲಿಲ್ಲ. ಅವಳೇ

ಒಂದೆರಡು ಸಲ ಮಾತು ಎತ್ತಿದರೂ ಜವಾಬುಕೊಡದೆ ಸುಮ್ಮನಿದ್ದನು. ಜಲಜಾಕ್ಷಿಗೆ ಗಂಡನ ಈ ಉದಾಸೀನದಿಂದ ಒಂದು ಸಲ ಕೋಪ ಬಂದು "ನನ್ನ ತವರುಮನೆಗೆ ಹೋಗುತ್ತೇನೆ" ಎಂದಳು. ನರಸಿಂಹನು "ನಿನ್ನ ತವರುಮನೆಯವರು ರಾಜಾಧಿರಾಜರು. ಯಾರು ಬೇಡವೆನ್ನುತ್ತಾರೆ. ಹೋಗು. ಹೋದ ಬಾಣಂತನದಲ್ಲಿ ಎರಡು ತಿಂಗಳಾಗುವುದಕ್ಕೆ ಮುಂಚೆಯೇ ನಾನಾ ಕಾರಣದಿಂದ ಇಲ್ಲಿಗೆ ನಿನ್ನನ್ನು ಅಟ್ಟಿದುದು, ನಿನಗೆ ಯಾಕೆ ಜ್ಞಾಪಕವಿರುತ್ತೆ? ಎಂದನು. ಮುಂದೆ ಇನ್ನೊಂದು ವಾರ ಕಳೆದರೂ ನರಸಿಂಹ ಸುಮ್ಮನೆಯೇ ಇದ್ದನು. ನಿಜವಾಗಿಯೂ ಬಾಣಂತನವನ್ನು ಎಲ್ಲಿ, ತಾನೇ ಮಾಡಬೇಕಾಗುವುದೋ ಎಂಬ ಭಯ ಜಲಜಾಕ್ಷಿಯನ್ನು ಕಾಡತೊಡಗಿತು. ಅವಳು "ಈ ನೀತಿಗೆಟ್ಟ ಮನೆಯಲ್ಲಿ ನಾನಿರಲಾರೆ. ಕೆರೆಯಲ್ಲಿ ಬಿದ್ದು ಸಾಯುತ್ತೇನೆ" ಎಂದು ನರಸಿಂಹನ ಎದುರಿಗೆ ಅತ್ತಳು. ನರಸಿಂಹನು ಸಾವಧಾನವಾಗಿ ತೊಲೆಯಮೇಲಿದ್ದ ಒಂದು ಹಗ್ಗವನ್ನು ಕೆಳಕ್ಕೆ ಹಾಕಿ "ಕೆರೆಯಲ್ಲಿ ನೀರಿಲ್ಲ ಈ ಹಗ್ಗದಲ್ಲಿ ನೇಣುಹಾಕಿಕೊ" ಎಂದು ಹೇಳಿ ತೋಟಕ್ಕೆ ಹೊರಟುಹೋದನು. ಸ್ನಾನದ ಕೊಟ್ಟಿಗೆಯಲ್ಲಿ ಒಲೆಯ ಮುಂದೆ ಸೀತಾಲಕ್ಷ್ಮಿ ಬೆಂಕಿ ಕಾಯಿಸಿಕೊಳ್ಳುತ್ತ ಕುಳಿತಿದ್ದಳು. ಜಲಜಾಕ್ಷಿ ಕೋಪದಿಂದ ಆ ಹಗ್ಗವನ್ನು ತಂದು ಅವಳನ್ನು ದುರದುರನೆ ನೋಡುತ್ತ, ಅವಳನ್ನೇ ಒಲೆಗೆ ತುರುಕುವಂತೆ ಹಗ್ಗವನ್ನು ತುರುಕಿ ಸುಟ್ಟು ಭಸ್ಮಮಾಡಿದಳು. ಸೀತಾಲಕ್ಷ್ಮಿಗೆ ಒಂದೂ ಅರ್ಥವಾಗದೆ, ಅವಳು ಮಂಕಾಗಿ ಹಾವನ್ನು ನುಂಗುತ್ತಿರುವ ಕಪ್ಪೆಯನ್ನು ನೋಡುವಂತೆ ಜಲಜಾಕ್ಷಿಯನ್ನೇ ನೋಡುತ್ತಿದ್ದಳು.

## ೬

ಮತ್ತೆರಡು ವಾರ ಕಳೆಯುವದರೊಳಗೆ, ಒಂದು ದಿನ ನರಸಿಂಹನು ಮನೆಯ ಬಾಗಿಲಿನಲ್ಲಿ ಗಾಡಿಕಟ್ಟಿ ಸಿದ್ಧಮಾಡಿದನು. ಗಾಡಿ ಯಾಕೆ ಎಂಬುದು ಸೀತಾಲಕ್ಷ್ಮಿಗೂ ಜಲಜಾಕ್ಷಿಗೂ ಗೊತ್ತಿದ್ದರೂ ಅವರು ಏನೂ ಅರಿಯದವರಂತೆ ಆ ವಿಷಯವನ್ನೇ ಒಬ್ಬರೊಂದಿಗೆ ಒಬ್ಬರು ಪ್ರಸ್ತಾಪಿಸದೆ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದರು. ಗಾಡಿಗೆ ಹುಲ್ಲು ಕಂಬಳಿ ಹಾಕಿ ಸಿದ್ಧಪಡಿಸಿದ ಮೇಲೆ ನರಸಿಂಹ ಒಳಕ್ಕೆ ಬಂದು ಸೀತಾಲಕ್ಷ್ಮಿಗೆ "ನಿನ್ನ ಹಾಸಿಗೆ ಕಟ್ಟಿಡು"

ಎಂದನು. ಸೀತಾಲಕ್ಷ್ಮಿ ಹಾಸಿಗೆಯನ್ನು ಮುದುರಿಟ್ಟಳು. ನರಸಿಂಹ ಅದನ್ನು ಗಾಡಿಗೆ ಹಾಕಿ "ನಡಿ ಗಾಡಿಯಲ್ಲಿ ಕುಳಿತುಕೋ" ಎಂದನು. ಗಾಡಿಯನ್ನು ಹೊಡೆಯುವ ಆಳು ಇರಲಿಲ್ಲ. ನರಸಿಂಹನೇ ಗಾಡಿ ಹೊಡೆಯುವವನಾಗಿದ್ದನು.

ಸೀತಾಲಕ್ಷ್ಮಿ ಬಂದು ಗಾಡಿಯೇರಿದಳು. ನರಸಿಂಹ ಮೂಕಿ ಎತ್ತಿ ಎತ್ತುಗಳನ್ನು ಅದಲಿಸಿ ನೊಗವನ್ನು ಅವುಗಳ ಕತ್ತಿನಮೇಲೆ ಇಟ್ಟನು. ಸೀತಾಲಕ್ಷ್ಮಿ ಮನೆಯ ಬಾಗಿಲಿನ ಕಡೆ ತಿರುಗಿ ನೋಡಿದಳು. ಕದುವಿನ ಹಿಂದಕ್ಕೆ ಸ್ವಲ್ಪ ಮರೆಯಾಗಿ ಜಲಜಾಕ್ಷಿ ಗಾಡಿಯ ಕಡೆ ನೋಡುತ್ತ ನಿಂತಿದ್ದಳು. ಅವಳ ಕಂಕುಳಲ್ಲಿ ಅವಳ ಎಂಟು ತಿಂಗಳ ಮಗು ಗೋಪಾಲ—ಯಾರ ಪ್ರಸವಕ್ಕಾಗಿ ಬಾಣಂತನ ಮಾಡಲು ಸೀತಾಲಕ್ಷ್ಮಿ ಬಂದಿದ್ದಳೋ—ಆ ಮಗು ಇತ್ತು. ಮಗು ನಗುತ್ತಾ, ಗಾಡಿಯಲ್ಲಿ ಕುಳಿತಿದ್ದ ಸೀತಾಲಕ್ಷ್ಮಿಯ ಕಡೆಗೆ ಕೈ ನೀಡುತ್ತಿತ್ತು. ಜಲಜಾಕ್ಷಿಯ ಮುಖದಲ್ಲಿ ಯಾವ ಭಾವನೆಯೂ ಇರಲಿಲ್ಲ. ಆ ಮುಖ ಒಂದು ಮರದ ತುಂಡಿನಂತೆ ಇತ್ತು.

ಗಾಡಿ ನಿಧಾನವಾಗಿ ಹೊರಟಿತು. ಹೊರಡುವಾಗ ಜಲಜಾಕ್ಷಿ ಹೋಗಿ ಬರುತ್ತೀಯ ಎಂದು ಕೇಳಿರಲಿಲ್ಲ. ಹೋಗಿ ಬರುತ್ತೇನೆಂದು ಸೀತಾಲಕ್ಷ್ಮಿ ಹೇಳಿರಲಿಲ್ಲ. ಆ ಬಗೆಯ ಉಪಚಾರದ ಮಾತು ಆಗ್ಗೆ ಪ್ರಯೋಜನವಿರಲಿಲ್ಲ. ಜಲಜಾಕ್ಷಿಯ ಅಭಿಪ್ರಾಯ ಸೀತಾಲಕ್ಷ್ಮಿಗೆ ಗೊತ್ತಾಗಿಹೋಗಿತ್ತು. ಮೊದಲೇ ತನ್ನ ರೂಪ ಅವಳ ಹೊಟ್ಟೆಉರಿ. ಈಚೆಗೆ ಗಂಡನನ್ನು ತನ್ನಿಂದ ಕಸಗೊಂಡಳೆಂದು ಭಾವಿಸಿದ್ದಾಳೆ. ಇನ್ನೆಲ್ಲಿ ಪರಸ್ಪರ ಪ್ರೇಮ ಎಂದು ಅವಳೂ ಉದಾಸೀನಳಾಗಿದ್ದಳು. ಗಾಡಿಯ ಚಕ್ರ ಮುಂದುಮುಂದಕ್ಕೆ ಉರುಳಿದಂತೆ ಅವಳ ಮನಸ್ಸಿನ ಚಕ್ರ ಹಿಂದುಹಿಂದಕ್ಕೆ ಉರುಳುತ್ತಿತ್ತು. ತಾನು ಬರುವಾಗ ಎಂತಹ ಸುಖಸ್ವಪ್ನದ ಕನಸನ್ನು ಕಾಣುತ್ತ ಬಂದಿದ್ದಳು. ಆಗ ಬಂದಿದ್ದವಳು ಜೀವಂತಳಾದ ಸೀತಾಲಕ್ಷ್ಮಿ, ಇವಳೋ ಬದುಕಿದ್ದರೂ ಸತ್ತ ಹೆಣ್ಣು. ಆಗ ಅವಳು ಆಗತಾನೆ ಕುಡಿಯೊಡೆದು ಗಾಳಿಯಲ್ಲಿ ನಲಿಯುತ್ತಿರುವ ಕೋಮಲ ಚಿಗುರಿನಂತೆ ಪ್ರೇಮ ಉತ್ಸಾಹ ಆನಂದದಿಂದಲೇ ಬಳುಕಾಡುತ್ತಿದ್ದಳು. ಇಂದು ಅವಳಿಗೆ ಇನ್ನೂ ಹತ್ತೊಂಬತ್ತು ವಯಸ್ಸು ಪೂರ್ಣವಾಗಿಲ್ಲದಿದ್ದರೂ ಆಕೆಯ ಬಾಳು ಸಂಧ್ಯಾಕಾಲವನ್ನು ಮುಟ್ಟಿ, ಹಣ್ಣು ಕೆಳಗೆ ಬೀಳುವಂತಾಗಿದೆ.

ಅಂದು ಅವಳು ಗಿರಿಯ ಝುರಿ ತನ್ನ ಪ್ರಾರಂಭ ದೆಸೆಯಲ್ಲಿ ನೀರು ಸ್ವಲ್ಪವಾದರೂ ಬಂಡೆಯಿಂದ ಬಂಡೆಗೆ ಹಾರುತ್ತ ಅಲ್ಲಿ ಬಿದ್ದು ಇಲ್ಲಿ ಎದ್ದು ಮುಂದೆ ವಿಶಾಲವಾಗಿ ತುಂಬುನೀರಿನಿಂದ ಹರಿಯುವಂತೆ ಆಸೆಯಿಟ್ಟುಕೊಂಡಿದ್ದಳು. ಇಲ್ಲಿ ಈಗ ನೋಡಿದರೆ ಅವಳ ಬಾಳು ಕೊಳಚೆನೀರು ಆಗಿದೆ. ಆಗತಾನೆ ಮದುವೆಯಾಗಿ ದ್ದವಳು ಪ್ರೇಮದ ಗುಂಗಿನಲ್ಲಿಯೇ ಇದ್ದು, ಅಕ್ಕನ ಸೇವೆ ಮಾಡಬೇಕೆಂಬ ಸೇವಾಬುದ್ಧಿಯಿಂದ ಮತ್ತಷ್ಟು ಸುಂದರಿಯಾಗಿ ತೋರುತ್ತಿದ್ದಳು. ಅಂದು ಜಗತ್ತೆ ಅವಳ ಮುಂದೆ," ಬಾ ಇಲ್ಲಿ ಬಾಳು ನಲಿದಾಡು ಚಿಗುರು ಮಿಡಿಯಿಸು, ಹೂವು ಅರಳಿಸು ಕಾಯಿ ಬಿಡಿಸು " ಎಂದು ಹೇಳುವಂತೆ ತೋರುತ್ತಿತ್ತು. ಇಂದು ಬಾಳು ಬರಿದು. ಜಗತ್ತೇ ಶೂನ್ಯ, ಎಲ್ಲೆಡೆಯೂ ಅಂಧಕಾರ. ಸೀತಾ ಲಕ್ಷ್ಮಿಗೆ " ನಾನು ಜಗತ್ತಿನಲ್ಲಿ ಒಬ್ಬಂಟಿಗಳು, ನನ್ನ ಜತೆಗೆ ಯಾರೂ ಇಲ್ಲ. ಒಬ್ಬಂಟಿಗಳಾಗಿಯೇ ನನ್ನ ಮುಂದಲ ಪೂರ್ಣಬಾಳನ್ನೂ ಬಾಳಬೇಕಲ್ಲ " " ಅಯ್ಯೋ ಇನ್ನೂ ಎಷ್ಟೊಂದು ವರುಷ ಹೀಗೆ ಇರಬೇಕು " ಎಂಬ ಕೊರಗು ಬಂದಿತು. ಅವಳಿಗೆ ತನ್ನ ಮುಂದಲ ಬಾಳು ಎಂದೆಂದೂ ಮುಗಿಯದ ನಸುಕನ್ನೇ ಕಾಣದ ಬಹಳ ದೀರ್ಘವಾದ ಅಂದಕಾರಮಯ ರಾತ್ರಿಯಾಗಿ ತೋರಿತು. ಅವಳು ಹಾಸಿಗೆಯಮೇಲೆ ಮುಖವನ್ನಿಟ್ಟುಕೊಂಡು ನಿರರ್ಗಳ ವಾಗಿ ಒಂದೇ ಸಮನೆ ಅತ್ತಳು. ಕಣ್ಣೀರಿಗೆ ಕೊನೆಯೇ ಇರುವಂತೆ ಅವಳಿಗೆ ತೋರಲಿಲ್ಲ. ಎಷ್ಟು ಅತ್ತರೂ, ಇನ್ನೂ ಒಂದೇ ಸಮನಾಗಿ ನೀರು ಸುರಿ ಯುತ್ತಲೇ ಇತ್ತು. ಅವಳು ಅಳುತ್ತಿರುವುದು ಗೊತ್ತಾದರೂ ನರಸಿಂಹನಿಗೆ ಒಂದು ಮಾತನ್ನೂ ಆಡಲು ಧೈರ್ಯವಿರಲಿಲ್ಲ. ಅವನು ಸುಮ್ಮನೆ ಗಾಡಿಯನ್ನು ಹೊಡೆದುಕೊಂಡು ಹೋಗುತ್ತಿದ್ದನು.

ಗಾಡಿ, ಜಿಲ್ಲೆಯ ಮುಖ್ಯ ಪಟ್ಟಣಕ್ಕೆ ಬಂದಿತು. ನರಸಿಂಹ ಒಂದೆಡೆ ಕೆಳಗೆ ಇಳಿದು ನಿಂತಿದ್ದವನೊಬ್ಬನನ್ನು ಕೇಳಿ ಹೆರಿಗೆಯ ಆಸ್ಪತ್ರೆಯ ದಾರಿ ಯನ್ನು ತಿಳಿದುಕೊಂಡನು. "ಹೆರಿಗೆಯ ಆಸ್ಪತ್ರೆ ಎಂಬುದೇ ಬೇರೆ ಇಲ್ಲ. ಜನರಲ್ ಆಸ್ಪತ್ರೆಯಲ್ಲಿಯೇ ಸ್ತ್ರೀಯರ ಒಂದು ಭಾಗ ಇದೆ. ಹೆರಿಗೆಗಳು ನಡೆಯುವುದು ಅಲ್ಲಿಯೇ ಎಂಬುದು ಗೊತ್ತಾಯಿತು. ನರಸಿಂಹ ಆಸ್ಪತ್ರೆಯ ಬಾಗಿಲಿಗೆ ಗಾಡಿಯನ್ನು ಹೊಡೆದುಕೊಂಡು ಹೋದನು. ಅಲ್ಲಿಂದ ಮುಂದಕ್ಕೆ ಹೋಗಲು ಅವನಿಗೆ ಕಾಲೇ ಬರಲಿಲ್ಲ. ಗಾಡಿಯ ಮೂಕಿಯನ್ನು ಇಳಿಸಿ

ಅವನು ಗಾಡಿಯಲ್ಲಿಯೇ ಕುಳಿತುಬಿಟ್ಟನು. ಹೀಗೆ ಅವನು ಅಲ್ಲಿ ನಾಲ್ಕಾರು ನಿಮಿಷ ಇರುವುದರೊಳಗೆ ಬಾಗಿಲಿನಲ್ಲಿ ನಿಂತಿದ್ದ ಆಸ್ಪತ್ರೆಯ ಆಳು ಅವನ ಬಳಿಗೆ ಬಂದು "ಗಾಡಿ ಈ ದಾರೀಲಿ ಯಾಕೆ ನಿಲ್ಲಿಸಿದಿರಿ? ಒಳಗಿರುವವರನ್ನ ಇಳಿಸಿ ದಾರಿ ಬಿಟ್ಟು ಆಚೆಗೆ ಗಾಡಿ ಹೊಡೆಯಿರಿ" ಎಂದನು. ಸೀತಾಲಕ್ಷ್ಮಿ ಗಾಡಿಯಿಂದ ಇಳಿದು ಆಸ್ಪತ್ರೆಯ ವರಾಂಡದಲ್ಲಿ ಹಾಕಿದ್ದ ಬೆಂಚಿನಮೇಲೆ ತನ್ನ ಹಾಸಿಗೆಯೊಡನೆ ಕುಳಿತಳು. ಬೆಂಚಿನ ಇನ್ನೊಂದು ಕೊನೆಯಲ್ಲಿ ನರಸಿಂಹ ಬಂದು ಕುಳಿತನು.

ಎರಡು ನಿಮಿಷ ಕಳೆಯುವುದರೊಳಗಾಗಿ ಆಸ್ಪತ್ರೆಯ ಮಗ್ಗುಲಿನಲ್ಲಿದ್ದ ತಮ್ಮ ವಾಸಗೃಹದಿಂದ, ದೊಡ್ಡ ಡಾಕ್ಟರು ಬಂದರು. ಅವರು ಮನೆಯ ಒಳಗಿನಿಂದಲೇ ಗಟ್ಟಿಯಾಗಿ ಮಾತನಾಡುತ್ತ ಹೊರಟಿದ್ದರು. ಅವರ ಹಿಂದೆ ಆಸ್ಪತ್ರೆಯ ಗುಮಾಸ್ತನೂ ಮತ್ತೊಬ್ಬ ಡಾಕ್ಟರೂ ಇದ್ದರು. ಅವರು ಒಳ್ಳೆ ಕಟ್ಟುಮಸ್ತಾದ ಪುಷ್ಟರಾದ ಆಳಾಗಿ, ಸೈನ್ಯದ ·ದಂಡನಾಯಕನಾಗಲು ಅರ್ಹ ರಾಗಿದ್ದರು. ಬೆಂಚಿನಮೇಲೆ ಒಂದೆರಡು ನಿಮಿಷ ಕುಳಿತಿರುವುದರೊಳಗೇ, ಹಿಂದುಗಡೆಯ ಸಾಲಿನ ಬೆಂಚಿನಲ್ಲಿದ್ದ ಇತರ ರೋಗಿಗಳು ಮಾತನಾಡಿಕೊಳ್ಳು ತ್ತಿದ್ದುದರಿಂದ, ಡಾಕ್ಟರು ದೊಡ್ಡ ಲಂಚಕೋರರೆಂದೂ ಅಷ್ಟೇನೂ ಬುದ್ಧಿ ವಂತರೂ ಅಲ್ಲವೆಂದೂ, ಆದರೆ ಬುದ್ಧಿ ಕಡಿಮೆಯಾದುದನ್ನು ಜರ್ಬಿನಿಂದಲೇ ಸರಿಪಡಿಸಿಕೊಳ್ಳುತ್ತಿದ್ದರೆಂದೂ, ಇವರು ಒಬ್ಬ ಮಂತ್ರಿಯ ಸಮೀಪದ ಬಂಧು ವಾದುದರಿಂದ ಅವರು ಆಡಿದುದೇ ಆಟವಾಗಿದ್ದಿತೆಂದೂ ತಿಳಿಯಿತು. ಮೊದಲೇ ಗಾಬರಿಗೊಂಡಿದ್ದ ನರಸಿಂಹನಿಗೆ ಅವರ ಜರ್ಬನ್ನು ನೋಡಿ ಇನ್ನಷ್ಟು ಭಯ ವಾಯಿತು. ಹೀಗೆ ಡಾಕ್ಟರು ಕೂಗಾಡುತ್ತಲೇ ಆಸ್ಪತ್ರೆಗೆ ಬಂದರು. ಅವರು ಆಫೀಸಿನ ಮಾರ್ಗದ ವರಾಂಡದ ಬೆಂಚುಗಳಮೇಲೆ ಕುಳಿತಿದ್ದ ರೋಗಿಗಳನ್ನು ನೋಡುತ್ತ, ತಮ್ಮ ಜತೆಯಲ್ಲಿದ್ದ ಡಾಕ್ಟರರಿಗೆ 'ನೋಡಿ ರೋಗಿಗಳು ಬರುತ್ತಲೇ ಇದ್ದಾರೆ. ಔಟ್ ಪೇಶಂಟ್ಸ್‌ಗೆ, ಪ್ರಿಸ್ಕ್ರಿಪ್ಶನ್ ಬರೆದುಕೊಡೊರ್‍ಯಾರು? ಅದಕ್ಕೆ ನಾನೇ ಕುಳಿತರೆ, ವಾರ್ಡುಗಳ ಸುತ್ತ ಹೋಗೋರು ಯಾರು? ಎಲ್ಲಕ್ಕಿಂತ ಹೆಚ್ಚಾಗಿ ಈ ಗುಮಾಸ್ತೆ ಕಾರ್ಯಕ್ಕೆ ಎಷ್ಟುಜನ ಇದ್ದರೂ ಸಾಲದು. ನನ್ನ ಕಾಲವೆಲ್ಲ ಸ್ಟೇಟ್‌ಮೆಂಟ್ ಸ್ಟ್ಯಾಟಿಸ್ಟಿಕ್ಸ್ ಇವುಗಳಿಗೆ ಗಮನಕೊಡುವು ದರಲ್ಲಿಯೇ ಆಗಿಹೋಗುತ್ತಿದೆ. ಐದು ಜನ ಡಾಕ್ಟರು ಇರಬೇಕಾದ ಆಸ್ಪತ್ರೆ

ಯಲ್ಲಿ ಇಬ್ಬರು ಹೇಗೆ ಮ್ಯಾನೇಜ್ ಮಾಡೋದು?' ಎಂದರು. ಅವರು ಹಾಗೇ ರೋಗಿಗಳನ್ನು ನೋಡುತ್ತ ಬರುತ್ತ, ರಸವುಳ್ಳವರೆಂಬು ಹಿಂದೆಯೇ ಅನುಭವಕ್ಕೆ ಬಂದಿದ್ದ ರೋಗಿಗಳನ್ನು ನೋಡಿದಾಗ, ಅವರು ಕೈ ಬೆಚ್ಚಗೆ ಮಾಡಿದ್ದುದು ಜ್ಞಾಪಕವಿದ್ದುದರಿಂದ ಅವರೊಡನೆ ಒಂದು ವಿಧದ ದೇಶಾವರದ ನಗೆಯಾಡುತ್ತಾ, ಉಳಿದವರನ್ನು ಉದಾಸೀನದಿಂದ ನೋಡಿ ತಲೆಯಲ್ಲಾಡಿಸುತ್ತಾ ಮುಂದುವರಿಯುತ್ತಿದ್ದರು. ಅವರ ಹಿಂದೆ ಬರುತ್ತಿದ್ದ ಅವರ ಕೈ ಕೆಳಗಿನ ಡಾಕ್ಟರು "ವೆಂಕಟಪತಿ ಒಳ್ಳೆ ಸರ್ಜನ್ ಸಾರ್. ಯಾಕೆ ರಾಜೀನಾಮೆ ಕೊಟ್ಟು ಹೋದರು" ಎಂದರು. ದೊಡ್ಡ ಡಾಕ್ಟರರು "ಒಳ್ಳೆ ಸರ್ಜನ್ ರೇನು ಮಣ್ಣು. ವಿದ್ಯಾರ್ಥಿಯಾಗಿದ್ದಾಗ ಬೇಕಾದವರ ಸಹಾಯದಿಂದ ಫಸ್ಟ್ ಬಂದು ಎಲ್ಲ ಮೆಡಲುಗಳನ್ನೂ ತಾನೇ ಹೊಡೆದುಕೊಂಡುಬಿಟ್ಟನು. ಈಚೆಗೆ ಅವನ ಯೋಗ್ಯತೆ ಸರ್ಕಾರಕ್ಕೆ ತಿಳಿಯಿತು. ರಾಜೀನಾಮೆ ಕೊಟ್ಟು ಬಿಟ್ಟ" ಎಂದರು. ಆ ಇನ್ನೊಬ್ಬ ಡಾಕ್ಟರು "ಬುದ್ಧಿವಂತರೆಲ್ಲ ರಾಜೀನಾಮೆ ಕೊಟ್ಟು ಹೊಗ್ತಾ ಇದ್ದಾರೆ. ಡಾಕ್ಟರ್ ನಾಗಭೂಷಣ ಹೋದ. ಡಾಕ್ಟರ್ ಗುರುಮೂರ್ತಿ ಹೋದ. ಡಾಕ್ಟರ್ ವೆಂಕಟಾಚಲ ಹೋದ—" ದೊಡ್ಡ ಡಾಕ್ಟರು ಅವನನ್ನು ಮುಂದೆ ಮಾತನಾಡಗೊಡದೆ "ಹೋಗೋರೆಲ್ಲ ಹೋಗಬಹುದು. ನಮ್ಮ ಜನರಿಗೆ ಔಷಧಿ ಕೊಡೋದಕ್ಕೆ ನಮಗಿರುವ ವೈದ್ಯರೇ ಸಾಕು" ಎಂದರು. ಅವರಿಗೆ ಅಸಮಾಧಾನವಾಗಿ ಸರಸರನೆ ಇಂಗ್ಲಿಷಿನಲ್ಲಿ ಮಾತನಾಡುತ್ತ ಆಫೀಸಿಗೆ ಹೋಗಿ ಕುಳಿತುಬಿಟ್ಟರು. ತಮ್ಮ ಕೈ ಕೆಳಗಿನ ಡಾಕ್ಟರರ ಮಾತಿನಿಂದ ಅವರಿಗೆ ಅಸಮಾಧಾನವಾಗಿದ್ದುದ್ದು ನಿಜ. ಒಂದು ವರುಷಕ್ಕೆ ಮುಂಚೆ ಡಾಕ್ಟರ್ ವೆಂಕಟಪತಿ ಅದೇ ಆಸ್ಪತ್ರೆಯಲ್ಲಿ ಸರ್ಜನ್ ರಾಗಿದ್ದರು. ಆದರೆ, ತಮಗಿಂತ ದಡ್ಡರಾದ ಇಂದಿನ ಈ ದೊಡ್ಡ ಡಾಕ್ಟರನ್ನು ಸರ್ಕಾರ ಇತರ ಕಾರಣಕ್ಕಾಗಿ ತಮ್ಮ ಮೇಲೆ ತಂದು ಕೂರಿಸಿದುದರಿಂದ ಅವರು ಅಸಮಾಧಾನದಿಂದ ರಾಜೀನಾಮೆ ಕೊಟ್ಟು ಹೊರಟುಹೋಗಿದ್ದರು. ಅವರು ಹೋದನಂತರ "ಬುದ್ಧಿವಂತರೆಲ್ಲ ಒಬ್ಬೊಬ್ಬರಾಗಿ ಬಿಟ್ಟು ಹೋಗುತ್ತಿದ್ದಾರೆ" ಎಂಬ ಮಾತು ಪದೇ ಪದೇ ಕಿವಿಗೆ ಬಿದ್ದು ದೊಡ್ಡ ಡಾಕ್ಟರಿಗೆ ಸಿಟ್ಟು ಬರತೊಡಗಿತ್ತು. ಅದರಿಂದ ಅವರ ಯಾವ ಕಾರ್ಯವೂ ಸರಿಯಾಗಿ ನಡೆಯುತ್ತಿರಲಿಲ್ಲ.

ಸೀತಾಲಕ್ಷ್ಮಿಯ ದುರದೃಷ್ಟವೇ ಇರಬೇಕು. ಆಕೆ ಆಸ್ಪತ್ರೆಗೆ ಬಂದು ಸೇರಿದಾಗ ಇದ್ದ ದುಸ್ಥಿತಿಯಲ್ಲಿ, ನಮ್ಮ ದೇಶದ ವೈದ್ಯಶಾಲೆಗಳು ಮತ್ತಾವಾಗಲೂ ಇರಲಿಲ್ಲ. ಬಹುಕಾಲದಿಂದ ಉತ್ತಮ ವೈದ್ಯರಿಂದಲೂ ಒಳ್ಳೆಯ ಆಡಳಿತ ವ್ಯವಸ್ಥೆಯಿಂದಲೂ ವೈದ್ಯೋಪಕರಣ ಸಲಕರಣೆಯಿಂದಲೂ ಪ್ರಸಿದ್ಧವಾಗಿ, ದೇಶದೇಶದ ರೋಗಿಗಳನ್ನು ಆಕರ್ಶಿಸುತ್ತಿದ್ದ ನಮ್ಮ ದೇಶದ ವೈದ್ಯಶಾಲೆಗಳು ಜೀವವಿಲ್ಲದ ದೇಹದಂತಾಗಿದ್ದುವು. ಒಂದೆಡೆ ಯುದ್ಧಕಾರಣದಿಂದ ಉತ್ತಮರಾದ ವೈದ್ಯರೆಲ್ಲ ಯುದ್ಧಕ್ಕೆ ಹೋಗಿದ್ದವರು ಹಿಂದಿರುಗಿದ ನಂತರ ತಾವು ತಾವೇ ಸ್ವತಂತ್ರ ವೈದ್ಯವೃತ್ತಿಯಲ್ಲಿ ತೊಡಗಿದರು. ಅದೇ ಕಾರಣದಿಂದಲೇ ಔಷಧಗಳೂ ಉಪಕರಣಗಳೂ ದೊರೆಯುವುದು ಕಡಿಮೆಯಾಯಿತು. ಜತೆಗೆ ರಾಜಕೀಯ ಕಾರಣಗಳಿಗಾಗಿಯೂ, ಪ್ರಜಾಪ್ರಭುತ್ವದ ತತ್ವಕ್ಕನುಸಾರವಾಗಿಯೂ ಬೆಳೆಯತೊಡಗಿದ ಆಡಳಿತ ವ್ಯವಸ್ಥೆಯಲ್ಲಿ ವ್ಯಕ್ತಿಯ ಬೆಳವಣಿಗೆಗೆ ಅವಕಾಶ ಕಡಿಮೆಯಾಗಿ ವ್ಯಕ್ತಿಗಳ ಬುದ್ಧಿಶಕ್ತಿಗೂ ಬೆಲೆ ಹೋಯಿತು. ಪ್ರಜಾಪ್ರಭುತ್ವ ತತ್ವಗಳು ಜನಸಾಮಾನ್ಯರನ್ನು ಬುದ್ಧಿವಂತರ, ಧೀರರ ಮಟ್ಟಕ್ಕೆ ಏರಿಸುವುದರ ಬದಲು ಆ ಬುದ್ಧಿವಂತರನ್ನೇ ಜನಸಾಮಾನ್ಯರ ಮಟ್ಟಕ್ಕೆ ಇಳಿಸಿ ಅವರನ್ನು ಕೊಂದವು. ರಾಜಕೀಯ ಕಾರಣಕ್ಕಾಗಿ ಅಧಿಕಾರಿಗಳು ಒಬ್ಬರನ್ನು ಮೇಲೆತ್ತಿ, ಒಬ್ಬರನ್ನು ಕೆಳಕ್ಕೆ ಹಾಕಿ ತಮ್ಮ ಅಧಿಕಾರದ ದುರುಪಯೋಗಪಡಿಸಿಕೊಳ್ಳುತ್ತಿರುವಾಗ, ಮೊದಲು ಬಲಿಯಾಗುತ್ತಿದ್ದವರು ಬುದ್ಧಿವಂತರೂ ಮೇಧಾವಿಗಳೂ. ಈ ಎಲ್ಲ ಕಾರಣಗಳಿಂದ ಜಿಲ್ಲ ಮುಖ್ಯಪಟ್ಟಣದ ಆ ಆಸ್ಪತ್ರೆ, ಕರುಣೆ ಸೇವೆ ಸಹಾನುಭೂತಿ ಆದರಗಳ ದೇವೀಗೃಹವಾಗುವುದರ ಬದಲು ಬರಿಯ ಒಂದು ದನಗಳ ದೊಡ್ಡಿಯಾಗಿತ್ತು. ರೋಗಿಗಳೂ ಎಷ್ಟು ಹೊತ್ತು ಕುಳಿತಿದ್ದರೂ ಅವರನ್ನು ಕೇಳುವವರೇ ಯಾರೂ ಇರಲಿಲ್ಲ. ದೊಡ್ಡ ಡಾಕ್ಟರೂ, ಚಿಕ್ಕ ಡಾಕ್ಟರೂ, ಆಫೀಸು ರೂಮಿನ ಒಳಗೆ ಹೋಗಿ ಕುರ್ಚಿಯಮೇಲೆ ಕುಳಿತುಬಿಟ್ಟರು. ದೊಡ್ಡ ಡಾಕ್ಟರು ಆಸ್ಪತ್ರೆಗೆಲ್ಲ ಕೇಳುವಂತೆ ಗಟ್ಟಿಯಾಗಿ ಮಾತನಾಡುತ್ತಲೇ ಇದ್ದರು. ಗುಮಾಸ್ತರು ಬೆಚ್ಚಿಬಿದ್ದ, ಹೆದರಿದ ಪ್ರಾಣಿಗಳಂತೆ ಕೈಯಲ್ಲಿ ಗಾಳಿಯ ಪಟದಂತಹ ದೊಡ್ಡದೊಡ್ಡ ಕಾಗದಗಳನ್ನು ಹಿಡಿದುಕೊಂಡು ವೈದ್ಯರ ಕೊಠಡಿಗೂ, ತಮ್ಮ ಕೊಠಡಿಗೂ ಓಡಾಡುತ್ತಿದ್ದರು. ಔಷಧಿಗಾಗಿ ಬಂದು ಕುಳಿತಿದ್ದ ಕೆಲವು ರೋಗಿಗಳು ತಮ್ಮನ್ನು ಯಾರೂ

ವಿಚಾರಿಸುದುವನ್ನು ಕಂಡು ಒಳಗೆ ಎಲ್ಲಿಯಾದರೂ ವೈದ್ಯರು ಇದ್ದಾರೆಯೋ ಎಂದು ಹೋಗಿ ಆಸ್ಪತ್ರೆ ವಾರ್ಡ್‌ನಲ್ಲೆಲ್ಲ ತಿರುಗಿಕೊಂಡು ಬಂದರು. ಎಲ್ಲಿಯೂ ಅವರನ್ನು ಮಾತನಾಡಿಸುವವರು ಯಾರೂ ಇರದುದರಿಂದ ಸ್ವಲ್ಪ ಹೊತ್ತಾದ ನಂತರ ಮನೆಗಳಿಗೆ ಹೊರಟುಹೋದರು. ಉಳಿದವರಲ್ಲಿ ಒಬ್ಬಿಬ್ಬರು ಧೈರ್ಯ ಶಾಲಿಗಳು ಬೋನಿನಲ್ಲಿ ಹುಲಿಯನ್ನೆದುರಿಸುವಂತೆ ದೊಡ್ಡ ಡಾಕ್ಟರ ಕೊಠಡಿಯ ಬಾಗಿಲು ಹಾಕಿದ್ದರೂ, ನೂಕಿಕೊಂಡು ಒಳಕ್ಕೆ ಹೋಗಿ ತಾವು ಬಂದ ಉದ್ದೇಶವನ್ನು ಹೇಳಿದರು. ಅವರ ಪೈಕಿ ಒಬ್ಬರು ಇನ್ಶೂರೆನ್ಸ್‌ಗಾಗಿಯೂ ಮತ್ತೊಬ್ಬರು ಒಂದು ಸರ್ಟಿಫಿಕೇಟುಗಾಗಿಯೂ ಬಂದಿದ್ದುದರಿಂದ ದೊಡ್ಡ ಡಾಕ್ಟರು ಅವರನ್ನು ಒಳಗೇ ತಮ್ಮ ಕೊಠಡಿಯಲ್ಲಿಯೇ ಕುರ್ಚಿಗಳಮೇಲೆ ಕೂರಿಸಿದರು. ಅದನ್ನು ನೋಡಿ ಚಿಕ್ಕ ಡಾಕ್ಟರು ಹೊರಗೆ ವಾರ್ಡುಗಳ ಪರೀಕ್ಷೆಗೆ ಹೊರಟರು. ಒಳಕ್ಕೆ ಹೋಗಿದ್ದವರು ತಮ್ಮ ಕಾರ್ಯಮಾಡಿ ಕೊಂಡು ಕೊಡಬೇಕಾದ ಶುಲ್ಕವನ್ನು ಕೊಟ್ಟು ಹೊರಗೆ ಬಂದರು. ಅದನ್ನು ನೋಡಿ ಇತರ ಅಲ್ಲಿ ಕಾಯುತ್ತಿದ್ದ ರೋಗಿಗಳಲ್ಲಿ ಕೆಲವರಿಗೆ ಅಸಮಾಧಾನವೂ ಮತ್ತೆ ಕೆಲವರಿಗೆ ತಮ್ಮ ಕೆಲಸವೂ ಆದರೆ ಆಗಬಹುದೆಂಬ ಆಸೆಯೂ ಉಂಟಾಯಿತು.

ಒಬ್ಬ ಗೃಹಸ್ಥ ತನ್ನ ಹತ್ತು ಹನ್ನೆರಡು ವರುಷದ ಮಗನನ್ನು ಚಿಕಿತ್ಸೆ ಗಾಗಿ ಕರೆತಂದಿದ್ದನು. ಆ ಹುಡುಗನ ಹಲ್ಲಿಗೆ, ಒಂದು ಗುಂಡುಸೂಜಿ ಸಿಕ್ಕಿ ಕೊಂಡು ಮುರಿದುಹೋಗಿತ್ತು. ಹುಡುಗ ಪದೇಪದೆ ಅದನ್ನು ಚೇಷ್ಟೆಮಾಡಿ ದ್ದುದರಿಂದ ಅವನ ದವಡೆ ಊದಿಕೊಂಡಿತ್ತು. ನೋವನ್ನು ತಾಳಲಾರದೆ ಹುಡುಗ ಪಾಪ, ಅಳುತ್ತಿದ್ದನು. ಅವನು ಅತ್ತಾಗಲೆಲ್ಲ ತಂದೆ ಅವನನ್ನು ಗದ್ದರಿಸುತ್ತಿದ್ದನು. ಸುಮಾರಾಗಿ ಬುದ್ಧಿ ತಿಳಿದ ಹುಡುಗನಾದುದರಿಂದ ತಂದೆ ಗದ್ದರಿಸಿದಾಗಲೆಲ್ಲ ಅವನಿಗೆ ದುಃಖ ಬಂದು ನೋವನ್ನು ತಾಳಲಾರದೆ ಮೌನವಾಗಿ ಅಳುತ್ತಿದ್ದನು. ಬೆಂಚಿಗೆ ಬೆನ್ನನ್ನು ಆನಿಸಿ ಕುಳಿತು ಕುಳಿತು ಅವನಿಗೆ ಸಾಕಾಗಿತ್ತು. ಬೆನ್ನು ಸಹ ನೋಯಲು ಪ್ರಾರಂಭಿಸಿತ್ತು. "ಸದ್ಯ ಈ ವೈದ್ಯ ಚಿಕಿತ್ಸೆಬೇಡ. ಮನೆಗೆ ಹೋಗಿ ಬಿಸಿನೀರಿನಲ್ಲಿ ಬಾಯಿ ಮುಕ್ಕಳಿಸಿ ದರೆ ಸಾಕಾಗಿದೆ. ಹೋಗಿ ಮಲಗಿಕೊಂಡು ಬಿಟ್ಟರೆ ಸಾಕು ಎನ್ನಿಸಿತ್ತು" ಆ ಹುಡುಗನಿಗೆ. ಅವನ ಸಂಕಟವನ್ನು ನೋಡಲಾರದೆ ತಂದೆ ತಾನು ದೊಡ್ಡ

ಡಾಕ್ಟರ ಕೊಠಡಿಗೆ ಅವನೊಂದಿಗೆ ಹೋಗಿ, ಡಾಕ್ಟರಿಗೆ ಸಂಗತಿ ತಿಳಿಸಿದನು. ಇನ್ಶ್ಯೂರೆನ್ಸ್‌ನವರೂ, ಸರ್ಟಿಫಿಕೇಟಿನವರೂ ಮಾತ್ರವೇ ಹಾಗೆ ತಮ್ಮ ಕೊಠಡಿಗೆ ಬರಲು ದೊಡ್ಡ ಡಾಕ್ಟರು ಅವಕಾಶಕೊಟ್ಟಿದ್ದರು. ಇನ್ನು ಕೆಲವು "ಸ್ಪೆಶಲ್" ರೋಗಿಗಳಿಗೂ ಆ ಅವಕಾಶವಿತ್ತು. ಅವರು ತಮ್ಮ ಹಣದ ಪ್ರಭಾವದಿಂದ ಎಲ್ಲಿಯೂ ಕೆಲಸವನ್ನು ಚಲಾಯಿಸಿಕೊಂಡು ಬರುತ್ತಿದ್ದವರು. ಒಳಕ್ಕೆ ಬಂದ ಹುಡುಗನನ್ನೂ ಅವನ ತಂದೆಯನ್ನೂ ನೋಡಿ ಡಾಕ್ಟರು "ಅಲ್ಲಿ ಕುಳಿತಿರಿ. ಇನ್ನೇನು ಟಪಾಲು ನೋಡಿಕೊಂಡು ಬರುತ್ತೇನೆ" ಎಂದರು. ಆ ಹುಡುಗನ ತಂದೆ ದೀನರಾಗಿ "ಬೆಳಗಿನಿಂದ ಒಂದೇ ಸಮನಾಗಿ ಕುಳಿತೇ ಇದ್ದೇನೆ ಸ್ವಾಮಿ. ನಾನು ಒಬ್ಬನೇ ಆಗಿದ್ದರೆ ಎಷ್ಟು ಹೊತ್ತು ಬೇಕಾದರೂ ಕುಳಿತುಕೊಳ್ಳುತ್ತಿದ್ದೆ. ಆದರೆ, ಈ ಹುಡುಗ ನೋವು ಸಹಿಸಲಾರದೆ ಅಳ್ತ ಇದಾನೆ. "ದಯವಿಟ್ಟು ಸ್ವಲ್ಪ ನೋಡಿಬಿಟ್ಟರೆ........" ಎಂದರು. ಡಾಕ್ಟರಿಗೆ ಹೀಗೆ ತಮ್ಮೊಂದಿಗೆ ಚರ್ಚಿಸುವವರನ್ನು ಕಂಡರೆ ಮೈ ಉರಿಯುತ್ತಿತ್ತು. ಅವರಿಗೆ ವಾಸ್ತವವಾಗಿ ವೈದ್ಯಕೀಯ ಕಾರ್ಯಮಾಡಿ ರೋಗಿಗಳನ್ನುಪಚರಿಸು ವುದಕ್ಕಿಂತ ಹೆಚ್ಚಾಗಿ ಆಸ್ಪತ್ರೆಯಲ್ಲಿ ಆಳ್ವಿಕೆ ಮಾಡುವುದೇ ಸೇರುತ್ತಿದ್ದಿತು. ಔಷಧಿಮಾಡಿದರೆ ಅದರಿಂದ ಹೆಚ್ಚು ದೊಡ್ಡಮನುಷ್ಯರ ಪರಿಚಯವಾಗಬೇಕು. ಇಲ್ಲವಾದರೆ ಲಾಭವಾದರೂ ಆಗಬೇಕು. ಈ ಎರಡು ಪಂಗಡದಲ್ಲೂ ಸೇರದ ಬಡರೋಗಿಗಳ ಉಪಚಾರದಲ್ಲಿ ಅವರಿಗೆ ಇಷ್ಟವಿರಲಿಲ್ಲ. ಅವರು ಒಳಕ್ಕೆ ಬಂದ ಹುಡುಗನ ಬಾಯನ್ನು ಆ ಎನ್ನು ಎಂದು ಹೇಳಿ ಬಿಡಿಸಿ ಅಲ್ಲಿ ಸಿಕ್ಕಿ ಕೊಂಡಿದ್ದ ಗುಂಡುಸೂಜಿಯ ಚೂರನ್ನು ಉಗುರಿನಿಂದ ಅಲುಗಾಡಿಸಿದರು. ಮೊದಲೇ ಬಾಯಿಬಿಡುವುದಕ್ಕೇ ಸಾಧ್ಯವಿಲ್ಲದೆ ನೋವಿನಿಂದ ನರಳುತ್ತಿದ್ದ ಹುಡುಗ, ಆ ಗುಂಡುಸೂಜಿಯನ್ನು ಅವರು ಅಲ್ಲಾಡಿಸಿದಕೂಡಲೇ ಉಂಟಾದ ಬಾಧೆಯಿಂದ ಹೋ ಎಂದು ಅತ್ತುಬಿಟ್ಟನು. ಡಾಕ್ಟರರಿಗೆ ಬಹಳ ಕೋಪ ಬಂತು. ಅವರು ಎತ್ತಿ ಆ ಹುಡುಗನ ದವಡೆಗೆ ಒಂದು ಕೊಟ್ಟರು. "ಸರಿಯಾಗಿ ಬಾಯಿ ತೋರಿಸೋದಕ್ಕೆ ಕೂಡ ನಿನಗೆ ಚೇಷ್ಟೆ" ಎಂದು ಗರ್ಜಿಸಿದರು.

ಹುಡುಗನನ್ನು ಡಾಕ್ಟರು ಹೊಡೆದಾಗ ಜಿಗುಪ್ಸೆಯಿಂದ ಉಳಿದವರಿಗೆ ಮೈ ಜುಮ್ಮೆಂದಂತೆ ಸೀತಾಲಕ್ಷ್ಮಿಗೂ ಆಯಿತು. ಆದರೆ ಭೀಭತ್ಸದಲ್ಲಿ ಅವಳು

ಹೆಚ್ಚು ಹೊತ್ತು ಮನವನ್ನು ವಿಹರಿಸುವುದಕ್ಕೆ ಬಿಡುವ ಮುಂಚೆ ಮತ್ತೊಂದು ನಿಜವಾದ ಭಯಂಕರ ಸಂಗತಿ ಒದಗಿತು. ಒಂದು ಕುದುರೆಗಾಡಿಯಲ್ಲಿ ಹದಿನೆಂಟು ವರುಷದ ಹುಡುಗಿಯೊಬ್ಬಳನ್ನು ಕೂರಿಸಿಕೊಂಡು ತಂದೆ ತಾಯಿಗಳಿಬ್ಬರೂ ಆಸ್ಪತ್ರೆಗೆ ಬಂದರು. ಹುಡುಗಿಯ ರೇಸಿಮೆ ಸೀರೆಗೆ ಬೆಂಕಿ ತಗಲಿ ಮೈಯೆಲ್ಲ ಸುಟ್ಟುಹೋಗಿತ್ತು. ಹುಡುಗಿ ನೋವಿನಿಂದ ಪ್ರಾಣವೇ ಹೋಗುತ್ತಿದೆಯೋ ಎಂಬಂತೆ ನರಳುತ್ತ ಸಂಕಟಪಡುತ್ತಿದ್ದಳು. ಆಕೆಯನ್ನು ತಾಯಿ ತಂದೆಗಳು ಗಾಡಿಯಿಂದ ಕೆಳಕ್ಕೆ ಗಾಡಿಯಲ್ಲಿ ಹಾಸಿದ್ದ ಜಮುಖಾನದೊಂದಿಗೇ ಇಳಿಸಿದಾಗ, ಅವಳ ಸ್ಥಿತಿಯನ್ನು ಕಂಡು ಅಲ್ಲಿ ಕುಳಿತಿದ್ದ ಉಳಿದ ರೋಗಿಗಳು ತಮ್ಮ ನೋವನ್ನು ಮರೆತುದಿರಲಿ, ಯಾವ ರೋಗವನ್ನು ನೋಡಿದರೂ ವಿಚಲಿತರೇ ಆಗದಿದ್ದ ಡಾಕ್ಟರಿಗೆ ಸಹ ಎದೆ ನಡುಗಿತು. ಡಾಕ್ಟರು ಕೂಡಲೇ "ಲೇಡಿ ಡಾಕ್ಟರನ್ನು ಕರೆ" ಎಂದು ಸೇವಕನಿಗೆ ಗರ್ಜಿಸಿದರು. ಅವನು ಹೋಗಿ ಅವರನ್ನು ಕರೆದು ಬರುವುದರೊಳಗೆ ಮತ್ತೆ ನಾಲ್ಕಾರು ಸಲ ಗರ್ಜಿಸಿದರು. ಕೊನೆಗೆ ಗಾತ್ರದಲ್ಲಿ ಒಳ್ಳೆ ಸ್ಥೂಲರಾಗಿದ್ದ, ಆ ಸ್ಥೂಲಕಾಯದ ಕಾರಣದಿಂದಲೇ ನಡಿಗೆ ಯಾವಾಗಲೂ ನಿಧಾನವೇ ಆದ ಲೇಡಿ ಡಾಕ್ಟರು ಅಲ್ಲಿಗೆ ಬಂದರು. ಸುಟ್ಟುಕೊಂಡಿದ್ದ ಹುಡುಗಿಯನ್ನು ನೋಡಿ ಡಾಕ್ಟರರೊಂದಿಗೆ "ಇವಳಿಗೆ ಮೈತುಂಬ ಬ್ಯಾಂಡೇಜ್ ಬೇಕು. ಬ್ಯಾಂಡೇಜ್ ಬಟ್ಟೆಯೇ ಇಲ್ಲವಲ್ಲ?" ಎಂದರು. ಡಾಕ್ಟರು "ಬ್ಯಾಂಡೇಜ್ ಇಲ್ಲ ಎಂದರೆ ಹೇಗೆ? ಇದು ಸೀರಿಯಸ್ ಕೇಸ್, ಸಾವಕಾಶಮಾಡಕೂಡದು. ಈಗಲೇ ತಡವಾಯಿತು. ಅವತ್ತು ಒಂದು ದೊಡ್ಡ 'ಪೀಸ್' ಬ್ಯಾಂಡೇಜ್ ಇತ್ತಲ್ಲ. ಏನಾಯಿತು" ಎಂದರು. ಲೇಡಿ ಡಾಕ್ಟರು "ಅದನ್ನೇ ನಿಮ್ಮ ಮನೆಗೆ ಅವತ್ತು ಕಳುಹಿಸಿದೆನಲ್ಲ" ಎಂದರು. ಡಾಕ್ಟರರು "ನಮ್ಮ ಮನೆಗೇ ಹೇಳಿಕಳುಹಿಸಿ ತರಿಸಿ. ಇನ್ನೇನು ಮಾಡುವುದು. ನನ್ನ ಸ್ವಂತ ಸ್ಟಾಕ್‌ನಿಂದಲೇ ಕೊಡಬೇಕಾಗಿದೆ" ಎಂದರು.

ಈ ಅತಿ ತುರ್ತಾದ ಮತ್ತು ಅಪಾಯದ ನೋಯಾಳಿ ಬಂದುದರಿಂದ ಸದ್ಯಕ್ಕೆ ತಮ್ಮನ್ನು ಕೇಳುವವರು ಯಾರೂ ಇಲ್ಲವೆಂದು ಉಳಿದ ರೋಗಿಗಳು ನಿಧಾನವಾಗಿ ಅಲ್ಲಿಂದ ಕದಲಿದರು. ಹೊಸದಾಗಿ ಬಂದ ರೋಗಿಯ ಉಪಚಾರಕ್ಕೆ ಬೇಕಾದ ಯಾವ ಸಾಮಾನೂ, ಔಷಧಿಯೂ ಆಸ್ಪತ್ರೆಯಲ್ಲಿಲ್ಲವೆಂದು ಲೇಡಿ ಡಾಕ್ಟರಿಗೂ, ದೊಡ್ಡ ಡಾಕ್ಟರಿಗೂ ವಾಗ್ವಾದ ಹತ್ತಿತು. ಅವರು ತಮ್ಮ

ವಾಗ್ವಾದದಲ್ಲಿ, ಬಂದಿದ್ದ ಸುಟ್ಟುಕೊಂಡ ರೋಗಿಯನ್ನೇ ಮರೆತರು. ಅವರು ಸ್ಟರಮೇಲೆ ಒಬ್ಬರು ಘಾಟಿ ಸವಾಲುಮಾಡಿ ಪತ್ತೆದಾರಿ ನಡೆಸಿದುದರಿಂದ ಂಸೆಯಲ್ಲಿ ಅವರಿಬ್ಬರ ಮನೆಗಳಲ್ಲಿಯೇ ಯಾವ ಯಾವ ಪದಾರ್ಥಗಳು ಇವೆ ಂಬುದು ಅವರಿಗೇ ಗೊತ್ತಾಯಿತು. ತನ್ನ ಮನೆಯಲ್ಲಿದ್ದ ಪ್ರತಿಯೊಂದು ಾರ್ಥದ ಲೆಕ್ಕ ದೊರೆತಾಗಲೂ ದೊಡ್ಡ ಡಾಕ್ಟರು "ನನ್ನ ಪದಾರ್ಥ ನ್ನೇ ಕೊಡಬೇಕಾಗಿದೆ" ಎನ್ನುತ್ತಿದ್ದರು. ಸೀತಾಲಕ್ಷ್ಮಿಯ ಹಿಂದಿನ ಂಚಿನಮೇಲೆ ಕುಳಿತಿದ್ದ ಒಬ್ಬ ಯುವರೋಗಿಯು "ನಿಮ್ಮಪ್ಪನ ಮನೇದೇ? ಪ್ಪತ್ರೆ ಸಾಮಾನುಗಳನ್ನೆಲ್ಲ ಕದ್ದು ಮನೆಗೆ ತಕ್ಕೊಂಡುಹೋಗಿ ಇಟ್ಟು ಂಡಿದ್ದೀಯೆ" ಎಂದು ಡಾಕ್ಟರಿಗೆ ಕೇಳುವಂತಲ್ಲದಿದ್ದರೂ ಸ್ವಲ್ಪ ಗಟ್ಟಿ ಾಗಿಯೇ ಸೀತಾಲಕ್ಷ್ಮಿಗೂ ಸುತ್ತಮುತ್ತಲವರಿಗೂ ಕೇಳಿಸುವಂತೆ ಹೇಳಿ ು. ಡಾಕ್ಟರಿಗೆ ಧ್ವನಿ ಕೇಳಿಸಿತು. ಮಾತು ಸರಿಯಾಗಿ ಅರ್ಥವಾಗದಿದ್ದರೂ ುಯೋಚಿತ ಜ್ಞಾನದಿಂದ, ಧ್ವನಿ ಹೇಳಿದುದು ಇದೇ ಇರಬಹುದೆಂದು ವರು ಊಹಿಸಿದರು. ಆದರೆ ಲೇಡಿ ಡಾಕ್ಟರಿಗೆ ಮಾತು ಚೆನ್ನಾಗಿಯೇ ಳಿಸಿತು. ಅವಳು ಸರಕ್ಕನೆ ಹಿಂದಿರುಗಿ ನೋಡಿದಳು. ಸೀತಾಲಕ್ಷ್ಮಿಯು ಳಿತಿದ್ದ ಬೆಂಚಿನ ಹಿಂದೆ ಕುಳಿತಿದ್ದವನು ಆ ಮಾತುಗಳನ್ನಾಡಿದರೂ, ಅದು ತಾಲಕ್ಷ್ಮಿಯ ಜತೆಯಲ್ಲಿ ಬಂದಿದ್ದ ನರಸಿಂಹ ಹೇಳಿದ ಮಾತೆಂದು ಆಕೆ ಂವಿಸಿದಳು. ದೊಡ್ಡ ಡಾಕ್ಟರಿಗೂ ಹಾಗೆಯೇ ತೋರಿತು. ಇದಕ್ಕೆ ಮುಖ್ಯ ರಣ ಮಾತನಾಡಿದವನು ಸ್ವಲ್ಪ ಬಗ್ಗಿಕೊಂಡು ಮಾತನಾಡುತ್ತಿದ್ದನು. ೕಡಿ ಡಾಕ್ಟರು ತಲೆ ಎತ್ತಿದಾಗ ಆಕೆಗೆ, ನರಸಿಂಹ ಬಾಯಲ್ಲಿದ್ದ ಅಡಕೆ ಅಗಿ ಯುವುದಕ್ಕಾಗಿ ತುಟಿಗಳನ್ನು ಅಲ್ಲಾಡಿಸುತ್ತಿರುವುದು ಕಂಡಿತು. ಅದರಿಂದ ವರಿಗೆ ನರಸಿಂಹನ ಮೇಲೆಯೂ ಸೀತಾಲಕ್ಷ್ಮಿಯ ಮೇಲೆಯೂ ಕೋಪ ಂಟಾಯಿತು.

ಲೇಡಿ ಡಾಕ್ಟರು ಅಂಗಡಿಯಿಂದ ಕೆಲವು ಗಜ ತೆಳ್ಳನೆಯ ಬ್ಯಾಂಡೇಜ್ ಟ್ಟೆ ತರುವಂತೆ ಸುಟ್ಟುಕೊಂಡ ಹುಡುಗಿಯ ತಂದೆಯನ್ನೇ ಅಂಗಡಿಗೆ ಟ್ಟ, ರೋಗಿಯನ್ನು ಸ್ತ್ರೀಯರ ವಾರ್ಡ್‌ಗೆ ಎತ್ತಿಕೊಂಡು ಹೋಗಲು ಆಳು ಳನ್ನು ಕೂಗತೊಡಗಿದರು. ಬಹಳ ಹೊತ್ತು ಕೂಗಿದಮೇಲೆ ಬಬ್ಬ ಹೆಣ್ಣಾಳು ೂರಕ್ಕೆ ಬಂದಳು. ಲೇಡಿ ಡಾಕ್ಟರು "ಎಲ್ಲಿ ಸ್ಟ್ರೆಚರ್‌ನ್ನು ತೆಗೆದುಕೊಂಡು

ಇನ್ನೊಬ್ಬಳನ್ನು ಕರೆದುಕೊಂಡು ಬಾ" ಎಂದು ಕಿರಚಿದಳು. ಆಕೆ "ಸ್ಟ್ರೆಚರ್ ನೆನ್ನೆ ರಾತ್ರಿ ಹೊರಗೆ ಇಟ್ಟುಬಿಟ್ಟುದರಿಂದ ನೆನೆದುಹೋಗಿದೆ" ಎಂದಳು. ಲೇಡಿ ಡಾಕ್ಟರು "ನಿಮ್ಮನ್ನೆಲ್ಲ ಡಿಸ್‌ಮಿಸ್ ಮಾಡಿಸಬೇಕು" ಎಂದು ಕೊಂಡು, ಸುಟ್ಟುಕೊಂಡ ಹೆಣ್ಣುಮಗಳು ಮಲಗಿದ್ದ ಜಮಖಾನದ ಒಂದು ಕಡೆಯನ್ನು ತಾನೇ ಹಿಡಿದುಕೊಂಡು ಮತ್ತೊಂದು ಕಡೆ ಹಿಡಿದುಕೊಳ್ಳುವಂತೆ ಆಳಿಗೆ ಹೇಳಿದಳು. ಹಾಗೆ ಇಬ್ಬರೂ ಹಿಡಿದುಕೊಂಡು ನಾಲ್ಕಾರು ಹೆಜ್ಜೆ ಇಡುವುದರೊಳಗೆ, ಅವರ ಬೂಟ್ಸುಕಾಲು ಜಾರುವಂತೆ ಆದುದರಿಂದ ಬೇಗ ಓಡಿಹೋಗಿ ಹುಡುಗಿಯ ತಾಯಿಯೇ ಜಮಖಾನವನ್ನು ಹಿಡಿದುಕೊಂಡಳು. ಹೀಗೆ, ಬೆಂದವಳನ್ನು ಸ್ತ್ರೀಯರ ವಾರ್ಡ್‌ಗೆ ದಾಖಲ್ಮಾಡಿಯಾಯಿತು.

ಹೊರಗೆ ಬೆಂಚುಗಳ ಮೇಲೆ ಕುಳಿತಿದ್ದ ರೋಗಿಗಳೆಲ್ಲ ತಮ್ಮ ತಮ್ಮ ಮನೆಗಳಿಗೆ ಹೊರಟೇಹೋದರು. ಅವರ ಪೈಕಿ ಒಬ್ಬರಿಗಾದರೂ ಚಿಕಿತ್ಸೆಯೇ ಆಗಲಿಲ್ಲವೆಂಬುದನ್ನು ಸೀತಾಲಕ್ಷ್ಮಿ ಗಮನಿಸಿದಳು. ಆಸ್ಪತ್ರೆಯೆಂದರೆ ಮೊದಲೇ ಹೆದರುತ್ತಿದ್ದ ನರಸಿಂಹ ಈ ಅವಾಂತರವನ್ನೆಲ್ಲ ನೋಡಿ ಮಂಕಾಗಿ ಕುಳಿತನು. ಅವರ ಮುಂದೆ ಇಬ್ಬರು ನರ್ಸ್‌ಗಳು ಒಳ್ಳೆಯ ಠೀವಿಯಿಂದ ಓಡಾಡಿದರು.

ದೊಡ್ಡ ಡಾಕ್ಟರರು ಸೀತಾಲಕ್ಷ್ಮಿಯನ್ನು ಅವಳು ಅಲ್ಲಿಗೆ ಬಂದ ಹೊತ್ತಿನಿಂದಲೂ ನೋಡುತ್ತಲೇ ಇದ್ದರು. ಅವಳ ರೂಪ ಆಕೆಯನ್ನು ಪೂರ್ಣವಾಗಿ ಮರುಳು ಮಾಡಿತ್ತು. ಆದರೆ ಅವರಿಗೆ ಸುಂದರ ರೂಪವನ್ನು ಕಂಡರೆ ಆಗುತ್ತಿರಲಿಲ್ಲ. ಸುಂದರ ರೂಪದಲ್ಲಿ ಒಳ್ಳೆಯತನವಿಲ್ಲವೆಂಬುದು ಅವರ ನಂಬಿಕೆಯಾಗಿತ್ತು. ಅದಕ್ಕೆ ಅವರ ಮನೆಯ ಉದಾಹರಣೆಯೊಂದೇ ಅವರಿಗೆ ಆಧಾರವಾಗಿತ್ತು. ಅವರ ಮಗ, ಯಾವಾಗಲೂ ತಾಯಿ ತಂದೆಗಳಿಗೆ ವಿಧೇಯನಾಗಿ ಅವರ ಮಾತನ್ನು ಮೀರದಿದ್ದವನು, ಸುಂದರಿಯಾದ ಹೆಣ್ಣನ್ನು ಮದುವೆಯಾದ ಕೂಡಲೇ, ತಂದೆಯ ಮನೆಯನ್ನು ಬಿಟ್ಟು ಅತ್ತೆಯ ಮನೆಯಲ್ಲಿಯೇ ಹೆಂಡತಿಯ ಸಾನ್ನಿಧ್ಯದಲ್ಲಿರತೊಡಗಿದನು. ಇದರಿಂದ ತಂದೆ ತಾಯಿಗಳಿಗೆ ಬೇಸರಿಕೆಯಾಗಿ ಮಗನನ್ನು ಬಲಾತ್ಕಾರವಾಗಿ ತಮ್ಮ ಮನೆಗೆ ಕರೆದುಕೊಂಡು ಬಂದರು. ಹೆಣ್ಣಿನ ತಂದೆ ತಾಯಿಯರು ಹೆಣ್ಣನ್ನು ಮಗನ ಮನೆಗೆ ಕಳುಹಿಸುವುದಿಲ್ಲವೆಂದು ಮೊಂಡುಹಿಡಿದರು. "ಎಷ್ಟುಕಾಲ ಹೀಗೆ

ಇರುತ್ತಾರೆ ನೋಡೋಣ?" ವೆಂದುಕೊಂಡು ಡಾಕ್ಟರು ಬಿಗಿಯಾಗಿಯೇ ಇದ್ದರು. ಈ ಮಧ್ಯೆ ಆ ಹುಡುಗಿ ತಾಯಿಯ ಮನೆಯನ್ನು ಬಿಟ್ಟು ಬೆಂಗಳೂರಿನಲ್ಲಿದ್ದ ಅಕ್ಕನ ಮನೆಗೆ ಹೋಗಿ ಅಲ್ಲಿ ಸ್ವೇಚ್ಛೆಯಿಂದ ಚಕ್ಕಂದವಾಡುತ್ತಿದ್ದಾಳೆಂದೂ, ತನ್ನ ಭಾವನ ಕಾಲೇಜಿನ ಗಂಡುಗೆಳೆಯರೊಂದಿಗೆ ಸಿನಿಮಾ ನಾಟಕ ವಾಕಿಂಗ್‌ಗಳಿಗೆ ಸರಾಗವಾಗಿ ಹೋಗುತ್ತಿದ್ದಾಳೆಂದೂ, ಡಾಕ್ಟರಿಗೆ ಒಂದು ಹೆಸರಿಲ್ಲದ ಕಾಗದ ಬಂತು. ಅವಳ ರೂಪಿನಿಂದ ಅವಳು ಗಂಡನನ್ನೂ ನಮ್ಮನ್ನೂ ತೃಣವಾಗಿ ಎಣಿಸಿದ್ದಾಳೆಂದು ತಿಳಿದಿದ್ದ ಡಾಕ್ಟರ ನಂಬಿಕೆಗೆ ಇದರಿಂದ ಇನ್ನೂ ಪುಷ್ಟಿದೊರೆಯಿತು. ಅವರು ಹೆಣ್ಣಿನ ತಂದೆಗೆ ಆ ಮೂಗು ಕಾಗದವನ್ನು ಕಳುಹಿಸಿ "ತತ್‌ಕ್ಷಣ ಹೆಣ್ಣನ್ನು ತಂದು ಇಲ್ಲಿ ಬಿಟ್ಟರೆ ಸರಿ ಇಲ್ಲವಾದರೆ ಮಗನಿಗೆ ಬೇರೆ ಮದುವೆಮಾಡುತ್ತೇನೆ, ಎಂದು ಬರೆದರು. ಹೆಣ್ಣಿನ ತಂದೆ ಯಾವುದಕ್ಕೂ ಪ್ರತ್ಯುತ್ತರವನ್ನೇ ಕೊಡಲಿಲ್ಲ. ಮಗನೊಂದಿಗೆ ಇವರು ಇಲ್ಲಿ ಬೇರೆ ಮದುವೆಯ ವಿಷಯ ಪ್ರಸ್ತಾಪಿಸಿದರು. ಹುಡುಗಿಯ ಚೆಲ್ಲಾಟದ ಸುದ್ದಿ ಬೆಂಗಳೂರಿನ ಇವರ ಇನ್ನೂ ಕೆಲವು ಬಂಧುಗಳಿಂದಲೂ ಇವರಿಗೆ ತಿಳಿಯಿತು. "ಆ ಸುದ್ದಿಗಳಲ್ಲಿ ನಿಜವೆಷ್ಟಿರಬಹುದು? ಚೆಲ್ಲಾಟವೆಂಬುದು ಈಗಿನ ಕಾಲದ ಹುಡುಗಿಯರ ಬರಿಯ ಥಳಿಕಿನ ಓಡಾಟವೇ ಇರಬಹುದು? ಇದರಲ್ಲಿ ಏನೂ ಅನೀತಿಯಿದ್ದಿರಲಾರದು. ಒಬ್ಬ ಹುಡುಗಿ ಮತ್ತೊಬ್ಬಳಿಗಿಂತ ಸ್ವಲ್ಪ "ಚಾಲಾಕಾ" ಗಿರಬಹುದು. ಪಟ್ಟಣದ ಹುಡುಗಿಯರನ್ನು ನೋಡಿದರೆ ಹಳ್ಳಿಯವರಿಗೆ ಅವರು ಸ್ವೇಚ್ಛಾಚಾರಿಗಳಾಗಿಯೇ ಕಾಣುತ್ತಾರೆ", ಎಂಬುದು ಡಾಕ್ಟರಿಗೆ ಹೊಳೆಯಲೇ ಇಲ್ಲ. ಅವರು "ಈ ಸಂಪರ್ಕವೇ ಬೇಡ" ವೆಂದುಕೊಂಡು ಮಗನಿಗೆ ಇನ್ನೊಂದು ಹೆಣ್ಣನ್ನು ಹುಡುಕುವುದರಲ್ಲಿಯೇ ತೊಡಗಿದ್ದರು. ಆದರೆ ಒಂದು ದಿನ ಅವರ ಮಗ ಇದ್ದಕ್ಕಿದ್ದಂತೆ ಅತ್ತೆಯ ಮನೆಗೆ ಹೋಗಿಬಿಟ್ಟನು. ಅವನ ಹೆಂಡತಿ ಅಲ್ಲಿಗೆ ಬಂದಳು. ಈಚೆಗೆ ಡಾಕ್ಟರಿಗೂ ಮಗನಿಗೂ ಸಂಪರ್ಕವೇ ಹೆಚ್ಚಾಗಿರಲಿಲ್ಲ. ವರುಷಕ್ಕೆ ಎರಡು ವರುಷಕ್ಕೆ ಒಂದು ಸಲ ಅವನು ತಂದೆಯ ಮನೆಗೆ ಒಬ್ಬನೇ ಬರುವನು. ಹೆಂಡತಿ ಬರುತ್ತಿರಲಿಲ್ಲ. ಆಕೆಯಮೇಲೆ ಡಾಕ್ಟರಿಗೆ ಬಂದಿದ್ದ ಸಂಶಯ ಹೋಗಿರಲಿಲ್ಲ. ಹೆಂಡತಿಯ ಮೋಹಕರೂಪಿಗೆ ಮರುಳಾಗಿ ಮಗನು ಕರ್ತವ್ಯಚ್ಯುತನಾಗಿ ತಂದೆತಾಯಿಗಳನ್ನು ತೊರೆದು ಹೆಂಡತಿಯ

ಕಾಲಬುಡದಲ್ಲಿ ಬಿದ್ದಿರುವುದರಿಂದ ಮಗನಿಗೂ ತಮಗೂ ಬಾಂಧವ್ಯ ಕಡಿದೇ ಹೋಯಿತೆಂದು ಅವರು ತೀರ್ಮಾನಿಸಿದ್ದರು. ಇದಕ್ಕೆಲ್ಲ ಸೊಸೆಯ ರೂಪವೇ ಕಾರಣವೆಂದೂ ರೂಪವತಿಯರಲ್ಲಿ ಗುಣವಿಲ್ಲವೆಂದೂ ತಂದೆ ಮಕ್ಕಳನ್ನು ಬೇರೆ ಮಾಡುವುದಕ್ಕಾಗಿಯೇ ಅವರು ಬರುವರೆಂದೂ ಡಾಕ್ಟರು ನಿರ್ಧರಿಸಿದ್ದರು.

ಹೀಗೆ ತಮ್ಮ ಸಂಸಾರದಲ್ಲಿ ಸೊಸೆಯೆಂಬ ಸೌಂದರ್ಯ ಸರ್ಪ ತನ್ನ ಹೊರಮೈಯ ಚರ್ಮದ ಹೊಳಪಿನಿಂದ ತಮ್ಮ ಸುಖಜೀವನದಲ್ಲಿ ವಿಷವನ್ನು ಹಿಂಡಿದ್ದುದರಿಂದ, ಕಣ್ಣುಕುಕ್ಕುವ ರೂಪವನ್ನು ಕಂಡಕೂಡಲೇ ಅವರು ಬೆಚ್ಚುತ್ತಿದ್ದರು. ತಮ್ಮ ಭಾವನೆ ತಪ್ಪಿದ್ದರೂ ಇರಬಹುದೆ? ಎಂಬ ಸಂಶಯ ಅವರಿಗೆ ಉಂಟಾಗಲೇ ಇಲ್ಲ. ಸಂಶಯವಾಗುವ ವಯಸ್ಸು ಅವರಿಗೆ ಮೀರಿ ಹೋಗಿ, ಇಂತಿತಹುದು ಹೀಗೆಯೇ ಇರಬೇಕೆಂಬ ದೃಢ ತೀರ್ಮಾನಕ್ಕೆ ಅವರು ಬಂದಿದ್ದರು.

ಡಾಕ್ಟರು ಈ ಸೌಂದರ್ಯ ವಿರೋಧ ಭಾವನೆಯಿಂದಲೇ ನರಸಿಂಹನ ಸಮೀಪಕ್ಕೆ ಬಂದು "ಏನಾಗಬೇಕು ನಿನಗೆ?" ಎಂದು ಕೇಳಿದರು. ಡಾಕ್ಟರು ತಾವಾಗಿಯೇ ಬಂದು ತನ್ನನ್ನು ಮಾತನಾಡಿಸುವರೆಂದು ನರಸಿಂಹ ಯೋಚಿಸಿರಲಿಲ್ಲ. ಮಾತನ್ನು ಹೇಗೆ ಪ್ರಾರಂಭಿಸಬೇಕೆಂಬ ಆತನ ಊಹನೆ ಇನ್ನೂ ನಡೆದೇ ಇತ್ತು. ಅವನು ಡಾಕ್ಟರ ಮಾತನ್ನು ಕೇಳಿ ಚಕಿತನಾಗಿ ಸೀತಾಲಕ್ಷ್ಮಿಯ ಕಡೆ ನೋಡಿ "ಈಕೆಯನ್ನು ಆಸ್ಪತ್ರೆಗೆ ಸೇರಿಸಬೇಕು" ಎಂದನು. ಡಾಕ್ಟರು "ಏನಾಗಿದೆ" ಎಂದರು. ನರಸಿಂಹನು "ಪ್ರಸವಕ್ಕೆ" ಎಂದನು. ಪದ್ಧತಿಯಂತೆ ಡಾಕ್ಟರರಿಗೆ ಅನುಮಾನ ತೋರಿತು. ಅವರು "ಈಕೆ ನಿನ್ನ ಹೆಂಡತಿಯೋ?" ಎಂದರು. ಇಂತಹ ಪ್ರಶ್ನೆ ಡಾಕ್ಟರು ಕೇಳ ಬಹುದೆಂದು ನರಸಿಂಹನು ಊಹಿಸಿಯೇ ಇರಲಿಲ್ಲ. ಊಹಿಸಿದ್ದಿದ್ದರೆ, ಅವನು ಸರಿಯಾದ ಪ್ರತ್ಯುತ್ತರವನ್ನೇ ಸಿದ್ಧಮಾಡಿಟ್ಟುಕೊಂಡಿರುತ್ತಿದ್ದನು. ಇದ್ದಕ್ಕಿದ್ದಂತೆ ಡಾಕ್ಟರು ಹೀಗೆ ಕೇಳಿದುದರಿಂದ ನರಸಿಂಹ ಉತ್ತರಕೊಡದೆ ಸೀತಾಲಕ್ಷ್ಮಿಯ ಕಡೆ ನೋಡಿದನು. ಡಾಕ್ಟರು "ಇದು ನಾನು ಊಹಿಸಿದಂತೆಯೇ" ಎಂದುಕೊಂಡರು. ಡಾಕ್ಟರು "ಹೆಂಡತಿಯಲ್ಲ ಹಾಗಾದರ ನಿನಗೇನಾಗ ಬೇಕು?" ಎಂದರು. ನರಸಿಂಹನು "ನಾದಿನಿ" ಎಂದನು. ಇವಳ ಗಂಡ ಇರುವುದೆಲ್ಲಿ? ಗಂಡ ಯಾಕೆ ಇಲ್ಲಿ ಬಂದಿಲ್ಲ. ಮೊದಲನೆಯ ಪ್ರಸವ ಯಾಕೆ,

ತಾಯಿ ಮನೆಯಲ್ಲಿಯೋ, ಗಂಡನ ಮನೆಯಲ್ಲಿಯೋ ಆಗುತ್ತಿಲ್ಲ? ನಿಮ್ಮ ಹೆಂಡತಿಯೇ ಯಾಕೆ ಮನೆಯಲ್ಲಿ ಬಾಣಂತನ ಮಾಡಬಾರದಾಗಿತ್ತು. ಎಷ್ಟು ದಿವಸದ ನಂತರ ಬಂದು ಮತ್ತೆ ಕರೆದುಕೊಂಡು ಹೋಗುತ್ತಿ" ಹೀಗೆ ಡಾಕ್ಟರು ಒಂದಾದಮೇಲೆ ಒಂದರಂತೆ ಪ್ರಶ್ನೆಗಳ ಸುರಿಮಳೆಯನ್ನೇ ಪ್ರಾರಂಭಿಸಿ ಬಿಟ್ಟರು. ತಾವು ಒಳ್ಳೆಯ ಪತ್ತೆದಾರ ಎಂಬ ಭಾವನೆ ಅವರಿಗೆ ಉಂಟಾಗಿ ಹೋಯಿತು. ಒಂದೊಂದು ಪ್ರಶ್ನೆ ಹಾಕಿದನಂತರವೂ ಅವರ ಸಂಶಯ ದೃಢವಾಗುತ್ತ ಹೋಯಿತು. ಅವರು ಒಳ್ಳೆ ಉತ್ಸಾಹದಿಂದ ಪ್ರಶ್ನೆ ಹಾಕ ತೊಡಗಿದರು. ತಮ್ಮ ಕೇಳಿಕೆಯಿಂದ ನರಸಿಂಹ ಇಕ್ಕಟ್ಟಿನ ಪೇಚಿನಲ್ಲಿ ಸಿಕ್ಕಿ ಕೊಂಡಷ್ಟು ಅವರ ಕುತೂಹಲ ಹೆಚ್ಚುತ್ತಲೇ ಹೋಯಿತು. ಅಂತೂ ನರ ಸಿಂಹನಿಗೂ ಸೀತಾಲಕ್ಷ್ಮಿಗೂ ಇದ್ದ ಸಂಬಂಧ ಅವರು ಸುಲಭವಾಗಿ ಊಹಿಸಿ ತಿಳಿದುಕೊಂಡರು. ಅವರಿಗೆ ರೋಗಗಳನ್ನೂ ಚಿಕಿತ್ಸೆಗಳನ್ನೂ ಪರಿಶೀಲಿಸುವು ದಕ್ಕಿಂತ, ಇಂತಹ ಸಂಗತಿಗಳ ಪರಿಶೋಧನೆಯಲ್ಲಿ ಉತ್ಸಾಹ ಯಾವಾಗಲೂ ಹೆಚ್ಚಾಗಿರುತ್ತಿದ್ದಿತು. ಬಂದಿರುವುದು ಒಂದು ರೋಗಿ ಎಂಬುದನ್ನೇ ಅವರು ಮರೆತು, ತಮ್ಮ ಸ್ವಂತ ಅಭಿಪ್ರಾಯದಿಂದಲೇ ಇವಳು ಯಾವುದೋ ತಪ್ಪನ್ನು ಮಾಡಿ ಅದನ್ನು ಮುಚ್ಚಿಕೊಳ್ಳಲು ಬಂದಿರುವಳೆಂದು ತೀರ್ಮಾನಿಸಿಬಿಟ್ಟರು.

ಅಷ್ಟು ಹೊತ್ತಿಗೆ ಲೇಡಿ ಡಾಕ್ಟರು ಅಲ್ಲಿಗೆ ಬಂದರು. ಮೈ ಸುಟ್ಟು ಕೊಂಡ ಹೆಣ್ಣಿನ ವಿಷಯ ಪ್ರಸ್ತಾಪಿಸಿ, ಸರಿಯಾದ ಔಷಧೋಪಚಾರಗಳಿದ್ದರೆ ಬದುಕಿದರೂ ಬದುಕಬಹುದೆಂದು ಹೇಳಿದರು. ಆ ವೇಳೆಗೆ ಒಬ್ಬ ಗಂಡಸು ಸ್ತ್ರೀಯರ ವಾರ್ಡಿನಿಂದ ಬಟ್ಟೆ ಮುಚ್ಚಿಕೊಂಡು ಹೆಗಲಿನಮೇಲೆ ಏನನ್ನೋ ಹಾಕಿಕೊಂಡು ಬಂದನು. ಡಾಕ್ಟರು ಅದನ್ನು ನೋಡಿ "ಮುಗಿದುಹೋ ಯಿತೋ?" ಎಂದು ಕೇಳಿದರು. ಲೇಡಿ ಡಾಕ್ಟರು. 'ಹೌದು. ತಾಯಿಗೆ ನಾಲ್ಕು ತಿಂಗಳಿನಿಂದಲೇ ಎನೀಮಿಕ್. ಆಗಿನಿಂದಲೇ ಅವಳಿಗೆ ಔಷಧಿ ಉಪಚಾರ ಕೊಡಿಸಬೇಕಾಗಿತ್ತು. ಪ್ರಸವವೇ ತುಂಬ ಕಷ್ಟವಾಯಿತು. ಈಚೆ ಗಾದರೂ ಇಂಜಕ್ಷನ್ ಕೊಡಿಸಿದ್ದರೆ ತಾಯಿಯಾದರೂ ಬದುಕುತ್ತಿದ್ದಳೇನೋ ಎಂದರು. ಡಾಕ್ಟರು "ಹಾಗಾದರೆ ತಾಯಿಯ ಆಸೆಯನ್ನೂ ಬಿಟ್ಟಂತೆಯೆ?" ಎಂದರು. ಲೇಡಿ ಡಾಕ್ಟರು "ಇಂಜಕ್ಷನ್ ಟ್ಯೂಬ್‌ಗಳನ್ನು ತಂದರೆ ಈಗಲೂ ಒಂದು ಛಾನ್ಸ್ ಇದೆ" ಎಂದರು.

ಡಾಕ್ಟರು.—ಕೆಲವು ಟ್ಯೂಬಿಗಾಗಿ ಒಬ್ಬರು ಪ್ರಾಣ ಬಿಟ್ಟುಬಿಡುವುದೆ?

ಲೇಡಿ ಡಾಕ್ಟರು.—ಏನು ಮಾಡೋಣ ಡಾಕ್ಟರೆ? ಗವರ್ನಮೆಂಟ್ ಸಪ್ಲೈ ಇಲ್ಲ. ಈಕೆಯ ಈ ಸ್ಥಿತಿಗೆ ಜವಾಬ್ದಾರನಾದವನಾರೋ ಆಕೆಗೇ ಸರಿಯಾಗಿ ಗೊತ್ತಿಲ್ಲ. ಮೊದಲೇ ಆಕೆಗೆ ಕಣ್ಣು ಕಾಣುತ್ತಿರಲಿಲ್ಲ. ತುಂಬ ಮಂಜುಮಂಜಾಗಿ ಎದುರಿಗೆ ಮನುಷ್ಯ ಬಂದರೆ ಏನೋ ಒಂದು ಬಂದಂತೆ ಕಾಣುತ್ತಿತ್ತು. ಈ ನಿಶ್ಶಕ್ತಿಯಿಂದ ಈಗ ಅದೂ ಕಾಣುವುದಿಲ್ಲ. ಕಣ್ಣು ಪೂರ್ತ ಕುರುಡಾಗಿದೆ.

ಡಾಕ್ಟರು.—ಅಂತವಳನ್ನು ಒಬ್ಬ ಬಂದು ಗರ್ಭಿಣಿಮಾಡಿ ಹೋಗಿಬಿಟ್ಟಿದ್ದಾನೆ!

ಲೇಡಿ ಡಾಕ್ಟರು.—ಹೌದು. ಇದೇ ದೊಡ್ಡವರು ಹೇಳುವಂತಹ ಪರಮಾತ್ಮನ ಲೀಲೆ. ಇದೇ ವಿಚಿತ್ರ. ಆಸ್ಪತ್ರೆಯಿಲ್ಲದಿದ್ದರೆ ಈಕೆ ನಡುಬೀದಿಯಲ್ಲಿ ಪ್ರಸವಿಸಬೇಕಾಗುತ್ತಿದ್ದಿತು.

ಡಾಕ್ಟರು.—ಆದರೂ ಕೆಲವು ಟ್ಯೂಬುಗಳಿಗಾಗಿ ಒಬ್ಬಳ ಪ್ರಾಣಹೋಗುವುದೆಂದರೆ ಬಹಳ ಅನ್ಯಾಯ. It is terrible.

ಹೀಗೆ ಅವರು ಮಾತನಾಡುತ್ತಿರುವಾಗಲೇ ಒಬ್ಬ ನರ್ಸ್ ವೇಗವಾಗಿ ಬಂದು ಲೇಡಿ ಡಾಕ್ಟರೊಂದಿಗೆ ಮೆತ್ತಗೆ ಏನೋ ಹೇಳಿದಳು. ಆಕೆ ಡಾಕ್ಟರನ್ನು ನೋಡುತ್ತ "ಇನ್ನು ಆಕೆಗೆ ನಮ್ಮ ಅನುತಾಪ ಬೇಕಿಲ್ಲ. She is beyond our aid" ಎಂದು ಹೇಳಿ, ನರ್ಸ್‌ನೊಡನೆ ಹೊರಟುಹೋದಳು. ಸೀತಾಲಕ್ಷ್ಮಿ ನೋಡುತ್ತಿರುವಾಗಲೇ ಸತ್ತವಳನ್ನು ಬಿಳಿಯ ಬಟ್ಟೆ ಮುಚ್ಚಿ ಇಬ್ಬರು ಆಚೆ ಈಚೆ ಹಿಡಿದುಕೊಂಡು ಶವಗೃಹಕ್ಕೆ ಕೊಂಡೊಯ್ದರು. "ಇನ್ನೂ ಸತ್ತು ಒಂದು ಗಳಿಗೆ ಸಹ ಆಗಿಲ್ಲ. ಆಗಲೇ ಅಲ್ಲಿಗೆ ತಳ್ಳಿಬಿಟ್ಟರಲ್ಲ. ಇನ್ನೂ ಸ್ವಲ್ಪ ಕುಟುಕುಜೀವವಾದರೂ ಇರಬಹುದೇ" ಎಂಬುದು ಆಕೆಯ ಸಂಶಯ. ಆದರೆ, ಆ ವಿಷಯದಲ್ಲೇನೂ ವೈದ್ಯರಿಗೆ ಅನುಮಾನವಿರಲಿಲ್ಲ.

ದೊಡ್ಡ ದಾಕ್ಟರು ಮನೆಗೆ ಹೊರಡುವ ಹೊತ್ತಾಯಿತು. ನರಸಿಂಹನೂ ಸೀತಾಲಕ್ಷ್ಮಿಯೂ ವರಾಂಡದ ಬೆಂಚಿನ ಮೇಲೆಯೇ ಕುಳಿತಿದ್ದರು. ಡಾಕ್ಟರು ನರಸಿಂಹನಿಗೆ "ಸೀಟು ಖಾಲಿ ಇರಲಿಲ್ಲ. ಈಗ ನೋಡಿದಿರಲ್ಲ? ಒಂದು ಖಾಲಿ ಆಯಿತು. ನಿಮ್ಮ ಹೆಂಡತಿಯನ್ನು (ಮರೆತೆ ಮರೆತೆ ಹೆಂಡತಿಯಲ್ಲ

ನಾದಿನಿಯನ್ನು) ನೀನು ಬಿಟ್ಟು ಹೋಗಬಹುದು" ಎಂದು ಹೇಳಿ ಮನೆಗೆ ನಡೆದರು.

ನರಸಿಂಹನೂ ಸೀತಾಲಕ್ಷ್ಮಿಯ ಕಡೆ ಮುಖ ಅಲ್ಲಾಡಿಸಿ ಅವಳನ್ನು ಬಿಟ್ಟು ಗಾಡಿ ಹೂಡಿಕೊಂಡು ಹೊರಟನು. ಅವನಿಗೆ ಏನೂ ತೋಚದುದ ರಿಂದ ಅವನು ಮಾತನಾಡಲಿಲ್ಲ. ಬಿಕೋ ಎನ್ನುತ್ತಿದ್ದ ಆ ವರಾಂಡದಲ್ಲಿ ಸೀತಾಲಕ್ಷ್ಮಿ ಒಬ್ಬಳೇ ಆದಳು.

## ೧೦

ಸೀತಾಲಕ್ಷ್ಮಿಗೆ ಇದ್ದಕ್ಕಿದ್ದಂತೆ ತಾನು ಒಂದು ಸ್ಮಶಾನದಲ್ಲಿಯೇ ಇದ್ದೇನೆ ಎಂಬ ಭಾವನೆಯುಂಟಾಯಿತು. "ಆಗಲೇ ನನ್ನ ಎದುರಿಗೇ ಎರಡು ಹೆಣಗಳು ಹೋದುವು. ನಾನು ಈ ಸ್ಥಳ ಬಿಡುವವೇಳೆಗೆ ಇನ್ನೂ ಎಷ್ಟು ಹೋಗುತ್ತವೆಯೊ?" ಸತ್ತವಳು ಯಾರಿರಬಹುದು? ಪಾಪ ಮಗುವಿಗಾಗಿ ಎಷ್ಟು ಆಸೆಯಿಂದಿದ್ದಳೋ? ಹೌದು ಮಗುವಿಗೆ ತಂದೆಯಿರಲಿಲ್ಲ. ತನ್ನ ಮಗುವಿಗೂ ತಂದೆ ಇಲ್ಲ. ಬಹುಶಃ ಇದರ ಗತಿಯೂ ಅದರ ಗತಿಯೇ ಆಗ ಬಹುದು? ನನ್ನ ಗತಿಯೂ ಅವಳ ಗತಿಯೇ ಆಗಬಹುದು."

ಡಾಕ್ಟರು ಹೇಳಿದ "ಸತ್ತವಳ ಹಾಸಿಗೆ ತನಗೆ" ಎಂಬ ಮಾತಿ ನಿಂದಲೇ ಆಕೆಗೆ ಗಾಬರಿಯಾಗಿತ್ತು. ಯಾವ ಕಾರಣದಿಂದಲೋ ಏನೋ ಆಕೆಗೆ ಅಂದು ಎಲ್ಲವೂ ಅಪಶಕುನದಂತೆಯೇ ತೋರುತ್ತಿದ್ದಿತು. ದೊಡ್ಡ ಡಾಕ್ಟರು ಮನೆಗೆ ಹೋಗುವಾಗ ಸೂಚಿಸಿ ಹೋದಂತೆ ಲೇಡಿ ಡಾಕ್ಟರು ಬಂದು, ಆಕೆಯನ್ನು ವಾರ್ಡ್‌ಗೆ ಕರೆದುಕೊಂಡು ಹೋದರು. ಅಲ್ಲಿ ಅವಳನ್ನು ಒಂದು ಹಾಸಿಗೆಯಮೇಲೆ ಕೂರಿಸಿದರು. ಹಾಸಿಗೆ ತಕ್ಕಮಟ್ಟಿಗೆ ಸ್ವಚ್ಛ ವಾಗಿಯೇ ಇತ್ತು. ಆದರೂ ಸೀತಾಲಕ್ಷ್ಮಿಗೆ ಮೊದಲು ಸತ್ತಿದ್ದವಳ ಮೈಯಿನ ಶಾಖದಿಂದ ಇನ್ನೂ ಆ ಹಾಸಿಗೆ ಬೆಚ್ಚಗಿರುವಂತೆಯೇ ತೋರಿತು. ಮುಂದಲ ಗಳಿಗೆಯಲ್ಲಿ "ಬೆಚ್ಚಗಿಲ್ಲ ತಣ್ಣಗಿದೆ. ಶವದ ಮೈ ಬೆಚ್ಚಗಿರುವುದೆಲ್ಲಿ ಬಂತು?" ಎಂಬ ಯೋಚನೆಯಿಂದ ಮೈ ನಡುಗಿದಂತಾಯಿತು.

ಮುಂದಲ ಮೂರು ದಿನಗಳು ಸೀತಾಲಕ್ಷ್ಮಿಗೆ ಮೂರು ಯುಗ ಗಳಂತೆಯೇ ಕಂಡವು. ನಾಲ್ಕನೆಯ ದಿನ ಪ್ರಸವ ವೇದನೆಯುಂಟಾಗಿ ಆಕೆಗೆ

ಜ್ಞಾನವೇ ಹೋಯಿತು. ತನಗೆ ಎಚ್ಚರವಾದಾಗ ತಾನು, ಸತ್ತ ಗಂಡು ಶಿಶುವನ್ನು ಪ್ರಸವಿಸಿದುದಾಗಿ ಆಕೆಗೆ ತಿಳಿಯಿತು. ಒಂದು ಗಳಿಗೆ ಅವಳಿಗೆ ಏನೂ ತೋರಲೇ ಇಲ್ಲ. ಅನಂತರ ನಿಧಾನವಾಗಿ, ತಾನು ನಾಲ್ಕು ವರುಷದ ಮಗುವಾಗಿದ್ದಾಗಿನಿಂದ ತನಗೆ ಮಕ್ಕಳಮೇಲಿದ್ದ ಪ್ರೀತಿ, ಆಟದಲ್ಲಿ ತಾನು ಯಾವಾಗಲೂ ತಾಯಿಯೇ ಆಗುತ್ತಿದ್ದುದು, ಬರಬರುತ್ತ ಈ ತಾಯ್ತನದ ಆಸೆ ಹೆಚ್ಚುತ್ತಲೇ ನಡೆದುದು. ಚೆನ್ನಾಗಿ ಬುದ್ಧಿ ಬಂದಮೇಲೆಯೂ ಆ ಆಸೆ ಕುಗ್ಗದಲೇ ಇದ್ದುದು. ಮದುವೆಯಾದಾಗಿನಿಂದಲಂತೂ ತಾನು ಕಟ್ಟಿ ಕೊಂಡಿದ್ದ ಚೊಚ್ಚಲ ಸಂಭ್ರಮದ ಗಾಳಿಗೋಪುರ, ಗಂಡ ತನ್ನನ್ನು ಆಗ ಹೇಗೆ ಕಾಣಬೇಕೆಂದು ಅವಳು ಆಸೆ ಇಟ್ಟುಕೊಂಡಿದ್ದಳು? ಹೂ ಮುಡಿಸಿ ಕೊಳ್ಳುವಶಾಸ್ತ್ರ; ಅನಂತರ ಸೀಮಂತದಶಾಸ್ತ್ರ. ಬಸರಿನ ನಾನಾ ಬಯಕೆಗಳು.

ಬಸಿರ ಬಯಕೆಯು ಚೆಂದ, ಹಸಿರು ರವಿಕೆಯು ಚೆಂದ
ನಸು ಗೆಂಪಿನವಳ ನಗೆ ಚೆಂದ । ತಂಗ್ಯವ್ವ
ನೀ ಬಸುರಾಗೆ ಚೆಂದ ಬಳಗಕ್ಕೆ — ಈ ತ್ರಿಪದಿಯ ಜಪ.

ಅನಂತರ ನಿರೀಕ್ಷಿಸಿದಂತೆಯೇ ಆಗುವ ಗಂಡುಮೊಗು. ಅದನ್ನು ಹೆಮ್ಮೆಯಿಂದ ನೋಡಲು ಗಂಡ ಬಂದಾಗ ತಾನು ಹಸೀಮೈಯ್ಯವಳಾದರೂ ಮಗನನ್ನು ಸಂಕೋಚದಿಂದ ಆತನಿಗೆ ತೋರಿಸುವ ಸಂಭ್ರಮ. ಇನ್ನು ಆ ಮಗನನ್ನು ಹೇಗೆ ಹೇಗೆ ಸಾಕಬೇಕೆಂದು ಅವಳು ಕನಸುಕಂಡಿದ್ದಳು. ತನ್ನ ಬಾಣಂತಿತನವನ್ನು ಹೇಗೆ ಸುತ್ತ ಬಂಧುಗಳೊಡನೆ ಕಳೆಯಬೇಕೆಂದಿದ್ದಳು. ಆ ಬಾಣಂತಿ ಗೃಹಕ್ಕೆ ಯಾವ ಯಾವ ರಕ್ಷೆ? ಕಾಲು ಧೂಳು, ಕೈ ಧೂಳು ಆಗದಂತೆ ಹಿರಿಯರ ಎಚ್ಚರಿಕೆ........ ಈಗ ಅನಾಥಳಾಗಿ ಹೆಣದ ಹಾಸಿಗೆಯಮೇಲೆ ಮಲಗಿ ತಾನೂ ಹೆಣವನ್ನೇ ಹೆತ್ತಿದ್ದಳು. ಬಾಳು ಪೂರ್ಣವಾಗಿ ನಂದಿಹೋಯಿತೆ? ತಾಯಿಯಾಗುವ ಆಸೆ ಎಂದೆಂದಿಗೂ ಇಂಗಿ ಹೋಯಿತೆ? ಹದಿನೆಂಟು ವರುಷಕ್ಕೆ ಬಾಳು ಪೂರ್ಣವಿರಸವಾಯಿತೆ?"

ಸೀತಾಲಕ್ಷ್ಮಿಯ ಕಣ್ಣುಗಳಿಂದ ಆಕೆಗೆ ತಿಳಿಯದಂತೆಯೇ ಧಾರಾಕಾರವಾಗಿ ನೀರು ಹರಿಯಿತು. ಅದನ್ನು ತಡೆಯುವ ತಂಟೆಗೂ ಆಕೆ ಹೋಗಲಿಲ್ಲ. ಇನ್ನು ನನಗೆ ಏನಾದರೆ ಏನು?, ಎಂಬ ಅನಾಸಕ್ತಿ ಅವಳಿಗೆ ಉಂಟಾಗಿತ್ತು.

ಹೀಗೆ ಆಸ್ಪತ್ರೆಯಲ್ಲಿ ಆಕೆ ಹದಿನೈದು ದಿನಗಳನ್ನು ಕಳೆದಳು. ಸಾಧಾರಣವಾಗಿ ಪ್ರಸವವಾದ ನಂತರ ಹದಿನೈದು ದಿನಗಳಿಗಿಂತ ಹೆಚ್ಚಾಗಿ ಆಸ್ಪತ್ರೆಯಲ್ಲಿ ಬಾಣಂತಿಯರನ್ನು ಇಟ್ಟುಕೊಳ್ಳುತ್ತಿರಲಿಲ್ಲ. ಆದರೆ, ಸೀತಾಲಕ್ಷ್ಮಿ ತುಂಬ ನಿಶ್ಶಕ್ತಳಾಗಿದ್ದುದರಿಂದಲೂ ಆಸ್ಪತ್ರೆಯಲ್ಲಿ ರೋಗಿಗಳ ನಿಗ ಸರಿಯಾಗಿಲ್ಲವೆಂದು ಪದೇ ಪದೇ ಪತ್ರಿಕೆಗಳಲ್ಲಿ ಬರುತ್ತಿದ್ದುದರಿಂದಲೂ, ಆ ಅಪಾಯ ಸ್ಥಿತಿಯಲ್ಲಿ ಸೀತಾಲಕ್ಷ್ಮಿಯನ್ನು ಕಳುಹಿಸಲು ವೈದ್ಯರಿಗೆ ಧೈರ್ಯ ಬರಲಿಲ್ಲ. ಈ ಮಧ್ಯೆ ಸುಟ್ಟುಕೊಂಡು ಬಂದಿದ್ದ ಹೆಣ್ಣು ಆಸ್ಪತ್ರೆಯಲ್ಲಿ ಮೃತಳಾದಳು. ಆಸ್ಪತ್ರೆಯಲ್ಲಿಯೂ ಹಣದ ಚೇಷ್ಟೆಯೇ ಪ್ರಬಲವಾಗಿತ್ತು. ಎಲ್ಲಿಯಂತೆ ಅಲ್ಲಿಯೂ ಬಡವರನ್ನು ಕೇಳುವವರು ಯಾರೂ ಇರಲಿಲ್ಲ. ವೈದ್ಯರು ಆಸ್ಪತ್ರೆ ಸಾಮಾನುಗಳನ್ನೆಲ್ಲ ಮನೆಯಲ್ಲಿ ಬರುವ ರೋಗಿಗಳ ಚಿಕಿತ್ಸೆಗಾಗಿ ಮನೆಗೆ ಸಾಗಿಸಿಟ್ಟುಕೊಂಡಿದ್ದರು. ಔಷಧಿಯ ಪಾಡೂ ಅದೇ ಆಗಿತ್ತು. ವಾರ್ಡ್‌ನಲ್ಲಿ ಲಂಚ ಕೊಟ್ಟ ಹೊರತು ಹೆಣ್ಣು ನರ್ಸ್ ಆಗಲಿ, ಗಂಡು ನರ್ಸ್ ಆಗಲಿ, ಜವಾನನಾಗಲಿ ರೋಗಿಗಳಿಗೆ ಉಪಚಾರಮಾಡುತ್ತಿರಲಿಲ್ಲ. ರೋಗಿಗಳಿಗೆ ಒಂದು ಲೋಟ ನೀರು ಕೊಡಬೇಕಾದರೂ ಜವಾನರು ಎರಡಾಣೆ, ನಾಲ್ಕಾಣೆ ತೆಗೆದುಕೊಳ್ಳುತ್ತಿದ್ದರು. ದುಡ್ಡು ಕೊಡದವರನ್ನು ದುರದುರನೆ ನೋಡುತ್ತಿದ್ದವರು. ಒಂದೊಂದು ಸಮಯದಲ್ಲಿ ಅವರು ಎಷ್ಟು ಬಡಕೊಂಡರೂ ನರ್ಸ್‌ಗಳು ಅವರನ್ನು ಗಮನಿಸುತ್ತಲೇ ಇರಲಿಲ್ಲ. ದುಡ್ಡು ಕೊಡದವರನ್ನು ಅವರು ಏಳಿಸಿ ಕೂರಿಸಿ ಅಲಗಾಡಿಸುವಾಗಲೇ ಮರದ ತುಂಡನ್ನೋ, ಸೌದೆಯನ್ನೊ ಎಳೆದಾಡುವಂತೆ ಎಳೆದಾಡಿ, ರೋಗಿ ಚಿತ್ರಹಿಂಸೆಯಿಂದ ಬಡಕೊಂಡರೂ ಅದನ್ನು ಗಮನಿಸದೆ, ಕೋಪದಿಂದ ಮತ್ತಷ್ಟುವೇಗವಾಗಿ ಎಳೆದು ಬಿಡುತ್ತಿದ್ದರು. ಒಂದೊಂದು ವೇಳೆ ರೋಗಿಗಳು ಡಾಕ್ಟರಿಗೆ, ಅವರು ತಮ್ಮಲ್ಲಿ ಬಂದಾಗ ದೂರು ಹೇಳಿದರೆ, ಡಾಕ್ಟರು ಮುಖ ಗಂಟುಹಾಕಿಕೊಂಡು "ನಿಮ್ಮರಗಳೆ ಇದ್ದೇ ಇದೆ. ನಿಮ್ಮನ್ನು ಉಪಚರಿಸಿ ತೃಪ್ತಿಪಡಿಸುವುದಕ್ಕೆ ಪರಮಾತ್ಮನಿಂದಲೂ ಸಾಧ್ಯವಿಲ್ಲ. ನಿಮ್ಮ ಮನೆಯವರಿಗೇ ಸಾಧ್ಯವಾಗದೆ ನಿಮ್ಮನ್ನ ಇಲ್ಲಿಗೆ ತಳ್ಳಿದಾರೆ. ಹೇಗೋ ಸವರಿಸಿಕೊಂಡು ಹೋಗಿ" ಎಂದುಬಿಡುತ್ತಿದ್ದರು. ಹೀಗೆ ಅಪ್ಪಿತಪ್ಪಿ ರೋಗಿಗಳು ವೈದ್ಯರಿಗೆ ದೂರು ಹೇಳಿದರೆ, ಅದರಿಂದ ನರ್ಸ್‌ಗಳಿಗೂ ಆಳುಗಳಿಗೂ ರೋಗಿಗಳಮೇಲೆ ಅಸಮಾಧಾನವಾಗಿ ಅವರ

ಚಿಕಿತ್ಸೆಯಲ್ಲಿ ಉದಾಸೀನತೆಯುಂಟಾಗುತ್ತಿದ್ದಿತೇ ಹೊರತು ಪ್ರಯೋಜನ ವೇನೂ ಆಗುತ್ತಿರಲಿಲ್ಲ. ರೋಗಿಗಳು ತಮಗೆ ಬೇಕಾದ ಪದಾರ್ಥಗಳಿಗಾಗಿ ಜವಾನರ ಕೈಯಲ್ಲಿ ಐದು ರೂಪಾಯಿ, ಹತ್ತು ರೂಪಾಯಿ ನೋಟುಗಳನ್ನು ಕೊಟ್ಟರೆ, ಜವಾನರು ಪದಾರ್ಥಗಳಿಗೆ ಒಂದಕ್ಕೆ ಎರಡರಷ್ಟು ಬೆಲೆ ಹಾಕಿದರೂ ಉಳಿದ ಹಣವನ್ನೂ ಸಹ ಹಿಂದಕ್ಕೆ ತಂದುಕೊಡುತ್ತಿರಲಿಲ್ಲ. ಈ ನರಕದಿಂದ ಎಷ್ಟು ಬೇಗ ಬಿಡುಗಡೆ ಹೊಂದಿದರೆ ಅಷ್ಟು ವಾಸಿ, ಎಂದು ಸೀತಾಲಕ್ಷ್ಮಿ ಯೋಚಿಸುತ್ತಿದ್ದಳು.

ಆದರೆ, ಹೋಗುವುದೆಲ್ಲಿಗೆ? ಮಲ್ಲಿಗೆಹಳ್ಳಿಗೆ ತಾಯಿಯ ಮನೆಗೆ ಹೋಗ ಬೇಕು. ಆದರೆ, ಅಲ್ಲಿ ತಾಯಿ ಇಲ್ಲ. ತಂದೆ ಇಲ್ಲ. ಇನ್ನು ಇಬ್ಬರು ಅಣ್ಣಂದಿ ರಿಗೂ ಈ ಸ್ಥಿತಿಯಲ್ಲಿ ತಾನು ಬೇಕಾಗಿಲ್ಲ. ಇನ್ನು ನ್ಯಾಯವಾಗಿ ರಂಭಾಪುರಿಗೆ ಗಂಡನ ಮನೆಗೆ ಹೋಗಬೇಕು. ನ್ಯಾಯವಾಗಿ? ಹೌದು. ಆದರೆ, ಇನ್ನು ತನಗೆ ನ್ಯಾಯವೆಲ್ಲಿ ಬಂದು? ಲೋಕದಲ್ಲಿ ಇನ್ನು ನ್ಯಾಯವೆಂಬುದು ತನಗೆ ಇಲ್ಲ. ಎಂದೆಂದಿಗೂ ಆಗದ ಅನ್ಯಾಯವೇ ತನಗೆ ಆಗಿಬಿಟ್ಟಿರುವಾಗ ಇನ್ನು ನ್ಯಾಯದ ಹೆಸರು ತನಗೆ ಯಾಕೆ? ಆದರೂ ಆಸ್ಪತ್ರೆ ಬಿಟ್ಟುಹೋಗಲೇ ಬೇಕಾಗಿದೆ. ಎಂದೆಂದಿಗೂ ಆಸ್ಪತ್ರೆಯಲ್ಲಿಯೇ ಇರುವುದಕ್ಕೆ ಆದೀತೆ? ತನಗೆ ಹೋಗಲು ಬೇರೆ ಸ್ಥಳವಿಲ್ಲವೆಂದು ಸೀತಾಲಕ್ಷ್ಮಿಗೆ ತೋರಿದಾಗ, ನರಕವಾಗಿದ್ದ ಆಸ್ಪತ್ರೆಯೇ ಸ್ವರ್ಗವಾಗಿ ತೋರಿತು. ಆಕೆಗೆ ಮನುಷ್ಯ ಸಮಾಜದಮೇಲೆಯೇ ದ್ವೇಷವುಂಟಾಗಿತ್ತು. ಎಲ್ಲಿಯಾದರೂ ನಿರ್ಜನಪ್ರದೇಶದಲ್ಲಿ ಮನುಷ್ಯನ ಸಂಪ ರ್ಕವೇ ಇಲ್ಲದೆಡೆ—ಹಿಂದಲ ಕಾಲದ ಪುರಾಣಗಳಲ್ಲಿ ಬರುತ್ತಿದ್ದಂತೆ ಯಾವು ದಾದರೂ ನಿರ್ಜನ ದ್ವೀಪವೋ, ದಂಡಕಾರಣ್ಯವೋ, ಕಥಾಸರಿತ್ಸಾಗರದಲ್ಲಿ ಬಂದಂತಹ ಒಬ್ಬೊಬ್ಬಳೇ ಗಂಧರ್ವಕನ್ನಿಕೆಗೆ ಆವಾಸಸ್ಥಾನವಾದ ಒಂದೊಂದು ಸಮುದ್ರ ಮಧ್ಯದ ನಿರ್ಜನದ್ವೀಪವೋ ಇದ್ದಿದ್ದರೆ, ಅಲ್ಲಿ ಹೋಗಿ ಇದ್ದುಬಿಡ ಬಹುದಾಗಿದ್ದಿತಲ್ಲ, ಎಂದು ಬಯಸುವಳು.

ಹೀಗೆ ಎಲ್ಲಿಗೂ ಹೋಗುವ ತೀರ್ಮಾನವನ್ನೇ ಮಾಡಲು ತೋಚದೆ ಆಕೆ ಕುಳಿತಿದ್ದರೂ, ಆಕೆಯ ಆರೋಗ್ಯ ತಕ್ಕಮಟ್ಟಿಗೆ ಸರಿಯಾಗಿ ಆಸ್ಪತ್ರೆಯಲ್ಲಿ ಇನ್ನು ಇರಲು ಸಾಧ್ಯವಿಲ್ಲವೆಂದು ಆಕೆಗೆ ತೋರುವುದರೊಳಗೆ, ಲೇಡಿ ಡಾಕ್ಟರೂ ಸಹ "ಇನ್ನು ೩-೪ ದಿನಕ್ಕೆ ನಿಮ್ಮನ್ನೂ ಇಲ್ಲಿಂದ ಕಳುಹಿಸಿಬಿಡು

ತ್ತೇವೆ” ಎಂದು ಬಂದು ಹೇಳಿದರು. ಡಾಕ್ಟರು “ಇನ್ನೂ ನಿಮಗೆ ಒಂದುವರೆ ಎರಡು ತಿಂಗಳು ವಿಶ್ರಾಂತಿ ಬೇಕು. ಪೂರ್ಣ ನಿಶ್ಶಕ್ತಿ ; ಆದರೆ ಇಲ್ಲಿ ಬರುವ ರೋಗಿಗಳ ಸಂಖೆ ಹೆಚ್ಚಾದುದರಿಂದ ನಿಮ್ಮನ್ನು ಇಟ್ಟುಕೊಳ್ಳಲು ಸಾಧ್ಯವಿಲ್ಲ. ಮನೆಯಲ್ಲಿ ಹೋಗಿ ಆರೈಕೆ ಮಾಡಿಕೊಳ್ಳಿ. ನಿಮ್ಮ ಆಪ್ತರ ವಿಳಾಸ ಹೇಳಿ. ಬಂದು ಕರೆದುಕೊಂಡು ಹೋಗುವಂತೆ ಬರೆಯುತ್ತೇನೆ” ಎಂದರು. “ಆಪ್ತರು” ಎಂಬ ಮಾತನ್ನು ಹೇಳುವಾಗ ಲೇಡಿ ಡಾಕ್ಟರು ಸ್ವಲ್ಪ ತಡೆದು ತಡೆದು ಹೇಳಿದರು. ಅದಲ್ಲದೆ ಮತ್ತಾವ ಮಾತನ್ನು ಹೇಳಬೇಕೆಂಬುದು ಆಕೆಗೆ ತೋಚಲಿಲ್ಲ. ಆದರೆ ಅವಳ ಅಭಿಪ್ರಾಯ ಸೀತಾಲಕ್ಷ್ಮಿಗೆ ಚೆನ್ನಾಗಿ ಅರ್ಥವಾಯಿತು. “ನಿನ್ನ ಈ ಸ್ಥಿತಿಗೆ ಕಾರಣರಾದರೂ ನಿನ್ನನ್ನು ಕೈ ಬಿಟ್ಟ ನೀಚರು” ಎಂಬುದು ಡಾಕ್ಟರರ ಅಭಿಪ್ರಾಯವಾಗಿತ್ತೆಂದು ಸೀತಾಲಕ್ಷ್ಮಿಗೆ ಚೆನ್ನಾಗಿ ತಿಳಿಯಿತು. ಅವಳು ಮಾತನಾಡದೆ ಮಲ್ಲಿಗೆಹಳ್ಳಿಯಲ್ಲಿ ಶ್ರೀನಿವಾಸನ ವಿಳಾಸವನ್ನು ಡಾಕ್ಟರರಿಗೆ ಕೊಟ್ಟಳು. ಆಕೆಗೆ ಯಾವಾಗಲೂ ಶ್ರೀನಿವಾಸನ ಮೇಲೆ ನಂಬಿಕೆ. ಅವನ ಹೃದಯ ಬಹು ಮೃದುವಾದುದೆಂಬುದು ಆಕೆಗೆ ತಂದೆ ಮೃತನಾದಂದಿನಿಂದ ಅನುಭವ.

ಲೇಡಿ ಡಾಕ್ಟರು ಕಾಗದ ಬರೆದ ಮೂರೇ ದಿನಗಳೊಳಗೆ ಶ್ರೀನಿವಾಸನು ಮಲ್ಲಿಗೆಹಳ್ಳಿಯಿಂದ ಬಂದು ಸೀತಾಲಕ್ಷ್ಮಿಯನ್ನು ಮನೆಗೆ ಕರೆದುಕೊಂಡು ಹೋದನು. ತನಗೆ ಕಾಗದ ಬಂದುದನ್ನಾಗಲಿ ತಾನು ಹೀಗೆ ಹೋಗುವು ದನ್ನಾಗಲಿ, ಆತ ಮನೆಯಲ್ಲಿ ಯಾರಿಗೂ ಹೇಳಲಿಲ್ಲ. ಹೇಳಿದ್ದರೆ ಪ್ರಶ್ನೆ ತತ್‌ಕ್ಷಣ ತೀರ್ಮಾನವಾಗುವುದಿಲ್ಲವೆಂದೂ ಆಗಬೇಕಾದ ಕೆಲಸಕ್ಕೆ ಮಾತ್ರ ಭಂಗಬರುವುದೆಂದೂ ಆತನಿಗೆ ಗೊತ್ತಿತ್ತು. ಕೆಲಸ ಆದನಂತರ ಯಾರ ಹತ್ತಿರ ಬೇಕಾದರೂ ಚರ್ಚಿಸೋಣ, ಎಂದುಕೊಂಡು ಅವನು ತನ್ನ ಹೃದಯ ಪ್ರೇರಿಸಿದಂತೆ ನೆಟ್ಟಗೆ ಬಂದು ಸೀತಾಲಕ್ಷ್ಮಿಯೊಡನೆ ಹಿಂದಿರುಗಿದನು. ಸೀತಾ ಲಕ್ಷ್ಮಿ ಎಲ್ಲಿದ್ದಾಳೆ ಏನು ಮಾಡುತ್ತಿದ್ದಾಳೆ ಎಂಬ ಸುದ್ದಿ ಸ್ಪಷ್ಟವಾಗಿ ತಿಳಿಯ ದಿದ್ದರೂ, ಹೀಗೆ ಹೀಗೆಯೇ ಆಗುತ್ತಿದೆ ಎಂಬುದನ್ನು ಊಹಿಸಿಕೊಂಡಿದ್ದ ರಾಮುವಿಗೂ ಅವನ ಹೆಂಡತಿಗೂ, ಶ್ರೀನಿವಾಸನ ಹೆಂಡತಿಗೂ, ಈ ಪ್ರಶ್ನೆ ಹೀಗೆ ತೀರ್ಮಾನವಾದುದರಿಂದ, ಮೊದಲು ಮನೆಯಲ್ಲಿಯೇ ಹಾವನ್ನು ಕಂಡಂತೆ ಗಾಬರಿಯಾದರೂ, ಅನಂತರ ಸದ್ಯ ಹೀಗೆ ಕೊನೆಯಾಯಿತಲ್ಲ ಎಂಬ ಸಮಾಧಾನವುಂಟಾಯಿತು.

ತಾನು ಮುಂದೆ ಬಾಳಬೇಕಾದ ತುಂಬುಜೀವನ ಸಂಭ್ರಮ ಕನಸಿ ನೊಡನೆ ಅಕ್ಕನ ಬಾಣಂತನಕ್ಕಾಗಿ ಆ ಮನೆಯನ್ನು ಬಿಟ್ಟುಹೋಗಿದ್ದ ಸೀತಾ ಲಕ್ಷ್ಮಿ, ನಿರ್ಜೀವಳಾಗಿ ಗೋರಿಯನ್ನು ಹೆಣ ಸೇರುವಂತೆ ಹೇಗೋ ಬಂದು ತವರನ್ನು ಸೇರಿಕೊಂಡಳು.

೧೧

ಹೀಗೆ ಸುಮಾರು ೮—೧೦ ತಿಂಗಳಿನಿಂದ ಯಾರ ಸುದ್ದಿ ಮಾತನಾಡಿ ಮಾತನಾಡಿ ಸ್ತ್ರೀಯರಿಗೆ ಸುಸ್ತಾಗಿರಲಿಲ್ಲವೊ, ಯಾರ ರೂಪನ್ನು ನೆನೆದು ನೆನೆದು ಯುವಕರಿಗೆ ದಿನೇದಿನೇ ಉತ್ಸಾಹ ಹೆಚ್ಚುತ್ತಿದ್ದಿತೋ, ಆ ಸೀತಾಲಕ್ಷ್ಮಿ ಊರಿಗೆ ಬಂದಕೂಡಲೇ ಊರಿನ ಜೀವನದಲ್ಲಿ ಎಂದೂ ಇಲ್ಲದ ಚುರುಕು ಪ್ರಾರಂಭವಾಯಿತು. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಧೀರ ಯುವ ಕರು, ಶ್ರೀನಿವಾಸನ ಮನೆಯಮುಂದೆ ಸುಳಿದಾಡತೊಡಗಿದರು. ಸೌಂದರ್ಯೋ ಪಾಸಕರು ತಮಗೆ ಆ ದಾರಿಯಲ್ಲಿ ಕೆಲಸವಿಲ್ಲದಿದ್ದರೂ, ದೇವಸ್ಥಾನದ ಬಾಗಿ ಲನ್ನು ಮುಚ್ಚಿದ್ದರೂ ಭಕ್ತರು ಹೊರಗೇ ತಿರುಗುವಂತೆ, ತಿರುಗುತ್ತಿದ್ದರು. ಪಾಪ, ತನ್ನ ಆಗಮನದಿಂದ ಈಗಲೂ ಗ್ರಾಮಜೀವನದಲ್ಲಿ ಹೀಗೆ ತಳಮಳ ವುಂಟಾಗಿದೆಯೆಂದು ಅರಿಯದಿದ್ದ ಆ ಬಡಪಾಯಿ, ನಿಶ್ಯಕ್ತಳಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಳು.

ಸ್ತ್ರೀಯರಲ್ಲಿ ಒಳಗೊಳಗೇ ಕುದಿಯುತ್ತಿದ್ದ ಕುತೂಹಲ, ನಾಲ್ಕಾರು ದಿನಗಳಲ್ಲಿ ಸಂಭಾಷಣೆಯಲ್ಲಿ ಹೊರಹೊಮ್ಮಿತು. ಆ ಬೆಳಿಗ್ಗೆ ನದಿಯಲ್ಲಿ ಕಾವೇ ರಮ್ಮನ ಪ್ರತಾಪವೇ ಪ್ರತಾಪವಾಗಿತ್ತು. ಒಬ್ಬೊಬ್ಬರೊಂದಿಗೆ ಒಬ್ಬೊಬ್ಬರು ಗುಟ್ಟುಗುಟ್ಟಾಗಿ, ಅಥವ ಮೂರು ನಾಲ್ಕು ಜನ, ತಮ್ಮತಮ್ಮೊಳಗೇ ಪಿಸು ಗುಟ್ಟುತ್ತಿದ್ದುದನ್ನು ಸಾರ್ವಜನಿಕ ಪ್ರಶ್ನೆಮಾಡಿ, ಯಾರು ಎಲ್ಲಿ ಬೇಕಾದರೂ ಚರ್ಚಿಸಿಕೊಳ್ಳುವ ಯೋಗ್ಯತೆಯನ್ನು ಅದಕ್ಕೆ ತಂದುಕೊಡಬೇಕೆಂಬುದು ಕಾವೇರಮ್ಮನ ಅಂದಿನ ಸಿದ್ಧಾಂತವಾಗಿತ್ತು. ಹೀಗೆ ಸೀತಾಲಕ್ಷ್ಮಿಯ ಪ್ರಶ್ನೆ ಸಾರ್ವಜನಿಕವಾಗದುದರಿಂದ, ನದಿ ಅಥವ ಭಾವಿಯ ನೀರನ್ನು ಸಾರ್ವಜನಿಕ ಮಾಡದೆ ಕೆಲವು ಸ್ವಾರ್ಥಿಗಳೇ ಇಟ್ಟುಕೊಂಡುಬಿಟ್ಟರೆ ಹೇಗೆ ಗ್ರಾಮಕ್ಕೆ ನಷ್ಟವೋ ಹಾಗೆ ನಷ್ಟವೆಂದು ಕಾವೇರಮ್ಮ ಭಾವಿಸಿದಳು. ಈ ಸಂಭಾಷಣೆಗೆ

ಅರ್ಹಳಾದವಳು ಯಾವಳಾದರೂ ಬರಲಿ, ಎಂದು ಕಾವೇರಮ್ಮ ಚಡಪಡಿಸುತ್ತ ನದಿಯಲ್ಲಿ ಪಾತ್ರೆ ತಿಕ್ಕುತ್ತ ತಲೆಎತ್ತಿ ನೋಡಿದಾಗ, ಮೇಲೆ ಪದ್ಮಾವತಿಯನ್ನು ಕಂಡಳು. ಸ್ವಾಭಾವಿಕವಾಗಿ ಪದ್ಮಾವತಿಗೂ ಕಾವೇರಮ್ಮನಿಗೂ ಯಾವಾಗಲೂ ವಿರೋಧ. ಆದರೂ ಅವರು ಒಬ್ಬರೊಂದಿಗೆ ಒಬ್ಬರು ಮಾತನಾಡುವುದನ್ನು ಬಿಟ್ಟಿರಲಿಲ್ಲ. ಅದರಲ್ಲಿಯೂ ಊರಿಗೆ ಸೇರಿದ ಸಾರ್ವಜನಿಕ ಪ್ರಶ್ನೆ ಬಂದಾಗ ಲಂತೂ, ಆ ಇಬ್ಬರು ಮಹಿಳೆಯರೂ ಅನಾಸಕ್ತಯೋಗಿಗಳಂತೆ ತಮ್ಮ ಸ್ವಂತ ಪರಸ್ಪರ ಅಸಮಾಧಾನವನ್ನು ಮರೆತು, ಬಿಚ್ಚಿದ ಮನಸ್ಸಿನಿಂದ ಊರಿನ ಪ್ರಶ್ನೆ ಯನ್ನು ಚರ್ಚಿಸುತ್ತಿದ್ದರು.

ಕಾವೇರಮ್ಮ.—ಆ ತ್ರಿಪುರಸುಂದರಿ, ಸೀಮೆಸೆಲ್ಲ ಹಾಳುಮಾಡಿ ಮತ್ತೆ ಇಲ್ಲಿಗೆ ಬಂದಿದಾಳೆ. ಪದ್ಮಾವತಿಯು.

ಪದ್ಮಾವತಿಗೆ ಯಾರು ಎಂಬುದು ತಿಳಿದಿತ್ತು. ಅವಳಿಗೆ ತಿಳಿದಿದೆ ಎಂದುದು ಕಾವೇರಿ ಅಮ್ಮನಿಗೂ ತಿಳಿದಿತ್ತು. ಆದರೂ ಹಾಗೆ ಮಾತನಾಡು ವುದು ಅವರ ವಾಡಿಕೆ. ಆದುದರಿಂದ ಪದ್ಮಾವತಿಯು.

ಕಾವೇರಮ್ನೋರೆ. ಯಾರನ್ನ ನೀವು ಹೇಳೋದು ಎಂದಳು.

ಕಾವೇರಮ್ಮನಿಗೆ ಸೀತಾಲಕ್ಷ್ಮಿಯ ಕೆಟ್ಟ ಹೆಸರನ್ನು ಸಹ ಉಚ್ಚರಿಸಲು ಇಷ್ಟವಿರಲಿಲ್ಲ. ಆಕೆ

ಇನ್ನಾರು. ಎದುರು ಮನೆ ರಾಮಣ್ಣನ ಮಗಳು—ಎಂದಳು.

ಪದ್ಮಾವತಿ.—ಅಲ್ಲ ಕಾವೇರಮ್ನೋರೆ. ಈ ಕಾಲದ ಹೆಣ್ಮಕ್ಕಳ ಧೈರ್ಯ ನೋಡಿದಿರಾ? ಗಂಡಸರು ಗಾದೆ ಹೇಳೊ ಹಾಗೆ ಆಚೆ ಬೀದಿಲಿ ಎಕ್ಕಡದಲ್ಲಿ ಹಾಕಿದ್ರೆ ಈಚೆ ಬೀದಿಲಿ ಹೊಸಬಳು ಅಂತ. ಯಾವ ಮೊಖ ಇಟ್ಕೊಂಡು ಇಲ್ಲಿಗೆ ಬಂದಳು.

ಕಾವೇರಮ್ಮ.—ಯಾವ ಮೊಖವೇ? ಮೂದೇವಿ ಮೊಖ, ಅವಳು ಬರೋದಿರ್ಲಿ. ಗಂಡಸು ಅಂತ ಹೇಳ್ಕೊಂಡು ಹೋಗಿ, ಅದನ್ನ ಈ ಶ್ರೀನಿವಾಸ ಹೇರ್ಕೊಂಡ್ಬಂತೆಲ್ಲ ಅದಕ್ಕೆ ನನಗೆ ಆಶ್ಚರ್ಯ.

ವೃದ್ಧ ಸುಮಂಗಲಿಯರಿಬ್ಬರೂ ಹೀಗೆ ತಮ್ಮ ಮಾತಿನಲ್ಲಿ ನೆಟ್ಟ ಮನವುಳ್ಳವರಾಗಿರುವಾಗ ಶಾರದೆಯೂ, ರುಕ್ಮಿಣಿಯೂ ಬಂದುದು ಅವರಿಗೆ

ಗೊತ್ತಾಗಲೇ ಇಲ್ಲ. ಶಾರದೆಯು ಉತ್ಕಂಠಿತಳಾಗಿ "ಕರ್ಮ್ಯೊಂಡು ಬರದೆ ಅವನು ಏನು ಮಾಡಬೇಕಾಗಿತ್ತು ಎಂದಳು.

ರುಕ್ಮಿಣಿ—ಕೆರೆಗೋ, ಭಾವಿಗೋ, ತಳ್ಳಿಬಿಟ್ಟು ಬರಬೇಕಾಗಿತ್ತು!

ಕಾವೇರಮ್ಮ—ನಿನ್ನ ಹಾಸ್ಯ ನನಗೆ ಗೊತ್ತು ಕಣೆ. ಹುಂ, ಕೆರೆಗೋ ಭಾವಿಗೋ ತಳ್ಳಿಬಿಟ್ಟು ಬರದೆ, ಆ ಮೂಳಿನ ಇಲ್ಲಿ ಕರ್ಮ್ಯೊಂಡ್ಬಂದು ಮಾಡೋದೇನು?

ಶಾರದ—ಯಾರೇನು ಮಾಡಬೇಕು. ಅವಳ ಪಾಡಿಗೆ ಅವಳು ತನ್ನ ಅಣ್ಣನ ಮನೇಲಿ ಇದ್ದಾಳೆ.

ಕಾವೇರಮ್ಮ—ಯಾವ ಮುಖ ಮಡಿಗಿಕೊಂಡು ಇರ್ತಾಳ್ಳೆ. ಗಂಡನುಳ್ಳ ಗರತಿ ಅಲ್ಲ. ಗಂಡ ಸತ್ತ ಮಡಿ ಹೆಂಗಸಲ್ಲ.

ರುಕ್ಮಿಣಿ ಅತ್ತ ಶ್ರೀನಿವಾಸ, ರಾಮು ಇವರಿಗೆ ಸಹ ಅದೇ ಚರ್ಚೆ ಪ್ರಾರಂಭವಾಗಿತ್ತು. ಶ್ರೀನಿವಾಸನದು ಧೈರ್ಯದ ಸ್ವಭಾವ. ಆದರೆ ರಾಮುವಿಗೆ ಊರಿನವರ ಭಯ. ಆ ಭಯ ಅವನ ಕರುಣೆಯನ್ನೂ ಮುಚ್ಚಿತ್ತು. ಶ್ರೀನಿವಾಸನ ಹೆಂಡತಿ ಸತ್ಯವತೀ, ರಾಮನ ಹೆಂಡತಿ ಅಲಮೇಲು, ಇವರಿಬ್ಬರೂ ರಾಮನ ಮನೋಭಾವದವರು. ಜನ ಎಲ್ಲಿ ತಮ್ಮನ್ನು ಏನು ಕೇಳಿಬಿಡುತ್ತಾರೆಯೋ, ತಮಗೆ ಏನು ಹೇಳಿಬಿಡುತ್ತಾರೆಯೋ ಎಂದು ಬೆಚ್ಚಿಬೆಚ್ಚಿ ಬೀಳುತ್ತಿದ್ದರು. ಸೀತಾಲಕ್ಷ್ಮಿಯ ಸ್ಥಿತಿ ಗೊತ್ತಾದಂದಿನಿಂದ ರಾಮನ ಮನೆಯವರೊಂದಿಗೆ ಹೆಚ್ಚಾಗಿ ಸೇರದೆ ಅಪ್ರತ್ಯಕ್ಷವಾಗಿ ಅವರನ್ನು ಬಹಿಷ್ಕರಿಸಿದ್ದ ಸ್ತ್ರೀಯರು, ಸೀತಾಲಕ್ಷ್ಮಿ ಮನೆಗೆ ಹಿಂದಿರುಗಿದ ನಂತರ ಇವರ ಜತೆ ಸೇರುವುದನ್ನೇ ಸಾಮಾನ್ಯವಾಗಿ ಬಿಟ್ಟರು. ತಮ್ಮ ಈ ಭಾವನೆಯನ್ನು ರಾಮುವಿನ ಮನೆಯವರಿಂದ ಮುಚ್ಚಿಕೊಳ್ಳಲು ಸಹ ಅವರಿಗೆ ಸಾಧ್ಯವಾಗಲಿಲ್ಲ. ನದಿಯಲ್ಲಿ ಸೇರಿದರೂ, ಇವರೊಂದಿಗೆ ಅವರಿಗೆ ಎಷ್ಟೋ ಅಷ್ಟೆ ಮಾತು. ವೃದ್ಧ ಸುಮಂಗಲಿಯರು ಅವರ ನೀರು ತಮಗೆ ಎಲ್ಲಿ ಹಾರುವುದೋ ಎಂದು ಅವರಿಂದ ದೂರದಲ್ಲಿ ಇಳಿದುಕೊಳ್ಳುತ್ತಿದ್ದರು.

ರಾಮನಿಗಾಗಲೀ, ಶ್ರೀನಿವಾಸನಿಗಾಗಲೀ, ಇದಾವುದೂ ಗೋಚರವಾಗದೆ ಹೋಗಲಿಲ್ಲ. "ಉಣ್ಣುವ ಅನ್ನದ ಗಡ್ಡೆ ಮಾರಿ ಮದುವೆಮಾಡ್ಕೊಂಡುದರ ಫಲ ಹೀಗಾಯಿತೆ?" ಎಂದು ಅವರು ಕೊರಗುತ್ತಿದ್ದರು. ಸೀತಾಗ್ಳು

ಲಕ್ಷ್ಮಿಯ ನಿಶ್ಶಕ್ತಿ ಕ್ರಮೇಣ ಪರಿಹಾರವಾಗಿ ಅವಳು ಪುಟಕ್ಕಿಟ್ಟ ಚಿನ್ನದಂತೆ ಮೊದಲಿಗಿಂತಲೂ ಹೆಚ್ಚು ಸುಂದರಿಯಾದಳು. ಅವಳ ದೇದೀಪ್ಯಮಾನವಾದ ರೂಪರಾಶಿಯನ್ನು ನೋಡಿದಕೂಡಲೇ, ಇವಳು ಯಾವಳೋ ಶಾಪಗ್ರಸ್ತ ಗಂಧರ್ವಕನ್ನಿಕೆ ಎಂದು ಜನರಿಗೆ ಭ್ರಾಂತಿಯುಂಟಾಗುತ್ತಿದ್ದಿತು. ಯುವಕರಿಗೆ ಆ ರೂಪರಾಶಿಯನ್ನು ನೇತ್ರಗಳಿಂದ ಪಾನಮಾಡಿ ತೃಪ್ತಿಯುಂಟಾಗಲಿಲ್ಲ. ನಾನಾ ಕಾರಣಗಳಿಂದ ಪದೇಪದೇ ಅವರ ಬರವು ರಾಮುವಿನ ಮನೆಯಲ್ಲಿ ಆಗತೊಡಗಿತು. ಇಂತಹ ಹೆಣ್ಣನ್ನು ಇಟ್ಟುಕೊಂಡು ಬಾಳುವ ಯೋಗ್ಯತೆ ಸುಂದರರಾಜನಿಗೆ ಇಲ್ಲವಲ್ಲ? ಎಂದು ಅವರು ಅವನನ್ನು ಬೈದರು. ಕೆಲವು ಉತ್ಸಾಹಿಗಳಂತೂ "ವಿವಾಹವಿಚ್ಛೇದ ನಮ್ಮಲ್ಲಿಯೂ ಪಾಶ್ಚಾತ್ಯರಲ್ಲಿರುವಷ್ಟೆ ಸುಲಭವಾಗಬೇಕೆಂದು" ವಾದಿಸತೊಡಗಿದರು. ಊರಿನ ಯುವಕರಿಗೂ ಸ್ತ್ರೀಯರಿಗೂ ಯಾವಾಗಲೂ ಇದೊಂದೇ ಸಂಭಾಷಣಾವಸ್ತುವಾಯಿತು. ಸೀತಾಲಕ್ಷ್ಮಿಯ "ಸಂಗತಿ" ಸಂಭವಿಸಿದಂದಿನಿಂದ ಊರಿನವರಿಗೆ ಮಾತಿನ ವಿಷಯದ ಕೊರತೆ ತಪ್ಪಿಹೋಯಿತು.

ಇವುಗಳೆಲ್ಲದರ ಒಟ್ಟು ಪರಿಣಾಮವಾಗಿ ಶ್ರೀನಿವಾಸ, ರಾಮು ಇವರಿಗೆ ಹೆಚ್ಚು ನಾಚಿಕೆಯಾಯಿತು. ತಮ್ಮ ಮನೆಗೆ ಯುವಕರು ಯಾವ ನೆಪದಿಂದ ಬರಲಿ ಅವರ ಉದ್ದೇಶ ಇವರಿಗೆ ತಿಳಿಯದಿರುತ್ತಿರಲಿಲ್ಲ. ಸ್ತ್ರೀಯರ ದೃಷ್ಟಿಯಲ್ಲಿಯಂತೂ ತಪ್ಪೆಲ್ಲ ಸೀತಾಲಕ್ಷ್ಮಿಯದೇ ಆಗಿದ್ದಿತು. "ಇವಳು ಇಲ್ಲಿರುವ ಹೊತ್ತಿಗೆ ತಾನೇ ಅವರು ಬರುತ್ತಿದ್ದಾರೆ. ಇವಳ ಸ್ವಭಾವ ಗೊತ್ತಾದುದರಿಂದ ಬರುತ್ತಿದಾರೆ. ಈಗ ಉಳಿದವರ ಮನೆಗೆ ಹೋಗುತ್ತಿದಾರೆಯೇ?" ಎಂದು ಅವರು ಮನೆಯಲ್ಲಿ ಸೀತಾಲಕ್ಷ್ಮಿಗೆ ಕೇಳುವಂತೆಯೇ ಹೇಳತೊಡಗಿದರು. ಸೀತಾಲಕ್ಷ್ಮಿಗೆ ಬಹಳ ದುಃಖವಾಯಿತು. "ನಾನು ಇವರನ್ನು ಕರೆದನೆ? ನನ್ನ ಮನಸ್ಸಿನಲ್ಲಿರುವ ದುಃಖ ಇವರಿಗೆ ಯಾಕೆ ತಿಳಿಯುವುದಿಲ್ಲ? ನನ್ನ ಪ್ರಯತ್ನ ಮೀರಿ ನಡೆದುಹೋದುದಕ್ಕೆ ನಾನೇ ಜವಾಬ್ದಾರಳು" ಎಂದು ಅವಳು ಕೊರಗಿದಳು. ಗಂಡನು ತನ್ನನ್ನು ಬಿಟ್ಟಿದ್ದರೂ ಗಂಡನೇ ಸರ್ವಸ್ವವೆಂದು ನಂಬಿದ್ದ ಅವಳಿಗೆ "ನಾನು ರೆಕ್ಕೆಗಳನ್ನು ಹರಡಿಕೊಂಡು ಪುರುಷರನ್ನು ಆಕರ್ಷಿಸಲು ಆತುರಳಾಗಿರುವೆನೆಂದು ಈ ಜನ ಭಾವಿಸುತ್ತಿರುವರಲ್ಲ?" ಎಂದು ದುಃಖವಾಯಿತು. ಅವಳಿಗೆ "ನಾನು ಪತಿವ್ರತೆ. ನನ್ನ ಗಂಡ ನನ್ನನ್ನು

ಬಿಟ್ಟಿದ್ದಾನೆ. ಇದು ನಿಜ. ಆದರೆ ಅದು ನನಗೂ, ನನ್ನ ಗಂಡನಿಗೂ ಸಂಬಂಧಿಸಿದ ವಿಷಯ. ನಿರ್ದೋಷಿಯಾದ ನನ್ನಲ್ಲಿ ಅವನು ದೋಷವೆಣಿಸಿದ್ದ ಮಾತ್ರಕ್ಕೆ ನಾನು ಬೀದಿಯ ಸೂಳೆಯಾದೆನೆ? ಸೀತಾದೇವಿಯನ್ನು ರಾಮನು ತಿರಸ್ಕರಿಸಿರಲಿಲ್ಲವೆ? ರಾವಣನ ಮನೆಯಲ್ಲಿ ಏನಾಯಿತೋ ಬಲ್ಲವರಾರು? ಆದರೆ ರಾಜನಾದ ರಾಮನೇ ಅನಂತರ ಸೀತಾದೇವಿಯೊಡನೆ ಬಾಳ್ವೆ ಮಾಡ ಲಿಲ್ಲವೆ? ಹೌದು ಸೀತಾದೇವಿ ಅಗ್ನಿಪ್ರವೇಶ ಮಾಡಿದಳು. ಆದರೆ ನನಗೆ ಪ್ರಾಣ ಕಳೆದುಕೊಳ್ಳುವ ಧೈರ್ಯವಿಲ್ಲವಲ್ಲ? ಸೀತಾದೇವಿಗೆ ರಾಮ ಹೇಗೋ ಹಾಗೆ ನನಗೂ ನನ್ನ ಗಂಡನೇ ನನ್ನ ದೇವರಲ್ಲ. ನಾನು ಎಲ್ಲರಿಗಿಂತ ಹೆಚ್ಚು ಪತಿಭಕ್ತಳು ಎಂಬುದು ಯಾಕೆ ಈ ಜನಕ್ಕೆ ತಿಳಿಯುವುದಿಲ್ಲ?" ಎನ್ನಿಸುತ್ತಿತ್ತು.

ಅದುವರೆಗೆ ಒಂದೇ ದೇಹದಂತಿದ್ದ ರಾಮಸ್ವಾಮಿ, ಶ್ರೀನಿವಾಸರಲ್ಲಿ ಸೀತಾಲಕ್ಷ್ಮಿಯ ನೆಪದಿಂದ ವೈಮನಸ್ಸು ಪ್ರಾರಂಭವಾಯಿತು. ಮನೆಯಲ್ಲಿ ಪ್ರತಿಯೊಬ್ಬರ ಮುಖವೂ ಒಂದೊಂದು ಕಡೆಗೇ ಆಯಿತು. "ಯಾವಾಗ ನೋಡಲಿ ಎಲ್ಲರ ಮನಸ್ಸಿನಲ್ಲಿಯೂ ಕೊರೆಯುತ್ತಿರುವುದು ಇದೊಂದೆ. ಇದರ ಹೊರತು ಇವರಿಗೆ ಬೇರೆ ಯೋಚನೆಯೇ ಇಲ್ಲವಲ್ಲ? ನನ್ನ ಪಾಡು ನನಗೆ. ನನ್ನ ಮಟ್ಟಿಗೆ ನಾನು ಇರುತ್ತೇನೆ. ಈಗ ಅವರು ಏನು ಮಾಡುತ್ತಿದ್ದಾರೆ? ಯಾಕೆ ಮಾಡುತ್ತಿದ್ದಾರೆ? ಎಂದು ನಾನು ಕೇಳಿದೆನೆ? ಅವರ ಪಾಡಿಗೆ ಅವರನ್ನು, ನಾನು ಬಿಟ್ಟಂತೆ, ನನ್ನ ಪಾಡಿಗೆ ನನ್ನನ್ನು ಇವರು ಯಾಕೆ ಬಿಡು ವುದಿಲ್ಲ" ಎಂದು ಸೀತಾಲಕ್ಷ್ಮಿ ಯೋಚಿಸಿದಳು. ಸೀತಾಲಕ್ಷ್ಮಿ ಮನೆಗೆ ಬಂದ ಮೇಲೆ ರಾಮಸ್ವಾಮಿಯ ಹೆಂಡತಿಗೆ ಇದ್ದಕ್ಕಿದ್ದಂತೆ ಮೈಲಿಗೆ, ಮಡಿ, ಶಕುನ, ಅಪಶಕುನ, ಕಾಲುಧೂಳು ಮುಂತಾದುವುಗಳ ಕಾಟ ಪ್ರಾರಂಭವಾಯಿತು. ಸೀತಾಲಕ್ಷ್ಮಿ ಮುಟ್ಟಿದುದೆಲ್ಲ ಮೈಲಿಗೆಯಾಯಿತು. ಅವಳು ಕುಳಿತ ಮಣೆ, ನಿಂತ ನೆಲ, ಕುಡಿದ ಬಟ್ಟಲು, ಕೊನೆಗೆ ಅವಳಿದ್ದ ಮನೆಯೆಲ್ಲ ಮೈಲಿಗೆಯೇ ಆಯಿತು. ಹಿಂದೆ ರಾಮನ ಮಕ್ಕಳು ಸೀತಾಲಕ್ಷ್ಮಿ ಬಡಿಸದಿದ್ದರೆ ಊಟವನ್ನೇ ಮಾಡುತ್ತಿರಲಿಲ್ಲ. ಊಟಮಾಡುವುದಿಲ್ಲವೆಂದು ಹಠಹಿಡಿದ ಮಕ್ಕಳನ್ನು ಸೀತಾಲಕ್ಷ್ಮಿ ಸಮಾಧಾನಪಡಿಸಿ ಉಣಬಡಿಸುತ್ತಿದ್ದಳು. ಆಗಲೆಲ್ಲ ರಾಮನ ಹೆಂಡತಿ "ಸೀತಾಲಕ್ಷ್ಮಿಯ ಕೈಯಲ್ಲಿ ಊಟಮಾಡದಿದ್ದರೆ, ಈ ಮಕ್ಕಳಿಗೆ ಹೊಟ್ಟೆಯೇ ತುಂಬುವುದಿಲ್ಲ. ನಾನು ಬರಿಯ ಹೆತ್ತತಾಯಿ. ಸಾಕುವ

ತಾಯಿ ಈಕೆಯೇ" ಎನ್ನುತ್ತಿದ್ದರು. ಆದರೆ ಈಚೆಗೆ ಸೀತಾಲಕ್ಷ್ಮಿ ಮಕ್ಕಳನ್ನು ಮುಟ್ಟಿದರೆ ಆಗದು. ಅವು ಊಟಮಾಡುವಾಗ ಅವಳು ಒಳಕ್ಕೆ ಬಂದರೆ ಅವಕ್ಕೆ ಕಾಲುಧೂಳು ಹೊಟ್ಟೆನೋವು. ದೊಡ್ಡವರು ಊಟಮಾಡುವಾಗ ಸೀತಾಲಕ್ಷ್ಮಿ ಬಂದರೂ ಆ ದೊಡ್ಡವರಿಗೂ ಕಾಲುಧೂಳಿನ ಹೊಟ್ಟೆನೋವು!" ಕೇಳಿ ಕೇಳಿ ಸೀತಾಲಕ್ಷ್ಮಿಗೆ ಬೇಸರಿಕೆಯಾಯಿತು. ಹೆಂಗಸರು ಈ ಮಾತು ಆಡಿ ಆಡಿ ಕೊನೆಗೆ ರಾಮುನಿಗೂ ಅದರಲ್ಲಿ ನಂಬಿಕೆ ಬಂದುಬಿಟ್ಟಿತು. ಹಿಂದೆ ರಾಮುನಿಗೆ ಶಕುನ ಮುಂತಾದುವಲ್ಲಿ ನಂಬಿಕೆ ಇರಲಿಲ್ಲ. "ಅದೆಲ್ಲ ಹಣವುಳ್ಳ ನಿರುದ್ಯೋಗಿಗಳಿಗೆ. ನಮಗೆ ಶಕುನ ಸಾಲಾವಳಿಗಳಿಂದ ಆಗಬೇಕಾದುದೇನು? ನಮ್ಮ ದಾರಿದ್ರ್ಯವನ್ನು ಕಂಡು ದೆಯ್ಯ ಭೂತಗಳು ಸಹ ನಮ್ಮ ಸಮೀಪ ಸೇರುವುದಿಲ್ಲ"ವೆಂದು ಅವನು ಹೇಳುತ್ತಿದ್ದನು. ಈಗಲೂ ಅವನ ಅಭಿಪ್ರಾಯ ಅದೇ ಆಗಿದ್ದರೂ, ಸೀತಾಲಕ್ಷ್ಮಿಯ ಮಟ್ಟಿಗೆ ಮಾತ್ರ ಅವಳು ಅಪಶಕುನ ವೆಂಬ ನಂಬಿಕೆ ದೃಢವಾಗತೊಡಗಿತ್ತು. ಒಂದು ದಿನ ಅದರ ಪರೀಕ್ಷೆಯೂ ಆಗಿಹೋಯಿತು.

ಆವತ್ತು ರಾಮುಸ್ವಾಮಿ ಒಂದು ಮೊಖದ್ದಮೆಗಾಗಿ ಮುನಸೀಫ್ ಕೋರ್ಟಿಗೆ ಹೋಗಬೇಕಾಗಿತ್ತು. ಸೀತಾಲಕ್ಷ್ಮಿ ಹೊರಗಾಗಿದ್ದಳು. ಹೊರ ಟಾಗ ಎಲ್ಲಿ ಆಕೆ ಕಣ್ಣಿಗೆ ಬಿದ್ದುಬಿಡುತ್ತಾಳೋ ಎಂಬ ಭಯ ಅವನನ್ನು ಕಾಡತೊಡಗಿತ್ತು. ಬಸ್ ಹಿಡಿಯಬೇಕಾದರೆ ಸುಮಾರು ಮೂರು ಫರ್ಲಾಂಗು ಮನೆಯಿಂದ ನಡೆದುಕೊಂಡು ಹೋಗಬೇಕಾಗಿತ್ತು. ರಾಮುಸ್ವಾಮಿ ಮನೆ ಯಿಂದ ಹೊರಕ್ಕೆ ಹೊರಟು ಹತ್ತು ಹೆಜ್ಜೆ ಇಟ್ಟಕೂಡಲೇ, ಕಾಲುವೆಗೆ ಹೋಗಿದ್ದ ಸೀತಾಲಕ್ಷ್ಮಿ ಎದುರಿಗೆ ಬರುತ್ತಿರುವುದು ಕಣ್ಣಿಗೆ ಬಿತ್ತು. ರಾಮು ಸ್ವಾಮಿ ಕೂಡಲೇ ಹಿಂದಿರುಗಿ ಮನೆಯ ಮುಗ್ಗುಲಿನ ಓಣಿಯಲ್ಲಿ ಸ್ವಲ್ಪ ದೂರ ಆ ದಾರಿಯಿಂದ ಬಳಸಿಕೊಂಡು ಬಸ್ ಸ್ಟಾಂಡ್‌ಗೆ ಹೋಗಬಯಸಿ ಹೊರ ಟನು. ಸೀತಾಲಕ್ಷ್ಮಿಯೂ ತಾನು ಎದುರಿಗೆ ಬಂದುದಕ್ಕೆ ಪಶ್ಚಾತ್ತಾಪ ಗೊಂಡು ಹಿಂದಕ್ಕೆ ಹೋಗಿ ಮನೆಯ ಹಿಂದಲ ಓಣಿಯಿಂದ ಒಳಕ್ಕೆ ಸೇರಿ ಕೊಳ್ಳೋಣವೆಂದು ಆ ಮಾರ್ಗವಾಗಿ ಬರುತ್ತಿದ್ದಳು. ಅವಳನ್ನು ಮತ್ತೆ ದೂರದಲ್ಲಿ ತನ್ನ ಎದುರಿಗೆ ಕಂಡು ರಾಮುಸ್ವಾಮಿಗೆ ಮೈ ಉರಿಯಿತು. ಪ್ರಾರ ಬ್ಧವೇ ಎಂದುಕೊಂಡು ಹಿಂದಿರುಗಿದನು. ತನ್ನ ಮನೆಯ ಹಿತ್ತಲಿನ ಮಾರ್ಗ

ವಾಗಿ ಹೊರಟು ಬೇಲಿಯಲ್ಲಿದ್ದ ಕಂಡಿಯನ್ನು ದಾಟಿ ಆ ಕಾಲುದಾರಿಯಲ್ಲಿ ಬಸ್ ಸ್ಟಾಂಡು ಸೇರೋಣವೆಂದು ರಾಮಸ್ವಾಮಿ ಮೂರನೆಯ ಸಲ ಹೊರಟನು. ಸೀತಾಲಕ್ಷ್ಮಿ, ಓಣಿಯಲ್ಲಿ ಅವನನ್ನು ಎರಡನೆಯ ಸಲ ಸಂಧಿಸಿದುದಕ್ಕೇ ಅಳುತ್ತಾ, ಸ್ವಾಭಾವಿಕವಾಗಿ ಆ ಮನೆಯವರು ಹೊರಗಾದಾಗ ತಿರುಗುತ್ತಿದ್ದ ಆ ಹಿತ್ತಲಿನ ಕಂಡಿಯಿಂದ ಮನೆ ಸೇರಿಕೊಂಡು ಬಿಡೋಣವೆಂದು ಧಾವಿಸುತ್ತಿದ್ದಳು. ಅಲ್ಲಿಯೂ ರಾಮಸ್ವಾಮಿ ಎದುರಿಗೆ ಬರಲು, ಅವಳು ಬದುಕಿದವಳೂ ಆಗಲಿಲ್ಲ ಸತ್ತವಳೂ ಆಗಲಿಲ್ಲ. ರಾಮಸ್ವಾಮಿ ಅವಳನ್ನು ಕಂಡು "ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ಬಿಡದು" ಎಂದುಕೊಂಡು ಮನೆಗೆ ಹಿಂದಿರುಗಿದನು. ಸೀತಾಲಕ್ಷ್ಮಿಯು ಬಿಕ್ಕಿಬಿಕ್ಕಿ ಅಳುತ್ತ ಕೊಟ್ಟಿಗೆ ಸೇರಿಕೊಂಡಳು. ಅವಳು ಮನೆ ತಲಪುವವೇಳೆಗೆ ಸರಿಯಾಗಿ ಒಳಗೆ ರಾಮಸ್ವಾಮಿಯು "ಹಾಳು ಮೂಳಿ ಎಲ್ಲಿ ಹೋದರೂ ಅಡ್ಡಹಾಕ್ತಾಳೆ. ಮೂರು ಸಲವೂ ಅಪಶಕುನವಾಯಿತು" ಎನ್ನುತ್ತಿದ್ದನು. ರಾಮಸ್ವಾಮಿಯ ಹೆಂಡತಿಯು "ಅದ್ಯಾವ ಕೆಟ್ಟ ಚಾಳಿ, ಹೋದ ಹೋದ ಕಡೇಲೆಲ್ಲ ಎದುರಿಗೆ ಬರೋದು. ಇವರು ಹೊರಟುಹೋಗುವವರೆಗೆ ಒಂದು ಮೂಲೇಲಿ ಕುಕ್ಕರಿಸಿರೋಕಾಗ್ದೆ? ವಿಷದ ಬೀಜ; ಯಾವಾಗಿನಿಂದ ಇದು ಹೀಗೆಯೆ? ಇವತ್ತು ನೋಡಿದೇವ್ಯೆ?" ಎಂದಳು. ಶ್ರೀನಿವಾಸನ ಹೆಂಡತಿ ಸಹ "ಹಾಳಾದೋಳು ಒಂದು ಮೂಲೇಲಿ ಕುಕ್ಕುರಿಸಿರೋಕೇನು? ದೇವರೇ ಕೂರಿಸಿಸಿದೆಯೆಲ್ಲ" ಎಂದು ಗೊಣಗುಟ್ಟಿದಳು. ರಾಮಸ್ವಾಮಿಯು "ದೇವರಿಗೆ ತುಪ್ಪದ ದೀಪವಾದರು ಹತ್ತಿಸು. ನಮಸ್ಕರಿಸಿ ಒಂದು ಗಳಿಗೆ ಕುಳಿತಿದ್ದು ಹೊರಡ್ತೀನೆ. ನಮಗಾವುದೂ ಒಳ್ಳೇದಾಗೋದಕ್ಕೆ ಬಂದಿಲ್ಲ" ಎಂದನು.

ಮಾತುಗಳನ್ನೆಲ್ಲ ಕೇಳಿ ಸೀತಾಲಕ್ಷ್ಮಿಯ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ತನ್ನ ವಿಷಯದಲ್ಲಿ ಮನೆಯವರಿಗಿರುವ ಅಸಮಾಧಾನ ಅವಳಿಗೆ ಗೊತ್ತಾಗಿದ್ದರೂ, ಅದು ಈ ರೂಪದಲ್ಲಿ ತನ್ನ ಕಿವಿಗೆ ಬಿದ್ದಾಗ ತನಗೆ ಇಷ್ಟು ಸಂಕಟವಾಗಬಹುದೆಂದು ಆಕೆ ಊಹಿಸಿರಲಿಲ್ಲ. "ಎಷ್ಟೇ ಕಷ್ಟವಾದರೂ ಈ ಮನೆ ನನ್ನ ಆಶ್ರಯಸ್ಥಾನ" ಎಂದು ಭಾವಿಸಿದ್ದ ಆಕೆಗೆ, ಜಗತ್ತಿನಲ್ಲಿ ಇನ್ನು ತನಗೆ ಸ್ಥಳವಿಲ್ಲವೆಂದೇ ದೃಢವಾಯಿತು. ಈ ಭಾವನೆ ಅವ' ಮನಸ್ಸನ್ನು ಹೊಕ್ಕಕೂಡಲೇ ಅವಳಿಗೆ, ಅದುವರೆಗೆ ಇಲ್ಲದಿದ್ದ ಒಂದು ನೆಮ್ಮ!

ಉಂಟಾಯಿತು. ತಾನು ಅನಾಥೆ ಎಂದುಕೊಂಡಿದ್ದವಳಿಗೆ ಮರಣವು ಒಂದು ಆಶ್ರಯಸ್ಥಾನವಾದುದರಿಂದ ಇದ್ದಕ್ಕಿದ್ದಂತೆ, ಈ ನರಕದಿಂದ ಬಿಡುಗಡೆ ಇದೆ ಎಂಬ ಧೈರ್ಯವುಂಟಾಯಿತು ಕಳೆದ ಹತ್ತು ತಿಂಗಳುಗಳಿಂದ ನಾಲ್ಕಾರು ಸಲ ಈ ಮೋಕ್ಷಮಾರ್ಗವು ತೋರಿದ್ದರೂ ಹೊಟ್ಟೆಯಲ್ಲಿದ್ದ ಫಲದ ಕಾರಣ ದಿಂದ ಅದಕ್ಕೆ ಧುಮುಕಲು ಆಕೆಗೆ ಧೈರ್ಯವುಂಟಾಗಿರಲಿಲ್ಲ. ಇಂದು ಈ ಗಳಿಗೆ ಯಲ್ಲಿ ಅವಳಿಗೆ ಮರಣದ ಮಡಿಲು ತಾಯಿಯ ಮಡಿಲಿನಷ್ಟೇ ಹಿತವಾಗಿ ತಂಪಾಗಿ ತೋರಿತು. ಅವಳಿಗೆ ಯಾರ ಮೇಲೆಯೂ ಕೋಪವುಂಟಾಗಲಿಲ್ಲ. ಒಂದು ವಿಚಿತ್ರವಾದ ಶಾಂತಿಯುಂಟಾಯಿತು. ಅತ್ಯಂತ ಆಕರ್ಶಕವಾದ ಆ ಬಿಡುಗಡೆಯ ಮಾರ್ಗವನ್ನು ಯೋಚಿಸುವುದರಲ್ಲಿ ಸಾಯಂಕಾಲವಾದುದೇ ಆಕೆಗೆ ಗೊತ್ತಾಗಲಿಲ್ಲ.

ಸಂಧ್ಯಾಕಾಲದ ಬಸ್‌ನಲ್ಲಿ ಕೋರ್ಟಿಗೆ ಮೊಖದ್ದಮೆಗಾಗಿ ಹೋಗಿದ್ದ ರಾಮು ಮನೆಗೆ ಬಂದನು. ಬಂದವನೇ ಶ್ರೀನಿವಾಸನೊಂದಿಗೆ "ಮೊಖದ್ದಮೆ ಕೆಟ್ಟುಹೋಯಿತು. ಹೀಗಾಗುತ್ತದೆಂದು ಇವತ್ತು ಹೊರಟಾಗಲೇ ನನಗೆ ಗೊತ್ತಾಯಿತು. ನನ್ನನ್ನೇ ಅಪಶಕುನ ಒಂದೇ ಸಮನೆ ಕಾಡಿಬಿಟ್ಟಿತು" ಎಂದನು. ಬೆಳಗಿನ ಸಂಗತಿಗಳು ನಡೆದಾಗ ಶ್ರೀನಿವಾಸ ಮನೆಯಲ್ಲಿರಲಿಲ್ಲ ವಾದರೂ ತೋಟದಿಂದ ಹಿಂದಿರುಗಿದ ನಂತರ ಅವನಿಗೆ ಎಲ್ಲ ಗೊತ್ತಾಗಿತ್ತು. ರಾಮುಸ್ವಾಮಿಯ ಎಂದೂ ಇಲ್ಲದ ಈ ಮೂಢನಂಬಿಗೆ ಕಂಡು ಅವನಿಗೆ ಆಶ್ಚರ್ಯವೂ ಉಂಟಾಗಿತ್ತು. ತನ್ನ ಅಕ್ಕತಂಗಿಯರೇ ತನಗೆ ಅಪಶಕುನವಾದರೆ ಇನ್ನು ಗತಿ? ವಯಸ್ಸಾಗುತ್ತಿರುವುದರಿಂವ ರಾಮುಸ್ವಾಮಿಗೆ ಇಂತಹ ಜಡತೆ ಎಂದು ಶ್ರೀನಿವಾಸನು ಸುಮ್ಮನಾದನು. ಅತ್ತು ಅತ್ತು ಸೀತಾಲಕ್ಷ್ಮಿಯ ಕಣ್ಣುಗಳು ಕೆಂಪಗಾಗಿದ್ದರೂ ಆಕೆಯ ಶಾಂತಿ ಆಶ್ಚರ್ಯವಾಗಿತ್ತು. ಅವಳ ಆ ಗಂಭೀರವಾದ ಮೌನವನ್ನೂ ಶಾಂತಿಯನ್ನೂ ನೋಡಿ ಶ್ರೀನಿವಾಸನಿಗೆ ನಿಜವಾಗಿ ಗಾಬರಿಯುಂಟಾಗಿತ್ತು. ರಾಮುಸ್ವಾಮಿ ಹಿಂದಿರುಗಿದ ಕೂಡಲೇ ಅವನಿಗೆ ಸರಿಯಾಗಿ ಹೇಳಿ ಇನ್ನು ಮತ್ತೆ ಮನೆಯಲ್ಲಿ ಇಂತಹ ಮಾತುಗಳು ಸಂಭವಿಸದಂತೆ ನೋಡಿಕೊಳ್ಳಬೇಕೆಂದು ಅವನು ಸಂಕಲ್ಪಿಸಿಕೊಂಡನು. ರಾಮುಸ್ವಾಮಿಯು ಕೋರ್ಟಿನಿಂದ ಹಿಂದಿರುಗುವುದನ್ನೇ ಕಾಯುತ್ತಾ ಮನೆ ಯಲ್ಲಿಯೇ ಇದ್ದನು.

ರಾಮಸ್ವಾಮಿ ಬಂದು ಕೇಸು ಕೆಟ್ಟುಹೋಯಿತೆಂದುದನ್ನು ಕೇಳಿ ಶ್ರೀನಿವಾಸನು "ಸುಳ್ಳು ಕೇಸು ಯಾವತ್ತಿದ್ದರೂ ಕೆಡುವುದೆ? ನನಗೆ ಮೊದಲೇ ಗೊತ್ತಿತ್ತು. ಹಾಕುವಾಗಲೇ ಹೇಳಿದೆ. ನೀವು ಕೇಳಲಿಲ್ಲ" ಎಂದನು. ರಾಮಸ್ವಾಮಿಯು "ಯಾಕೆ ಸುಳ್ಳು ಕೇಸು? ಪ್ರತಿ ದಿನವೂ ಊರಿನ ಹೊಲೇರೆಲ್ಲ ತೋಟ ನುಗ್ಗಿ ಒಂದೇ ಒಂದು ಎಳನೀರಿನ ಬಡಕು ಸಹ ಉಳಿಯದಂತೆ ಉದುರಿಸಲಿ. ಬಾಳೆ ಪಿಚ್ಚಲು ಸಹ ಉಳಿಯದ ಹಾಗೆ ಸವರಿ ಕೊಂಡು ಹೋಗಲಿ, ಅಷ್ಟೊಂದು ಅಡಿಕೆ ಮರ ಇದ್ದರೂ ಒಂದು ಪಟ್ಟಿಯಾಗಲಿ ಸೋಗೆಯಾಗಲಿ ನಮ್ಮ ಕಣ್ಣಿಗೆ ಬೀಳೋಹಾಗಿಲ್ಲ. ಹೊಲೇರ ದನ, ಮನೆ ಬಿಟ್ಟಿತು ಅಂದರೆ ನೆಟ್ಟಗೆ ಬಂದು ನಿಲ್ಲೋದೆ ನಮ್ಮ ತೋಟದಲ್ಲಿ. ಒಂದ್ಕಡೆ ದನದ ಕಾಟ, ಒಂದ್ಕಡೆ ಈ ಕಳ್ಳರ ಕಾಟ. ಯಾವ ಪೈರೂ ಕೈ ಹತ್ತೋ ಹಾಗಿಲ್ಲ. ಚಿನ್ನದಂತ ನೆಲ ಪಾಳು ಬಿದ್ದಿದೆ........

ಶ್ರೀನಿವಾಸ—ಅದೆಲ್ಲ ನಿಜ ಅಣ್ಣ. ನಾಲ್ಕು ತೋಟದ ನೂರು ಜನ ಲೂಟ ಮಾಡ್ತ ಇದ್ರೆ ಇನ್ನು ಬೇಸಾಯವೆಲ್ಲಿ ಬಂತು? ಈ ದಿನದ ಪೋಲಿ ತಡೆಯೋಕೆ ಪರಮಾತ್ಮನಿಂದಲೂ ಸಾಧ್ಯವಿಲ್ಲ. ಆದರೆ ನಾವು ಕೇಸು ಮಾಡಿರುವ ಕ್ರಮ ಸರಿಯಾಗಿಲ್ಲ. ಅದರಲ್ಲಿ ಸತ್ಯ ಇಲ್ಲ. ನೀವು ಯಾವತ್ತು ಕಳವು ನಡೀತು ಅಂತ ಕೇಸು ಮಾಡಿದ್ದೀರೋ ಆವತ್ತು ಆ ನಾಲ್ಕು ಜನ ತೋಟ ನುಗ್ಗಿದ್ರು? ನೀವು ಕೋರ್ಟಿನಲ್ಲಿ "ಮಾಲಿನೊಂದಿಗೆ" ಎಂದು ಹೇಳಿ ತೆಗೆದುಕೊಂಡು ಹೋಗಿ ಹಾಜರ್ಮಾಡಿದ್ದೀರೆಲ್ಲ? ಆ ಎಳನೀರಿನ ಬುರುಡೆಗಳು ಅವರು ಕದ್ದವುಗಳೇ? ಅವು ನಮ್ಮ ತೋಟದ್ದೇ ಅಲ್ಲವೆಲ್ಲ? ಇಂತಹ ಸುಳ್ಳು ಕೇಸು ಕೋರ್ಟಿನಲ್ಲಿ ನಿಲ್ಲುತ್ತದೆಯೇ!

ರಾಮಸ್ವಾಮಿ—ಈ ಕೋರ್ಟುಗಳಲ್ಲಿ ಸುಳ್ಳು ಕೇಸು ನಿಲ್ಲೋದಿಲ್ಲ. ನಿಜ. ಸತ್ಯವಾದ ಕೇಸು ಅದಕ್ಕಿಂತ ಮುಂಚೆಯೇ ನಿಲ್ಲೋದಿಲ್ಲ. ಕೋರ್ಟಿಗೆ ಹೋದರೆ ಕೇಸು ವಜಾ ಆಗುತ್ತೆ ಅನ್ನೊ ನಂಬಿಕೆಯೇ ಈಗ ಕಳ್ಳರಿಗೆಲ್ಲ ಬಂದಿರೋದು. ಲಾಯರುಗಳಿದ್ದಾರೆಲ್ಲ, ಸುಳ್ಳನ್ನು ಸತ್ಯಮಾಡೋಕೆ, ಸತ್ಯ ಸುಳ್ಳುಮಾಡೋಕೆ. ಈ ಊರಲ್ಲಿ ಎಷ್ಟು ಸತ್ಯವಾದ ಕೇಸುಗಳು ಸುಳ್ಳಾದವು? ಮರಿರಂಗ ಅಯ್ಯನವರ ತೋಟದಲ್ಲಿ ದಪ್ಪ ಬಾಳೆಕಾಯಿ ಗೊನೆಗಳನ್ನು ಹೊಡೆ ದಾಗ ಮಾಲಿನೊಂದಿಗೆ ಕೋರ್ಟಿಗೆ ಹಾಜರ್ಮಾಡಿದರೆಲ್ಲ, ಆದದ್ದೇನು? ಸಾಕ್ಷಿ

ಗಳೆಲ್ಲ "ಇವನು ಬಾಳೆಗೊನೆ ಹೊತ್ತುಕೊಂಡು ಹೋಗುತ್ತಿದ್ದುದನ್ನು ನೋಡಿದೆವೆಂದು ಒಂದೇ ಸಮನಾಗಿ ಹೇಳಿರುವುದರಿಂದ ಈ ಸಾಕ್ಷಿಗಳನ್ನು ನಂಬಲು ಸಾಧ್ಯವಿಲ್ಲವೆಂದು ಕೇಸು ವಜಾ ಆಗಲಿಲ್ಲವೆ? ಕೂರೀ ಹನವು ನಮ್ಮ ತೋಟದಲ್ಲಿ ಎಳನೀರು ಕೆಡವಿದಾಗ ಆದದ್ದು ಜ್ಞಾಪಕವಿದೆಯೆ? ರಂಗನ ಕೇಸಿನಲ್ಲಿ ಎಲ್ಲರೂ ಒಂದೇ ಸಮನಾಗಿ ಹೇಳಿದುದರಿಂದ ಕೇಸು ವಜಾ ಆದುದನ್ನು ಕಂಡು ಆ ಕೇಸಿನಲ್ಲಿ ಚಿಲ್ಲರೆ ವಿಷಯಗಳಲ್ಲಿ ಹೆಚ್ಚು ಕಡಿಮೆ ಹೇಳಿದರು. ಅದೇ ಜಡ್ಜರು "ಸಾಕ್ಷಿಗಳ ಸಾಕ್ಷ್ಯ ಒಂದೇ ಸಮನಾಗಿಲ್ಲ ಆದರಿಂದ ವಜಾ ಮಾಡಿದೇನೆ" ಎನ್ನಲಿಲ್ಲವೆ? ಒಂದು ಸಲ ಒಂದೇ ಸಮನಾಗಿಲ್ಲದುದರಿಂದ ವಜಾ. ಮತ್ತೊಂದು ಸಲ ಒಂದೇ ಸಮನಾಗಿರುವುದರಿಂದ ವಜ. ನಮ್ಮ ಕೋರ್ಟುಗಳ ನ್ಯಾಯ ಇದು. ನಿಜ ಕಂಡುಹಿಡಿಯುವ ಶಕ್ತಿ ಜಡ್ಜಿಗೂ ಇಲ್ಲ. ಲಾಯರಿಗೂ ಇಲ್ಲ.

ಶ್ರೀನಿವಾಸ—ನಿಮಗೆ ಇದೆಲ್ಲ ತಿಳಿದಿರೋವಾಗ ಶಕುನ ಅವಶಕುನ ಅಂತ ಹಾರಾಡೊದರಲ್ಲಿ ಏನು ಅರ್ಥ.

ರಾಮಸ್ವಾಮಿ—ಅರ್ಥವೋ, ಅನರ್ಥವೋ. ಈಚೆಗೆ ಆಗುತ್ತಿರುವುದೆಲ್ಲ ಅನರ್ಥವೇ. ಮಾಡಬಾರದುದನ್ನ ಮಾಡಿದರೆ ಆಗಬಾರದು ಆಗುತ್ತೆ.

ಶ್ರೀನಿವಾಸ—ನೀವು ಯಾವುದೋ ಹಳೆಯ ಕಾಲದ ಅಜ್ಜಿ ಮಾತ ನಾಡುವಂತೆ ಆಡುತ್ತಿದ್ದೀರಿ.

ರಾಮಸ್ವಾಮಿ.—ಹಳೆಯ ಕಾಲದಲ್ಲಿದ್ದ ಹಾಗೆ ಇದ್ದರೆ ಚೆನ್ನಾಗಿಯೇ ಇರುತ್ತಿತ್ತು. ಹಳೆಯ ಕಾಲದಲ್ಲಿ ಹೀಗೆ ಅನಾಚಾರ........

ಶ್ರೀನಿವಾಸನು ರಾಮಸ್ವಾಮಿಯ ಮಾತನ್ನು ಮುಂದೆ ಹಾಯಗೊಡದೆ "ಅಣ್ಣಾ, ನಮ್ಮ ಮನೆಯ ಹುಡುಗಿಯನ್ನು ನಾವು ಕಾಡುಪಾಲು ಮಾಡುವುದಕ್ಕಾಗುತ್ತದೆಯೇ? ನಾನು ಅವಳನ್ನು ಕರೆದುಕೊಂಡು ಬಂದಷ್ಟು ದಿನದಿಂದ ನೀವು ಇದೇ ಬಗೆಯಾಗಿದ್ದೀರಿ. ನಮ್ಮನ್ನ ನೋಡಿಕೊಂಡು ನಮ್ಮ ಹೆಂಗಸರೂ ಮನಸ್ಸಿಗೆ ತೋಚಿದುದನ್ನು ಹೇಳುತ್ತಿದ್ದಾರೆ. ಈ ಮಾತುಗಳಿಂದ ಆ ಬಡ ಪಾಯಿಯ ಮನಸ್ಸಿನ ಮೇಲೆ ಆಗೋ ಪರಿಣಾಮ ಪರಮಾತ್ಮನಿಗೇ ಗೊತ್ತು. ನೀವು ಇವತ್ತು, ಮೊದಲಿನಿಂದಲೂ ಗೆಲ್ಲೊಲ್ಲ ಅಂತ ಗೊತ್ತಿದ್ದ ಕೇಸ್‌ನಲ್ಲಿ ಅವಶಕುನ ಅಂತ ಬೆಳಿಗ್ಗೆ ಹಾರಾಡಿದಿರಿ. ಹಿಂದೆ ಕೇಸುಗಳೆಲ್ಲ ಕೆಟ್ಟಾಗ ಈ

ಅವಶಕುನ ಇತ್ತೀ. ಸಾಯೋನ ಕಣ್ಣಿಗೆ ಸುಳಿದೋನೆ ಜವರಾಯ. ನೀವ್ರು ಅರ್ಭಟಮಾಡಿಕೊಂಡು ಹೋದಮೇಲೆ ಅತ್ತು ಅತ್ತು ಅವಳ ಕಣ್ಣು ಪೋಟಿ ಯಾಗಿದೆ. ಇವತ್ತು ನಾಳೆ ಅವಳು ಹೊಳೇಲೋ ಭಾವೀಲೋ ಮುಳುಗಿ ಕೊಳ್ತಾಳೆ."

ಈ ಮಾತುಗಳನ್ನು ಮೊದಲಿನಿಂದಲೂ ಅಲ್ಲೇ ನಿಂತು ಕೇಳುತ್ತಿದ್ದ ರಾಮನ ಹೆಂಡತಿ ಇನ್ನು ತಡೆಯಲಾರದೆ "ಹೂ ಮುಳುಗಿಕೊಳ್ತಾಳೆ. ಅವಳಿಗೆ ಹುಚ್ಚು ಹಿಡಿದಿಲ್ಲ. ನಮ್ಮಂತಹ ನೂರು ಜನಾನ ಬೇಕಾದ್ರು ಮುಳುಗಿಸ್ತಾಳೆ," ಎಂದಳು.

ಅಣ್ಣ ತಮ್ಮಂದಿರಲ್ಲಿ ಮಾತು ಬಹಳ ವಿರಸವಾಗಿ ಬೆಳೆಯಿತು. ರಾಮನ ಹೆಂಡತಿಯ ಮಾತುಗಳು ಆ ಉರಿಗೆ ಆಗಿಂದಾಗ್ಗೆ ತುಪ್ಪದ ಆಹುತಿಯಾಗು ತ್ತಿದ್ದಿತು. ರಾಮು ಮತ್ತು ಶ್ರೀನಿವಾಸರ ಬಾಯಿಗಳಿಂದ ಅವರು ಉದ್ದೇಶಿ ಸದಿದ್ದ ಮಾತುಗಳೆಲ್ಲ ಹೊರಟುಬಿಟ್ಟವು. ಕೊಟ್ಟಿಗೆಯಲ್ಲಿ ಕುಳಿತುಕೊಂಡು ಮಾತುಗಳನ್ನೆಲ್ಲ ಕೇಳುತ್ತಿದ್ದ ಸೀತಾಲಕ್ಷ್ಮಿ, ತನ್ನ ಕಾರಣದಿಂದ ಎಲ್ಲಿ ಅಣ್ಣ ತಮ್ಮಂದಿರಿಗೆ ಹೊಡೆದಾಟವಾಗಿ ಬಿಡುವುದೋ ಎಂದು ಗಡಗಡನೆ ನಡುಗುತ್ತಿ ದ್ದಳು. ವಾಗ್ವಾದದ ಮಧ್ಯದಲ್ಲಿ ಒಂದು ಸಲ ಶ್ರೀನಿವಾಸನು "ಇದು ನಿನ್ನ ಭಾವನೆಯಾದ ಮೇಲೆ ಈ ಮನೆಯಲ್ಲಿ ನಾವು ಇನ್ನು ಒಂದು ಗಳಿಗೆಯೂ ನಿಲ್ಲುವುದು ಸರಿಯಲ್ಲ. ನಾಳೆ ಸೀತಾಲಕ್ಷ್ಮಿಯನ್ನು ಕರೆದುಕೊಂಡು ನನ್ನ ಪಾಡಿಗೆ ನಾನು ಬೇರೆ ಹೋಗುತ್ತೇನೆ" ಎಂದನು. ರಾಮನ ಮನಸ್ಸನ್ನು ಹೊಕ್ಕಿದ್ದ ಮರ್ಕಟ ತನ್ನ ವಿಕಟ ನರ್ತನವನ್ನು ನಡೆಸಿಯೇ ನಡೆಸಿತು. "ಧಾರಾಳವಾಗಿ ನಾಳೆಯವರೆಗೆ ಯಾಕೆ! ಈಗಲೇ ದಯಮಾಡಬಹುದು" ಎಂದ ರಾಮು ವ್ಯಂಗ್ಯವಾಗಿ. ಶ್ರೀನಿವಾಸನ ಮೈ ಥರ ಥರನೆ ನಡುಗಿತು. ಮುಖ ಕೆಂಪಾಯಿತು. ಅವನು ರಾಮುನನ್ನು ಹೊಡೆದೇ ಬಿಡುವಂತೆ ಕೈ ಎತ್ತಿದನು. ಶ್ರೀನಿವಾಸನ ಹೆಂಡತಿ ಗಂಡನಿಗೆ ಅಷ್ಟುಕೋಪ ಬಂದುದನ್ನು ಯಾವಾಗಲೂ ನೋಡಿರಲಿಲ್ಲ. ಆದರೆ ಶ್ರೀನಿವಾಸ ಬಹಳ ಕಷ್ಟಪಟ್ಟು ಹಲ್ಲು ಕಡಿದುಕೊಂಡು ತನ್ನ ಕೋಪವನ್ನು ಅಡಗಿಸಿಕೊಂಡನು. ಅವನ ಬಾಯಿ ನಿಂದಲೂ ಮೂಗಿನಿಂದಲೂ ಭುಸ ಭುಸನೆ ಉಸಿರು ಹೊರಡುತ್ತಿತ್ತು. ಅವನು ಅಣ್ಣನನ್ನು ಒಂದು ಸಲ ತಿರಸ್ಕಾರದಿಂದ ನೋಡಿ ಬೀದಿ ಬಾಗಿಲು ಜಗಲಿಯ ಮೇಲೆ ಹೋಗಿ ಕುಳಿತುಬಿಟ್ಟನು.

ಆ ರಾತ್ರಿ ಆ ಮನೆಯಲ್ಲಿ ಯಾರೂ ಊಟಮಾಡಲಿಲ್ಲ. ಪ್ರತಿಯೊಬ್ಬರಿಗೂ ಪ್ರತಿಯೊಬ್ಬರ ಮೇಲೆಯೂ ಕೋಪವುಂಟಾಗಿತ್ತು. ಒಬ್ಬರನ್ನೊಬ್ಬರು ಊಟಮಾಡಿ ಎಂದು ಸಹ ಯಾರೂ ಬಲಾತ್ಕರಿಸಲಿಲ್ಲ, ಮಾಡಿದ ಅಡಿಗೆ ಹಾಗೆಯೇ ನರಳುತ್ತಿತ್ತು. ಮಕ್ಕಳು ಹಸಿವಿನಿಂದ ಅತ್ತು ಸೊರಗಿ ನಿದ್ರೆ ಬಂದಲ್ಲಿ ಬಿದ್ದುಕೊಂಡಿದ್ದವು. ಒಬ್ಬರೊಂದಿಗೆ ಒಬ್ಬರು ಮಾತು ಸಹ ಆಡದೆ ತಮ್ಮ ತಮ್ಮ ಹಾಸಿಗೆಗಳಲ್ಲಿ ಬಿದ್ದುಕೊಂಡರು. ಬಹಳ ಹೊತ್ತು ಒಬ್ಬರಿಗೂ ನಿದ್ರೆ ಬರಲಿಲ್ಲ. ಸೀತಾಲಕ್ಷ್ಮಿ ದನದ ಕೊಟ್ಟಿಗೆಯಲ್ಲಿಯೇ ಬಿದ್ದುಕೊಂಡಿದ್ದಳು. ಅವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಅವಳು ತಡೆದರೂ ತಡೆಯದೆ ಮುಸುಕಿನಿಂದ ಹೊರಕ್ಕೆ ಕೇಳುತ್ತಿದ್ದಿತು. ರಾಮನ ಹೆಂಡತಿಗೂ ಶ್ರೀನಿವಾಸನ ಹೆಂಡತಿಗೂ ನಿದ್ರೆ ಬಂದಿರಲಿಲ್ಲ. ಆದರೂ ಅವರು ಮುಸುಕು ಹೊದೆದುಕೊಂಡು ನಿಶ್ಶಬ್ದರಾಗಿ ಮಲಗಿದ್ದರು.

ಶ್ರೀನಿವಾಸ ಸಿಟ್ಟಿನಲ್ಲಿ ಬೀದಿ ಜಗಲಿಮೇಲೆ ಬಂದು ಕುಳಿತವನು ಕದಲಿರಲಿಲ್ಲ. ಎಲ್ಲರೂ ಮಲಗಿಕೊಳ್ಳುವಾಗ ಅವನ ಹೆಂಡತಿಯು ಅವನಿಗಾಗಿ ಒಂದು ಕಂಬಳಿ ದಿಂಬು ತಂದು ಅವನು ಕುಳಿತಿದ್ದ ಚಾಪೆಯ ಮೇಲೆ ಹಾಕಿದಳು. ಶ್ರೀನಿವಾಸ ಅದನ್ನು ನೋಡಿದರೂ ಅವನ ಮನಸ್ಸು ದುಗುಡದ ಕಾರ್ಮೋಡದಲ್ಲಿದ್ದುದರಿಂದ ಅವು ತನಗಾಗಿ ಬಂದವೆಂಬುದು ಅವನ ಮನಸ್ಸಿಗೆ ಹೊಳೆಯಲಿಲ್ಲ. ಅವನು ಏನನ್ನೂ ಯೋಚಿಸದೆ ಮಂಕಾಗಿ ಒಂದು ಬಗೆಯ ವ್ಯಗ್ರತೆಯಿಂದ ಕುಳಿತಿದ್ದನು. ಅಂಧಕಾರ ಕವಿದು ಹೊರಗಿನ ಪ್ರಪಂಚವೂ ಅವನ ಮನಸ್ಸಿನಂತೆಯೇ ಕರ್ಕಶವಾಗಿತ್ತು. ಊರ ಮುಂದಲ ಬೂರುಗದ ಮೇಲಿನ ಗೂಬೆ ಒಂದೇ ಸಮನೆ ಕಠೋರವಾಗಿ ಕೂಗುತ್ತಿತ್ತು. ಗೂಗೆ ಹಾಗೆ ಪ್ರತಿದಿನವೂ ಕೂಗುತ್ತಲೇ ಇದ್ದರೂ ಶ್ರೀನಿವಾಸ ನಿದ್ರೆಯಲ್ಲಿರುತ್ತಿದ್ದುದರಿಂದ ಅವನಿಗೆ ಅದು ಕೇಳಿಸುತ್ತಿರಲಿಲ್ಲ. ಇಂದು ಗೂಬೆ ಸಹ ನಿತ್ಯಕ್ಕಿಂತ ಹೆಚ್ಚು ಕರ್ಕಶಧ್ವನಿಯಿಂದ ಕೂಗುತ್ತಿರುವಂತೆ ಅವನಿಗೆ ಕೇಳಿಸಿತು. ಗೂಬೆಯು "ಕಟ್ಟಬಿಗಿ ಕುತ್ತಿಸುಡು" ಎಂದು ಹೇಳುತ್ತಿರುವುದೆಂದು ಅದು ಕೂಗಿದಾಗಲೆಲ್ಲ ಅವರ ಅಜ್ಜಿ ಹೇಳುತ್ತಿದ್ದರು. ಭಯದಿಂದ ಅವರಿಗೆ ಹಾಗೆ ಕೇಳಿಸುತ್ತಿದೆಯೆಂದು ಆಗ ಶ್ರೀನಿವಾಸ ಹಾಸ್ಯ ಮಾಡಿದ್ದನು. ಆದರೆ ಇಂದು ಗೂಬೆ ಕೂಗುವುದನ್ನೇ ಆಲಿಸುತ್ತ ಮಲಗಿರುವಾಗ ಅವನಿಗೆ ನಿಜವಾಗಿ ಗೂಬೆ

" ಕಟ್ಟೆಬಿಗಿ ಕುತ್ತಿಸುಡು " ಎನುತ್ತಲೇ ಇದೆ ಎಂದು. ತೋರಿತು. ಊರ ಹೊರಗಿನ ಗದ್ದೆಯಲ್ಲಿ ಗುಳ್ಳೆನರಿಗಳು ಒಂದೇ ಉಸುರಿಗೆ ನೂರಾರು ಹುಚ್ಚು ನಾಯಿಗಳಂತೆ ಬೊಬ್ಬೆ ಹಾಕುತ್ತಿದ್ದವು. ದೂರದಲ್ಲಿ ಯಗಚಿ ನದಿಗೆ ಕಟ್ಟಿದ ಅಣೆಕಟ್ಟೆನಿಂದ ಧುಮುಕುತ್ತಿದ್ದ ನೀರು ಎಡಬಿಡದೆ ಬೋರ್ಗರೆಯುತ್ತಲೇ ಇತ್ತು. ಇದ್ದಕ್ಕಿದ್ದಂತೆ ಇರುಳಿನ ಶಾಂತಿಯನ್ನು ಭೇದಿಸಿ ನಾಲ್ಕಾರು ಕತ್ತೆಗಳು ಒಟ್ಟಾಗಿ ಕಿರಚಿ ಓಣಿಯಲ್ಲಿ ಧಡಧಡನೆ ಓಡಿದವು ಆಕಾಶದಲ್ಲಿ ಕೆಲವು ನಕ್ಷತ್ರಗಳಿದ್ದರೂ ಅಂತರಿಕ್ಷ ನಿತ್ಯಕ್ಕಿಂತ ಹೆಚ್ಚು ಅಂಧಕಾರವಾಗಿ ತೋರಿತು.

ಚಾಪೆಯಮೇಲೆ ಕುಳಿತು ಬೇಸತ್ತ ಶ್ರೀನಿವಾಸ ತನಗೆ ತಿಳಿಯ ದಂತೆಯೇ ತಲೆದಿಂಬಿನಮೇಲೆ ತಲೆಯಿಟ್ಟು ಮಲಗಿದನು. ಅವನಿಗೆ ಅರ್ಧ ನಿದ್ರೆ ಹತ್ತಿದಂತೆ ಆಗಿತ್ತು. ಆದರೂ ಹೊರಗೆ ಸಂಭವಿಸುವ ಸಂಗತಿಗಳು ಅವನಿಗೆ ತಿಳಿಯದಷ್ಟು ನಿದ್ರೆಯಾಗಿರಲಿಲ್ಲ ಅದು. ಎಲ್ಲವನ್ನೂ ಅವನು ಕನಸಿನಲ್ಲಿ ನೋಡುವಂತೆ ಕೇಳುವಂತೆ ವಿಲೋಕಿಸುತ್ತಿದ್ದನು. ಆ ಅಂಧಕಾರ ದಲ್ಲಿ ಅವನಿಗೆ ಉಳಿದ ಎಲ್ಲ ಶಬ್ದಗಳನ್ನೂ ಭೇದಿಸಿಕೊಂಡು ಪಿಟೀಲಿನ ಧ್ವನಿ ಒಂದು ಕೇಳಿತು. ಮೊದಲು ಮೊದಲು ಅದು ಪಿಟೀಲಿನ ಧ್ವನಿಯಾಗಿ ಕೇಳಿಸದೆ ಆ ಧ್ವನಿಯ ಪ್ರತಿಧ್ವನಿಯಾಗಿ ತೋರಿತು. ಹಿಂದೆ ಯಾವಾಗಲೋ ಕೇಳಿದ ಧ್ವನಿ, ಈಗ ಅಲ್ಲಿ ಆ ಧ್ವನಿಯಿಲ್ಲದಿದ್ದರೂ ಕೇಳುತ್ತಲೇ ಇದೆಯೋ ಎಂಬಂತಿತ್ತು ಆ ಗಾನ. ಉಳಿದ ಧ್ವನಿಗಳಂತೆ ಆ ಧ್ವನಿಯೂ ಶ್ರೀನಿವಾಸನ ಕಿವಿಯಮೇಲೆ ಹಾದುಹೋಯಿತು. ಆದರೆ ಅದು ಹಾದು ಹೊರಟು ಹೋಗಲಿಲ್ಲ. ಪದೇ ಪದೇ ಪದೇ ಪದೆ ಕಿವಿಯ ಸುತ್ತಲೂ ಸುತ್ತುತ್ತಲೇ ಇತ್ತು. ಅದು ಅತ್ಯಂತ ದೀನವಾದ ದುಃಖ ಗಾನ. ಆ ಪಿಟೀಲಿನ ಧ್ವನಿ, ಅದನ್ನು ನುಡಿಸುತಿದ್ದವನು—ನುಡಿಸುತ್ತಿದ್ದವರು—ತಮ್ಮ ಎದೆಯಲ್ಲಿದ್ದ ದುಃಖವನ್ನು ಮೊಗೆದು ಮೊಗೆದು ಹೊರಕ್ಕೆ ತೋಡಿಕೊಳ್ಳುತ್ತಿರುವಂತೆ ತೋರಿತು. ಅಲೆ ಅಲೆಯಾಗಿ ಹೊರಟು ತನ್ನ ವಿಶಾಲವಾದ ರಕ್ಕೆಯ ಆವರಣದಲ್ಲಿ ಶ್ರೋತೃ ಗಳನ್ನು ಆಕರ್ಶಿಸಿ ಅಪ್ಪಿಕೊಳ್ಳುತ್ತಿದ್ದ ಆ ಗಾನವನ್ನು ಕೇಳಿ ಶ್ರೀನಿವಾಸನ ಮನಸ್ಸು ಮೃದುವಾಯಿತು. ದುಃಖಪೂರ್ಣವೂ, ಶಾಂತವೂ ಆಯಿತು. ಅದು ದುಃಖದ ಗಾನವಾದರೂ ರಸಾನುಭವವುಂಟಾಗಿ ಗಂಗಾಸ್ನಾನಮಾಡಿ ದಂತೆ ಮೈ, ಮನ ಶುದ್ಧವಾಯಿತು ಬಹಳ ಹೊತ್ತು ಶ್ರೀನಿವಾಸ ಆಗಾನ ಯಾವ

ದಿಕ್ಕಿನಿಂದ ಬಂತೆಂಬುದನ್ನೂ ಈ ಅವೇಳೆಯಲ್ಲಿ ಅದನ್ನು ಯಾರು ನುಡಿಸಿರ ಬಹುದೆಂಬುದನ್ನೂ ಯೋಚಿಸಲೇ ಇಲ್ಲ. ಆ ಗಾನದ ಪ್ರಾರಂಭದ ಪರಿಣಾಮ ಸುಮ್ಮನೆ ಅದರ ಅನುಭವಕ್ಕೇ ಮನಸ್ಸನ್ನು ಒಡ್ಡುವುದಾಯಿತು. ಬಿಸಿಲಿನ ಬೇಗೆಯಿಂದ ಬಳಲಿ ಬೆಂಡಾದ ರಸಾಲವೃಕ್ಷ ಸಂಜೆಯ ತಂಪಿನ ತಂಗಾಳಿಗೆ ಮೈಯೊಡ್ಡಿ ಚಿಗುರುಗಳಿಂದ ಅಮೃತ ಬಿಂದುಗಳನ್ನು ಹೀರಿ ಗೆಲುವಾಗುವಂತೆ, ಶ್ರೀನಿವಾಸ ದುಃಖದಗ್ಧವಾದ ಮೈ ಮನಗಳನ್ನು ಆ ಗಾನದ ತಂಗಾಳಿಗೆ ಒಡ್ಡಿ ನೀರು ಮೀನಿನಲ್ಲಿ ನೆಮ್ಮದಿಯಾಗಿರುವಂತೆ ನೆಮ್ಮದಿಯಾಂತನು. ಆ ಸುಖ ಎಷ್ಟು ಮದಕಾರಿಯಾಗಿದ್ದಿತೆಂದರೆ ಅದು ಎಲ್ಲಿಂದ ಬಂದಿತೆಂಬುದನ್ನು ಯೋಚಿಸಲೂ ಸಹ ಅವನ ಮನಸ್ಸು ಅದರಿಂದ ಪರಾಂಗ್ಮುಖವಾಗಲಿಲ್ಲ. ಹೂವು ಇಲ್ಲದಿದ್ದರೂ ಅದು ಇದ್ದಿದ್ದ ಸ್ಥಳದಿಂದ ಇಂಪಾದ ಕಂಪು ಹೊರಹೊಮ್ಮು ವಂತೆ, ಮಹಾತ್ಮರು ಒಂದೆಡೆಯಿಂದ ಮರೆಯಾದರೂ, ಅವರ ಅಡಿಗಳು ಹಿಂದೆ ಬಿಟ್ಟು ಹೋದ ಪಾವಿತ್ರ್ಯತೆ ಅಲ್ಲಿಯೇ ನುಸುಳಿತ್ತಿರುವಂತೆ, ಸ್ವಲ್ಪ ಹೊತ್ತಿ ನಲ್ಲಿಯೇ ಗಾನವು ನಿಂತುಹೋದರೂ ಶ್ರೀನಿವಾಸನಿಗೆ ಅದು ನಿಂತುದರ ಅರಿವೇ ಆಗದೆ, ಅವನು ಇನ್ನೂ ಗಾನ ಅಂತರಿಕ್ಷದಲ್ಲಿ ವಿಹರಿಸುತ್ತಲೇ ಇದ್ದನು.

ಸ್ವಲ್ಪ ಹೊತ್ತಿನೊಳಗಾಗಿ ಪಿಟೀಲಿನ ಧ್ವನಿ ನಿಂತುಹೋಯಿತು. ಅದರ ಗುಂಗು ಕಿವಿಯಲ್ಲಿ ಆಡುತ್ತಿದ್ದುದರಿಂದ ಹೃದಯದಿಂದ ಅದನ್ನೇ ಅನು ಸರಿಸುತ್ತಿದ್ದ ಶ್ರೀನಿವಾಸನಿಗೆ, ಕತ್ತಲೆಯ ಮಬ್ಬಿನಲ್ಲಿ ಒಂದು ವ್ಯಕ್ತಿ ಓಣಿಯಿಂದ ಹೊರಟುಹೋದುದು ಕಂಡರೂ ಅವನ ಕಣ್ಣಿನ ಛಾಯಾಯಂತ್ರ ಮನಸ್ಸಿನ ಮೇಲೆ ಅದನ್ನು ಒತ್ತಲಿಲ್ಲ. ಆ ವ್ಯಕ್ತಿ ಹೋದುದನ್ನು ಅವನು ಕಂಡರೂ, ಭರದಲ್ಲಿ ಓಡುತ್ತಿರುವ ನಾಗಾಲೋಟದ ಕುದುರೆ, ಎದುರಿಗೆ ಬಂದ ಸಣ್ಣ ಪ್ರಾಣಿಯನ್ನು ಕಂಡರೂ ತುಳಿದುಕೊಂಡು ಹೋಗಿಬಿಡುವಂತೆ ಅವನ ಮನಸ್ಸು ಅದನ್ನು ಗಮನಿಸದೆ ತನ್ನ ದಾರಿಯಲ್ಲಿ ಹೋಗುತ್ತಿತ್ತು. ಹೀಗೆ ಸುಮಾರು ಹದಿನೈದು ನಿಮಿಷ ಕಳೆದು ಆ ಗಾನದ ಮತ್ತಿನ ಗುಂಗು ಕಡಮೆ ಯಾಗಿ ಮತ್ತೆ ದೂರದಲ್ಲಿ ನಾಯಿ ಬಗುಳಿ, ಕತ್ತೆ ಕಿರಚಿ, ಗೂಬೆ ಕೂಗುವ ಹೊತ್ತಿಗೆ ಅವನ ಮನಸ್ಸು ಬೆಚ್ಚಿಬಿದ್ದು ಎಳೆದುಕೊಂಡು ಬಂದಂತೆ ಭೂಮಿಗೆ ಬಂದಿತು. ಕನಸಿನಿಂದ ಎದ್ದವನಿಗೆ ಇದ್ದಕ್ಕಿದ್ದಂತೆ ಹಿಂದಲದೆಲ್ಲ ಜ್ಞಾಪಕ

ಖರುವಂತೆ, ಶ್ರೀನಿವಾಸನ ಮನಸ್ಸಿನ ಮುಂದಿದ್ದ ಆ ಗಾನ ಜವನಿಕೆ ಮರೆಯಾಗಿ ಅವನು ಅದರ ಹಿಂದೆ ನೋಡತೊಡಗಿದನು. ಕೊಟ್ಟಿಗೆಯಲ್ಲಿ ಹೊರಗಾಗಿ ಕುಳಿತಿದ್ದ ಸೀತಾಲಕ್ಷ್ಮಿ, ಮನೆಯಲ್ಲಿ ಅಂದು ನಡೆದಿದ್ದ ಹೋರಾಟ, ತಾನು ಬೇರೆ ಹೋಗುವುದಾಗಿ ಹೇಳಿ ಅಣ್ಣನನ್ನು ಮನಸ್ವಿ ಬೈದು ಬಾಗಿಲಿನಲ್ಲಿ ಬಂದು ಕುಳಿತುದು, ನಿದ್ರೆ ಬಾರದೆ ಹೊರಳಾಡುತ್ತಿರುವಾಗ ಕೇಳಿಸಿದ ಗಾನ, ಉಂಟಾದ ಅನಿರ್ವಚನೀಯ ಆನಂದ.

ಹೀಗೆ ಯೋಚಿಸುತ್ತಿರುವಾಗ ಶ್ರೀನಿವಾಸನಿಗೆ ಓಣಿಯಲ್ಲಿ ಹೋದ ವ್ಯಕ್ತಿಯ ಜ್ಞಾಪಕವುಂಟಾಗಿ ಅದು ಯಾರಾಗಿದ್ದಿರಬಹುದು ಈ ಅವೇಳೆಯಲ್ಲಿ ಎಂದು ಹೊಳೆಯುವುದಕ್ಕೆ ಮುಂಚೆಯೇ ಅವಳು ಸೀತಾಲಕ್ಷ್ಮಿಯಾಗಿದ್ದಿರ ಬಹುದೆ ? ಎಂಬ ಭಯವೂ ಉಂಟಾಯಿತು. " ಸೀತಾಲಕ್ಷ್ಮಿಯಾದರೆ ಅವಳು ಈ ವೇಳೆಯಲ್ಲಿ ಯಾಕೆ ಹೋದಳು, ಎಲ್ಲಿ ಹೋದಳು ? " ಶ್ರೀನಿವಾಸ ನಿಗೆ ಕೂಡಲೇ ನದಿಯ ಜ್ಞಾನ ಬಂತು. ಅವನ ಮೈ ಬೆವತಿತು. ಸರ್ರನೆ ಎದ್ದು ಓಣಿಯಲ್ಲಿ ಓಡಿಹೋಗಿ ದನದ ಕೊಟ್ಟಿಗೆಯ ಹೊರಬಾಗಿಲನ್ನು ತೆಗೆದು ಒಳಗೆ ನೋಡಿದನು. ಶಾಂತವಾಗಿ ಮಲಗಿ ನಿದ್ರಿಸುತ್ತಿದ್ದ ಹಸುಗಳು ಬೆಚ್ಚಿ ಬಿದ್ದು ಎದ್ದು ನಿಂತವು. ಒಂದು ಸಲ ಹೊಳೆದ ಮಿಂಚಿನ ಕಾಂತಿಯಲ್ಲಿ, ಮೂಲೆಯಲ್ಲಿದ್ದ ಚಾಪೆ ಬರಿದಾಗಿದ್ದುದು ಅವನಿಗೆ ಕಂಡಿತು. ಅವನು ಮಾತ ನಾಡದೆ ಸರ ಸರನೆ ನದಿಯ ಹಾದಿ ಹಿಡಿದನು. ಊರ ಬಾಗಿಲಿಗೆ ಬಂದ ನಂತರ ಅವನಿಗೆ ಮತ್ತೆ ಕರ್ತವ್ಯ ಅಕರ್ತವ್ಯಗಳ ಗೊಂದಲವುಂಟಾಯಿತು. ಯಾಕೆಂದರೆ ಅಲ್ಲಿಂದ ಹೊಳೆಗೆ ಎರಡು ದಾರಿ. ಬಲಗಡೆ ಹೋದರೆ ಹೊಳೆಯ ಮೇಲೆ ಕಟ್ಟಿರುವ ಸೇತುವೆಯ ಕಡೆಗೆ ಹೋಗುವುದು. ಎಡಗಡೆ ಹೋದರೆ ಭಾರಿ ಮಡು. ಗಾಬರಿಯಲ್ಲಿ ಶ್ರೀನಿವಾಸನಿಗೆ ಏನನ್ನೂ ಯೋಚಿಸಲು ಮನ ಶ್ಯಾಂತಿಯಿಲ್ಲದಿದ್ದರೂ, ಪ್ರಾಯಶಃ ಸೀತಾಲಕ್ಷ್ಮಿ ಮಡುವಿನ ದಾರಿಯನ್ನೇ ಹಿಡಿದಿರಬೇಕೆಂದು ಊಹಿಸಿ ಅವನು ಮಡುವಿನ ಕಡೆ ಹೊರಟನು. ಕತ್ತಲು ಹೆಚ್ಚಾಗಿದ್ದುದರಿಂದ ದಾರಿ ಬೇಗ ಸಾಗಲಿಲ್ಲ, " ಈ ದಾರಿ ಸೀತಾಲಕ್ಷ್ಮಿಗೂ ಬೇಗ ಸಾಗಿಲ್ಲ " ಎಂಬುದು ಶ್ರೀನಿವಾಸನ ಮನಸ್ಸಿಗೆ ಹೊಳೆಯಿತು. ಅವಳು ಇಷ್ಟು ಬೇಗ ಕೈಮೀರಿ ಹೋಗಿರಲಾರಳು, ಎಂದು ಸ್ವಲ್ಪ ಧೈರ್ಯವುಂಟಾ ಯಿತು. ಇನ್ನೇನು ಮಡು ಸಿಕ್ಕಿತು ಎನ್ನುವಷ್ಟರಲ್ಲಿ ನೀರಿಗೆ ಏನೋ ಬಿದ್ದುದು

ಶ್ರೀನಿವಾಸನಿಗೆ ಕೇಳಿಸಿತು. ಅವನ ಹೃದಯವನ್ನೇ ದೇಹದಿಂದ ಕಿತ್ತಂತೆ ಅವನಿಗೆ ಭಾಸವಾಯಿತು. ನಾಲ್ಕು ಹಾರು ಹಾರಿ ಅವನು ನದಿಯ ತೀರದ ಬಂಡೆಗೆ ಬಂದನು. ಆ ತೀರದಲ್ಲಿದ್ದುದು ಅದೊಂದೇ ಬಂಡೆ. ಆ ಬಂಡೆ ನೀರಿನಿಂದ ಮೇಲೆ ಎದ್ದಿತ್ತು. ಆದರ ಬುಡವೇ ಮಡು. ಹಿಂದೆ ಈಜಲು ಹೋಗಿ ನೀರಿನಲ್ಲಿ ಸತ್ತವರಿಗೆಲ್ಲ ಅದೇ ಸ್ಥಾನವಾಗಿತ್ತು. "ಮಟ್ಟೆ ಕಲ್ಲಿನಿಂದ ಕೆಳಕ್ಕೆ ಬೀಳುತ್ತೇನೆ;" "ಮಟ್ಟೆಕಲ್ಲು ಮಡುವಿಗೆ ನೂಕಿ ಬರುತ್ತೇನೆ" ಎಂಬುದು ಊರಿನ ಸಾಧಾರಣ ಮಾತಾಗಿತ್ತು. ಶ್ರೀನಿವಾಸ ಬಂದು ಬಂಡೆಯಮೇಲೆ ನಿಂತನು. ಅವನ ಕೈ ಕಾಲುಗಳು ಥರ ಥರನೆ ನಡುಗುತ್ತಿದ್ದವು. ಮಡುವಿನ ಗಾಂಭೀರ್ಯವೂ ಮೌನವೂ ಭಯಂಕರವಾಗಿತ್ತು. ಶ್ರೀನಿವಾಸನು ಮಡುವನ್ನು ಕುರಿತು ನೋಡಿದನು. ಊರಿನ ಅನೇಕ ತರುಣಿಯರು ಅಲ್ಲಿ ಸತ್ತಿದ್ದುದು ಅವನಿಗೆ ಹೊಳೆದು, ಆ ನದಿ ಅವನ ಪ್ರೀತಿಯ ನದಿಯಾಗಿದ್ದರೂ ಅವನಿಗೆ ಅದರ ಮೇಲೆಯೇ ಕೋಪವುಂಟಾಯಿತು. ಸೀತಾಲಕ್ಷ್ಮಿ ಬಿದ್ದುದರಿಂದಲೇ ತಾನು ಕೇಳಿದ ಶಬ್ದವಾಗಿದಿರಬೇಕೆಂಬುದರಲ್ಲಿ ಅವನಿಗೆ ಅನುಮಾನ ಇರಲಿಲ್ಲ. ತಾನೂ ಕೂಡಲೇ ನೀರಿಗೆ ಬೀಳಬೇಕೆಂದು ಅವನಿಗೆ ತೋರಿತು. ಆದರೆ ಅಲ್ಲಿಯೇ ಬೀಳೋಣವೋ ಅಥವ ದಡದ ಮೇಲೆ ನಾಲ್ಕಾರು ಮಾರು ಮುಂದೆ ಓಡಿ ಹೋಗಿ ಬೀಳಬೇಕೋ ಎಂಬ ತರ್ಕದ ಒಂದು ಗಳಿಗೆಯೇ ಅವನಿಗೆ ಒಂದು ಯುಗವಾಗಿ ಕಂಡಿತು. ಇದ್ದಕ್ಕಿದ್ದಂತೆ ಒಂದು ಮಿಂಚು. ನಾಲ್ಕು ಮಾರು ದೂರದಲ್ಲಿ ನದಿಯ ಮಧ್ಯದಲ್ಲಿ ಕಪ್ಪು ತಲೆಯೊಂದು ಮೇಲೆದ್ದು ಮತ್ತೆ ನೀರಿನಲ್ಲಿ ಮುಳುಗಿತು. ಶ್ರೀನಿವಾಸನು ಒಂದೇ ಏಟಿಗೆ ನಾಲ್ಕು ಮಾರು ನೆಗೆದು ನೀರಿಗೆ ಬಿದ್ದು ವಾಯುವೇಗದಿಂದ ತಲೆ ಕಂಡ ಕಡೆಗೆ ನುಗ್ಗಿ ನೀರಿನಲ್ಲಿ ಮುಳುಗಿ ಪ್ರವಾಹದ ಜತೆಯಲ್ಲಿಯೇ ಮುಂದೆ ಹೋದನು. ಎರಡೇ ನಿಮಿಷಗಳಲ್ಲಿ ಅವನ ಕೈಗೆ ಸೀತಾಲಕ್ಷ್ಮಿ ಸಿಕ್ಕಿದಳು. ಆಕೆ ಪ್ರಾಣವುಳ್ಳವಳಾಗಿ ಕೈಕಾಲು ಬಡಿಯುವಂತಿದ್ದರೆ, ಶ್ರೀನಿವಾಸ ಅವಳ ತಲೆ ಜುಟ್ಟನ್ನು ಹಿಡಿದುಕೊಂಡು ಎಳೆದುಕೊಂಡು ಬರಬೇಕೆಂದು ಮಾಡಿದ್ದನು. ಸೀತಾಲಕ್ಷ್ಮಿಗೆ ಜ್ಞಾನವಿದ್ದಿದ್ದರೆ ಆಕೆ, ನೀರಿನಲ್ಲಿ ತೇಲಿ ಹೋಗುವವನು ಹುಲ್ಲು ಸಿಕ್ಕಿದರೂ ಹಿದಿದುಕೊಳ್ಳುವನೆಂಬ ಗಾದೆಯಂತೆ ಅವನನ್ನೇ ಬಲವಾಗಿ ಅಪ್ಪಿಕೊಂಡುಬಿಡುತ್ತಿದ್ದಳು. ಆದರೆ ಈಗ ಆಕೆಗೆ ಮೈ ಮೇಲೆ ಪ್ರಜ್ಞೆಯಿಲ್ಲದಿದ್ದು

ದರಿಂದ ಅವಳು ಒಂದು ನಿರ್ಜೀವ ವಸ್ತುವಿನಂತಾಗಿದ್ದಳು. ಶ್ರೀನಿವಾಸನು ಸುಲಭವಾಗಿ ಅವಳನ್ನು ದಡಕ್ಕೆ ಎಳೆದುಕೊಂಡು ಬಂದನು. ಅನಂತರ ಅವಳನ್ನು ಹೆಗಲಿನ ಮೇಲೆ ಹಾಕಿಕೊಂಡು ಸರ ಸರನೆ ತನ್ನ ಮನೆಗೆ ಕರ ತಂದನು. ಅವಳು ಸತ್ತಿಲ್ಲವೆಂಬ ನಂಬಿಕೆ ಅವನಿಗೆ ಅರ್ಧ ದಾರಿಯಲ್ಲಿಯೇ ಉಂಟಾಯಿತು. ಶ್ರೀನಿವಾಸ, ಸೀತಾಲಕ್ಷ್ಮಿಯನ್ನು ತಂದು, ಜಗಲಿಯ ಮೇಲೆ ಹಾಸಿದ್ದ ಚಾಪೆಯ ಮೇಲೆ ಮಲಗಿಸಿದನು. ಒಂದೆರಡು ಗಂಟೆ ಗಳಲ್ಲಿ ಸೀತಾಲಕ್ಷ್ಮಿ ಪೂರ್ಣವಾಗಿ ಗುಣಹೊಂದಿ ಎದಿನಂತೆ ಮಾತನಾಡ ತೊಡಗಿದಳು. ಶ್ರೀನಿವಾಸನು ತನ್ನ ಹೆಂಡತಿಯನ್ನು ಏಳಿಸಿ ಸೀತಾಲಕ್ಷ್ಮಿಗೆ ಬೇರೆ ಸೀರೆಯನ್ನು ತಂದುಕೊಟ್ಟನು. ಅದು ಸೀತಾಲಕ್ಷ್ಮಿ ಸ್ನಾನಮಾಡಿ ಒಳಕ್ಕೆ ಬರುವ ದಿನವಾಗಿದ್ದುದರಿಂದಲೂ, ಯಾವಾಗಲೂ ಸೀತಾಲಕ್ಷ್ಮಿ ಆದಿನ ನೆರೆ ಮನೆಯ ಹುಡುಗಿಯ ಕೈಲಿ ಮಡಿಯನ್ನು ತೆಗೆಸಿಕೊಂಡು ಹೋಗುವುದು ಪದ್ಧತಿಯಾಗಿದ್ದುದ್ದರಿಂದಲೂ, ಶ್ರೀನಿವಾಸನ ಹೆಂಡತಿಗೆ ಮತ್ತೇನೂ ಗೊತ್ತಾ ಗಲಿಲ್ಲ, ನಿದ್ರೆಯ ಜೊಂಪಿನಲ್ಲಿದ್ದುದರಿಂದ ಆಗ ಇನ್ನೂ ಸ್ನಾನಕ್ಕೆ ನದಿಗೆ ಹೋಗುವ ಹೊತ್ತಾಗಿರಲಿಲ್ಲವೆಂಬುದು ಸಹ ಅವಳಿಗೆ ಹೊಳೆಯಲಿಲ್ಲ. ಅವಳು ತೂಗಡಿಸುತ್ತ ಸೀತಾಲಕ್ಷ್ಮಿಯ ಸೀರೆ ರವಿಕೆ ಟವಲುಗಳನ್ನು ರಾತ್ರಿಯೇ ಹಾಕಿಟ್ಟಿದ್ದ ಕುಕ್ಕೆಯನ್ನು ಹೊರಕ್ಕೆ ಇಟ್ಟು ಮತ್ತೆ ಹೋಗಿ ಮಲಗಿಕೊಂಡಳು. ಬಳಲಿ ಹೊತ್ತು ಕಳೆದು ಮಲಗಿದುದರಿಂದ ರಾಮುನಿಗಾಗಲಿ ಅವನ ಹೆಂಡತಿ ಗಾಗಲಿ ಇದಾವುದೂ ಗೊತ್ತಾಗಲೇ ಇಲ್ಲ. ಹೀಗೆ ಸೀತಾಲಕ್ಷ್ಮಿ ಹೊಳೆಯಲ್ಲಿ ಮುಳುಗಿ ಸಾಯಲು ಪ್ರಯತ್ನಿಸಿದ್ದು ಶ್ರೀನಿವಾಸನೊಬ್ಬನಿಗೆ ಮಾತ್ರ ತಿಳಿದು ಅವನಲ್ಲಿಯೇ ಉಳಿಯಿತು.

ಒಳಗಿನವರಿಗೆ ನಿದ್ರೆ ಬಂದರೂ ಶ್ರೀನಿವಾಸನಿಗೂ, ಸೀತಾಲಕ್ಷ್ಮಿಗೂ ಆ ರಾತ್ರಿಯ ನಿದ್ರೆ ಮುಗಿದುಹೋಯಿತು. ಅವರು ಉಳಿದ ಕಾಲವನ್ನು ಮಾತನಾಡುತ್ತಲೇ ಕಳೆದರು. ಸೀತಾಲಕ್ಷ್ಮಿ ತನಗೆ ಜೀವನ ಬೇಸರಿಕೆ ಯಾದುದರಿಂದ ಸಾಯಲು ನಿರ್ಧರಿಸಿ, ಕೊನೆಯ ಬಾರಿ ಎಂದು. ತಾನು ಪಿಟೀಲು ನುಡಿಸಿ ನದಿಗೆ ಹೊರಟುದಾಗಿಯೂ ಹಿಂದೊಂದು ಸಲ ಆತ್ಮಹತ್ಯಕ್ಕೆ ಪ್ರಯತ್ನಪಟ್ಟು ಮತ್ತೆ ಬದುಕಲೇಬೇಕೆಂಬ ಕೆಚ್ಚಿನಿಂದ ಆ ಪ್ರಯತ್ನದಿಂದ ವಿಮುಖಳಾದುದಾಗಿಯೂ ಹೇಳಿದಳು. "ನನ್ನದು ತಪ್ಪಿಲ್ಲ. ನನ್ನದೆಷ್ಟು

ತಪ್ಪೋ ನರಸಿಂಹನದೂ ಅಷ್ಟೇ ತಪ್ಪು. ನರಸಿಂಹ ಏನೂ ನಡೆಯದವನಂತೆ ಸುಖವಾಗಿ ಇರಬಹುದಾದರೆ, ನರಸಿಂಹನನ್ನು ಸಭ್ಯ ಗೃಹಸ್ಥನೆಂದು ಎಲ್ಲರೂ ಗೌರವಿಸುತ್ತಿರಬೇಕಾದರೆ ನಾನ್ಯಾಕೆ ಸಾಯಬೇಕು? ಎಂದು ಆಗ ಸಾವಿನೆಡೆ ಯಿಂದ ಓಡಿ ಬಂದೆ. ಆದರೆ ಈಚೆಗೆ ಕಣ್ಣು ತೆರೆಯಿತು. ಗಂಡು ಏನು ಬೇಕಾದರೂ ಮಾಡಿಬಿಟ್ಟು ತಪ್ಪಿಸಿಕೊಳ್ಳಬಹುದು. ಆದರೆ ಹೆಣ್ಣು ಹಾಗೆ ಮಾಡುವಂತೆ ಇಲ್ಲ. ಇತರರಿಲ್ಲದಿದ್ದರೆ ಹೋಗಲಿ, ನಮ್ಮ ಸಂಸಾರದ ಅಣ್ಣ ತಮ್ಮಂದಿರಾದರೂ ನನ್ನ ದೀನಸ್ಥಿತಿಯರಿತು ನನ್ನಲ್ಲಿ ಕನಿಕರವಿಡಬಹುದೆಂದು ಯೋಚಿಸಿದೆ. ಇಲ್ಲಿ ಬಂದು ನೋಡಿದರೆ ನಾನು ಬಂದಂದಿನಿಂದ, ನಾನು ಅಪಶಕುನದ ಗೂಬೆ. ನಾನು ಬಂದಂದಿನಿಂದ ಮನೆಯಲ್ಲಿ ಯಾರಿಗೂ ಯಾವುದೂ ಏಳಿಗೆ ಇಲ್ಲ. ಸಾಲದುದಕ್ಕೆ ಅಣ್ಣ ತಮ್ಮಂದಿರಾದ ನಿಮ್ಮಲ್ಲಿ ಹೋರಾಟ. ನನ್ನ ಕಾರಣದಿಂದ ನೀವಿಬ್ಬರೂ ಜಗಳವಾಡುವುದು ಬೇಡ. ಸಾಯಲು ನನಗೆ ಇಷ್ಟವಿಲ್ಲದಿದ್ದರೂ ಈ ಸಂಸಾರ ಕಲಹ ನೋಡಲಾರದೆ ಹೊಳೆಗೆ ಹೋಗಿ ಬಿದ್ದೆ" ಎಂದಳು.

ಆ ರಾತ್ರಿ ಅವರಿಬ್ಬರೂ ಬಹಳ ಹೊತ್ತು ಮಾತನಾಡುತ್ತಾ ಕುಳಿತಿದ್ದರು. ಬೆಳಗಾದ ನಂತರ ಶ್ರೀನಿವಾಸ ರಾಮುನಿಗೆ ಹೇಳಿ ಬೇರೆಯಾದನು. ಸೀತಾಲಕ್ಷ್ಮಿಯೂ ಅವನ ಜತೆ ಉಳಿದಳು.

## ೧೨

ನರಸಿಂಹನ ಎದೆಗಾರಿಕೆಯನ್ನು ನೋಡಿ ಮಲ್ಲಿಗೆಹಳ್ಳಿಯವರಿಗೆ ನಿಜವಾಗಿ ಆಶ್ಚರ್ಯವಾಯಿತು. ಅದು ಎದೆಗಾರಿಕೆಯೋ ಅಥವ ಬರಿಯ ಒರಟುತನವೋ ಜನರಿಗೆ ತಿಳಿಯಲಿಲ್ಲ. ಆದರೂ ಅವನು ನಿಜವಾಗಿ ಜಲಜಾಕ್ಷಿಯೊಡನೆ ಮಲ್ಲಿಗೆಹಳ್ಳಿಗೆ ಆ ಅವಾಂತರವೆಲ್ಲ ಮುಗಿದ ಇಷ್ಟು ಬೇಗ ಬರಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ವಾಸ್ತವವಾಗಿ ಅವನು ಬರುತ್ತಾನೆಂದು ಕೇಳಿದಾಗ ಕೆಲವರು ಅವನು ಬರುತ್ತಾನೆಂದೂ, ಕೆಲವರು ಖಂಡಿತ ಬರುವುದಿಲ್ಲವೆಂದೂ ಜೂಜು ಕಟ್ಟಿದರು. ಹಿರಿಯರಾದವರು "ಯಾವ ಮುಖ ಇಟ್ಟುಕೊಂಡು ತಾನೇ ಆ ಪಟಿಂಗ ಇಲ್ಲಿ ಬರುತ್ತಾನೆ. ಮಾನವಿರುವ ಯಾವನೂ ಇಂತಹ ಕೆಲಸ ಸಂಭವಿಸಿದಮೇಲೆ ಬರುವುದಿಲ್ಲ. ಬಂದು ಇಲ್ಲಿ

ಎಲ್ಲರ ಎದುರಿಗೂ ಹೇಗೆ ಮುಖ ಎತ್ತಿಕೊಂಡು ತಿರುಗುತ್ತಾನೆ? ಸೀತಾಲಕ್ಷ್ಮಿ ಬೇರೆ ಇಲ್ಲಿಯೇ ಇದ್ದಾಳೆಲ್ಲ" ಎಂದುಕೊಂಡರು. ಯುವಕರಾದ ಉತ್ಸಾಹಿಗಳೂ ಸೀತಾಲಕ್ಷ್ಮಿಯ ಮನಮೋಹಕ ಸೌಂದರ್ಯದ ಬಲೆಗೆ ಬಿದ್ದವರೂ ಆದ ಸುಧಾರಕ ತರುಣರೂ "ಆ ಕೃತ್ಯಮಿ ಮಾತ್ರ ಇಲ್ಲಿಗೆ ಬರಲಿ. ಬೀದಿಯಲ್ಲಿ ತಲೆ ಎತ್ತಿಕೊಂಡು ತಿರುಗದ ಹಾಗೆ ಮಾಡುತ್ತೇವೆ. ಅವನನ್ನು ಸಮಾಜದಿಂದ ಬಹಿಷ್ಕರಿಸಿಯೇ ಬಿಡುತ್ತೇವೆ" ಎಂದು ಗರ್ಜಿಸಿದರು. ಮಹಿಳೆಯರು ರಾವಣನನ್ನು ಕುರಿತು ಮಾತನಾಡುವಂತೆ ಭಯದಿಂದ ಮೆತ್ತಗಾದ ಧ್ವನಿಯಲ್ಲಿ "ಅವನು ಬರುತ್ತಾನಂತೆ" ಎಂದು ಹೇಳಿಕೊಂಡರು. ಆದರೆ ಎಲ್ಲರೂ "ಪ್ರಾಯಶಃ ಅವನು ಬರಲಾರ. ಎಷ್ಟು ಕೆಟ್ಟಿದ್ದರೂ ಇಷ್ಟು ಮಾನಗೆಟ್ಟಿರಲಾರ. ಜಲಜಾಕ್ಷಿ ತಾನೆ ಹೇಗೆ ಅವನನ್ನು ಕರೆದುಕೊಂಡು ಬರುತ್ತಾಳೆ? ಇದು ನಡೆಯದ ಮಾತು" ಎಂದುಕೊಂಡರು.

ಶ್ರೀನಿವಾಸ ಬೇರೆ ಒಲೆ ಹೂಡಿದ ನಂತರ ರಾಮಸ್ವಾಮಿಗೂ ಅವನಿಗೂ ಇದ್ದ ಭ್ರಾತೃತ್ವ, ಬಾಂಧವ್ಯ ಸ್ವಲ್ಪ ಕಡಿಮೆಯಾಗಿಯೇ ಇತ್ತು. ಇದಕ್ಕೆ ಮುಖ್ಯ ಕಾರಣ, ಸೀತಾಲಕ್ಷ್ಮಿಯ ವಿಚಾರದಲ್ಲಿ ಇಬ್ಬರಿಗೂ ಇದ್ದ ಭಿನ್ನಾಭಿಪ್ರಾಯವೇ "ಸೀತಾಲಕ್ಷ್ಮಿ ನಿರ್ದೋಷಿ ನಿರಪರಾಧಿ" ಎಂಬುದು ಶ್ರೀನಿವಾಸನ ಮತವಾಗಿತ್ತು. "ಹೇಗಾದರೂ ತಪ್ಪೆಲ್ಲ ಅವಳದೇ. ಅವಳು ನಾಯಿ ಮುಟ್ಟಿದ ಮಡಕೆ. ಅವಳಿಗೆ ಇನ್ನು ಬಾಳು ಇಲ್ಲ" ಎಂಬುದು ರಾಮಸ್ವಾಮಿಯ ಮತವಾಗಿತ್ತು. ರಾಮಸ್ವಾಮಿಯ ಅಭಿಪ್ರಾಯ ಅವನ ಹೆಂಡತಿ ಮತ್ತು ಊರಿನ ಇತರ ಹಿರಿಯರ ಇಚ್ಛೆಗೆ ಅನುಸಾರವಾದ ಅಭಿಪ್ರಾಯವಾಗಿತ್ತು. ಹೀಗೆ ತೀರ್ಮಾನಿಸುವುದರಲ್ಲಿ ಮನುಷ್ಯತ್ವವೇ ಇಲ್ಲವೆಂಬುದು ಶ್ರೀನಿವಾಸನ ದೃಢ ನಂಬಿಕೆಯಾಗಿತ್ತು. ಅವರಿಬ್ಬರೂ ತಮ್ಮ ಅಭಿಪ್ರಾಯಗಳಿಗೆ ಎಷ್ಟರಮಟ್ಟಿಗೆ ಅಂಟಿಕೊಂಡಿದ್ದರೆಂದರೆ, ಆ ಅಭಿಪ್ರಾಯವಿಲ್ಲದವರೆಲ್ಲ ಅವರ ವಿರೋಧಿಗಳಾಗಿಯೇ ಅವರಿಗೆ ತೋರುತ್ತಿದ್ದರು.

ಬೇರೆಯಾದಂದಿನಿಂದ ರಾಮಸ್ವಾಮಿಯ ಜತೆಯಲ್ಲಿ ಸಾಧಾರಣವಾಗಿ ಸಂಭಾಷಣೆಯನ್ನೇ ನಿಲ್ಲಿಸಿದ್ದ ಶ್ರೀನಿವಾಸನಿಗೆ, ನರಸಿಂಹ ಊರಿಗೆ ಬರುವ ಸುದ್ದಿ ಕೇಳಿ ಚೇಳು ಕುಟುಕಿದಂತೆ ಆಯಿತು. ಜಲಜಾಕ್ಷಿ ತಂಗಿಯಾದರೂ ಇಂತಹ ರಾಕ್ಷಸಿಯಾಗಿರಬಹುದೆಂದು ಶ್ರೀನಿವಾಸ ಭಾವಿಸಿರಲಿಲ್ಲ. ನರಸಿಂಹ

ತನ್ನ ಸಂಭಾಷಣೆಗೂ, ಮುಖಾವಲೋಕನಕ್ಕೆ ಸಹ ಅರ್ಹನಲ್ಲವೆಂದು ಶ್ರೀನಿವಾಸ ನಿರ್ಣಯಿಸಿದ್ದನು. ನರಸಿಂಹನಲ್ಲಿ ಅವನ ಸಿಟ್ಟು, ಆತ ಸೀತಾಲಕ್ಷ್ಮಿಯಲ್ಲಿ ತಪ್ಪಿ ನಡೆದನೆಂಬುದು ಮಾತ್ರವಲ್ಲ. ಯವ್ವನ ಮತ್ತು ಸೌಂದರ್ಯದ ಜ್ವಾಲೆಗೆ ಆಕರ್ಶಿತವಾಗಿ ಪ್ರಾಣಿಗಳು ಅದರಲ್ಲಿ ಪತಂಗಗಳಂತೆ ಯುಕ್ತಾಯುಕ್ತ ವಿವೇಕವಿಲ್ಲದೆ ಬೀಳುತ್ತವೆಂಬುದು ಅವನಿಗೆ ತಿಳಿದಿತ್ತು. ಆದರೆ ನರಸಿಂಹನಿಗೆ ತಾನು ಮಾಡಿದ ಕಾರ್ಯ ತಪ್ಪು ಎಂಬ ಪರಿಜ್ಞಾನವಾಗಲಿ ತನ್ನ ಅನೌಚಿತ್ಯದಿಂದ ಮತ್ತೊಂದು ಪ್ರಾಣಿಗೆ ಉಂಟಾದ ಜೀವಾವಧಿ ಹಿಂಸೆಯ ಜ್ಞಾನವಾಗಲಿ ಇಲ್ಲದಿದ್ದುದು, ಶ್ರೀನಿವಾಸನಿಗೆ ಅವನ ವಿಷಯದಲ್ಲಿ ಕೋಪವನ್ನೂ ಜಿಗುಪ್ಸೆಯನ್ನೂ ಹೆಚ್ಚಿಸಿತ್ತು. ತನ್ನಿಂದ ಅಂತಹ ತಪ್ಪು ನಡೆದನಂತರ, ಅವನು ಸೀತಾಲಕ್ಷ್ಮಿಯೊಡನೆ ನಡೆದುಕೊಂಡುದನ್ನು ಕೇಳಿ ಶ್ರೀನಿವಾಸನ ರಕ್ತ ಕ್ರೋಧದಿಂದಲೂ ಅವಮಾನದಿಂದಲೂ, ತಂಗಿಗಾಗಿ ಕನಿಕರದಿಂದಲೂ ಕುದಿದು ನೊಂದಿತ್ತು. ನರಸಿಂಹನನ್ನು ಜ್ಞಾಪಿಸಿಕೊಂಡಾಗಲೆಲ್ಲ ಅವನ ಮೈ ಕ್ರೋಧದಿಂದ ನಡುಗುತ್ತಿದ್ದುದರಿಂದ ನರಸಿಂಹ ಎದುರಿಗೆ ಬಂದರೆ “ಅವನನ್ನು ನಾನು ಏನು ಮಾಡಿಬಿಡುತ್ತೇನೆಯೋ, ಎಲ್ಲಿ ಅವನ ಕೈಕಾಲುಗಳನ್ನು ಮುರಿಯುತ್ತೇನೆಯೋ, ಅವನ ಪ್ರಾಣವನ್ನೇ ತೆಗೆಯುತ್ತೇನೆಯೋ ; ಅವನು ನನ್ನ ಎದುರಿಗೆ ಬರದೆ ಇರುವುದು ಒಳ್ಳೆಯದೆಲ್ಲ” ಎಂದು ಶ್ರೀನಿವಾಸ ಬಯಸುತ್ತಿದ್ದನು. ನರಸಿಂಹನ ವಿಷಯದಲ್ಲಿ ಶ್ರೀನಿವಾಸನಿಗಿದ್ದ ಕೋಪ ಸೀತಾಲಕ್ಷ್ಮಿ ಒಬ್ಬಳಿಗೆ ಮಾತ್ರ ತಿಳಿದಿತ್ತು. ಅವಳೂ ಸಹ “ಪರಮಾತ್ಮ ಇವರಿಬ್ಬರೂ ಒಂದೆಡೆ ಸೇರದಂತೆ ಮಾಡು” ಎಂದು ಬಯಸುತ್ತಿದ್ದಳು.

ಹೀಗಿರುವಲ್ಲಿ ಇದ್ದಕ್ಕಿದ್ದಂತೆ ನರಸಿಂಹನೂ ಜಲಜಾಕ್ಷಿಯೂ ಬರುವ ಸುದ್ದಿ ಕೇಳಿ ಶ್ರೀನಿವಾಸನು ಒಮ್ಮೆಲೆ ಹುಚ್ಚನಂತಾದನು. ಸೀತಾಲಕ್ಷ್ಮಿಗೆ ಮತ್ತೆ ತಾನು ದಾಟಿ ಬಂದ ಹಿಂದಲ ನರಕವೆಲ್ಲ ಜ್ಞಾಪಕಕ್ಕೆ ಬಂದಿತು. ಆ ಪರಿಯ ಜ್ಞಾಪಕದಿಂದಲೇ ಅವಳಿಗೆ ಮೈ ನಡುಗಿ ಮನ ಜಿಗುಪ್ಸೆಹೊಂದಿ ಜ್ವರ ಬಂದಂತೆ ಆಯಿತು. ಬಂದ ರೋಗ ವಾಸಿಯಾಗಿ, ಸ್ವಲ್ಪ ಕಾಲಾನಂತರ ಮತ್ತೆ ಮರುಕಳಿಸಿ ಮೊದಲಿಗಿಂತ ಹೆಚ್ಚು ಅಪಾಯವಾಗುವಂತೆ ಅವಳ ಮೈ ಮನಗಳು ಜರ್ಝರಿತವಾದುವು. ಯಾವ ಯಾವ ಭೀಭತ್ಸ ಅನುಭವಗಳನ್ನು ಆಕೆ ಹಿಂದೆ ಹೊಂದಿ, ಕೆಟ್ಟ ಕನಸಿನೊಳಗಿಂದಲೆಂಬಂತೆ ಅವುಗಳಿಂದ

ಪಾರಾಗಿ ಬಂದಿದ್ದಳೋ ಆ ಕ್ರೂರ ಸನ್ನಿವೇಶಗಳು ಮತ್ತೆ ಮೊದಲಿಗಿಂತ ಎರಡರಷ್ಟು ಕಠೋರವಾಗಿ ಅವಳನ್ನು ಅಪ್ಪಳಿಸುವಂತೆ ತೋರಿದವು. ಈ ಜಗತ್ತನ್ನೇ ಬಿಟ್ಟು ಎಲ್ಲಿಗಾದರೂ ಓಡಿಬಿಡಬೇಕೆಂದು ಅವಳಿಗೆ ತೋರಿತು. ಕೊನೆಗೆ "ಭೂಮಿಯಾದರೂ ಬಾಯಿ ಬಿಟ್ಟು ನನ್ನನ್ನು ನುಂಗಿ ನನ್ನ ಸಂಕಟಕ್ಕೆ ಕೊನೆ ತರಬಾರದೆ?" ಎಂದು ಆಕೆ ಬಯಸಿದಳು. ನರಸಿಂಹನ ಬರುವಿನ ಸುದ್ದಿ, ಅವಳನ್ನು, ಮರೆಯಾಗಿದ್ದ ಮತ್ತೊಂದು ಕ್ರೂರ ಜಗತ್ತಿಗೆ ಎಳೆದೊಯ್ಯಿತು. ಕೋಮಲವಾದ ಗಿಡವನ್ನು ಗಾಳಿ ಬಂದು ಅಪ್ಪಳಿಸುವಂತೆ, ಒಂದೇ ಏಟಿಗೆ ಅರೆಜೀವವಾದವಳಂತೆ ಅವಳು ನಿರ್ವಿಣ್ಣಳಾದಳು. ಕ್ಷಣ ಮಾತ್ರದಲ್ಲಿ ಹೀಗೆ ಜರ್ಝರಿತಳಾದ ತಂಗಿಯನ್ನು ನೋಡಿ ಶ್ರೀನಿವಾಸನ ಹೊಟ್ಟೆಯಲ್ಲಿ ಬೆಂಕಿ ಬಿದ್ದ ಹಾಗೆ ಆಯಿತು.

ಬೇರೆಯಾದಂದಿನಿಂದ ರಾಮಸ್ವಾಮಿಯೂ ಶ್ರೀನಿವಾಸನೂ ಯಾವ ವಿಷಯದಲ್ಲಿಯೂ ಹೆಚ್ಚಾಗಿ ಮಾತು ಬೆಳೆಸಿರಲಿಲ್ಲ. ಅದರಲ್ಲಿಯೂ ನರಸಿಂಹನ ಮತ್ತು ಸೀತಾಲಕ್ಷ್ಮಿಯ ಸುದ್ದಿಯನ್ನು ಅವರು ಪೂರ್ಣವಾಗಿ ಒಂದು ಬಗೆಯ ಮೌನ ಒಪ್ಪಿಗೆಯಿಂದಲೇ ಬಹಿಷ್ಕರಿಸಿದ್ದರು. ನರಸಿಂಹ, ತಮ್ಮ ಮತ್ತೊಬ್ಬ ತಂಗಿಯ ಗಂಡನಾದರೂ ಈ ಜೀವಮಾನದಲ್ಲಿ ಅವನು ಇನ್ನು ಮಲ್ಲಿಗೆಹಳ್ಳಿಗೆ ಬರಲಾರನೆಂದು ಭಾವಿಸಿದ್ದುದರಿಂದ, ಅವರ ಮನಃಪಥದಿಂದ ಆತ ಪೂರ್ಣ ವಾಗಿ ಮರೆಯಾಗಿದ್ದನು. ಈಗ ಇದ್ದಕ್ಕಿದ್ದಂತೆ ಅವನು ಬರುವ ಸುದ್ದಿ ತಿಳಿದು ಶ್ರೀನಿವಾಸನಿಗೆ ರಾಮಸ್ವಾಮಿಯ ಮೇಲೆಯೂ ಕೋಪವುಂಟಾಯಿತು. "ನನ್ನ ಮನೆಯಲ್ಲಿ ಅವನು ಇರುವಂತೆ ಇಲ್ಲ. ರಾಮಸ್ವಾಮಿ ಯಾಕೆ ಅವನಿಗೆ ತನ್ನ ಮನೆಯಲ್ಲಿ ಆಶ್ರಯಕೊಡಬೇಕು. ಅವನು ಇಲ್ಲಿ ಬರುವುದರಿಂದ ಸೀತಾಲಕ್ಷ್ಮಿಯ ಮನಸ್ಸು ಎಂತಹ ವೇದನೆಯನ್ನು ಅನುಭವಿಸುತ್ತದೆ? ಆಕೆಯ ನಿರುತ್ಸಾಹೀ ಜೀವನದಲ್ಲಿ ಮತ್ತೆ ಎಂತಹ ಕಳವಳವುಂಟಾಗು ತ್ತದೆ? ಅವನ ಬರುವಿಕೆಯಿಂದ ಈ ವಾತಾವರಣವೇ ಕಲುಷಿತವಾಗು ವುದಿಲ್ಲ? ಇವರಿಬ್ಬರೂ ಒಂದೇ ಊರಿನಲ್ಲಿ ಒಂದೇ ಸ್ಥಳದಲ್ಲಿ ಇರುವುದು ಹೇಗೆ ತಾನೆ ಸಾಧ್ಯ? ರಾಮಸ್ವಾಮಿ ಅವನಿಗೆ ಇಲ್ಲಿ ಬರಲು ಯಾಕೆ ಅವಕಾಶ ಕೊಡಬೇಕು? ಮಾನಗೆಟ್ಟ ಆ ಜಲಜಾಕ್ಷಿಗಾದರೂ ಇದು ತಿಳಿಯಬಾರದೆ? ಮತ್ತೊಬ್ಬರ ಮನಸ್ಸಿನ ವೇದನೆಯೇ ಇವರಿಗೆ ತಿಳಿಯುವುದಿಲ್ಲವಲ್ಲ? ಪಶುವಿ

ನಂತಿರುವ ಸರಸಿಂಹನಿಗೆ ತಿಳಿಯದಿದ್ದರೂ, ಹೆಣ್ಣು ಆದ ಜಲಜಾಕ್ಷಿಗೆ, ಸೀತಾ ಲಕ್ಷ್ಮಿಯ ಸಂಕಟ ತಿಳಿಯಬಾರದೆ ? ”

ಹೀಗೆ ಯೋಚಿಸಿ ಶ್ರೀನಿವಾಸ, ಕೊನೆಗೆ ನರಸಿಂಹ ಬರುವುದನ್ನು ಬಲಾತ್ಕಾರವಾಗಿಯಾದರೂ ತಪ್ಪಿಸಬೇಕೆಂದು ರಾಮಸ್ವಾಮಿಯ ಬಳಿ ಹೋದನು. ಈಚೆಗೆ ಸಾಧಾರಣವಾಗಿ ತನ್ನಲ್ಲಿ ಯಾವ ಮಾತಿಗೂ ಬರದಿದ್ದ ಶ್ರೀನಿವಾಸನ ಮುಖವನ್ನು ನೋಡಿದ ಕೂಡಲೇ ರಾಮಸ್ವಾಮಿಗೆ ಅವನು ಬಂದಿದ್ದ ಉದ್ದೇಶ ಗೊತ್ತಾಯಿತು. ಶ್ರೀನಿವಾಸನು “ ಅವನು ಇಲ್ಲಿ ಮತ್ತೆ ಬರುತ್ತಾನಂತೆ ” ಎಂದು ಪ್ರಾರಂಭಿಸಿದನು. “ ಹೌದು. ಬರೆದಿದ್ದಾನೆ, ಜಲಜಾಕ್ಷಿಯೂ ಬರುತ್ತಾಳಂತೆ ” ಎಂದ ರಾಮಸ್ವಾಮಿ.

ನರಸಿಂಹನ ಹೆಸರನ್ನು ಅವರಿಬ್ಬರೂ ಉಚ್ಚರಿಸುತ್ತಿರಲಿಲ್ಲ. “ ಅವನು ” ಎಂಬುದೇ ಅವನ ಹೆಸರಾಗಿತ್ತು. ಶ್ರೀನಿವಾಸನು “ ಈಗ ಇಲ್ಲಿ ಅವನು ಯಾಕೆ ಬರಬೇಕು ? ” ಎಂದನು.

ರಾಮಸ್ವಾಮಿ—ನಾನೇನು ಅವನಿಗೆ ನೀನು ಇಲ್ಲಿ ಬರದೆ ಉಳಿದು ಹೋಗಿದೆ ಎಂದು ಬರೆದೆನೆ ?

ಶ್ರೀ.—ಇಲ್ಲ, ಆದರೆ ಬರಬೇಡ ಎಂದೂ ಬರೆಯಲಿಲ್ಲ.

ರಾ.—ಇದೊಳ್ಳೆ ಚೆನ್ನಾಗಿದೆ ಜಲಜಾಕ್ಷಿ ರಥೋತ್ಸವಕ್ಕೆ ಬರುತ್ತೇನೆ ಎಂದು ಬರೆದಳು. ತಾಯಿ ತಂದೆ ಇಲ್ಲದ ಮಗು, ತವರು ಮನೆಗೆ ಬರುತ್ತೇನೆಂದರೆ ಬೇಡವೆನ್ನುವುದು ಹೇಗೆ ? ತಾಯಿ ತಂದೆ ಇಲ್ಲದ ಹೆಣ್ಣುಮಗು ತವರಿಗೇ ಎರವೆ ?

ಶ್ರೀ.—ಹೌದು ಅವಳು ತವರಿಗೆ ಎರವಲ್ಲ. ಸೀತಾಲಕ್ಷ್ಮಿಮಾತ್ರ ಎರವು ರಾಮಸ್ವಾಮಿಯು ಶ್ರೀನಿವಾಸನ ಪ್ರತ್ಯುತ್ತರವನ್ನು, ಲಕ್ಷ್ಯಮಾಡದೆ “ ಸಾಲದುದಕ್ಕೆ ನನ್ನ ಹೆಂಡತಿ ಬೇರೆ ಜಲಜಾಕ್ಷಿ ಬರಲಿ, ಮನೆಯ ಹೆಣ್ಣು ಮಕ್ಕಳನ್ನೇ ಮನೆಗೆ ಕೂಡುವುದಿಲ್ಲವೆಂಬ ಅಪವಾದ ನನಗೆ ಸಾಕಾಗಿದೆ ” ಎಂದಳು. ನಾನೇನು ಮಾಡಲಿ ಎಂದನು. ಶ್ರೀನಿವಾಸನು “ ಸೀತಾಲಕ್ಷ್ಮಿ ಮನೆಯ ಹೆಣ್ಣಲ್ಲವೆ ? ಅವಳ ವಿಷಯದಲ್ಲಿ ಈ ಕನಿಕರವೆಲ್ಲ ನಿಮಗೆ ಎಲ್ಲಿ ಹೋಯಿತು ? ” ಎಂದನು.

ರಾಮಸ್ವಾಮಿಯು ಮಾತನಾಡದೆ ಸುಮ್ಮನಿದ್ದನು. ಶ್ರೀನಿವಾಸನು

" ಜಲಜಾಕ್ಷಿ ಬಂದರೆ ಬರಲಿ. ಆ ನರಸಿಂಹ ಯಾಕೆ ಬರುತ್ತಾನೆ ? " ಎಂದನು.

ರಾ.—ಮೊದಲು ಜಲಜಾಕ್ಷಿ 'ನಾನು ಬರುತ್ತೇನೆ. ಬರಲೇ. ರಥೋತ್ಸವ ನೋಡುವ ಆಸೆ' ಎಂದು ಬರೆದಳು. ನಾನು ೮ ದಿನ ಸುಮ್ಮ ನಿದ್ದೆ. ಮತ್ತೆ ಇನ್ನೊಂದು ಕಾಗದ ಬರೆದಳು. ಅನಂತರ ವಿಧಿ ಇಲ್ಲದೆ, ಬಾ ಎಂದು ಜವಾಬು ಕೊಟ್ಟೆ. ಈಗ ನರಸಿಂಹನನ್ನು ಕರೆದುಕೊಂಡು ಬರುತ್ತೇನೆ ಎಂದು ಬರೆದಿದ್ದಾಳೆ. ನಾನು ಏನು ಮಾಡಲಿ ?

ಶ್ರೀನಿವಾಸನು ಕೋಪದಿಂದ " ಸೀತಾಲಕ್ಷ್ಮಿ ದಿಕ್ಕಿಲ್ಲದೆ ಅನಾಥೆಯಾ ದಾಗ ನಿನಗೆ ಈ ಪ್ರಶ್ನೆ ಹೊಳೆಯಲೇ ಇಲ್ಲ ಅಲ್ಲವೆ ? " ಎಂದನು. ಅನಂತರ " ನೀನು ಬರುವುದು ಬೇಡ, ನಿನ್ನ ಗಂಡನಿಗೆ ಇಲ್ಲಿ ಪ್ರವೇಶವಿಲ್ಲ ಎಂದು ಬರೆದು ಹಾಕು " ಎಂದನು.

ರಾ.—ಅದು ಹೇಗೆ ಸಾಧ್ಯ ? ಆದದ್ದು ಆಗಿ ಹೋಯಿತು. ಅವಳ ಹಣೆ ಯಲ್ಲಿ ಬರೆದದ್ದು ಅವಳಿಗೆ. ಅವಳಿಗಾಗಿ ನಾವು ಎಲ್ಲ ಬಾಂಧವ್ಯವನ್ನೂ ತೊರೆಯುವುದು ಸಾಧ್ಯವೆ ?

ಶ್ರೀನಿವಾಸನಿಗೆ ಸಹಿಸಲಾರದ ಕೋಪವುಂಟಾಯಿತು. ಅವನು " ನಿನ್ನ ಯಾವ ಬಾಂಧವ್ಯವನ್ನೂ ತೊರೆಯಬೇಡ. ಎಲ್ಲವನ್ನೂ ಅಪ್ಪಿಕೊ. ಆದರೆ ಅವನು ಇಲ್ಲಿ ಬಂದರೆ ಸೀತಾಲಕ್ಷ್ಮಿಯ ಸ್ಥಿತಿ ಏನು ? ಅವನು ಯಾರೆಂದು ಕೇಳಿದರೆ ಏನು ಹೇಳುವೆ ? " ಸೀತಾಲಕ್ಷ್ಮಿಯ ಬಾಳನ್ನು ಮಣ್ಣುಗೂಡಿಸಿದವ ನೆಂದು ಹೇಳುವೆಯ ?

ರಾಮಸ್ವಾಮಿಯು " ಇನ್ನು ಆ ಅಧ್ಯಾಯ ಮುಗಿದುಹೋಯಿತು. ಅವಳ ಬಾಳೂ ಮುಗಿದುಹೋಯಿತು. ನಮ್ಮ ಯಾವ ಕಾರ್ಯವೂ, ಅವಳ ಯೋಚನೆಗಾಗಿ ಹೆಚ್ಚು ಕಡಿಮೆಯಾಗುವಂತಿಲ್ಲ " ಎಂದು ಹೇಳಿ ಆ ಸ್ಥಳ ವನ್ನು ಬಿಟ್ಟು ಹೊರಟುಹೋದನು.

ಶ್ರೀನಿವಾಸನು ತನ್ನಲ್ಲಿ ತಾನು " ಆಹಾ ಅವಳ ಅಧ್ಯಾಯ ಮುಗಿ ಯಿತೆ ? ಅವಳ ಬಾಳು ಮುಗಿಯಿತೆ ? ಹಾಗಾದರೆ ಹುಟ್ಟುವುದಕ್ಕೆ ಮುಂಚೆಯೇ ಅವಳು ಸತ್ತಳೆ ? ಹತ್ತೊಂಬತ್ತು ವರುಷಕ್ಕೇ ಒಂದು ಹೆಣ್ಣಿನ ಜೀವ ಬರಡಾಯಿತೆ ? ಅವಳು ಯಾವ ಸುಖವನ್ನು ಅನುಭವಿಸಿದಳು ?

ಗಂಡನೊಂದಿಗೆ ಬಾಳಿದಳೆ? ಪತಿಯ ಪ್ರೇಮದ ಸವಿಯನ್ನು ಅನುಭವಿಸಿದಳೆ? ಲಲ್ಲೆಮಾತಿನ ಮಕ್ಕಳ ಅಮೃತಸ್ಪರ್ಶ ಈಕೆಯ ಬಾಳನ್ನು ಚಿಗುರಿಸಿತೆ? ಸಂಸಾರಜೀವನದ ಸಾರವನ್ನು ಅನುಭವಿಸಿದಳೆ? ಕೋಮಲವಾದ ತಾವರೆಯನ್ನು ಆನೆಯು ಕಿತ್ತು ಮೇಲಕ್ಕೆ ಎಸೆಯುವಂತೆ ಆ ಘಾತುಕನು ಇವಳ ಬಾಳನ್ನು ಮರುಭೂಮಿ ಮಾಡಿದನು. ಆದರೆ ಈ ರೂಪ ಈ ಯವ್ವನವನ್ನು ಇಷ್ಟು ಸರಾಗವಾಗಿ ಸಾಯಿಸಲು ಸಾಧ್ಯವಿಲ್ಲ.

ಶ್ರೀನಿವಾಸನಿಗೆ ಸೀತಾಲಕ್ಷ್ಮಿಯ ಬಾಳು ಮುಗಿದಂತೆ ಕಾಣಲಿಲ್ಲ. ಆ ಬಾಳು ಹೊಸದಾಗಿ ಚಿಗುರಿ ಹೂತು ಕಾತು ಫಲಿತು ನವಯವ್ವನದ ಪುನರ್ಜನ್ಮದಲ್ಲಿ ಇನ್ನೊಂದು ನೂತನ ಬಾಳ್ವೆಯನ್ನು ಬಾಳುವ ದಿವ್ಯ ಭವಿಷ್ಯವನ್ನು ಅವನು ಕಂಡನು. ಆದರೆ ಸದ್ಯದ ಸ್ಥಿತಿಯನ್ನು ನೆನೆಸಿಕೊಂಡು, ಆ ಮಂಗಳ ಶುಭವನ್ನು ಮುಟ್ಟುವ ದಾರಿ ಮಾತ್ರ ಅವನಿಗೆ ಹೊಳೆಯಲಿಲ್ಲ. ದೂರದಲ್ಲಿ ಸುಖದ ವಾತಾವರಣ ಸ್ಪಷ್ಟವಾಗಿ ಕಂಡರೂ ಸದ್ಯದ ಮುಂದಲ ಹೆಜ್ಜೆ ಅಂಧಕಾರಮಯವಾಗಿಯೇ ಇತ್ತು. "ದೇವರು ಆ ಬಡಪಾಯಿಯ ಬಾಳನ್ನು ಸುಖಮಯವಾಗಿ ಮಾಡಬೇಕು" ಎಂದು ನಿಟ್ಟುಸಿರು ಬಿಡುತ್ತಾ ಶ್ರೀನಿವಾಸನು ಮನೆಗೆ ಹೋದನು.

## ೧೪

ಮಲ್ಲಿಗೆಹಳ್ಳಿಯ ರಥೋತ್ಸವ ಹತ್ತಿರವಾಗುತ್ತ ಬಂತು ದಿನದಿನಕ್ಕೆ ಜಲಜಾಕ್ಷಿಯೂ ನರಸಿಂಹನೂ ಊರಿಗೆ ಬರುವ ದಿನವೂ ಹತ್ತಿರವಾಗುತ್ತ ಬಂತು. ಜತೆಗೆ ಸೀತಾಲಕ್ಷ್ಮಿಯ ದುಗುಡವೂ ಹೆಚ್ಚುತ್ತ ಹೋಯಿತು. ಕೊನೆಗೆ ಒಂದು ದಿನ ನರಸಿಂಹನೂ ಜಲಜಾಕ್ಷಿಯೂ ಮಕ್ಕಳೊಂದಿಗೆ ಮಲ್ಲಿಗೆ ಹಳ್ಳಿಯಲ್ಲಿ ಬಂದು ಇಳಿದರು.

ಶ್ರೀನಿವಾಸನೂ, ಇನ್ನು ಕೆಲವು ಯುವಕ ಉತ್ಸಾಹಿಗಳೂ, "ನರಸಿಂಹ ಯಾವ ಮುಖದೊಂದಿಗೆ ಈ ಊರಿಗೆ ಬರುತ್ತಾನೆ?" ಎಂದು ಯೋಚಿಸುತ್ತಿದ್ದರೂ, ನರಸಿಂಹನಿಗೇನೂ ಆ ಬಗೆಯ ಸಂಕೋಚವಾಗಲಿ ಮುಖಹೇಡಿತನವಾಗಲಿ ಇದ್ದಂತೆ ಕಾಣಲಿಲ್ಲ. ಅವನು ಸ್ವಾಭಾವಿಕವಾಗಿ ಊರಿನಲ್ಲಿ ಬಂದು ಇಳಿದು ರಾಮಸ್ವಾಮಿಯ ಮನೆಯಲ್ಲಿ ಹೋಗಿ ಉಳಿದನು. ಅನಂತರ

ಏನೂ ಅರಿಯದವನಂತೆ ಶ್ರೀನಿವಾಸನ ಮನೆಗೂ ಹೋದನು. ಆದರೆ ಸೀತಾಲಕ್ಷ್ಮಿ ಮಾತ್ರ ಅವನ ಕಣ್ಣಿಗೆ ಬೀಳಲಿಲ್ಲ.

ನರಸಿಂಹನನ್ನು ಜನ ಸ್ವಾಭಾವಿಕವಾಗಿ ಏನೂ ನಡೆಯದವರಂತೆ ಸ್ವೀಕರಿಸಿರುವದನ್ನು ಕಂಡು ಶ್ರೀನಿವಾಸನಿಗೆ ಮೈ ಉರಿಯಿತು. ಮಲ್ಲಿಗೆ ಹಳ್ಳಿಯಲ್ಲಿ ಒಬ್ಬರಾಗಲಿ, ನರಸಿಂಹನ ಯೋಗ್ಯತೆ ಗೊತ್ತಿದ್ದರೂ, ಅವನ ಎದುರಿಗೆ ತಮ್ಮ ಅಸಮಾಧಾನವನ್ನು ಸೂಚಿಸಲಿಲ್ಲ. ಅವರ ಅಸಮಾಧಾನವೆಲ್ಲ ಸೀತಾಲಕ್ಷ್ಮಿಗೇ ಮೀಸಲಾಗಿದ್ದಂತೆ ಅವನಿಗೆ ತೋರಿತು. ಈಚೆಗೆ ಸೀತಾಲಕ್ಷ್ಮಿ ಯಾವ ಸಾರ್ವಜನಿಕ ಸ್ಥಳಗಳಿಗೂ ಹೋಗುತ್ತಿರಲಿಲ್ಲ. ದೇವಸ್ಥಾನಕ್ಕಂತೂ ಹೋಗುತ್ತಲೇ ಇರಲಿಲ್ಲ. ನದಿಗೆ ಸಹ ಹೋಗುತ್ತಿರಲಿಲ್ಲ. ಎಲ್ಲಿಯಾದರೂ ಅಪ್ಪಿ ತಪ್ಪಿ ಅವಳು ಒಂದು ಸಲ ಹೊರಕ್ಕೆ ಹೊರಟರೂ, ಜನರ ಕಣ್ಣಿಗೆ ಬೀಳದೆ ನಿರ್ಜನವಾದ ಯಾವುದೋ ದಾರಿಯಲ್ಲಿ ನದಿಗೆ ಹೋಗಿ, ಇತರರಾರೂ ಇಳಿದುಕೊಳ್ಳದ ದೂರವಾದ ಸ್ಥಳದಲ್ಲಿ ಇಳಿದು, ತನ್ನ ಕಾರ್ಯ ಮಾಡಿಕೊಂಡು ಬಟ್ಟೆಗಳನ್ನು ಒಗೆದುಕೊಂಡು ಮನೆಗೆ ಬರುತ್ತಿದ್ದಳು. ತಾನು ಜನರ ಕಣ್ಣಿಗೆ ಬೀಳದಿದ್ದರೂ ಜನ ತನ್ನನ್ನೇ ಕುರಿತು ಯೋಚಿಸುತ್ತಿರುವರೆಂಬುದೂ ಆಕೆಗೆ ಗೊತ್ತಿತ್ತು. ಆದರೆ ನರಸಿಂಹನದು ಯಾರಿಗೂ ಏನೂ ತಪ್ಪಾಗಿಯೇ ತೋರಿದಂತೆ ಕಾಣಲಿಲ್ಲ. ನರಸಿಂಹನಲ್ಲಿ ಯಾರಿಗೂ ತಿರಸ್ಕಾರವಾಗಲಿ, ಅವನು ಒಂದು ಹೆಣ್ಣಿನ ಬಾಳನ್ನು ಮಣ್ಣುಗೂಡಿಸಿದನೆಂಬ ಸಾತ್ವಿಕ ಕ್ರೋಧವಾಗಲಿ ಯಾರಿಗೂ ಉಂಟಾದುದು ಕಾಣಲಿಲ್ಲ. ಒಬ್ಬರಾಗಲಿ ನರಸಿಂಹನಿಗೆ "ನೀನು ಅಯೋಗ್ಯ ಸಮಾಜದ ಮುಳ್ಳು, ನೀನು ಸಹವಾಸಕ್ಕೂ ಮರ್ಯಾದೆಗೂ ಅರ್ಹನಲ್ಲ" ಎಂಬುದನ್ನು ಸೂಚಿಸಲಿಲ್ಲ. ಅವನು ಮಾಡಿದ ಅಕಾರ್ಯ ತಮಗೆ ತಿಳಿದೇ ಇಲ್ಲವೋ ಎಂಬಂತೆ ಜನ, ಅವನೊಂದಿಗೆ ನಡೆದುಕೊಂಡರು. ಸೀತಾಲಕ್ಷ್ಮಿಯ ಅಣ್ಣ ರಾಮಸ್ವಾಮಿಯಂತೂ ಇರಲಿ. ಉಳಿದ ಗ್ರಾಮಸ್ಥರು ಯಾರೂ, ಮುಖದಲ್ಲಿಯೂ ಸಹ ಸ್ವಲ್ಪವಾಗಲಿ ತಿರಸ್ಕಾರವನ್ನು ತೋರಿಸಲಿಲ್ಲ. ನರಸಿಂಹ ಎಲ್ಲರಂತೆ ಎಲ್ಲರ ಜತೆಯಲ್ಲಿಯೂ ದೇವಸ್ಥಾನಕ್ಕೆ ಹೋಗುತ್ತಿದ್ದನು. ಉತ್ಸವಗಳಲ್ಲಿ ಸೇರಿ ಶಾಸ್ತ್ರವೊರೆ ಮುಂತಾದ ಭಗವಂತನ ಉಪಚಾರ ಕಾರ್ಯದಲ್ಲಿ ಮಂತ್ರಗಳನ್ನು ಉಚ್ಚರಿಸುತ್ತಿದ್ದನು. ಎಲ್ಲರಂತೆ ದೇವರಿಗೆ ತಾನೂ ಅತ್ಯಂತ ಸಮೀಪಸ್ಥನಾಗಿ, ಛತ್ರಿಚಾಮರಗಳಿಂದ ದೇವರ

ಸೇವೆ ಮಾಡುತ್ತಿದ್ದನು. ಅಡಿಗೆ ಮನೆಯಲ್ಲಿ ಸೇರಿ ದೇವರಿಗೆ ನಿವೇದನ ವಾಗುವ ಅಡಿಗೆ ಪದಾರ್ಥಗಳ ಸಿದ್ಧತೆಯಲ್ಲಿ ಸಹಾಯಮಾಡುತ್ತಿದ್ದನು. ಎಂತಹ ವೈದೀಕರಿಗೂ ಮಡಿ ಆಚಾರದವರಿಗೂ ತಾನೇ ಬಡಿಸುತ್ತಿದ್ದನು. ಎಲ್ಲರೊಂದಿಗೆ ತಾನೂ ಕುಳಿತು ಊಟಮಾಡುತ್ತಿದ್ದನು.

ಶ್ರೀನಿವಾಸನಿಗೆ ಇದನ್ನೆಲ್ಲ ನೋಡಿ ಮೈ ಉರಿಯತೊಡಗಿತು. ಅವನಿಗೆ ನರಸಿಂಹನ ಮೇಲಿನ ಕೋಪಕ್ಕಿಂತ ತನ್ನ ಊರಿನ ಜನರ ಮೇಲೆಯೇ ಕೋಪ ಹೆಚ್ಚಾಯಿತು. ಸೀತಾಲಕ್ಷ್ಮಿ ಆ ರೀತಿ ಒಂದು ದಿನವೂ ತಮ್ಮ ಮಧ್ಯೆ ನಿರ್ಭಯವಾಗಿ ಓಡಾಡಲು ಜನ ಅವಕಾಶ ಕೊಡುತ್ತಿರಲಿಲ್ಲವೆಂಬುದು ಅವನ ಅನುಭವಕ್ಕೆ ಬಂದಿತ್ತು. "ನರಸಿಂಹನು ಪುರುಷ ಏನು ಮಾಡಿ ದರೂ ಚಿಂತೆಯಿಲ್ಲ" ಎಂದು ರಾಮಸ್ವಾಮಿ ಹೇಳುತ್ತಿದ್ದುದು ಇಂದು ಅವನಿಗೆ ಅನುಭವವಾಯಿತು. ಪುರುಷನಾದರೆ ಅವನೇನು ದೇವತೆಯೆ? ಅವನು ತಪ್ಪುಮಾಡುವುದೇ ಇಲ್ಲವೇ? ಅವನು ಮಾಡಿದ ತಪ್ಪನ್ನು ಜನ ಯಾಕೆ ಒಪ್ಪಿಕೊಂಡು ಸುಮ್ಮನಿರಬೇಕು? ಸೀತಾಲಕ್ಷ್ಮಿ ನಿರಪರಾಧಿ, ಸಮಾ ಜಕ್ಕೆ ಹೊರಗಾದವಳಾದರೆ, ಮುಖ್ಯವಾಗಿ ಅಪರಾಧ ಮಾಡಿದ ನರಸಿಂಹ ಯಾಕೆ ಸಮಾಜಕ್ಕೆ ಹೊರಗಾದವನಲ್ಲ? ಶ್ರೀನಿವಾಸನಿಗೆ ಮಲ್ಲಿಗೆಹಳ್ಳಿಯ ಜನತೆಯ ಮೇಲೆ ಅಸಮಾಧಾನವೂ ಕೋಪವೂ ಉಂಟಾಯಿತು.

ಸೀತಾಲಕ್ಷ್ಮಿಗೆ, ನರಸಿಂಹನೊಂದಿಗೆ ಘಟನೆ ಎಲ್ಲಿಯೋ ಅನೇಕ ಜನ್ಮಗಳ ಹಿಂದೆ ಸ್ವಪ್ನದಲ್ಲಿ ನಡೆದಂತೆ ಭಾಸವಾಗಿತ್ತು. ಅದು ಸಂಭವಿ ಸಿದುದು ತನಗೇಯೋ, ಅಥವ ತನ್ನ ಪರಿಚಿತರಾದ ಯಾರಾದರೂ ಇತರರಿ ಗೇಯೋ ಎಂದು ಅವಳು ಒಂದೊಂದು ಸಲ ಶಂಕಿಸುತ್ತಿದ್ದಳು. ಅವಳಿಗೆ ನರಸಿಂಹನ ಮೇಲೆ ಕೋಪವಾಗಲಿ ತಿರಸ್ಕಾರವಾಗಲಿ ಇರಲಿಲ್ಲ. ಆ ಘಟನೆ ತನ್ನ ಬಾಳಿನಲ್ಲಿ ಸಂಭವಿಸುವುದಕ್ಕೆ ಮುಂಚೆ ಅವಳ ಜಗತ್ತು, ಗಂಡನಾದ ಸುಂದರರಾಜನ ಪ್ರೇಮದಿಂದ ಪೂರ್ಣವಾಗಿ ಸುವಾಸಿತವಾಗಿತ್ತು. ಆ ದುರ್ಘಟನೆ ನಡೆದ ಮೇಲೂ, ಒಂದು ಗಳಿಗೆಯೂ ಆಕೆಯ ಮನಸ್ಸು ಸುಂದರರಾಜನಿಂದ ಬೇರೆಯಾಗಿರಲಿಲ್ಲ. ಈಚೆಗೆ ಸುಂದರರಾಜ, ದೇಹದಿಂದ ಅವಳಿಂದ ದೂರವಾಗಿದ್ದಷ್ಟೂ, ಅವಳ ಮನಸ್ಸು ಅವನಲ್ಲಿಯೇ ವಿಹರಿಸು ತ್ತಿತ್ತು. ಅವಳಿಗೇ ಒಂದೊಂದು ಸಲ "ಈ ಗಂಡ ನನಗೆ ಇಷ್ಟು ಪ್ರಿಯ

ಸಾಗಿದ್ದಾನೆಲ್ಲ!" ಎಂಬ ಗಾಬರಿಯುಂಟಾಗುತ್ತಿದ್ದಿತು. ಆಕೆಯದು ಪೂರ್ಣ ಪಾತಿವ್ರತ್ಯದ, ಗಂಡನಿಗಾಗಿ ಕೊರಗುವ, ತಪಸ್ಸುಮಾಡುವ, ಪ್ರೇಯಸಿಯ ಬಾಳು ಆಗಿತ್ತು. ಗಂಡನನ್ನು ಹೊರತು ಇತರರನ್ನು ಕುರಿತು ಯೋಚನೆ ಮಾಡುವುದು ಸಹ ಅವಳಿಗೆ ವ್ಯಭಿಚಾರವಾಗಿ ತೋರುತ್ತಿತ್ತು. ಅವಳು ಆ ಪ್ರೇಮ ಪ್ರಪಂಚದಲ್ಲಿಯೇ ವಿಹರಿಸುತ್ತಿದ್ದಳು. ಸುಂದರರಾಜನು ತನ್ನನ್ನು ತಿರಸ್ಕರಿಸಿರುವುನೆಂಬುದರಿಂದಲೂ, ಅವಳ ಪ್ರೇಮ ಆನಂದ ಕಡಿಮೆಯಾಗಿರ ಲಿಲ್ಲ. ಸುಂದರಾಜ ತನ್ನನ್ನು ಕುರಿತು ಏನು ಯೋಚಿಸುತ್ತಿದ್ದಾನೆ ಎಂಬುದು ಸಹ ಆಕೆಗೆ ಬೇಕಾಗಿರಲಿಲ್ಲ. ತನ್ನ ಮನಸ್ಸಿನಲ್ಲಿ ಅವಳು ಸೃಷ್ಟಿಮಾಡಿ ಕೊಂಡಿದ್ದ ಪ್ರೇಮ ಸಾಮ್ರಾಜ್ಯವನ್ನು ಯಾರೂ ಕಿತ್ತುಕೊಳ್ಳದಿದ್ದರೆ ಅವಳಿಗೆ ಸಾಕಾಗಿತ್ತು ಸೀತಾಲಕ್ಷ್ಮಿ ಸುಂದರರಾಜನ ಪ್ರೇಮದಿಂದ ಪೂರ್ಣಳಾಗಿ ಮತ್ತಳಾಗಿದ್ದಳು. ಆ ಭಾವನಾಪರವಶತೆಯಲ್ಲಿ ಅವಳಿಗೆ ನರಸಿಂಹನೆಂಬ ಒಂದು ಕಣಜ, ಒಂದು ಸಲ ತನ್ನನ್ನು ಮುಟ್ಟಿಸಿದುದು ಸಹ ಒಂದು ಪ್ರಕೃತಿ ಚೇಷ್ಟೆಯಂತೆ ತೋರಿತ್ತು. ಆದುದರಿಂದ ಆಕೆಗೆ ನರಸಿಂಹನಲ್ಲಿ ಯಾವ ಅಸಮಾಧಾನವೂ ಇರಲೇ ಇಲ್ಲ. ನರಸಿಂಹ ಅವಳ ಬಾಳನ್ನು ಹೇಗೂ ಪ್ರವೇಶಿಸಲೇ ಇಲ್ಲ. ತನ್ನಿಂದಲೇ ನಿರ್ಮಿತವಾದ ಪ್ರೇಮ ಪ್ರಪಂಚದಲ್ಲಿ ಪ್ರಿಯನಾದ ಸುಂದರರಾಜನೊಂದಿಗೆ, ಪ್ರೇಮ ಸಂಭಾಷಣೆಗಳನ್ನೂ ಪ್ರೇಮ ಸಂಭವಗಳನ್ನೂ ನೆನೆಯುತ್ತಾ ವಿಹರಿಸುತ್ತಿದ್ದ ಆಕೆಯ ಶಾಂತ ಜೀವನದಲ್ಲಿ, ನರಸಿಂಹನನ್ನು ಮತ್ತೆ ನೋಡಿದುದುರಿಂದ, ಸ್ವಲ್ಪ ಬೇಸರಿಕೆ ಜಿಗುಪ್ಸೆ ಮಾತ್ರ ಉಂಟಾಯಿತು.

ಸೀತಾಲಕ್ಷ್ಮಿಗೆ ಆ ರಥೋತ್ಸವದಲ್ಲಿ, ಎರಡು ವರುಷದ ಹಿಂದಲ ರಥೋತ್ಸವವೂ, ಅಂದು ಬಾಳಿನಲ್ಲಿ ಬಂದು ಕೂಡಿದ ಪ್ರಿಯನ ಜ್ಞಾಪಕವೂ ಬಂದವು "ಅವರಿಗೆ ಹೇಗಾದರೂ ಆಗಲಿ ನನಗಂತೂ ಈ ದಿನ ಎಂದೆಂದಿಗೂ ಆನಂದದ ದಿನವೇ. ಮುಂದೆ ಏನೂ ಆಗಲೇಬೇಡ, ಇಂದೇ ನಾನು ಸತ್ತರೂ ಚಿಂತೆಯಿಲ್ಲ. ಅವರು ಬೇಕಾದರೆ ನನ್ನನ್ನು ಬಿಟ್ಟೇಬಿಡಲಿ. ನನಗಂತೂ ಈ ಬಾಳಿಗೆಲ್ಲ ಮದುವೆಯಾದ ಆ ನಾಲ್ಕಾರು ದಿನಗಳ ಸುಖಗಳೇ ಸಾಕು. ಮನುಷ್ಯನ ಸುಖಕ್ಕೆ ಒಂದು ಪರಿಮಿತಿಯುಂಟೆಂದು ತೋರುತ್ತದೆ. ನನ್ನ ಬಾಳಿನಲ್ಲಿ ಸುಖ ಹೆಚ್ಚಾದುದರಿಂದಲೇ ಅದು ಹಾಗೆ ಮೊಟಕಾಯಿತು" ಎಂದು

ಕೊಂಡಳು. ಅವಳ ಮಟ್ಟಿಗೆ ಯಾವಾಗಲೂ ಸುಗಂಧದ ವಾಸನೆಯಂತೆ ಅವಳ ಗಂಡ ತನ್ನ ಹತ್ತಿರವೇ ಇರುವಂತೆ ತೋರುತ್ತಿತ್ತು. ಅವಳು ಓಡಾಡು ತ್ತಿರುವಾಗ ಒಂದೊಂದು ಸಲ ಹಿಂದುಗಡೆ ಆತನ ಹೆಜ್ಜೆಯ ಸಪ್ಪಳದಂತೆ ಕೇಳಿ ತಟಕ್ಕನೆ ತಿರುಗಿ ಬೆಪ್ಪಾಗಿ ನೋಡುತ್ತಾ ನಿಂತುಕೊಳ್ಳುತ್ತಿದ್ದಳು. ಒಂದೊಂದು ಸಮಯದಲ್ಲಿ ಗಂಡನೊಂದಿಗೆ ಮನೋರಾಜ್ಯದಲ್ಲಿ ಸರಸ ವಿನೋದ ಸಂಭಾಷಣೆ ನಡೆಸುತ್ತಾ ಇದ್ದಕ್ಕಿದ್ದಂತೆ ನಗುತ್ತಿದ್ದಳು. ಒಂದೇ ಕ್ಷಣದಲ್ಲಿ ತನ್ನ ಆಗಿನ ಒಂಟಿ ಬಾಳು ಜ್ಞಾಪಕಕ್ಕೆ ಬಂದು ಕಣ್ಣಿನಲ್ಲಿ ನೀರು ಬರುತ್ತಿತ್ತು. ಹೀಗೆ ಬಿಸಿಲು ಮಳೆ ಏಕಕಾಲದಲ್ಲಿ ಅವಳ ಮುಖದಮೇಲೆ ತಾಂಡವವಾಡುತ್ತಿದ್ದು ದನ್ನು ನೋಡಿದಾಗ, ಶ್ರೀನಿವಾಸನಿಗೆ " ಇದೇನು ಇವಳ ಭ್ರಮೆ ಯಾವ ಕನಸೊ ? " ಎಂದು ವಿಷಾದವುಂಟಾಗುತ್ತಿದ್ದಿತು.

ನರಸಿಂಹನ ಬರವಿನಿಂದ, ತಾನು ಯೋಚಿಸಿದಷ್ಟು ಸೀತಾಲಕ್ಷ್ಮಿ ವ್ಯಾಕುಳಲಾಗದುದರಿಂದ ಶ್ರೀನಿವಾಸನಿಗೆ ಮನಸ್ಸು ಶಾಂತವಾಯಿತು. ಸೀತಾ ಲಕ್ಷ್ಮಿಯ ಶಾಂತಿಗೆ ಕಾರಣ, ಅವಳು ತನ್ನ ಗಂಡನ ಪ್ರೇಮದಲ್ಲಿ ಜೀವಿ ಸುತ್ತಿದ್ದುದೇ ಎಂಬುದು ಅವನಿಗೂ ತಿಳಿಯಲಿಲ್ಲ.

  

ಆದರೆ ಇದ್ದಕ್ಕಿದ್ದಂತೆ ಬೆಂಗಳೂರು ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದ ರಾಮನಾಥನ ಬರುವಿನಿಂದ ವಾತಾವರಣದಲ್ಲಿ ಒಂದು ಬಗೆಯ ಕಾವು ಉಂ ಟಾಯಿತು. ರಾಮನಾಥ ಪೂರ್ಣವಾಗಿ ಸುಧಾರಕ. ಈಚೆಗಂತೂ ಅವನು ಸ್ತ್ರೀ ಸ್ವಾತಂತ್ರ್ಯವನ್ನು ಕುರಿತು ಬಹಳವಾಗಿ ಚರ್ಚಿಸಿದ್ದನು. ಯಾವ ವರ್ತಮಾನ ಪತ್ರಿಕೆಯಲ್ಲಿ ನೋಡಲಿ, ಸ್ತ್ರೀ ಸ್ವಾತಂತ್ರ್ಯವನ್ನು ಕುರಿತ ಅವನ ಲೇಖನಗಳು ತುಂಬಿರುತ್ತಿದ್ದುವು. ಸ್ತ್ರೀ ಸ್ವಾತಂತ್ರ್ಯವನ್ನು ಯಾರೂ ವಿರೋ ಧಿಸದ ಇಂದಿನ ಯುಗದಲ್ಲಿ ಸಹ, ಅವನ ಪ್ರಚಾರದ ಕಾವು, ಅದು ಹೊಸ ವಿಷಯವೋ ಎಂಬಂತೆ ಜನರನ್ನು ಆಕರ್ಷಿಸಿತ್ತು. ಸ್ತ್ರೀಯರಿಗಂತೂ ಅವನ ಹೆಸರೇ ಒಂದು ಬಗೆಯ ಮಾಟವಾಗಿತ್ತು. ರಾಮನಾಥನ ಪ್ರಚಾರದಿಂದ ಮಲ್ಲಿಗೇಹಳ್ಳಿಗೇ ಒಂದು ಪ್ರಸಿದ್ಧಿಯುಂಟಾಗಿತ್ತು. ಯವ್ವನದ ಕಾವಿನಲ್ಲಿದ್ದ ಅವನು, ಅಕೃತ್ರಿಮವಾಗಿ ಭಾವನಾಪರವಶನಾಗಿ ಜನರನ್ನು ಮುಗ್ಧಗೊಳಿಸು ವಂತೆ ಮಾತನಾಡುತ್ತಿದ್ದನು. ಅವನು ಬಹಳ ಖಂಡಿತವಾದಿ ಸಹ ಆಗಿದ್ದುದ

ರಿಂದ, ಸ್ತ್ರೀಯರಿಗೆ ಅನ್ಯಾಯ ನಡೆದೆಡೆ ಅಥವ ಸಮಾಜ ಸ್ತ್ರೀಯರನ್ನು ಕೀಳಾಗಿ ಪರಿಗಣಿಸಿದೆಡೆ, ಯಾರ ದಾಕ್ಷಿಣ್ಯವನ್ನು ಇಡದೆ ಜನರ ನಡತೆಯನ್ನು ಕಠಿಣ ವಾಗಿಯೇ ಟೀಕಿಸಿಬಿಡುತ್ತಿದ್ದನು.

ರಥೋತ್ಸವಕ್ಕಾಗಿ ರಾಮನಾಥ ಮಲ್ಲಿಗೆಹಳ್ಳಿಯಲ್ಲಿ ಇಳಿದಕೂಡಲೇ ಏನಾದರೂ ಸಂಭವಿಸಬಹುದೆಂದು ಜನ ನಿರೀಕ್ಷಿಸತೊಡಗಿದರು. ಮಹಿಳೆ ಯರಲ್ಲಿ ಸಹ ಗುಜುಗುಜು ಪ್ರಾರಂಭವಾಯಿತು. ರಾಮನಾಥನ ಪ್ರಸಿದ್ಧಿ, ವಾಗ್ಧೋರಣೆ, ಖಂಡಿತವಾದ ಮಾತು, ಇವುಗಳಿಂದ ಆಕರ್ಷಿತವಾದ ಯುವ ಕರ ತಂಡ, ಆಂಜನೇಯ ವಾಚನಾಲಯದಲ್ಲಿ ನಿತ್ಯ ಸೇರತೊಡಗಿತು. ರಾಮ ನಾಥನು "ರಾಜಕೀಯವಾಗಿ ಮಾತ್ರ ಸ್ತ್ರೀಯರಿಗೆ ಸ್ವಾತಂತ್ರ್ಯ ಬಂದರೆ ಸಾಲದು. ಅಥವ ಕಾನೂನು ಅವರಿಗೆ ಕೊಡುವ ಸ್ವಾತಂತ್ರ್ಯದಿಂದಲೂ ಅವರಿಗೆ ಹೆಚ್ಚು ಸುಖವಾಗುವುದಿಲ್ಲ. ಸಂಸಾರದಲ್ಲಿಯೂ ಸಮಾಜವಲ್ಲಿಯೂ ಅವರಿಗೆ ಹೆಚ್ಚು ಸ್ವಾತಂತ್ರ್ಯ ದೊರೆಯಬೇಕು. ಸಮಾಜದಲ್ಲಿ ಅವರ ಸ್ವಾತಂತ್ರ್ಯವನ್ನು ಪುನರುಜ್ಜೀವಿಸುವುದಕ್ಕಾಗಿ ಪುರುಷರಾದ ನಾವೇ ಸಮಾ ಜಕ್ಕೆ ಎದುರಾಗಿ ಸತ್ಯಾಗ್ರಹ ಹೂಡಬೇಕು. ಪುರುಷರು ಸ್ತ್ರೀಯರ ವಿಷಯ ದಲ್ಲಿ ಮಾಡಿದ ಪಾಪಕ್ಕೆ ಇದೇ ತಕ್ಕ ಪ್ರಾಯಶ್ಚಿತ್ತ" ಎಂದನು. ಹೀಗೆ ಲೋಕಾಭಿರಾಮವಾಗಿ ಆಡುತ್ತಿದ್ದ ಮಾತುಗಳು, ಅರ್ಧ ಗಂಟೆ ಸಂಭಾಷಣೆ ನಡೆಯುವುದರೊಳಗಾಗಿ ಎಲ್ಲರ ಮನಸ್ಸಿನಲ್ಲಿಯೂ ಇದ್ದ, ಸೀತಾಲಕ್ಷ್ಮಿಯ ಕಡೆಗೆ ಹೊರಳಿತು. ರಾಮನಾಥನ ಸುಧಾರಣಾಪ್ರವೃತ್ತಿಗೆ ಹೊಸ ಸ್ಫೂರ್ತಿ ಯುಂಟಾಯಿತು. ಅವನು "ಪುರುಷ ಜಾತಿ ಕ್ರೂರಜಾತಿ. ಪುರುಷನು ತನ್ನ ಸ್ವಾರ್ಥಕ್ಕಾಗಿಯೇ ಈ ಧರ್ಮಶಾಸ್ತ್ರವನ್ನು ನಿಯಮಿಸಿಕೊಂಡಿರುವುದು. ನಮ್ಮದು 'ಪುರುಷನು ಮಾಡಿದ್ದೆಲ್ಲ ಸರಿ' ಎನ್ನುವ ಧರ್ಮಶಾಸ್ತ್ರ. ಪುರುಷ ನಿಷ್ಕರುಣಿ, ಅಕೃತ್ರಿಮವಾದ ಪ್ರೇಮಕ್ಕೆ ಅರ್ಹನೂ ಅಲ್ಲ. ಅವನು ತಾನೂ ಅಕೃತ್ರಿಮವಾಗಿ ಪ್ರೇಮಿಸಲಾರ. ನಮ್ಮ ಶಾಸ್ತ್ರಗಳಲ್ಲಿರುವುದೆಲ್ಲ ಹೆಂಡತಿ ಹೇಗೆ ಪತಿದೇವನ ಸೇವೆಮಾಡಬೇಕೆಂಬುದೇ. ಗಂಡನೊಂದಿಗೆ ಸಹಗಮನ ಮಾಡಿದ ಹೆಂಡರು ಬೇಕಾದಷ್ಟು ಆಗಿದ್ದಾರೆ. ಆದರೆ ಹೆಂಡತಿಯೊಂದಿಗೆ ಗಂಡ ಸಹ ಗಮನ ಮಾಡಿದ ಉದಾಹರಣೆ ಒಂದಾದರೂ ಇದೆಯೆ? ಸಾವಿತ್ರಿ ಗಂಡನನ್ನು ಬದುಕಿಸಿಕೊಂಡು ಬರುವುದಕ್ಕಾಗಿ ಯಮನಲ್ಲಿ ಹೋದಳು. ಹಾಗೆ ಹೆಂಡತಿ

ಯನ್ನು ಬಿಡಿಸಿಕೊಂಡು ಬರುವುದಕ್ಕಾಗಿ ಯಮನಲ್ಲಿ ಹೋದ ಗಂಡನ ಉದಾಹರಣೆ ನಮ್ಮ ಪುರಾಣಗಳಲ್ಲಿ ಎಲ್ಲಾದರೂ ಇದೆಯೆ ?"

ರಾಮನಾಥನಿಗೆ ಮಾತನಾಡುತ್ತ ಆಡುತ್ತ ಕಾವು ಏರ ತೊಡಗಿತು. ಆ ಕಾವಿನ ಭರದಲ್ಲಿ ಅವನಿಗೆ ಔಚಿತ್ಯದ ಜ್ಞಾನ ಪೂರ್ಣವಾಗಿ ಮರೆಯಾಯಿತು. ಕಣ್ಣೆದುರಿಗೇ ಇದ್ದ ಉದಾಹರಣೆ ಸರ‍್ರನೆ ಜ್ಞಾಪಕ ಬಂತು. "ಈ ದೃಷ್ಟಾಂತವನ್ನು ಉದಹರಿಸಬಹುದೆ? ಇದು ಅತ್ಯಂತ ನಿಕಟವಾದುದರಿಂದ ಯಾರಿಗಾದರೂ ಇದರಿಂದ ನೋವು ಆಗಬಹುದೆ? ನಾವು ಯಾರಿಗೆ ಒಳ್ಳೆಯದಾಗಬೇಕೆಂದು ಬಯಸುತ್ತೇವೆಯೋ ನಮ್ಮ ಈ ಅತಿರೇಕದ ಪ್ರಚಾರದಿಂದ ಅವರಿಗೆ ಕೆಡಕು ಆಗಬಹುದೆ ?" ಇದಾವುದು ಅವನಿಗೆ ಹೊಳೆಯದೇ ಇಲ್ಲ. ಅವನು ಈಗ ನೋಡಿ, ಉದಾಹರಣೆಗಾಗಿ ಹೆಚ್ಚುದೂರ ಹೋಗಬೇಕಾದುದಿಲ್ಲ ನಮ್ಮೂರಿನಲ್ಲಿಯೇ ಒಬ್ಬ ಗಂಡಸು ಒಂದು ಹೆಣ್ಣಿನ ಬಾಳನ್ನು ಪೂರ್ಣವಾಗಿ ಹಾಳುಮಾಡಿದ್ದಾನೆ. ಆದರೆ ನೀವು ಆ ಗಂಡಸಿಗೆ ಏನು ಮಾಡಿದಿರಿ? ಸಮಾಜ ಅವನ ವಿಷಯದಲ್ಲಿ ಸ್ವಲ್ಪವಾದರೂ ತಿರಸ್ಕಾರ ತೋರಿಸಿಲ್ಲ. ಆದರ ಬದಲು ಅವನು ಮಾಡಿದುದೇ ಸರಿಯೋ ಎಂಬಂತೆ ಅವನನ್ನೇ ಅವನು ಬಂದೆಡೆಯಲ್ಲೆಲ್ಲ ಗೌರವಿಸುತ್ತಿದ್ದೀರಿ. ಆದರೆ ಅದೇ ಆ ಹುಡುಗಿಯನ್ನು ನೋಡಿ. ಅವಳಿಗೆ ಗಂಡನ ಮನೆಯಲ್ಲಿಯೂ ಸ್ಥಾನವಿಲ್ಲ. ಅವನು ಹೆಸರಿಗೆ ಮಾತ್ರ ಗಂಡನಾದ. ಇಲ್ಲಿ ಇವನ ಮನೆಯಲ್ಲಿಯೂ ಸ್ಥಾನವಿಲ್ಲ. ಬಾಳು ಪೂರ್ತಾ ಇನ್ನು ಆಕೆ ನಿರಾಶ್ರಿತಳಾಗಿ ಕಣ್ಣೀರಿನಲ್ಲಿ ಕೈತೊಳೆಯುತ್ತಾ ಕಾಲಹಾಕಬೇಕು. ಹೆಣ್ಣಿನ ಬಾಳನ್ನು ಹಾಳಾಗಿಸಿ ಗಂಡು ಹೀಗೆ ಸುಖವಾಗಿ ತಿರುಗುವುದನ್ನು ಸಹಿಸುವ ನಾವು ಹೇಡಿಗಳು. ಈ ಸಮಸ್ಯೆಗೆ ಏನಾದರೂ ಪರಿಹಾರ ಕಂಡುಹಿಡಿಯಬೇಕು" ಎಂದನು.

ರಾಮನಾಥ ಸ್ವಾಭಾವಿಕವಾಗಿ ಆ ಮಾತನ್ನು ಹೇಳಿದನೇ ಹೊರತು ಸಮಸ್ಯೆಯ ಪರಿಹಾರಕ್ಕೆ ಯಾರನ್ನೂ ಆಹ್ವಾನಿಸಲಿಲ್ಲ. ಆ ಸಮಸ್ಯೆಯ ಪರಿಹಾರ, ಸೀತಾಲಕ್ಷ್ಮಿ ಮತ್ತು ಅವಳ ಗಂಡ ಸುಂದರರಾಜನಿಂದ ಮಾತ್ರ ಸಾಧ್ಯವೆಂಬುದು ಅವನಿಗೆ ಗೊತ್ತಿದ್ದಿತು. ಆದರೆ ಅವನ ಭಾಷಣವನ್ನು ಕೇಳುತ್ತ ಕುಳಿತಿದ್ದ ಉತ್ಸಾಹಿ ಯುವಕರಲ್ಲಿ ಕೆಲವರು, ಅದು ತಮಗೆ ಆಹ್ವಾನವೆಂದು ಭಾವಿಸಿದರು. ಅವರು ಈ ಸಮಸ್ಯೆಯ ನ್ಯಾಯದಿಂದ ಆಕರ್ಶಿತ

ರಾಗುವುದಕ್ಕಿಂತ ಹೆಚ್ಚಾಗಿ, ಸೀತಾಲಕ್ಷ್ಮಿಯ ಮೋಹಕರೂಪಿನ ಬಲೆಯಲ್ಲಿ ಬಿದ್ದು ತೊಳಲುತ್ತಿದ್ದವರು. ಸೌಂದರ್ಯವೇ ದೇವರೆನ್ನುವ ವಯಸ್ಸು ಅವರದು. ಅವರಿಗೆ ಸೀತಾಲಕ್ಷ್ಮಿಯೇ ದೇವತೆಯಾಗಿಯೂ ನರಸಿಂಹನೇ ರಾಕ್ಷಸನಾಗಿಯೂ ತೋರಿದನು. ಆಕೆ ಅವರಿಗೆ ಅಷ್ಟೊಂದು ದೇವರಾಗಿಲ್ಲದಿದ್ದಿದ್ದರೆ ಅವರ ಸ್ತ್ರೀ ಸ್ವಾತಂತ್ರ್ಯಭಾವನೆ ಅಷ್ಟೊಂದು ತೀವ್ರವಾಗಿ ಕೆರಳುತ್ತಿದ್ದಿತೋ ಇಲ್ಲವೋ ಹೇಳುವುದು ಕಷ್ಟ. ಸೀತಾಲಕ್ಷ್ಮಿ ಕುರೂಪಿಯಾಗಿದ್ದಿದ್ದರೂ ನರಸಿಂಹನ ರಾಕ್ಷಸವೃತ್ತಿ ಅಷ್ಟು ಕ್ರೂರವಾಗಿ ತೋರುತ್ತಿರಲಿಲ್ಲ. ಅವರಲ್ಲಿ ಅನೇಕರಿಗೆ ಸೀತಾಲಕ್ಷ್ಮಿಗೆ ಅನ್ಯಾಯವಾಯಿತೆಂಬುದಕ್ಕಿಂತ, ಆ ರಾಕ್ಷಸನಾಗುವ ಅದೃಷ್ಟ ನರಸಿಂಹನಂತಹ ಅಸಂಸ್ಕಾರಕನಿಗೆ ದೊರಕಿತಲ್ಲ ಎಂಬುದೇ ಅಸಮಾಧಾನವಾಗಿತ್ತು. ಸೀತಾಲಕ್ಷ್ಮಿ ದೊರೆಯುವುದು ಮಾತ್ರ ಖಂಡಿತವಾಗಿದ್ದರೆ, ಅವರು ತಾವು ನರಸಿಂಹನನ್ನು ಯಾವ ರಾಕ್ಷಸ ಪಶುಕ್ರೂರಿ ಎಂದು ದೂಷಿಸುತ್ತಿದ್ದರೋ ಆ ಬಿರುದನ್ನು ತಾವೇ ದಮ್ಮಯ್ಯ ಎಂದು ಸ್ವೀಕರಿಸುತ್ತಿದ್ದರು. ಈ ಒಂದು ಸ್ವರ್ಗ ದರ್ಶನಕ್ಕಾಗಿ ಸಾವಿರ ಸಲ ಬೇಕಾದರೂ ನರಕಕ್ಕೆ ಹೋಗಲು ಸಿದ್ಧರಾಗಿದ್ದರು.

ಸೀತಾಲಕ್ಷ್ಮಿಗೆ ನ್ಯಾಯ ದೊರಕಿಸುವ ಭರದಲ್ಲಿ ಅವರು "ಸೀತಾಲಕ್ಷ್ಮಿಯನ್ನು ನರಸಿಂಹ ತನ್ನ ಮನೆಯಲ್ಲಿಟ್ಟುಕೊಂಡು ಇಬ್ಬರು ಹೆಂಡಿರೊಂದಿಗೆ ಸಂಸಾರ ಮಾಡಬೇಕೆಂದೂ, ಅವಳ ನ್ಯಾಯವಾದ ಆಶ್ರಯವಾದ ಗಂಡನನ್ನು ಇವನು ತಪ್ಪಿಸಿದುದರಿಂದ, ಇವನು ಪ್ರಾಯಶ್ಚಿತ್ತ ರೂಪವಾಗಿ ಅವಳ ಉಳಿದ ಜೀವಮಾನವೆಲ್ಲ ಅವಳಿಗೆ ಆಶ್ರಯಕೊಡಬೇಕೆಂದೂ" ತೀರ್ಮಾನಿಸಿದರು ಆ ಸಂದರ್ಭದಲ್ಲಿ ಸುಧಾರಕರಿಂದ ಅನೇಕ ಕಾವಿನ ಭಾಷಣಗಳು ನಡೆದವು. ಆ ಭರದಲ್ಲಿ ಅವರು ಇದು ಎರಡು ಜೀವಿಗಳ ಪ್ರಶ್ನೆ ಎಂಬುದನ್ನೇ ಮರೆತರು. "ನರಸಿಂಹ ಸೀತಾಲಕ್ಷ್ಮಿಯನ್ನು ಒಂದು ಜೀವಿಯನ್ನಾಗಿ ನಡೆಸಿಕೊಳ್ಳಲಿಲ್ಲ. ಬರಿಯ ಒಂದು ದನವನ್ನಾಗಿ ನಡೆಸಿಕೊಂಡ" ಎಂದು ಹೇಳುತ್ತಿದ್ದ ಅವರು, ಸೀತಾಲಕ್ಷ್ಮಿ ನರಸಿಂಹ ಇಬ್ಬರನ್ನೂ ಜಾನುವಾರುಗಳನ್ನಾಗಿಯೇ ಪರಿಗಣಿಸಿ ಅವರ ಆಗುಹೋಗುಗಳನ್ನು ತೀರ್ಮಾನಿಸುತ್ತಿದ್ದರು. ಇಂತಹ ಜಟಿಲವಾದ ಪ್ರಶ್ನೆಯನ್ನು, ಈ ತೀರ್ಮಾನದಿಂದ ಇಷ್ಟು ಸುಲಭವಾಗಿ ಪರಿಹರಿಸಿದುದರಿಂದ ಅವರಿಗೆ ತಮ್ಮಲ್ಲಿಯೇ ತೃಪ್ತಿಯೂ ಹೆಮ್ಮೆಯೂ ಉಂಟಾಯಿತು. ಮರುದಿನ

ಆಂಜನೇಯ ವಾಚನಾಲಯದ ಬಹಿರಂಗ ಸಭೆಗೆ ನರಸಿಂಹನನ್ನು ಕರೆಸಿ ಈ ತೀರ್ಮಾನವನ್ನು ಅವನಿಗೆ ತಿಳಿಸಿ ಅವನು ಅದರಂತೆ ನಡೆಯಬೇಕೆಂದು ಒತ್ತಾಯಪಡಿಸಬೇಕೆಂದೂ ಅವರು ನಿರ್ಣಯಿಸಿದರು. ಈ ನಿರ್ಣಯದಿಂದ ಸೀತಾಲಕ್ಷ್ಮಿಗೆ ಸುಖವಾಗುವುದೆಂದೂ, ಕರ್ತವ್ಯಚ್ಯುತರಾದವರೆಲ್ಲ ಕರ್ತವ್ಯದ ಹಾದಿ ಹಿಡಿದಂತೆ ಆಗುವುದೆಂದೂ, ಆ ಉತ್ಸಾಹಿಗಳು ಭಾವಿಸಿದರು.

ಸಂಧ್ಯಾಕಾಲದ ವೇಳೆಗೆ ಸಭೆಯಲ್ಲಾದ ತೀರ್ಮಾನ ಊರಿಗೆಲ್ಲ ಗೊತ್ತಾಯಿತು. ಚಿಕ್ಕವಯಸ್ಸಿನ ಸ್ತ್ರೀಪುರುಷರು 'ಭೇಷ್ ನರಸಿಂಹನಿಗೆ ಇವರು ಚೆನ್ನಾಗಿ ಬುದ್ಧಿ ಕಲಿಸಿದಂತೆ ಆಯಿತು. ಇದೇ ಸರಿಯಾದ ಮಾರ್ಗ. ಸೀತಾಲಕ್ಷ್ಮಿಗೆ ಅದೇ ದಿಕ್ಕು" ಎಂದರು. ವಯಸ್ಕರಾದವರು "ಈ ಯುವಕರಿಗೆ ಬುದ್ಧಿ ಇಲ್ಲ. ಇದು ನಡೆಯುವ ಮಾತೇ. ಸೀತಾಲಕ್ಷ್ಮಿ ಅಲ್ಲಿ ಅಕ್ಕನ ಮನೆಗೆ ಹೋಗಿ ಸೇರಿದರೆ, ಆ ಸಂಸಾರದಲ್ಲಿ ಒಂದು ಮುಳ್ಳು ಸೇರಿದಂತೆ. ಇರುವ ಆ ಸಂಸಾರದ ಸುಖ ನಾಶವಾಗುತ್ತೆ. ಇವಳಿಗೂ ನೆಮ್ಮದಿ ಇಲ್ಲ ಅವಳಿಗೂ ನೆಮ್ಮದಿ ಇಲ್ಲ. ಅಕ್ಕ ತಂಗಿಯರಿಗಿರುವ ಸ್ವಾಭಾವಿಕ ಪ್ರೇಮವೂ ಇದರಿಂದ ನಾಶವಾಗುವುದು. ಆದದ್ದು ಆಗಿಹೋಯಿತು. ಇನ್ನು ಅದನ್ನು ಕೆಣಕದೆ ಸುಮ್ಮನೆ ಬಿಟ್ಟುಬಿಡಬೇಕು" ಎಂದರು. ಆದರೆ ಈ ಪ್ರಶ್ನೆಯಲ್ಲಿ ಸೀತಾಲಕ್ಷ್ಮಿಯ ಮನೋಭಾವ ಹೇಗಿದೆ ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯವಾದುದೆಂದು ಯಾರೊಬ್ಬರಿಗೂ ಹೊಳೆಯಲಿಲ್ಲ

ಬಾಳಿನಲ್ಲಿ ಉಂಟಾದ ನಿರುತ್ಸಾಹದಿಂದ, ಮೊದಲು ಮೊದಲು ಸೀತಾಲಕ್ಷ್ಮಿಗೆ ತನ್ನ ಆತ್ಮಾನಂದವಾದ ಸಂಗೀತದ ಕಡೆಗೆ ಮನಸ್ಸು ಹೋಗಿರಲಿಲ್ಲ. ತನ್ನ ಗಂಡನಿಗೆ ಅತ್ಯಂತ ಪ್ರಿಯವಾದ ಸಂಗೀತವೂ ಸಹ, ಇನ್ನು ಅವನ ಸಾನ್ನಿಧ್ಯವಿಲ್ಲದುದರಿಂದ ವ್ಯರ್ಥವೆಂಬ ಭಾವನೆ ಅವಳಿಗೆ ಮೊದಲು ದೃಢವಾಯಿತು. ಶ್ರೀನಿವಾಸನಿಗೂ ರಾಮಸ್ವಾಮಿಗೂ ವೈಮನಸ್ಸು ಉಂಟಾದ ರಾತ್ರಿ, ತಾನು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಅವಳು ನಿಶ್ಚಯಿಸಿದ ರಾತ್ರಿ, ಕೊನೆಯ ಬಾರಿ ತಾಯಿ ಪ್ರೀತಿಯಿಂದ ಮಗುವನ್ನು ನೋಡುವಂತೆ ತನ್ನ ಉಸಿರಿನ ಉಸಿರಾದ ಪಿಟೀಲನ್ನು ಎತ್ತಿಕೊಂಡು, ತನಗೆ ಪ್ರಿಯವಾದ ದುಃಖರಾಗಗಳನ್ನು ಮನಃಪೂರ್ತಿ ಬಾರಿಸಿ, ದುಃಖಜನ್ಯವಾದರೂ ಆನಂದ ರಸಾನುಭವದಲ್ಲಿ ತಲ್ಲೀನಳಾಗಿ ಪಿಟೀಲಿನ ಪೆಟ್ಟಿಗೆಯ ಒಳಗಡೆ ಅಂಟಿಸಿದ್ದ

ತನ್ನ ಗಂಡನ ಛಾಯಾ ಪಟವನ್ನು ನೋಡಿ, ಅದಕ್ಕೇ ಮುತ್ತಿಟ್ಟು ನಾಚಿ, ಇನ್ನು ಈ ಪಿಟೀಲನ್ನು ಕಾಣುವುದು ಯೋಗವಿದ್ದರೆ ಮುಂದಲ ಜನ್ಮದಲ್ಲಿಯೇ ಎಂದುಕೊಂಡು ಅದರಿಂದ ವಿಮುಖಳಾಗಿದ್ದಳು. ಆದರೆ ಶ್ರೀನಿವಾಸ ಹೊಳೆ ಯಿಂದ ಎತ್ತಿ ಬದುಕಿಸಿದ ನಂತರವೂ, ಸಂಗೀತದ ಮೇಲೆಯೂ ಪಿಟೀಲಿನ ಮೇಲೆಯೂ ಅವಳ ನಿರುತ್ಸಾಹ ಕಡಿಮೆಯಾಗಿರಲಿಲ್ಲ. ಆದರೂ ಒಂದೊಂದು ಸಲ ಅವಳ ಪ್ರಯತ್ನವನ್ನೂ ಮೀರಿ ಅವಳಿಗೆ ತಿಳಿಯದಂತೆ ಅವಳ ಬಾಯಿಂದ ರಾಗಾಲಾಪನೆ ಪ್ರಾರಂಭವಾಗಿಬಿಡುತ್ತಿತ್ತು. ಹಕ್ಕಿ ಗಾಳಿಯಲ್ಲಿ ತನ್ನ ವೇಗದ ಆನಂದದಿಂದಲೇ ಸ್ವಚ್ಛಂದವಾಗಿ ವಿಹರಿಸುವಂತೆ, ತನ್ನ ಗಾನದಿಂದಲೇ ಆಕರ್ಶಿತಳಾಗಿ ಆಕೆ ಅನೇಕ ನಿಮಿಷಗಳು ಆಲಾಪನೆ ಮಾಡುತ್ತ ತಾನೇ ವಿಮರ್ಶಕಳೂ ಆಗಿ ಅದರ ರಸವನ್ನೂ ಸವಿದು ಇದ್ದಕ್ಕಿದ್ದಂತೆ ತನ್ನ ಸ್ಥಿತಿ ನೆನಪಾಗಲು ಎಚ್ಚೆತ್ತವಳಂತೆ ಗಾನವನ್ನು ನಿಲ್ಲಿಸಿ ಸುಮ್ಮನಾಗಿಬಿಡುತ್ತಿದ್ದಳು. ಹಾಗೆ ಅವಳು ನಿಲ್ಲಿಸುತ್ತಿದ್ದುದು "ಇನ್ನು ಇದು ನನಗೆ ಬೇಡ" ಎಂಬ ಭಾವನೆಯಿಂದ. ಹೀಗೆ ಸಂಗೀತವನ್ನು ಆ ಗಳಿಗೆಯಲ್ಲಿ ಆಕೆ ನಿಲ್ಲಿಸಿದರೂ ಅದರ ಆಸೆ ಅವಳಿಗೆ ಕಡಿಮೆಯಾಗುತ್ತಿರಲಿಲ್ಲ. ಅಂದಿನಿಂದ ಅವಳು ಒಂದೇ ಸಮನಾಗಿ ಪೀಟಿಲನ್ನು ನೋಡುತ್ತಾ ನಿಟ್ಟುಸಿರುಬಿಡುತ್ತಿದ್ದಳು.

ಹೀಗೆ ಗಾನ ಒಂದೇ ತನಗೆ ಗೆಳತಿಯಾಗಿ, ಆ ಗಾನದಿಂದಲೂ ತಾನು ಅನಿವಾರ್ಯವಾಗಿ ವಂಚಿತಳಾದುದರಿಂದ, ಸೀತಾಲಕ್ಷ್ಮಿ ಸ್ವಾಭಾವಿಕವಾಗಿ ತನಗೆ ಹಿಂದಲಿಂದ ಆಶ್ರಯವಾದ ಬಾಲಿಕಾ ಪಾಠಶಾಲೆಯ ಮುಖ್ಯೋಪಾ ಧ್ಯಾಯಿನಿ ಕಮಲಮ್ಮನ ಮನೆಗೆ ಹೋದಳು. ಸೀತಾಲಕ್ಷ್ಮಿ ಮಲ್ಲಿಗೆಹಳ್ಳಿಗೆ ಹೋದನಂತರ ಯಾರ ಮನೆಗೂ ಸುಳಿದಿರಲಿಲ್ಲ. ತನ್ನಲ್ಲಿ ಯಾರಿಗೂ ಅಭಿ ಮಾನವಿಲ್ಲವೆಂಬುದೂ ಆಕೆಗೆ ಗೊತ್ತಿತ್ತು. ಗಂಡಸರು ಮಾತ್ರ ಅಪರೂಪ ವಸ್ತುವನ್ನು ನೋಡುವಂತೆ ಆಕೆಯನ್ನು ಕದ್ದು ನೋಡುತ್ತಿದ್ದರು. ಹೆಂಗಸರಿಗೆ ಸಹ ಆಕೆಯ ಸೌಂದರ್ಯವನ್ನು ಕಂಡು, ಅಸೂಯೆ ಹೊಟ್ಟೆಕಿಚ್ಚು ಉಂಟಾ ಗಿತ್ತು. ಯಾವ ದುಃಖದಿಂದಲೂ ಆಕೆ ಸ್ವಲ್ಪವಾಗಲಿ ಬಾಡದೆ ಕಂದದೆ ಕುಂದರೆ, ಆಗತಾನೇ ಅರಳಿದ ಸುಗಂಧವನ್ನು ಸೂಸುವ ಹೊಸ ಗುಲಾಬಿ ಯಂತಿದ್ದುದನ್ನು ಕಂಡು, ಆಕೆಯಲ್ಲಿ ಯಾರಿಗೂ ಸಹಾನುಭೂತಿ ಇರಲಿಲ್ಲ. ಬಾಲಿಕಾ ಪಾಠಶಾಲೆಯ ಮುಖ್ಯೋಪಾಧ್ಯಾಯಿನಿ ಕಮಲಮ್ಮ ಒಬ್ಬಳಿಗೆ

ಾತ್ರ,—ಅವಳು ಸುಸಂಸ್ಕೃತಳಾದ ಕಾರಣದಿಂದಲೇ ಇರಬಹುದು,—
ಲ್ಪ ಹೆಚ್ಚು ಕಡಿಮೆ ಸೀತಾಲಕ್ಷ್ಮಿಯ ಮನಸ್ಸಿನೊಳಗಿನ ಹೊಯ್ದಾಟ
ಯ್ದಾಟಗಳು ಗೊತ್ತಾಗಿದ್ದವು. ಕಮಲಮ್ಮ ಸೀತಾಲಕ್ಷ್ಮಿಯ ಎದುರು
ನೆಯಲ್ಲಿಯೇ ಇದ್ದರೂ, ಸೀತಾಲಕ್ಷ್ಮಿಯು ಮಲ್ಲಿಗೆಹಳ್ಳಿಗೆ ಹಿಂತಿರುಗಿದ
ಷ್ಟೊಂದು ದಿನಗಳಲ್ಲಿ, ಒಂದು ದಿನವಾದರೂ ಮುಖವೆತ್ತಿ ಸಹ ಅವಳನ್ನು
ೋಡಿರಲಿಲ್ಲ. ತನ್ನಲ್ಲಿಯೇ ತಾನು ಸಂಕೋಚದಿಂದಲೂ ನಾಚಿಕೆಯಿಂದಲೂ
ೂಮಿಗೇ ಹೂತುಹೋಗುವಂತೆ ಹುದುಗುತ್ತಿರುವ' ಹೆದರಿದ ಜಿಂಕೆಯಂತೆ
ಬರಿಯಿಂದ ಕಣ್ಣುಗಳನ್ನು ಅತ್ತಿತ್ತ ತಿರುಗಿಸುತ್ತಿದ್ದ ಸೀತಾಲಕ್ಷ್ಮಿಯನ್ನು,
ುಖಕ್ಕೆ ಮುಖ ಕೊಟ್ಟು ನೋಡಲು ಕಮಲಮ್ಮನಿಗೆ ಸಹ ಸಂಕೋಚ
ಗಿತ್ತು. "ಈಕೆಯನ್ನು ಸಂತೈಸಬೇಕು ಪಾಪ, ಇವಳಿಗೆ ಸಹಾನುಭೂತಿ
ೇಕು; ಆ ಸಹಾನುಭೂತಿಯನ್ನು ನಾನು ಮಾತ್ರ ಕೊಡಬಲ್ಲೆ" ಎಂದು
ೊಂಡು ಕಮಲಮ್ಮ" "ಅವಳಾಗಿಯೇ ನನ್ನಲ್ಲಿ ಬರಲಿ" ಎಂದು ನಿರೀಕ್ಷಿಸು
ದ್ದಳು

ಆ ಸಾಯಂಕಾಲ ಏಳು ಗಂಟೆಯ ಸಮಯ. ಕಮಲಮ್ಮ ತನ್ನ
ನೆಯ ತೊಟ್ಟಿಯಲ್ಲಿ ಕುಳಿತು ಪಿಟೀಲನ್ನು ಬಾರಿಸುತ್ತಿದ್ದಳು. ಸೀತಾಲಕ್ಷ್ಮಿ
ದುರು ಮನೆಯಲ್ಲಿದ್ದರೂ ಅವಳಿಗೆ ಆ ಗಾನ ಅಸ್ಪಷ್ಟವಾಗಿ ಕೇಳಿ ಆಕೆಯ
ನಸ್ಸು ಕೂಡಲೇ ಅನ್ಯಮುಖವಾಯಿತು. ಹಾಗೆಯೇ ಆಕೆ ಬೀದಿಯ
ಗಲಿಗೆ ಬಂದಳು. ಅಲ್ಲಿ ಗಂಡಸರಾರೂ ಇರಲಿಲ್ಲ. ಇದ್ದಿದ್ದರೆ ಆಕೆ ಮತ್ತೆ
ಳಕ್ಕೇ ಹೋಗಿಬಿಡುತ್ತಿದ್ದಳು. ಆಕೆ ತನಗೇ ಗೊತ್ತಿಲ್ಲದಂತೆ ಕಮಲಮ್ಮನ
ನೆಗೆ ಹೋದಳು. ಕಮಲಮ್ಮನ ಎದುರಿಗೆ ಹೋಗುವವರೆಗೆ ಆಕೆಗೆ, ತಾನು
ನು ಮಾಡುತ್ತಿರುವೆನೆಂಬುದರ ಅರಿವೇ ಇದ್ದಂತೆ ತೋರಲಿಲ್ಲ. ಬಾಗಿಲಿನಲ್ಲಿ
ೀರೆಯ ಸರಸರ ಶಬ್ದವನ್ನು ಕೇಳಿದಾಗಲೇ, ಬಂದವಳು ಸೀತಾಲಕ್ಷ್ಮಿ ಎಂಬು
ನ್ನು ಅರಿತ ಕಮಲಮ್ಮ, ಆಕೆ ಒಳಕ್ಕೆ ಬಂದಕೂಡಲೇ ಪಿಟೀಲನ್ನು ನಿಲ್ಲಿಸದೆ
ಣ್ಣಿನ ದೃಷ್ಟಿಯಿಂದಲೇ ಕುಳಿತುಕೊಳ್ಳುವಂತೆ ಆಕೆಗೆ ಸನ್ನೆಮಾಡಿ, ತನ್ನ
ನವನ್ನು ಮುಂದುವರಿಸಿದಳು. ಹೀಗೆ ಸ್ವಲ್ಪ ಹೊತ್ತು ಬಾರಿಸಿ ಅನಂತರ
ಮಲಮ್ಮ ಮಾತನಾಡದೆ ಪಿಟೀಲನ್ನು ಸೀತಾಲಕ್ಷ್ಮಿಯ ಕೈಗೆ ಕೊಟ್ಟಳು.
ೀತಾಲಕ್ಷ್ಮಿ ಬಾರಿಸದೆ ಸುಮ್ಮನಿರುವುದನ್ನು ಕಂಡು ಕಮಲಮ್ಮ 'ಎಲ್ಲಿ

ಆಗಲಿ' ಎಂಬಂತೆ ಮತ್ತೆ ಸನ್ನೆ ಮಾಡಿದಳು. ಸೀತಾಲಕ್ಷ್ಮಿಗೆ ಹೆಚ್ಚು ಪ್ರೋತ್ಸಾಹ ಬೇಕಾಗಿಲ್ಲ. ಬಹಳ ದಿನದಿಂದ ಮಗುವನ್ನು ಕಾಣದಿದ್ದ ತಾಯಿ ಅದನ್ನು ಪ್ರೇಮದಿಂದ ಅಪ್ಪುವಂತೆ, ಸೀತಾಲಕ್ಷ್ಮಿ ಗಾನಸಮುದ್ರದಲ್ಲಿ ಮೀನಿನಂತೆ ವಿಹರಿಸತೊಡಗಿದಳು. ಅವಳ ಕೈಯಿನ ಚುರುಕೂ ರಸಾನುಭವ ಶಕ್ತಿಯೂ ಸ್ವಲ್ಪವೂ ಕುಂದದೆ ಮೊದಲಿಗಿಂತಲೂ ಹೆಚ್ಚು ತೀಕ್ಷ್ಣವೇ ಆಗಿದ್ದುದನ್ನು ಕಂಡು ಕಮಲಮ್ಮನಿಗೆ ಅತ್ಯಂತ ಸಂತೋಷವಾಯಿತು

  

ಆ ವೇಳೆಗೆ ನೆರೆಮನೆಯ ಅಂಬುಜಮ್ಮ ಅಲ್ಲಿಗೆ ಬಂದಳು. ಅವಳದು ಯಾವಾಗಲೂ ಸೀತಾಲಕ್ಷ್ಮಿಯಲ್ಲಿ ಸಹಾನುಭೂತಿ. ಆಕೆ ವಯಸ್ಸಾದವಳಾದುದರಿಂದ, ಯಾವ ವಿಷಯದಲ್ಲಿಯೂ ಸ್ವಲ್ಪ ಸ್ವತಂತ್ರಿಸಿ ಮಾತನಾಡುತ್ತಿದ್ದಳು. ಅವಳು ಬಂದವಳೇ ಸೀತಾಲಕ್ಷ್ಮಿ ಅಲ್ಲಿ ಇದ್ದುದನ್ನೂ ಗಮನಿಸದೆ "ಸೀತಾಲಕ್ಷ್ಮಿಯನ್ನೂ ನರಸಿಂಹನ ಮನೆಗೇ ಕಳುಹಿಸಬೇಕೆಂದು" ಹುಡುಗರು ಮೀಟಿಂಗು ಮಾಡಿದರಂತೆ. ನರಸಿಂಹನಿಗೆ ನಾಳೆ ಹೇಳುತ್ತಾರಂತೆ. ನಮ್ಮ ಕಿಟ್ಟಿ ಮನೆಯಲ್ಲಿ ಮಾತನಾಡುತ್ತಿದ್ದ" ಎಂದಳು.

ಆ ಮಾತುಗಳನ್ನು ಕೇಳಿ ಸೀತಾಲಕ್ಷ್ಮಿಗೆ ಸಿಡಿಲು ಬಡಿದಂತೆ ಆಯಿತು. ಅವಳ ಮೈ ಬೆವತು ಕೈಕಾಲುಗಳು ಥರಥರನೆ ನಡುಗತೊಡಗಿದವು. ಕಮಲಮ್ಮ "ಏನಾಯಿತು ಏನಾಯಿತು. ಮೈಗೆ ಏನಾಗಿದೆಯಮ್ಮ ಸ್ವಸ್ಥವಿಲ್ಲವೆ? ಸ್ವಲ್ಪ ನೀರು ಕುಡಿಯುತ್ತೀಯ?" ಎಂದು ಗಾಬರಿಯಿಂದ ಉಪಚರಿಸಿದಳು. ಸೀತಾಲಕ್ಷ್ಮಿ ನಿಧಾನವಾಗಿ ಹದಿನೈದು ನಿಮಿಷಗಳು ಚೇತರಿಸಿಕೊಂಡು ಅನಂತರ ಕಮಲಮ್ಮನಿಗೆ "ಅಮ್ಮ ಇದಾವ ಹೊಸ ಮೃತ್ಯು? ನೆನೆಸಿಕೊಂಡರೇ ನನ್ನ ಮೈ ಹಾವು ಕಡಿದಂತೆ ಆಗುತ್ತೆ. ಎಂದಿಗಾದರೂ ಸಾಧ್ಯವೆ? ನನ್ನನ್ನು ಚೂರು ಚೂರಾಗಿ ಕತ್ತರಿಸಿದರೂ ಇದು ಸಾಧ್ಯವಿಲ್ಲ. ಅದು ಕೆಟ್ಟ ಕನಸು ಹೇಗೋ ಕಳೆದುಹೋಯಿತು. ಮತ್ತೆ ಯಾರಾದರೂ ಆ ಮಾತು ಹೇಳಿದರೆ ನಾನು ಖಂಡಿತ ಹೊಳೆಯಲ್ಲಿ ಮುಳುಗಿ ಸಾಯುತ್ತೇನೆ" ಎಂದಳು.

ಅಂಬುಜಮ್ಮ ಮನೆಗೆ ಹೋದನಂತರ ತನ್ನ ಮಗ ಕೃಷ್ಣನಿಗೆ "ಸೀತಾಲಕ್ಷ್ಮಿ ಎಂದಿಗೂ ನರಸಿಂಹನ ಮನೆಗೆ ಹೋಗುವುದಿಲ್ಲ. ಆ ಮಾತು ಕೇಳಿದರೇ ಹೊಳೆಯಲ್ಲಿ ಬಿದ್ದು ಸಾಯುತ್ತೇನೆ ಎನ್ನುತ್ತಾಳೆ. ನಿಮಗೆ ಯಾಕೆ ಈ ಸುದ್ದಿ.

ನಿಮಗೆ ಇದು ತಿಳಿಯುವುದಿಲ್ಲ. ಸುಮ್ಮನಿರಿ” ಎಂದಳು. ಮರುದಿವಸ ಕೃಷ್ಣ ಆಂಜನೇಯ ವಾಚನಾಲಯದಲ್ಲಿ ಉತ್ಸಾಹಿಗಳಿಗೆ ಈ ಸಂಗತಿ ತಿಳಿಸಿದಾಗ ಆ ಯುವಕರಿಗೆ ಆಶ್ಚರ್ಯವಾಯಿತು ರಾಮನಾಥನು “ಒಂದು ಅನ್ಯಾಯವನ್ನು ನ್ಯಾಯಮಾಡಲು ಸರಿಪಡಿಸಲು ಪ್ರಯತ್ನಿಸಿದೆವು. ನಮ್ಮ ಸಮಾಜದಲ್ಲಿ ಅದೂ ಸಾಧ್ಯವಿಲ್ಲ. ಹಾಳಾಗಿ ಹೋಗಲಿ” ಎಂದು ಮತ್ತೊಂದು ಉದ್ದವಾದ ಭಾಷಣವನ್ನು ಮಾಡಿದನು. ‘ಸೀತಾಲಕ್ಷ್ಮಿ ತಮಗೆ ದೊರಕಲಿಲ್ಲವಲ್ಲ? ನರಸಿಂಹ ನಮಗಿಂತ ಯಾವ ವಿಧದಲ್ಲಿ ಉತ್ತಮ?’’ ಎಂದು ಆಕೆಯಮೇಲೆ ಕೋಪಗೊಂಡಿದ್ದ ಕೆಲವು ಪಟಿಂಗರು “ಇವಳು ಮಹಾಪತಿವ್ರತೆ! ಹೊಳೆ ಬೀಳುತ್ತಾಳಂತೆ ಹೊಳೆ, ಸೂಳೆ’’ ಎಂದು ಬೈದು ಕೊಂಡರು.

❖ ❖ ❖

ಆದರೆ, ಸೀತಾಲಕ್ಷ್ಮಿ ನಿಜವಾಗಿಯೂ ಮಹಾಪತಿವ್ರತೆಯೇ ಎಂಬುದೂ ಗಂಡನಿಗಾಗಿ ಪ್ರಾಣವನ್ನು ಕೊಡಲೂ ಸಿದ್ಧಳಾಗಿದ್ದಳೆಂಬುದೂ ಅವರಾರಿಗೂ ಗೊತ್ತಾಗಲಿಲ್ಲ.

## ೧೫

ಮಳ್ಳಿಗೆಹಳ್ಳಿಯ ಶಾಂತಜೀವನದಲ್ಲಿ ಹೀಗೆ ಗೊಂದಲವನ್ನೆಬ್ಬಿಸಿದ ನರಸಿಂಹ, ಹತ್ತು ದಿನಗಳ ನಂತರ ಮತ್ತೆ ಹೆಂಡತಿಯೊಡನೆ ತನ್ನ ಗ್ರಾಮಕ್ಕೆ ಹೊರಟುಹೋದನು. ಅವನು ಅಲ್ಲಿ ಇರುವವರೆಗೆ ತಮ್ಮ ನಾಲಿಗೆಯನ್ನು ಹರಿತಮಾಡಿಕೊಳ್ಳುತ್ತಿದ್ದ ಸುಧಾರಕರ ಗುಂಪು, ಮುಖ್ಯ ಶತ್ರು ಕಾಲ್ತೆಗೆದುದರಿಂದ ಸುಮ್ಮನಾದರು. ರಾಮನಾಥನೂ ತನ್ನ ವ್ಯಾಸಂಗಕ್ಕಾಗಿ ಬೆಂಗಳೂರಿಗೆ ಹಿಂದಿರುಗಿದುದರಿಂದ, ಸೀತಾಲಕ್ಷ್ಮಿಗೆ ಉಂಟಾಗಿದ್ದ ಅನ್ಯಾಯವನ್ನು ಸರಿಮಾಡುವ ಹಠ ಉಳಿದವರು ಅಲ್ಲಿ ಯಾರೂ ಇರಲಿಲ್ಲ.

ಶಾಂತವಾಗಿ ಪ್ರವಹಿಸುತ್ತಿದ್ದ ನದಿಯ ಸ್ನಾನಗಟ್ಟಗಳಲ್ಲಿ, ಸ್ತ್ರೀಯರು ಮಾತ್ರ ಪಾತ್ರೆಗಳನ್ನು ಬೆಳಗುತ್ತ ಪಿಸಪಿಸನೆ ಸೀತಾಲಕ್ಷ್ಮಿಯ ಸುದ್ದಿಯನ್ನೇ ಮಾತನಾಡುತ್ತಿದ್ದರು. ಸೀತಾಲಕ್ಷ್ಮಿ ಎಲ್ಲೋ ಒಂದೊಂದು ಸಲ ಮಾತ್ರ ಕಣ್ಣಿಗೆ ಬಿದ್ದಾಗ, ಆ ನವಮೋಹನಾಕಾರದ ಲಾವಣ್ಯವನ್ನು ನೋಡಿದ ಯುವ-

ಕರು ಆಸೆಯಿಂದ "ಭರ್ಜರಿ ಹುಡುಗಿ ಗಂಧರ್ವ ಕನ್ನಿಕೆ. ಈಗ ಸು
ರಾಜ ಇವಳನ್ನ ನೋಡಿದರೆ ಸಾಕು. ಎಲ್ಲವನ್ನೂ ಮರೆತು ಮತ್ತ
ಇವಳ ಹಿಂದೆಯೇ ಹೊರಡುತ್ತಾನೆ" ಎಂದುಕೊಳ್ಳುತ್ತಿದ್ದರು. ವಯಸ್ಕ
ಮುದುಕಿಯರು ಮಾತ್ರ "ಅದು ತಂದ ಫಲ ಅದಕ್ಕೆ" ಎಂದುಕೊ
ಸುಮ್ಮನಾಗಿದ್ದರು.

ಸೀತಾಲಕ್ಷ್ಮಿಯನ್ನು ಗಂಡನ ಮನೆಗೆ ಕರೆದುಕೊಂಡು ಹ
ಬೇಕೆಂಬುದು, ವೃದ್ಧಸ್ತ್ರೀಯರು ಯೋಚಿಸಿದಷ್ಟು ಅಸಂಭವವಾಗಿರಲ
ಶ್ರೀನಿವಾಸನಿಗೆ ಆ ಭಾವನೆ ಅನೇಕ ಬಾರಿ ಹೊಳೆದಿತ್ತು. ಕಮಲಮ್ಮನಿ
ಹೊಳೆದಿತ್ತು ಸೀತಾಲಕ್ಷ್ಮಿಯೇ ಒಂದೊಂದು ಸಲ "ಯಾಕೆ ಹ
ನೋಡಬಾರದು?" ಎಂದು ಯೋಚಿಸಿದಳು. ಸೀತಾಲಕ್ಷ್ಮಿಗೆ ದಿನದಿ
ಸುಂದರರಾಜನಲ್ಲಿ ಪ್ರೇಮವೂ ಆಸಕ್ತಿಯೂ ಆಸೆಯೂ ಹೆಚ್ಚುತ್ತ ಹ
ಅವನನ್ನು ಇನ್ನು ನೋಡದಿದ್ದರೆ ತನಗೆ ಹುಚ್ಚು ಹಿಡಿಯುವುದು ನಿಶ್ಚಯವೆ
ಅವಳಿಗೆ ನಂಬಿಕೆಯಾಯಿತು. ಸುಂದರರಾಜನಲ್ಲಿ ಆಕೆಯ ಪ್ರೇಮ ಎ
ಆಳವೂ ಗಾಢವೂ ಶಾಶ್ವತವೂ ಅವ್ಯಭಿಚಾರಿಯೂ ಆಗಿದ್ದಿತೆಂದರೆ, ತ
ಒಂದು ಸಲ ವ್ಯಭಿಚಾರಿಣಿಯಾಗಿದ್ದೆ ಎಂಬುದನ್ನು ಸಹ ಅವಳು ಪೂರ್ಣವ
ಮರೆತಳು. ಈ ಪ್ರೇಮಪ್ರವಾಹ ದಡವನ್ನೇ ಕಾಣದಂತೆ ಬಂದು, ಅ
ಇರುವಿಕೆಯನ್ನು ಪೂರ್ಣವಾಗಿ ಕ್ಷೋಭೆಗೊಳಿಸಿ, ಹಿಂದಲದರ ಕಿಂಚಿತ್
ಶೇಷವೂ ಇಲ್ಲದಂತೆ ಅದನ್ನು ಕೊಚ್ಚಿಕೊಂಡು ಹೋಗಿಬಿಟ್ಟಿತು. ಗಂಡ
ತನಗಿದ್ದ ಆ ಅಳತೆಗೆ ಅಳವಡದ ವ್ಯಾಮೋಹವನ್ನು ಕಂಡು, ಇದರ ಪ
ಸಾನವೇನೋ ಎಂದು ಸೀತಾಲಕ್ಷ್ಮಿಗೆ ತನ್ನಲ್ಲಿಯೇ ಗಾಬರಿಯಾಯಿ
ಪರ್ಯವಸಾನ ಹೇಗೆ ಬೇಕಾದರೂ ಆಗಲಿ, ಇದನ್ನು ಸ್ತಿಮಿತದಲ್ಲಿಡುವುದಂ
ನನ್ನ ಕೈಯಿಂದ ಸಾಧ್ಯವಿಲ್ಲವೆಂದುಕೊಂಡು ಆಕೆ, ಆ ಪ್ರೇಮ ಪ್ರವಾಹಕ್ಕೆ ತ
ಹೃದಯವನ್ನು ತೆತ್ತು, ಕನಸಿನಲ್ಲಿರುವಂತೆ ಬಾಳುತ್ತಿದ್ದಳು.

ಶ್ರೀನಿವಾಸ "ನಿನ್ನನ್ನು ರಂಭಾಪುರಿಗೆ ಕರೆದುಕೊಂಡುಹೋಗಿ ಬಿ
ಬರುತ್ತೇನೆ" ಎಂದಾಗ ಶ್ರೀನಿವಾಸ "ನಿನಗೆ ಇನ್ನೇನೂ ದಿಕ್ಕಿಲ್ಲ. ಅ
ಗತಿ. ಅಲ್ಲಿ ಇರು. ಇಲ್ಲದಿದ್ದರೆ ಹೊಳೆಬಿದ್ದು ಸಾಯಿ" ಎಂಬ ಅರ್ಥ
ಹೇಳಿದರೂ, ತನ್ನ ಸ್ಥಿತಿ ಅಷ್ಟು ಉತ್ಸಾಹ ಹೀನವಾಗಿ ಆಕೆಗೆ ತೋರಿರಲ

ನಾಲ್ಕಾರು ದಿನಗಳ ಕೆಳಗೆ ರಾಮಸ್ವಾಮಿಯು ಶ್ರೀನಿವಾಸನಿಗೆ " ಈ ಪಿಶಾಚಿಯನ್ನು ನಿನ್ನ ಮನೆಯಲ್ಲಿ ಹೀಗೆ ಎಷ್ಟು ದಿವಸ ಇಟ್ಟುಕೊಳ್ಳುವೆ. ನೋಡಿದವರಿಗೆ ಒಳ್ಳೆಯ ಮೇಲುಪಂಗ್ತಿ. ನಾಳೆ ದೊಡ್ಡವರಾಗುವ ನಮ್ಮ ಹುಡುಗಿಯರು ಇವಳಿಂದ ಏನು ಕಲಿಯಬೇಕು ? " ಎಂದಿದ್ದನು.

ಶ್ರೀನಿವಾಸನು — " ಹಾಗಾದರೆ ಇವಳನ್ನು ಏನು ಮಾಡಲಿ ?

ರಾಮಸ್ವಾಮಿ—ಏನು ಮಾಡಲಿ ? ಏನು ಮಾಡಲಿ ? ನೀನು ಯಾವಾಗಲೂ ಕೇಳುತ್ತಿರುವುದು ಇದೇಯೆ. ಏನೂ ಮಾಡುವುದಕ್ಕೆ ತೋಚದಿದ್ದರೆ ತೆಗೆದುಕೊಂಡು ಹೋಗಿ ಹೊಳೆಗೆ ತಳ್ಳು."

ಶ್ರೀನಿವಾಸನ ಮುಖ ಕೋಪದಿಂದ ಕೆಂಪಾದುದನ್ನು ಕಂಡು ರಾಮಸ್ವಾಮಿಯು "ಕರೆದುಕೊಂಡು ಹೋಗಿ ಸುಂದರರಾಜನ ಮನೆಗೆ ಬಿಟ್ಟು ಬಾ'' ಎಂದನು. ಶ್ರೀನಿವಾಸನು " ಬೇಕಾಗಿದ್ದರೆ ಈ ವೇಳೆಗೆ ಅವನೇ ಬಂದು ಕರೆದುಕೊಂಡು ಹೋಗುತ್ತಿದ್ದನು. ಈಗ ನಾನು ಕರೆದುಕೊಂಡು ಹೋದರೂ ಮನೆಗೆ ಸೇರಿಸುವದಿಲ್ಲವೆಂದರೊ ? ''

ಈಗ ರಾಮಸ್ವಾಮಿಗೆ ಕೋಪ ಬಂತು. '' ಸೇರಿಸುವುದಿಲ್ಲವೆಂದರೆ ಅವನ ಮನೆ ಬಾಗಿಲಿನಲ್ಲಿ ಸಿಗಿದು ತೋರಣ ಕಟ್ಟಿಬಿಟ್ಟು ಬಾ. ಅವನ ವಸ್ತು ಅವನು ಬೇಕಾದದ್ದು ಮಾಡಿಕೊಳ್ಳಲಿ. ಹೊಳೆಗೆ ತಳ್ಳಲಿ, ಇಲ್ಲದಿದ್ದರೆ ಕತ್ತರಿಸಿ ಹಾಕಲಿ. ಏನು ಮಾಡುವದಿದ್ದರೂ ಅವನೇ ಮಾಡಲಿ.''

ಶ್ರೀನಿವಾಸನು ಯೋಚಿಸಿದಷ್ಟೂ ಅವನಿಗೂ ಬೇರೆ ದಾರಿ ಕಾಣಲಿಲ್ಲ. ಮನೆಗೆ ಹೋಗಿ ವಿಷಯವನ್ನು ಅವನು ಸೀತಾಲಕ್ಷ್ಮಿಗೆ ತಿಳಿಸಿದಾಗ, ಅವಳು ಏನೂ ಮಾತನಾಡದೆ ಸುಮ್ಮನಿದ್ದಳು. ಆದರೆ ಅವಳ ಮುಖದಲ್ಲಿ ಅವಳ ಇಚ್ಛೆಗೆ ವಿರೋಧವಾಗಿ, ಬಣ್ಣ ಕಾವು ಸುಳಿಯಿತು. ರಾಮನಾಥನೇ ಮೊದಲಾದ ಸುಧಾರಕರು, ನರಸಿಂಹನೊಂದಿಗೆ ಸೀತಾಲಕ್ಷ್ಮಿಯನ್ನು ಕಳುಹಿಸುವ ತೀರ್ಮಾನಕ್ಕೆ ಬಂದಿದ್ದಾಗ, ಆಕೆಯ ಜಿಗುಪ್ಸೆಯನ್ನು ಕಂಡಿದ್ದ ಶ್ರೀನಿವಾಸ, " ಒಂದು ಸಲ ಹೋಗಿ ಬರಲಿ " ಎಂದು ಯೋಚಿಸಿ ಸೀತಾಲಕ್ಷ್ಮಿಯನ್ನು ರಂಭಾಪುರಿಗೆ ಕರೆದುಕೊಂಡು ಹೊರಟನು.

ರಂಭಾಪುರಿ, ಮಲ್ಲಿಗೆ ಹಳ್ಳಿಯಿಂದ ಹದಿನೈದು ಮೈಲಿ ದೂರದಲ್ಲಿ ಮಾತ್ರವಿದ್ದರೂ, ಸೀತಾಲಕ್ಷ್ಮಿಯ ಕಾರಣದಿಂದ ಎರಡು ಸಂಸಾರಗಳಿಗೂ ವಿರಸ

ಉಂಟಾದನಂತರ, ಆ ಊರಿಗೆ ಹೋಗಿ ಬಂದವರು ಮಲ್ಲಿಗೆಹಳ್ಳಿಯಲ್ಲಿ ಆ ಊರಿನ ಸುದ್ದಿಯನ್ನೇ ಎತ್ತುತ್ತಿರಲಿಲ್ಲ. ರಂಭಾಪುರಿಗೆ ಹೋಗಿ ಹಿಂದಿರುಗಿದವರು "ರಂಭಾಪುರಿಗೆ ಹೋಗಿದ್ದೆ. ಎಲ್ಲ ಆರೋಗ್ಯ" ಎಂದು ಹೇಳಿ ಮುಂದಕ್ಕೆ ಮಾತನ್ನೆ ಬೆಳೆಯಗೊಡದೆ ಆ ಸ್ಥಳದಿಂದ ಕಾಲು ತೆಗೆಯುತ್ತಿದ್ದರು. ಈ ಕಾರಣದಿಂದ ರಂಭಾಪುರಿಯಲ್ಲಿ ಗುಂಡಣ್ಣನವರ ಮನೆಯ ಹೆಚ್ಚು ಸಂಗತಿಗಳಾವುವೂ ಶ್ರೀನಿವಾಸನಿಗೆ ತಿಳಿದಿರಲಿಲ್ಲ ಎರಡು ವರುಷಗಳಿಂದ ಒಬ್ಬರ ಸುದ್ದಿಯೇ ಒಬ್ಬರಿಗೆ ತಿಳಿದಿರಲಿಲ್ಲ. ಶ್ರೀನಿವಾಸನೂ ಸೀತಾಲಕ್ಷ್ಮಿಯೂ ಗಾಡಿಯಲ್ಲಿ ಕುಳಿತು ಮಲ್ಲಿಗೆ ಹಳ್ಳಿಯಿಂದ ಬೆಳಗಿನಜಾವ ರಂಭಾಪುರಿಯ ಕಡೆಗೆ ಹೊರಟರು. ಸಮಾರು ಹನ್ನೆರಡು ಗಂಟೆಯವೇಳೆಗೆ, ಅವರು ರಂಭಾಪುರಿಗೆ ಒಂದು ಮೈಲಿ ದೂರಕ್ಕೆ ಬಂದು, ಅಲ್ಲಿ ಕೆರೆ ಏರಿಮೇಲಿನ ಮರದ ನೆರಳಿನಲ್ಲಿ ಗಾಡಿ ನಿಲ್ಲಿಸಿ ಎತ್ತುಗಳಿಗೆ ಹುಲ್ಲು ಹಾಕಿ ಮೈ ತೊಳೆದು ವಿಶ್ರಾಂತಿಗೆ ಬಿಟ್ಟರು. ಅನಂತರ ಶ್ರೀನಿವಾಸ ತಾನೂ ಸ್ನಾನಮಾಡಿ ತಂದಿದ್ದ ಮಡಿ ಪಂಚೆಯನ್ನುಟ್ಟು ಕೊಂಡು ನಾಮವಿಕ್ಕಿಕೊಂಡನು ಬಿಸಿಲಿನ ಬೇಗೆಯಿಂದಲೂ ಮನಸ್ಸಿನ ಕಾತರದಿಂದಲೂ ಕಾದಿದ್ದ ಮೈಯನ್ನು, ಸೀತಾಲಕ್ಷ್ಮಿ ಕೆರೆಯ ತಣ್ಣೀರಿನ ತಂಪಿನಲ್ಲಿ ಮುಳುಗಿಸಿಕೊಂಡಳು. ಮಲಿನವಾಗಿದ್ದ ದೇಹ ಹಗುರವಾಗಿ ಗೆಲುವಾದರೂ ಮನಸ್ಸಿನ ದುಗುಡ ಕಡಿಮೆಯಾಗಲಿಲ್ಲ. ಶ್ರೀನಿವಾಸನ ಮನಸ್ಸಿನಮೇಲೆ ನಾನಾ ಆಲೋಚನೆಗಳು ಹಾದು ಹೋಗುತ್ತಿದ್ದರೂ ಸೀತಾಲಕ್ಷ್ಮಿಯ ಮನಸ್ಸನ್ನು ಸುಂದರರಾಜನು, ವಾಮನನು ಜಗತ್ತನ್ನು ಸ್ವಲ್ಪವೂ ಬಿಡದೆ ಆಕ್ರಮಿಸಿದಂತೆ ಆಕ್ರಮಿಸಿದ್ದನು. ಗಾಡಿಯಲ್ಲಿ ಕುಳಿತು ಪ್ರಯಾಣ ಹೊರಟಾಗ, ಅವಳಿಗೆ ಹಿಂದಲ ಗಾಡಿ ಪ್ರಯಾಣಗಳೆಲ್ಲ ಜ್ಞಾಪಕಬಂದಿದ್ದುವು. ನರಸಿಂಹನ ಹಳ್ಳಿಗೆ ಜಲಜಾಕ್ಷಿಯ ಬಾಣಂತನಕ್ಕಾಗಿ ಹೋದುದು; ಅದೇ ಹಳ್ಳಿಯಿಂದ ಪೂರ್ಣ ಗರ್ಭಿಣಿಯಾಗಿ ಆಸ್ಪತ್ರೆಗೆ ಹೊರಟುದು; ಆಸ್ಪತ್ರೆಯಿಂದ ಮಗುವನ್ನು—ಅವಮಾನ ಆನಂದ ಎರಡನ್ನೂ ಏಕಕಾಲದಲ್ಲಿ ಕಳೆದುಕೊಳ್ಳುವಂತೆ ಕಳೆದುಕೊಂಡು—ಹೇಗೋ ಬಂದು ಮತ್ತೆ ಮಲ್ಲಿಗೆ ಹಳ್ಳಿಯನ್ನು ಸೇರಿದುದು.—

ಸೀತಾಲಕ್ಷ್ಮಿಯ ಮನಸ್ಸು ಅವನ್ನೆಲ್ಲ ಮರೆತು ತನ್ನ ಅಂದಿನ ಪ್ರಯಾಣದ ಕಡೆ ಹೊರಳಿತು. ತನಗೆ ಅತ್ಯಂತ ಪ್ರಿಯನಾದ, ತನ್ನ ಪ್ರಾಣದ ಪ್ರಾಣವೂ

ಉಸಿರಿನ ಉಸಿರೂ ಕಣ್ಣಿನ ಬೆಳಕೂ ಆದ, ಗಂಡನ ಮನೆಗೆ ಹೋಗುವ ಈ ಮೊದಲಿನ ಪ್ರಯಾಣವನ್ನು, ಆಕೆ ಎಷ್ಟು ಆಸೆಯಿಂದ ಮುನ್ನೋಡಿದ್ದಳು. ಈ ಪ್ರಯಾಣವನ್ನು ಅವಳು ಸುಂದರರಾಜನ ಜತೆಯಲ್ಲಿ ಗಾಡಿಯಲ್ಲಿಯೇ ಹೋಗುವುದಾಗಿ ನಿಶ್ಚಯಿಸಿದ್ದಳು. ಅಲಂಕೃತವಾದ ಸೊಗಸಾದ ಗಾಡಿಯಲ್ಲಿ, ಕುದುರೆಗಳ ವೇಗದಲ್ಲಿ ಹೋಗುವ ಕತ್ತಿನ ಗಂಟೆಯ ಬಿಳಿಯ ಎತ್ತುಗಳು. ಪ್ರತಿಯೊಬ್ಬರಿಂದಲೂ ಬೀಳ್ಕೊಳ್ಳುವ ಸಮಾರಂಭ, ತುಂಬ ಆಪ್ತರಾದ ಗೆಳತಿಯರು ಕಿವಿಯಲ್ಲಿ ಹೇಳುವ ಹಾಸ್ಯದ ಕೊನೆಯ ಬೀಳ್ಕೊಳ್ಳುವ ಮಾತುಗಳು, ಸುಂದರರಾಜನಿಗೆ ಅವನ ಸ್ನೇಹಿತರು ಹೇಳುವ ಅರ್ಥಗರ್ಭಿತ ಧ್ವನಿಸೂಚಕ ಹಾಸ್ಯ, ಅದನ್ನು ಕೇಳಿ ತಾನು ನಾಚಿಕೆಯಿಂದ ತಲೆ ತಗ್ಗಿಸುವುದು, ಊರ ಮುಂದಲ ಆಂಜನೇಯ ದೇವಾಲಯದಲ್ಲಿ ಇಬ್ಬರೂ ಗಾಡಿಯಿಂದಿಳಿದು ದೇವರಿಗೆ ನಮಸ್ಕರಿಸಿ ತೆಂಗಿನಕಾಯನ್ನು ಒಡೆದಾಗ ಅದು ತೊಟ್ಟಿಲು ಕಾಯಾಗಿ ಒಡೆಯುವುದನ್ನು ಕಂಡು ಇಬ್ಬರ ಮುಖದಲ್ಲಿಯೂ ನಾಚಿಕೆ. ಸುಂದರರಾಜನು ದೇವರಿಗೆ ಏನನ್ನು ಪ್ರಾರ್ಥಿಸಿಕೊಂಡೆ ಎಂದು ಕೇಳಿದಾಗ ತಾನು ನಗುತ್ತಾ ನೀವೇನು ಪ್ರಾರ್ಥಿಸಿಕೊಂಡಿರಿ ಎಂದು ಕೇಳಿ ಇಬ್ಬರೂ ಗಾಡಿ ಏರಿದಮೇಲೆ, ಸುಂದರರಾಜನ ಸ್ನೇಹಿತರೊಬ್ಬರು ವ್ಯಂಗ್ಯವಾಗಿ "ಇಬ್ಬರೇ ಇದ್ದೀರಪ್ಪ ಕಾಡುದಾರಿ ಜೋಪಾನ" ಎಂದು ನಕ್ಕುದು, ಸುಂದರರಾಜನು ಏನೂ ತಿಳಿಯದವನಂತೆ ಗಾಡಿ ತಿಮ್ಮನೂ ಇದ್ದಾನೆಲ್ಲ ಎನ್ನುವುದು. ಸ್ನೇಹಿತನು "ಅಯ್ಯೋ ಮಂಕೆ ನಾನು ಹೇಳಿದ್ದೂ ಅದೇ ಕಣೊ. ನೀನು ಗಾಡಿ ತಿಮ್ಮ ಇಬ್ಬರೇ ಕಾಡುದಾರಿ ಜೋಪಾನ" ಎಂದುದು. ಎಲ್ಲರೂ ನಕ್ಕು ಇವರನ್ನು ಬೀಳ್ಕೊಟ್ಟುದು. ದಾರಿಯಲ್ಲಿ ಸುಂದರರಾಜ ತಾನೇ ನಾಲ್ಕಾರು ಸಲ ಎತ್ತುಗಳನ್ನು ನಾಗಾಲೋಟ ಓಡಿಸಿದನು. ಪ್ರಯಾಣ ಹದಿನೈದು ಮೈಲಿಯಾದರೂ ಒಂದು ಕ್ಷಣದಲ್ಲಿಯೋ ಎಂಬಂತೆ ಕಳೆದುಹೋಯಿತು. ಸೀತಾಲಕ್ಷ್ಮಿಗೆ ರಂಭಾಪುರಿ—ಅದು ಕುಗ್ರಾಮವಾದರೂ—ಇಂದ್ರನ ಅಮರಾವತಿಯಂತೆ ತೋರಿತು. ತಾನೂ ಸುಂದರರಾಜನೂ ಗಂಧರ್ವರಾಗಿ ಆ ಕುಗ್ರಾಮ ರಂಭಾಪುರಿ ನಂದನ ವನವಾಗಿ ವಿಹಾರಸ್ಥಳವಾಗಿ ತೋರಿತು. ತಮ್ಮ ಮಾವಂದಿರ ಮನೆಯ ಬಾಗಿಲಿನಲ್ಲಿ ಓಲಗ ಊದಿಸಿ, ಆರತಿ ಎತ್ತಿ ಗೃಹಲಕ್ಷ್ಮಿ ಎಂದು ಒಳಕ್ಕೆ ಕರೆದುಕೊಂಡರು. ಹೊಸದಾಗಿ ಬಂದ ಗಂಡ ಹೆಂಡಿರನ್ನು

ನೋಡಲು ಊರಿನ ಸ್ತ್ರೀ ಪುರುಷರೆಲ್ಲ ನೆರೆದಿದ್ದರು. ಯುವತಿಯರಿಗೆಲ್ಲ ಸೀತಾಲಕ್ಷ್ಮಿಯನ್ನು ನೋಡಿದ ಕೂಡಲೇ "ಈಕೆ ಸೌಂದರ್ಯದ ರಾಣಿ ನಮ್ಮಲ್ಲಿ ಯಾರೂ ಇವಳಿಗೆ ಸಮಾನರಿಲ್ಲ ಎಂಬ ಭಾವನೆ, ಅಸೂಯೆ ಉಂಟಾಗಿ ಮುಖದಲ್ಲಿ ತೋರಿತು. ಅಲ್ಲಿಯವರಿಗೆ ತಮ್ಮ ರೂಪು ಬೆಡಗುಗಳ ಹೆಮ್ಮೆಯಿಂದ ಉಳಿದವರನ್ನು ತಿರಸ್ಕಾರದಿಂದ ಕಾಣುತ್ತಿದ್ದವರನ್ನು, ಆ ತಿರಸ್ಕೃತ ಮಹಿಳೆಯರು. "ಇನ್ನು ನಿಮ್ಮ ಆಳ್ವಿಕೆ ಮುಗಿಯಿತು. ಇದುವರೆಗೆ ನೀವು ರಾಣಿಯರಾಗಿದ್ದಿರಿ. ಇನ್ನುಮೇಲೆ ಚಕ್ರವರ್ತಿನಿ ಬಂದಳು. ಎರಡು ದಿವಸದ ವೈಭವಕ್ಕೆ ನಮ್ಮನ್ನು ಎಷ್ಟು ತಿರಸ್ಕರಿಸಿದಿರಿ? ಯಾವುದು ಶಾಶ್ವತ ಎಂಬಂತೆ ನೋಡಿದರು. ವಯಸ್ಕರಾದ ಸುಮಂಗಲಿಯರು ದೃಷ್ಟಿಯಾಗುತ್ತದೆಯೋ ಎಂಬಂತೆ ಸೀತಾಲಕ್ಷ್ಮಿಯ ಕೆನ್ನೆಗೆ ಒಂದು ದೊಡ್ಡ ಸಾದಿನ ಬಟ್ಟನ್ನೇ ಇಟ್ಟರು. ಅನಂತರ ಆಕೆಗೆ ಆರತಿಯಾಯಿತು. ಇನ್ನು ಗಂಡನ ಮನೆಯಲ್ಲಿ ಆ ಮೊದಲಿನ ರಾತ್ರಿ............?"

ಹೀಗೆ ಯೋಚಿಸುತ್ತಾ ಯೋಚಿಸುತ್ತ ಸೀತಾಲಕ್ಷ್ಮಿಯ ಮನಸ್ಸು ದುಗುಡ ನಿರುತ್ಸಾಹಗಳಲ್ಲಿ ಮುಳುಗಿ ಅನಂತರ ಇದ್ದಕ್ಕಿದ್ದಂತೆ ಗೆಲುವಾಯಿತು. ಆಕೆ ನೀರಿನಿಂದ ಮೇಲೆದ್ದು, ಉತ್ಸಾಹದಿಂದಲೇ ತನ್ನ ಪೆಟ್ಟಿಗೆಯನ್ನು ತೆಗೆದು ಅದರಲ್ಲಿದ್ದ ತನ್ನ ಎರಡು ಮೂರು ಒಳ್ಳೆಯ ಸೀರೆಗಳನ್ನು ಹೊರಕ್ಕೆ ತೆಗೆದು ಅವುಗಳಲ್ಲಿ ತಾನು ಉಡಬೇಕಾದುದನ್ನು ಆರಿಸುತ್ತಿದ್ದಳು. ಅವಳ ಈ ಆರಿಸುವಿಕೆಯನ್ನು ನೋಡಿ, ಶ್ರೀನಿವಾಸನಿಗೆ ಸಹ ಸ್ವಲ್ಪ ಆಶ್ಚರ್ಯವಾಯಿತು. ಆಶ್ಚರ್ಯದ ಜತೆಯಲ್ಲಿ "ಅಯ್ಯೋ ಇವಳು ಯಾರಿಗಾಗಿ ಇಷ್ಟು ಅಲಂಕಾರ ಮಾಡಿಕೊಳ್ಳುತ್ತಿದ್ದಾಳೆ. ಅಲ್ಲಿ ಇವಳ ಅಲಂಕಾರವನ್ನು ನೋಡುವವರು ಯಾರಿದ್ದಾರೆ? ಮೊದಲು ಇವಳನ್ನು ಮನೆಗೆ ಸೇರಿಸುತ್ತಾರೋ ಇಲ್ಲವೋ ನನಗೆ ಅನುಮಾನವಾಗಿದೆ" ಎಂದು ವಿಷಾದವೂ ಉಂಟಾಯಿತು. ಆದರೆ, ಸೀತಾಲಕ್ಷ್ಮಿ ಅದೊಂದರ ಅರಿವೂ ಇಲ್ಲದೆ, ಮದುವೆಯಾದಂದಿನಿಂದ ಮುಟ್ಟದೆ ಇಟ್ಟಿದ್ದ ನವಿಲಿನ ನೀಲಿಬಣ್ಣದ ಸೀರೆಯನ್ನು ಈಚೆಗೆ ತೆಗೆದುಕೊಂಡಳು. ಅದು ಅವಳ ಗಂಡನಿಗೆ ಬಹಳ ಇಷ್ಟವಾಗಿದ್ದ ಸೀರೆ. ಮದುವೆಯಾದನಂತರ ಮೊದಲು ಸಲವಾಗಿ ಗಂಡನ ಜತೆಯಲ್ಲಿ ತೋಟಕ್ಕೆ ಹೋಗಿ ಜಗತ್ತಿಗೆಲ್ಲ ನಾವಿಬ್ಬರೇ ಎಂದು ಪ್ರೇಮಸಾಮ್ರಾಜ್ಯದಲ್ಲಿ ಓಲಾಡಿ, ಪಿಟೀಲಿನ ನಾನಾ ರಾಗ

ಗಳೊಂದಿಗೆ ತಮ್ಮ ಹೃದಯ ತಂತಿಗಳನ್ನೂ ಮೇಳಮಾಡಿಸಿದ ದಿನ, ಆಸೆಯಿಂದ ಗಂಡ ಆ ಸೀರೆ ಉಟ್ಟುಕೊಳ್ಳೆಂದು ಹೇಳಿದುದರಿಂದ ಉಟ್ಟಿದ್ದ ಸೀರೆ ಅದು. ಆ ಸೀರೆಯಿಂದ ಅವಳಿಗೆ ಆದ ಆನಂದಕ್ಕಿಂತ ಅವಳ ಗಂಡನಿಗೇ ಹೆಚ್ಚು ಆಮೋದವುಂಟಾಗಿತ್ತು. ಸುಂದರರಾಜ, ತಾನೇ ಆ ಸೀರೆಯನ್ನು ಉಟ್ಟುಕೊಂಡಿದ್ದರೆ ಹೇಗೋ ಅದಕ್ಕಿಂತ ಹೆಚ್ಚಾಗಿ ಹಿಗ್ಗುತ್ತಿದ್ದನು. ಅವನ ಸಂಭ್ರಮವನ್ನು ನೋಡಿ ಸೀತಾಲಕ್ಷ್ಮಿಗೆ ಎಲ್ಲೂ ಇಲ್ಲದ ಸಡಗರವುಂಟಾಗಿತ್ತು. ಅವಳ ಅಂದವಾದ ಮೈಗೆ ಮೋಹಕವಾಗಿ ಸುತ್ತಿಕೊಂಡಿದ್ದ ಆ ನವಿಲು ನೀಲಿಯ ಸೀರೆಯನ್ನು ನೋಡಿ ಸುಂದರರಾಜ "ಇಂತಹ ಒಳ್ಳೆಯ ಸೀರೆಯನ್ನು ಉಡುವ ಭಾಗ್ಯ ನಮಗೆ ಇಲ್ಲವಲ್ಲ? ಹೆಂಗಸಾಗಿ ಹುಟ್ಟುವುದೇ ಒಂದು ಪುಣ್ಯ. ಭಗವಂತ ಮುಂದಲ ಜನ್ಮದಲ್ಲಾದರೂ ನಾನು ಹೆಣ್ಣಾಗಿ ಹುಟ್ಟಿ ಇಂತಹ ನಯವಾದ ಹೊಳೆಯುವ ಜರಿ ಉಡುವಂತೆ ಅನುಗ್ರಹಿಸು" ಎಂದು ಪ್ರಾರ್ಥಿಸಿದ್ದನು. ಸೀತಾಲಕ್ಷ್ಮಿ ನಗುತ್ತ "ನೀವೂ ಉಟ್ಟುಕೊಳ್ಳಿ ಯಾರು ಬೇಡವೆನ್ನುತ್ತಾರೆ? ಎಂದಿದ್ದಳು ಸುಂದರರಾಜನು "ಹೌದು, ಆದರೆ ಹೆಂಗಸಾಗಿ ಉಡಬೇಕು, ಗಂಡಸಾಗಿ ಅಲ್ಲ" ಎಂದನು. ಇಬ್ಬರೂ ಮನಬಿಚ್ಚಿ ನಕ್ಕಿದ್ದರು.

ಪೆಟ್ಟಿಗೆಯನ್ನು ಬಿಚ್ಚಿ ಆ ಸೀರೆಯನ್ನು ನೋಡಿದಾಗಲೆಲ್ಲ ಆ ಎಲ್ಲ ಸಂಗತಿಗಳೂ ಫರದೆಯ ಮೇಲಿನ ದೃಶ್ಯದಂತೆ ಪುನರಾವರ್ತಿತವಾಗಿ ಸೀತಾಲಕ್ಷ್ಮಿಯ ಕಣ್ಣುಗಳು ನೀರಿನಿಂದ ತುಂಬುತ್ತಿದ್ದವು. ಈ ಸೀರೆ ಉಡುವ ಯೋಗ ನನಗೆ ಮತ್ತೆ ಇಲ್ಲ, ಎಂದುಕೊಂಡು ಆಕೆ ಸೀರೆಯನ್ನು ಹಿಂದಕ್ಕೆ ಇಡುತ್ತಿದ್ದಳು. ಈಚೆಗೆ ಅಣ್ಣನ ಮನೆಗೆ ಬಂದಮೇಲಂತೂ ಅವಳ ವಸ್ತ್ರಗಳು ಸ್ವಲ್ಪ ಮಲಿನವಾಗಿಯೇ ಇದ್ದವು. ಆದರಿಂದ ಅವಳಿಗಾಗಲಿ ರಾಮಸ್ವಾಮಿ ಶ್ರೀನಿವಾಸರಿಗಾಗಲಿ ಯಾವ ಬೇಸರಿಕೆಯೂ ಉಂಟಾಗಿರಲಿಲ್ಲ.

ಶ್ರೀನಿವಾಸ ಕೆರೆಯ ಏರಿಯ ಹೊಂಗೆಯ ಮರದ ನೆರಳಿನಲ್ಲಿ ಹಿಂದಕ್ಕೆ ಒರಗಿಕೊಂಡು ಬಿದ್ದಿದ್ದನು. ಅಂತರಿಕ್ಷದಲ್ಲಿ, ಒಂದಾದರೂ ಮೋಡಗಳಿಲ್ಲದೆ ಸ್ವಚ್ಛವಾಗಿತ್ತು. ಎಲ್ಲಿಯೋ ದೂರದಲ್ಲಿ ಒಂದು ಹಕ್ಕಿ ಇಂಪನೂಪವಾಗಿ ಕೂಗುತ್ತಿತ್ತು. ಆಗತಾನೆ ಹೊಡೆಗೆ ಬಂದಿದ್ದ ಹೊಲದ ಮೇಲೆ ಬೀಸುತ್ತಿದ್ದ ಗಾಳಿ ಹಚ್ಚ ಹಸುರಿನ ಸುಗಂಧದೊಡನೆ ಬೀಸುತ್ತಿದ್ದಿತು. ಸುತ್ತಲ ಬಯಲಿ

ನಲ್ಲಿ ಗೇಣುದ್ದದ ಹಸಿರು ಹುಲ್ಲು ಬೆಳೆದು ಗಾಳಿಯಲ್ಲಿ ಹುಲ್ಲು ಬಾಗಿದಾಗ, ಪಚ್ಚೆಯ ಜಮಖಾನವನ್ನು ಹಾಸಿದಂತೆ ಬಯಲು ಕಾಣುತ್ತಿತ್ತು. ಶ್ರೀನಿವಾಸನು ಆ ಹಸುರು ರೇಸಿಮೆಯ ಮೇಲೆ ಅದರ ಸ್ವಚ್ಛವಾದ ಸುವಾಸನೆಯನ್ನು ಆಘ್ರಾಣಿಸುತ್ತಾ ಹುಲ್ಲಿನ ಬೊಡ್ಡೆಯ ಸಿಹಿಯನ್ನು ಚೀಪುತ್ತಾ, ಹೊರಳಾಡುತ್ತಿದ್ದನು. ಆಗತಾನೆ ಮನೆಯಿಂದ ಹೊರಕ್ಕೆ ಬಂದಿದ್ದ ಒಂದೆರಡು ಹಸುಗಳು ದೂರದಲ್ಲಿ ಬಯಲಿನ ಹುಲ್ಲನ್ನು ಆನಂದದಿಂದ ಮೇಯುತ್ತಿದ್ದುವು. ಅದರ ಜತೆಯಲ್ಲಿದ್ದ ಕರುವಿನ ಕತ್ತಿನ ಗಂಟೆಯ ಸದ್ದು ಚಿರ ಪರಿಚಿತರ ಆಹ್ವಾನದಂತೆ ಸುತ್ತಲಿನವರನ್ನು ಆಕರ್ಶಿಸುತ್ತಿದ್ದಿತು. ಕೆರೆಯ ನೀರಿನಲ್ಲಿದ್ದ ಮೀನುಗಳು ಪದೇಪದೆ ಮೇಲಕ್ಕೆ ಪಳಕ್ಕನೆ ಹಾರಿದಾಗ ಅವುಗಳ ಕೆಳಹೊಟ್ಟೆಯ ಬೆಳ್ಳಿಗಳು ಮಿಂಚಿನ ಕುಡಿಗಳಂತೆ ಪ್ರಕಾಶಿಸುತ್ತಿದ್ದವು. ಒಟ್ಟಿನಲ್ಲಿ ಪ್ರಕೃತಿ ಆನಂದದಿಂದ ಇತ್ತು.

ಪ್ರಕೃತಿ ತನ್ನ ಆನಂದದ ಈ ಛಾಯೆಯನ್ನು ಸೀತಾಲಕ್ಷ್ಮಿಯಮೇಲೆ ಬೀರದೆ ಇರಲಿಲ್ಲ. ಆ ಗಳಿಗೆಯಲ್ಲಿ ಸೀತಾಲಕ್ಷ್ಮಿ ತನ್ನ ದುಃಖವನ್ನು ಮರೆತಳು. ಅವಳ ಕಣ್ಣೀರು, ಮಂಜಿನ ಹನಿ ಸೂರ್ಯರಶ್ಮಿಗೆ ಕರಗುವಂತೆ, ಜಗತ್ತಿನ ಆನಂದದ ಶಾಖದಲ್ಲಿ ಆರಿಹೋಯಿತು. ಅವಳು ಪುಳಕಿತಳಾಗಿ ತನ್ನನ್ನೇ ತಾನು ಮರೆತು ಸಂಗೀತದ ಉಪಾಧ್ಯಾಯಿನಿ ಕಮಲಮ್ಮ ಹೇಳಿಕೊಟ್ಟಿದ್ದ ಈ ಹಾಡನ್ನು ಹಾಡಿಕೊಂಡಳು—

ಪಣ ಭರಿ ನಮತೀ ತರುಣೀ ಕರುಣೀ ವರುಣೀ ಚರಣ ಸಂಚಾರಿರೀ *
ಚಾಲಯಿ ಚಮಕತ ಝುಮಕತ ನೇವುರ ಕೇಯುರ ಕಟಕ ವಿಶಾಲರೆ

ಹಿಂದೆ ಆಕೆ ಆ ಹಾಡನ್ನು ಸುಂದರರಾಜನ ಎದುರಿಗೆ ಹಾಡಿದಾಗ, ಎಷ್ಟು ಸಲ ಹಾಡಿದರೂ ಆತ ತೃಪ್ತನಾಗದೆ ಅದರ ಒಂದೊಂದು ಮಾತನ್ನೂ ತೆಗೆದುಕೊಂಡು ಅವಳಿಗೆ ಹೋಲಿಸಿ ಹಾಸ್ಯಮಾಡಿದ್ದನು. ಸುಂದರರಾಜ ಹಾಗೆ ಸರಸವಾಡುತ್ತಿದ್ದಾಗ, ಸೀತಾಲಕ್ಷ್ಮಿ ತನ್ನ ಮಧುರವಾದ ದೇಹವನ್ನು ನೋಡಿ ನೋಡಿ ತಾನೇ ಹಿಗ್ಗಿದ್ದಳು. ಈಗ ಇದ್ದಕ್ಕಿದ್ದಂತೆ ಅವಳ ಮನಸ್ಸು,

* ತರುಣಿಯರು ತಮ್ಮ ಮೊಲೆಗಳ ಭಾರದಿಂದ ಬಾಗಿದವರಾಗಿ ಮತ್ತಗಜಗಳಂತೆ ಸಂಚರಿಸುವರು. ಅವರ ನೇವುರಗಳು ಝುಣಝುಣಿಸುತ್ತವೆ. ವಿಶಾಲವಾದ ಕೇಯೂರ ಕಟಕ ಆಭರಣಗಳು ಹೊಳೆಹೊಳೆಯುತ್ತವೆ.

ಮದುವೆಯಾದನಂತರದ ನಾಲ್ಕಾರು ದಿವಸಗಳ ಆ ಸ್ವಪ್ನ ಸಾಮ್ರಾಜ್ಯವನ್ನೂ ಮೀರಿಸಿದ, ವಾಸ್ತವ ಸುಖದ ಕಾಲದ ಮನೋಧರ್ಮಕ್ಕೆ ಅನುಗುಣ ವಾಯಿತು. ಅವಳು ತಂಗಾಳಿಗೆ ಪೈರು ನಲಿಯುವಂತೆ ಬಾಗುತ್ತ ಬಳಕುತ್ತ ಆ ಮನೋಹರವಾದ ಸೀರೆಯನ್ನೇ ತೆಗೆದುಕೊಂಡು ಉಟ್ಟುಕೊಂಡಳು. ಅವಳ ಬಳಿ ಕುಂಕುಮದ ಭರಣಿ ಇದ್ದಿತೋ ಇಲ್ಲವೋ ಶ್ರೀನಿವಾಸನಿಗೆ ಗೊತ್ತಿರಲಿಲ್ಲ. ಆದುದರಿಂದ ಅವನು ತನ್ನ ಸಾಮದ ಪೆಟ್ಟಿಗೆಯನ್ನು ಅಲ್ಲಿಯೇ ಇಟ್ಟು, ಬೇಕಾದರೆ ಅದರಲ್ಲಿರುವ ಕೆಂಪು ಶ್ರೀಚೂರ್ಣ, ಅವಳು ಹಣೆಗೆ ಇಟ್ಟುಕೊಳ್ಳಲಿ ಎಂದು ಸುಮ್ಮನಾಗಿದ್ದನು.

ಸೀರೆಯುಟ್ಟುಕೊಂಡನಂತರ ಸೀತಾಲಕ್ಷ್ಮಿಯ ದೃಷ್ಟಿ ತನ್ನ ಪೆಟ್ಟಿಗೆ ಯಲ್ಲಿದ್ದ ಕುಂಕುಮದ ಭರಣಿಯ ಕಡೆ ಹೋಯಿತು. ಅದೂ ಅವಳ ಪ್ರೇಮ ಜೀವನಕ್ಕೆ ಸಂಬಂಧಿಸಿದ ವಸ್ತುವೆ. ಅತ್ಯಂತ ಅಲ್ಪ ವಸ್ತುಗಳೂ ಸಹ ಕೆಲವು ಸಂಪರ್ಕ ಸಂಬಂಧಗಳಿಂದ ಎಷ್ಟು ಪವಿತ್ರವೂ ಬೆಲೆಯುಳ್ಳವೂ ಪ್ರಿಯವೂ ಆಗುತ್ತವೆಂಬುದಕ್ಕೆ ಆ ಕುಂಕುಮ ಭರಣಿಯೇ ಸೀತಾಲಕ್ಷ್ಮಿಗೆ ದೊಡ್ಡ ಉದಾಹರಣೆಯಾಗಿ ತೋರಿತು. ಅದು ಸಾಧಾರಣವಾದ ಮರದ ಮೂರು ನಾಲ್ಕು ಆಣೆಗಳ ಒಂದು ಭರಣಿ. ಅದು ಸೀತಾಲಕ್ಷ್ಮಿಯ ಮನೆಯಲ್ಲಿ ಯಾವಾಗಿನಿಂದ ಇದ್ದಿತೋ ಆಕೆಗೆ ತಿಳಿಯದು. ಅವಳ ತಾಯಿ ಅಜ್ಜಿ ಇವರ ಕಾಲದಿಂದ ಅದು ಇದ್ದಿರಬೇಕು. ಹಳೆಯ ಕಾಲದಲ್ಲಿ ಮಾಡಿದ್ದು. ಮನೆಯಲ್ಲಿ ತಾಯಿಯಿಂದ ಮಗಳಿಗೆ, ಮಗಳಿಂದ ಅವಳ ಮಗಳಿಗೆ, ಬರುತ್ತಿದ್ದ ಸಣ್ಣ ಆಸ್ತಿ ಅದು. ಅದಕ್ಕೆ ಬೆಲೆಗಿಂತ ಮಹಿಮೆ ಹೆಚ್ಚು. ಸೀತಾಲಕ್ಷ್ಮಿಯ ಮನೆ ಯವರು ಊಟಕ್ಕಾಗಲಿ ಆರತಿ ಅಕ್ಷತೆಗಳಿಗಾಗಲಿ ಯಾರನ್ನಾದರೂ ಕರೆಯಲು ಹೋಗುವಾಗ, ಆ ಕುಂಕುಮದ ಭರಣಿಯನ್ನು ಹಿಡಿದುಕೊಂಡು ಹೋಗು ತ್ತಿದ್ದರು. ಸೀತಾಲಕ್ಷ್ಮಿಗೆ ಮದುವೆ ಇನ್ನೂ ಗೊತ್ತಾಗುವುದಕ್ಕೆ ನಾಲ್ಕಾರು ತಿಂಗಳ ಹಿಂದೆ, ಒಂದು ದಿನ ಅವರ ಮನೆಯಲ್ಲಿ ಯಾವುದೋ ಆರತಕ್ಷತೆ ಬಂತು. ಸುಂದರರಾಜ ಅಂದು ರಂಭಾಪುರಿಗೆ ಬಂದು ತನ್ನ ಸೋದರ ಮಾವನ ಮನೆಯಲ್ಲಿದ್ದನು. ಸೀತಾಲಕ್ಷ್ಮಿ ಕುಂಕುಮದ ಭರಣಿ ಕೈಯಲ್ಲಿ ಹಿಡಿದುಕೊಂಡು ಆ ಮನೆಗೆ ಬಂದಳು. ದೂರದಿಂದ ನೋಡುವಾಗಲೇ ಬಾಗಿಲಿನಲ್ಲಿ ಸುಂದರರಾಜನೂ ಅವನ ಮಾವಂದಿರೂ ಇನ್ನೂ ನಾಲ್ಕಾರು

ಗಂಡಸರೂ ಕುಳಿತು ಮಾತನಾಡುತ್ತಿರುವುದು ಆಕೆಗೆ ಕಂಡಿತು. ವೃದ್ಧರಾದ ಸುಂದರರಾಜನ ಸೋದರತ್ತೆ ಸಹ ಅಲ್ಲಿಯೇ ನಿಂತು, ಅವರ ಮಾತುಗಳಲ್ಲಿ ಭಾಗಿಯಾಗಿದ್ದಳು. ಆ ಗುಂಪನ್ನು ದೂರದಿಂದ ನೋಡಿಯೇ ಸೀತಾಲಕ್ಷ್ಮಿಗೆ ಸಂಕೋಚವಾಯಿತು. ಆದರೆ ಅವಳು ಬರುತ್ತಿರುವುದು ಆಗಲೇ ಅವರೆಲ್ಲರ ಕಣ್ಣುಗಳಿಗೂ ಬಿದ್ದಿದ್ದುದರಿಂದ, ಹಿಂದಕ್ಕೆ ಓಡಿಹೋಗಲು ಅವಳಿಗೆ ಸಾಧ್ಯವಾಗಿರಲಿಲ್ಲ.

ಅವಳು ಸಂಕೋಚದಿಂದ ಯಾರ ಮುಖವನ್ನೂ ನೋಡದೆ ತಲೆ ತಗ್ಗಿಸಿಕೊಂಡು ಬಾಗಿಲಿನ ಕಡೆಗೆ ನುಗ್ಗುತ್ತಿದ್ದಳು. ಸುಂದರರಾಜನ ಸೋದರತ್ತೆಯು "ನಿಧಾನವಾಗಿ ನಡೆ. ಎಲ್ಲಿಯಾದರೂ ಬಿದ್ದೀಯೆ. ನಿನ್ನನ್ನ ಇಲ್ಲಿ ಯಾರೂ ಹಿಡಿದುಕೊಂಡು ತಿನ್ನುವುದಿಲ್ಲ" ಎಂದಳು. ಅವರ ಯಜಮಾನರು ನಗುತ್ತಾ "ಹಾಗೆ ಹೇಳುವುದಕ್ಕಾಗುವುದಿಲ್ಲ. ಇಲ್ಲಿರುವ ಸುಂದರರಾಜ ನರಭಕ್ಷಕನೇ ಅಲ್ಲವೇ?" ಎಂದರು. ಸೀತಾಲಕ್ಷ್ಮಿಗೆ ಆ ಮಾತುಗಳೆಲ್ಲ ಕಿವಿಗೆ ಬಿದ್ದರೂ ಕೇಳಿಸದವಳಂತೆಯೇ ಅವಳು ಅಲ್ಲಿ ನಿಲ್ಲದೆ ಒಳಕ್ಕೆ ಓಡಿಬಿಟ್ಟಳು. ಆರತಿಗೆ ಅವಳು ಆಹ್ವಾನಿಸಿ, ಹೊರಡುವುದರಲ್ಲಿದ್ದಾಗ ಸುಂದರರಾಜನ ಅತ್ತೆ "ಹಾಗ್ಯಾಕೆ ಬೀಳೋದನ್ನೂ ಕಾಣದೆ ಓಡತೀಯ? ಹೊಸಿಲು ಎತ್ತರವಾಗಿದೆ. ನೋಡಿಕೊಂಡು ಕಾಲಿಡು. ಇಷ್ಟು ಗಾಬರಿಯಾಕೆ? ಅಲ್ಲಿ ಕುಳಿತಿರೋನು ಸುಂದರರಾಜತಾನೇ, ಈಗಿನ ಕಾಲದ ಹುಡುಗಿಯರಿಗೆ ಗಂಡನನ್ನು ಕಂಡರೆ ನಮ್ಮ ಕಾಲದಂತೆ ಭಯವೆ?" ಎಂದರು. ಸೀತಾಲಕ್ಷ್ಮಿಯು "ಹೋಗಿ ಅಮ್ಮಾವ್ರಿ. ನಿಮಗೆ ಯಾವಾಗಲೂ ಹುಡುಗಾಟವೇ" ಎಂದಳು. ಮುದುಕಿಯು "ಹುಡುಗಾಟ ಯಾಕೆ? ನಿನಗೇನು ಮದುವೆ ವಯಸ್ಸಾಗಿಲ್ಲವೆ? ನಮ್ಮ ಸುಂದರರಾಜ ಏನಾಗಿದ್ದಾನೆ. ರಾಣಿ ಹಾಗೆ ಬಾಳಿಸ್ತಾನೆ. ಅವನ್ನ ಮದುವೆ ಆದರೆ........"

ಸೀತಾಲಕ್ಷ್ಮಿ ಅವರ ಮಾತನ್ನು ಮುಂದಕ್ಕೆ ಕೇಳದೆ ಬಾಗಿಲಿನ ಕಡೆಗೆ ಸರ್ರನೆ ಹೊರಟಳು. ಆ ವೇಳೆಗೆ ಜಗಲಿಯಿಂದ ಇಳಿದು—ಪ್ರಾಯಶಃ ಸೀತಾಲಕ್ಷ್ಮಿ ಒಳಗೆ ಇರುವಳೆಂಬ ಕಾರಣದಿಂದಲೇ ಇರಬಹುದೇನೋ—ಸುಂದರರಾಜನೂ ಮನೆಯ ಒಳಕ್ಕೆ ಹೊರಟಿದ್ದನು. ಗಾಬರಿಯಲ್ಲಿ ಓಡುತ್ತಿರುವ ಸೀತಾಲಕ್ಷ್ಮಿಗೆ ಎದುರಿಗೆ ಸುಂದರರಾಜ ನುಗ್ಗುತ್ತಿರುವುದು ಗೊತ್ತಾಗಲೇ

ಇಲ್ಲ. ತಲೆ ತಗ್ಗಿಸಿಕೊಂಡು ಹೊಸಿಲನ್ನು ದಾಟಿದ ಅವಳು ನೆಟ್ಟಗೆ ಸುಂದರರಾಜನ ಮೇಲೆಯೇ ಬಿದ್ದಳು. ಅವಳ ಕೈಯಲ್ಲಿದ್ದ ಕುಂಕುಮದ ಭರಣಿ ಪೂರ್ಣವಾಗಿ ಸುಂದರರಾಜನ ಬಿಳಿಯ ಅಂಗಿ ಪಂಚೆಯಮೇಲೆ ಚೆಲ್ಲಿ ಅವನಿಗೆ ಹುಲಿವೇಷವಾಯಿತು. ಅದು ಹೇಗೋ ಸುಂದರಾಜ ಭರಣಿ ಕೆಳಕ್ಕೆ ಬೀಳದಂತೆ ಅದನ್ನು ತನ್ನ ಬನೀನಿನಲ್ಲಿ ಹಿಡಿದನು. ಸೀತಾಲಕ್ಷ್ಮಿಗೆ ತುಂಬ ನಾಚಿಕೆಯೂ ಗಾಬರಿಯೂ ಆಯಿತು. ಆದರೂ ಮೆತ್ತಗೆ ಕಣ್ಣೆತ್ತಿ ನೋಡಿದಾಗ, ಸುಂದರರಾಜನ ಓಕಳಿ ಬಣ್ಣದ ವೇಷದಿಂದ ಆಕೆಗೆ ನಗು ವನ್ನು ತಡೆಯಲು ಸಾಧ್ಯವಾಗಲಿಲ್ಲ. ಅವಳು ತನ್ನ ಚಿಗುರು ಬೆರಳಿನಿಂದ ಬಾಯಿಮುಚ್ಚಿಕೊಂಡು ನಕ್ಕೇಬಿಟ್ಟಳು. ತನ್ನ ವೇಷವನ್ನು ನೋಡಿಕೊಂಡು ಸುಂದರರಾಜನಿಗೂ ನಗು ಬಂತು. ಅವನು ತನ್ನ ಅಂಗಿಯ ಮೇಲೆ ಬಿದ್ದಿದ್ದ ಕುಂಕುಮವನ್ನು ಕೊಡವಿಕೊಂಡು ಕುಂಕುಮದ ಭರಣಿಯನ್ನು ಎರಡು ಕೈಯ್ಯಲ್ಲೂ ಹಿಡಿದುಕೊಂಡು, ಮಹಾರಾಣಿಗೆ ಕಾಣಿಕೆಯನ್ನೊಪ್ಪಿಸುವಂತೆ ಸೀತಾಲಕ್ಷ್ಮಿಗೆ ಒಪ್ಪಿಸಿದನು. ಸೀತಾಲಕ್ಷ್ಮಿ ಅದನ್ನು ತೆಗೆದುಕೊಂಡು ಓಡಿಬಿಟ್ಟಳು. ಅದು ನಡೆದ ನಾಲ್ಕು ತಿಂಗಳುಗಳ ನಂತರ ಸುಂದರರಾಜ ನೊಂದಿಗೆ ಆಕೆಯ ವಿವಾಹವಾಯಿತು. ಅಂದಿನಿಂದ ಆ ಕುಂಕುಮ ಭರಣಿಗೆ ಅದರ ಹಿಂದಲ ಮಹಿಮೆಗೆ ಈ ಹೊಸ ಮಹಿಮೆಯೂ ಸೇರಿತು. ಸೀತಾ ಲಕ್ಷ್ಮಿಗಂತೂ ಅದು ಗಂಡನು ತನಗೆ ಕೊಟ್ಟ ಮುತ್ತೈದೆತನದ ಪ್ರತೀಕ ವಾಗಿತ್ತು. ಅಂದಿನಿಂದ ಅವಳು ಅದನ್ನು ಮತ್ತಷ್ಟು ಜಾಗ್ರತೆಯಿಂದ ತನ್ನ ಪೆಟ್ಟಿಗೆಯಲ್ಲಿ ಇಟ್ಟುಕೊಂಡಳು. ಆದರೆ ಈಚೆಗೆ ದೈವ ದುರ್ವಿಪಾಕದಿಂದ ಅವಳ ಬಾಳು ಮಣ್ಣು ಆದುದರಿಂದ ಅವಳು ಆ ಭರಣಿಯನ್ನೂ ನೋಡಲು ಸಹ ಮನಸ್ಸಿಲ್ಲದವಳಾಗಿದ್ದಳು.

ಸೀತಾಲಕ್ಷ್ಮಿ ಆ ಭರಣಿಯಿಂದ ಕುಂಕುಮವನ್ನು ತೆಗೆದುಕೊಂಡು ಹಣೆಗೆ ಇಟ್ಟುಕೊಂಡಳು. ಮಾಸದೆ ಇದ್ದ ಅವಳ ಹೊಸ ಸೀರೆಯ ಮರ್ಮರ ಧ್ವನಿಯಿಂದ, ತೂಕಡಿಸುತ್ತಿದ್ದ ಶ್ರೀನಿವಾಸನಿಗೆ ಎಚ್ಚರವಾಯಿತು. ಅನೇಕ ದಿನಗಳಿಂದ ಒಳ್ಳೆಯ ಸೀರೆಯನ್ನೇ ಉಡದಿದ್ದ ಅವಳ ನಯನಮನೋಹರ ವಾದ ಅಲಂಕಾರವನ್ನು ನೋಡಿ, ಶ್ರೀನಿವಾಸನಿಗೆ ತೃಪ್ತಿಯಾಯಿತು. ಶ್ರೀನಿವಾಸನಿಗೆ, ಆಕೆ ಜಯಿಸಲು ಹೊರಟ ಮನ್ಮಥ ಶಕ್ತಿಯಾಗಿ ತೋರಿ

ದಳು. ಇದ್ದಕ್ಕಿದ್ದಂತೆ ಸೀತಾಲಕ್ಷ್ಮಿಗೆ ಜೀವನದಲ್ಲಿ ಹೀಗೆ ಹೊಸ ಉತ್ಸಾಹ ವುಂಟಾದುದರಿಂದ ಶ್ರೀನಿವಾಸನು ತನ್ನ ಭವಿಷ್ಯದಲ್ಲಿ ಆಕೆಗೆ ನಂಬಿಕೆ ಇರು ವುದನ್ನು ಕಂಡುಕೊಂಡನು. ಅವರಿಬ್ಬರೂ ತಾವು ಮನೆಯಿಂದ ತಂದಿದ್ದ ತಿಂಡಿಯನ್ನು ಸ್ವಲ್ಪ ಸ್ವಲ್ಪ ತಿಂದರು.

ಆಕರ್ಶಕವಾದ ಹಸಿರು ಹುಲ್ಲನ್ನು ತೃಪ್ತಿಯಾಗಿ ಮೆಯಿದು ಎತ್ತುಗಳು ಸುಖವಾಗಿ ಮಲಗಿದ್ದವು. ಅವುಗಳ ಕತ್ತಿನ ಗಂಟೆಯ ಧ್ವನಿ ಕಾಲವೆಂಬ ಕೊಳಕ್ಕೆ ಕಲ್ಲುಗಳನ್ನು ಎಸೆದಂತೆ ಆ ಮಧ್ಯಾಹ್ನದ ಮೌನವನ್ನು ಆಗಿಂದಾಗ ಕಲಕುತ್ತಿದ್ದಿತು. ಮರದ ನೆರಳೂ ಆ ಮೌನವೂ ಬಳಲಿದ ದೇಹ ಮನಸ್ಸು ಗಳಿಗೆ ಆಪ್ಯಾಯಮಾನಗಳಾಗಿದ್ದವು. ಪ್ರಕೃತಿಯೆಲ್ಲ ಶಾಂತವಾಗಿ ಸುಖವಾಗಿ ಪರಸ್ಪರ ಮಿತ್ರತ್ವದಿಂದಲೇ ವಿಶ್ರಾಂತಿಹೊಂದುತ್ತಿದ್ದಿತು. ಸೀತಾಲಕ್ಷ್ಮಿಯೂ ತೂಗಡಿಸುತ್ತಾ ಮರದ ಬುಡದ ಹಾಸಿಗೆಗೆ ಒರಗಿಕೊಂಡು ಬಿದ್ದಿದ್ದಳು. ಅವಳಿಗೂ ಒಂಡೆರಡು ಗಳಿಗೆ ಜೊಂಪು ಹತ್ತಿತು. ಸುಂದರವಾದ ಮಗುವಿನಂತೆ ಮಲಗಿದ್ದ ಆ ಅಕೃತ್ರಿಮ ಹೃದಯದ ಹುಡುಗಿಯನ್ನು ಕಂಡು ಶ್ರೀನಿವಾಸನಿಗೆ "ಅಯ್ಯೊ ಇವಳ ಭವಿಷ್ಯದಲ್ಲಿ ಏನಿದೆಯೊ?" ಎಂಬ ಕೊರತೆಯುಂಟಾಗಿ ಆತನು ನಿಟ್ಟುಸಿರುಬಿಟ್ಟನು. "ಪ್ರಕೃತಿಯಲ್ಲಿ ಎಲ್ಲವೂ ಸುಂದರ. ಮನುಷ್ಯ ನೊಬ್ಬನೇ ವಿಕಾರಿ" ಎಂದುಕೊಂಡನು.

ಮತ್ತಷ್ಟು ಹೊತ್ತು ಸುಧಾರಿಸಿಕೊಂಡು ಶ್ರೀನಿವಾಸ ಗಾಡಿಯನ್ನು ಹೂಡಿ ರಂಭಾಪುರಿಯ ದಾರಿ ಹಿಡಿದನು.

## ೧೬

ರಂಭಾಪುರಿಯಲ್ಲಿ ಗುಂಡಣ್ಣನವರ ಮನೆ ಇದ್ದುದು ಊರಿನ ಮಧ್ಯದಲ್ಲಿ. ಅದು ಅಂತಹ ವಿಶಾಲವಾದ ಮನೆಯೂ ಅಲ್ಲ, ಭದ್ರವಾದ ಸುಂದರವಾದ ಮನೆಯೂ ಆಗಿರಲಿಲ್ಲ. ಹಳೆಯ ಕಾಲದ ಮಣ್ಣಿನ, ಹೆಂಚಿನ ಮನೆ. ಆ ಮನೆಗೆ ಇನ್ನೂರು ವರುಷಗಳಾದರೂ ಆಯಸ್ಸು ಆಗಿರಬಹುದೆಂದು ಗುಂಡಣ್ಣ ನವರೇ ಹೇಳುತ್ತಿದ್ದರು. ಆ ಮನೆಯಲ್ಲಿದ್ದ ಇಲಿ ಬಿಲಗಳಿಗೂ ಹೆಗ್ಗಣದ ದರಿ ಗಳಿಗೂ ಲೆಕ್ಕವೇ ಇರಲಿಲ್ಲ. ಹೆಗ್ಗಣಗಳು ಗೋಡೆಗಳನ್ನೆಲ್ಲ ಕೊರೆದು ಒಳಗಡೆ ಸುರಂಗಮಾಡಿಕೊಂಡು ಹಗಲು ಹೊತ್ತು ಸಹ ಓಡಾಡುತ್ತಿದ್ದವು. ಆ ಮನೆ

ಯಲ್ಲಿ ಮಲಗಿದವರಿಗೆ, ಹೆಗ್ಗಣಗಳ ಆ ಸದ್ದು ದೂರದಲ್ಲಿ ಹಾರುತ್ತಿರುವ ಗುಂಡುಗಳ ಗಂಭೀರ ಪ್ರತಿಧ್ವನಿಗಳಾಗಿ ಕೇಳುತ್ತಿದ್ದವು. ಇನ್ನು ಕೆಲವು ವೇಳೆ ಭೂಕಂಪದಂತೆ ಕೇಳಿಸಿ ಮಲಗಿದ್ದ ಹೊಸಬರು ಹೆದರಿ ಎದ್ದು ಹೊರಕ್ಕೆ ಬಂದು ನಿಂತಿದ್ದು, ಎಷ್ಟು ಹೊತ್ತಾದರೂ ಮನೆ ಬೀಳದಿದ್ದುದನ್ನು ಕಂಡು, ನಿರುತ್ಸಾಹ ದಿಂದ ಮತ್ತೆ ಒಳಗೆ ಹೋಗಿ ಹೆದರುತ್ತಲೇ ಮಲಗಿಕೊಂಡುದುಂಟು. ಮನೆ ಯಲ್ಲಿ ಎಲ್ಲಿಂದ ಎಲ್ಲಿಗೆ ನೋಡಲಿ ಕಂಬಗಳಿಗೂ, ತೊಲೆಗಳಿಗೂ, ಹೊಡೆ ಗಳಿಗೂ ಗುಂಡಣ್ಣನವರು ಊರುಗೋಲು ಕೊಟ್ಟಿದ್ದರು. ನಿತ್ಯ ಊರು ಗೋಲು ಕೊಟ್ಟು ಬೀಳುತ್ತಿದ್ದ ಭಾಗವನ್ನು ನಿಲ್ಲಿಸುವುದೇ ಅವರ ಕೆಲಸವಾಗಿ ಹೋಗಿತ್ತು. ಅವರು ಒಂದೊಂದು ಸಲ "ಈ ಮನೆಗೆ ಊರುಕೋಲು ಕೊಡುವು ದಕ್ಕೆ ನನ್ನ ಪುರುಷಾಯಸ್ಸೆಲ್ಲ ಆಗಿಹೋಯಿತು. ಇದ್ದಬದ್ದ ಗಳುಗಳೆಲ್ಲ ಮುಗಿಯಿತು. ಆದರೂ ಇನ್ನೂ ಪೂರ್ತಿ ಮುಗಿದಿಲ್ಲ. ಇನ್ನೂ ಊರೆ ಕೊಡಬೇಕಾದ ಕಂಬಗಳೂ ತೊಲೆಗಳೂ ಇವೆ" ಎನ್ನುತ್ತಿದ್ದರು.

ಗುಂಡಣ್ಣನವರ ಸಂಸಾರದಲ್ಲಿ ಸಮರಸಕ್ಕಿಂತ ವಿರಸವೇ ಹೆಚ್ಚಾಗಿತ್ತು. ಈ ವಿರಸಕ್ಕೆ ಎಲ್ಲದಕ್ಕಿಂತ ಮುಖ್ಯಕಾರಣ ಬಡತನವೇಯೆ ಗುಂಡಣ್ಣನವರಿಗೆ ಅಂತಹ ದೊಡ್ಡ ಆಸ್ತಿ ಯಾವುದೂ ಇರಲಿಲ್ಲ. ಅವರಿಗೆ ಇದ್ದುದು ಒಂದು ಸಣ್ಣ ತೋಟ, ಎರಡು ತುಂಡು ಹೊಲ. ಹಿಂದಲಕಾಲದಲ್ಲಿ ಹೇಗಿತ್ತೊ? ಅಂತೂ ಗುಂಡಣ್ಣನವರ ಬಾಲ್ಯದಲ್ಲಿಯೇನೋ ಅವರು ಸುಖವಾಗಿಯೇ ಇದ್ದರು. ಆದರೆ ಗುಂಡಣ್ಣನವರಿಗೆ ಮದುವೆಯಾಗುವ ವೇಳೆಗೇ ಪರಿಸ್ಥಿತಿ ಬಹಳ ಬಿಗಡಾಯಿಸಿತು. ಹೊಲದಲ್ಲಿ ಹೇಗೆ ಹೇಗೆ ಮಾಡಿದರೂ ನಾಲ್ಕು ವರುಷ ಐದು ವರುಷಕ್ಕೆ ಮಾತ್ರ, ಒಂದು ಒಳ್ಳೆಯ ಬೆಳೆ ಬರುತ್ತಿತ್ತು. ಉಳಿದ ವರುಷಗಳಲ್ಲಿ ಅರ್ಧ ಬೆಳೆ ಕಾಲು ಬೆಳೆ. ಒಂದು ವರುಷ ಬಿರುಗಾಳಿಯಲ್ಲಿ ತೋಟದ ಅಡಿಕೆ ಮರಗಳೆಲ್ಲ ನೆಲಕ್ಕೆ ಉರುಳಿಹೋದುವು. ನೀರಿಲ್ಲದೆ, ಉಳಿದವು ಗಳಿಗೆ "ಎಟ್ಟಿ" (ನೀರು ಕಡಿಮೆಯಾಗಿ ನೆಲ ಒಣಗುವುದು) ಬಂದಿತು.

ಆ ವೇಳೆಗೆ ಗುಂಡಣ್ಣನವರ ಮೊದಲನೆಯ ಹೆಂಡತಿ ತೀರಿಕೊಂಡರು. ಗುಂಡಣ್ಣನವರಿಗೆ ಮೊದಲನೆ ಹೆಂಡತಿಯಲ್ಲಿ ಮೂರು ಮಕ್ಕಳು ಶಾಮು, ಕೃಷ್ಣ, ರಂಗಸ್ವಾಮಿ ಇದ್ದರು. ಮೊದಲನೆಯವನಾದ ಶಾಮುನಿಗೆ ಆಗಲೇ ಮದುವೆಯಾಗಿತ್ತು. ಶಾಮುನ ಹೆಂಡತಿ ಮನೆಗೆ ಬಂದು ಸಂಸಾರ ಕಾರ್ಯದಲ್ಲಿ

ಅತ್ತೆಗೆ ಸಹಾಯಕಳಾಗಿದ್ದಳು. ಮೊದಲನೆಯ ಹೆಂಡತಿ ಸ್ವರ್ಗಸ್ಥಳಾದ ನಂತರ ಗುಂಡಣ್ಣನವರು ಮತ್ತೆ ವಿವಾಹವಾಗುವುದಿಲ್ಲವೆಂದು ಜನ ಭಾವಿಸಿದ್ದರು. ಅವರ ಮಕ್ಕಳಿಗೂ ಅದೇ ಆಸೆಯಾಗಿತ್ತು. ಸಂಸಾರ ಕಾರ್ಯಗಳಿಗೆ ಮನೆಯಲ್ಲಿ ಸೊಸೆ (ಶಾಮನ ಹೆಂಡತಿ) ಇದ್ದುದರಿಂದ ಗುಂಡಣ್ಣನವರು ಹಾಗೆ ಮಾಡಿದ್ದರೆ ಚೆನ್ನಾಗಿತ್ತು. ಆದರೆ ಅದಾವ ಆಸೆ ಅವರ ಮನಸ್ಸನ್ನು ಹೊಕ್ಕಿತ್ತೊ? ಬಡತನ ಹಾಗೆ ಕಾಡುತ್ತಿದ್ದರೂ ಅವರಿಗೆ ಸಂಸಾರ ಜೀವನದಲ್ಲಿ ಜಿಗುಪ್ಸೆಯಾಗಿದ್ದಂತೆಯೇ ತೋರಲಿಲ್ಲ. ಎರಡನೆಯ ಹೆಂಡತಿ ಕಲ್ಯಾಣಿಯನ್ನು ಅವರು ಮದುವೆಯಾದಾಗ ಅವರ ಮಕ್ಕಳಿಗೂ ನೆಂಟರಿಗೂ ಅಸಮಾಧಾನವೇ ಉಂಟಾಯಿತು. ಸುಂದರರಾಜನೊಬ್ಬನೇ ಆ ವಿವಾಹದ ಫಲವಾಗಿದ್ದನು.

ಗುಂಡಣ್ಣನವರಿಗೆ ಎರಡನೆಯ ವಿವಾಹವಾದುದೇ ಅವರ ಮನೆಯ ಕಟ್ಟು ಸಡಿಲವಾಗಲು ಅವಕಾಶವಾಯಿತು. ಮನೆಯಲ್ಲಿ ಅಲ್ಲಿಯವರೆಗೆ ಹಾಗೂ ಹೀಗೂ ಒಂದು ಬಗೆಯ ಒಮ್ಮುಖತೆ ಇತ್ತು. ಕಲ್ಯಾಣಿ ಮನೆಗೆ ಬಂದಮೇಲೆ ಮನೆಯಲ್ಲಿ ನಾನಾ ಪಕ್ಷಗಳಾದವು. ಗುಂಡಣ್ಣನವರು, ಕಲ್ಯಾಣಿ ಒಂದು ಪಕ್ಷ, ಶಾಮು, ಶಾಮನ ಹೆಂಡತಿ ಒಂದು ಪಕ್ಷ, ಕೃಷ್ಣ, ರಂಗಸ್ವಾಮಿ ಇವರದು ಒಂದು ಪಕ್ಷ. ಸುಂದರರಾಜ ಯಾವ ಪಕ್ಷಕ್ಕೆ ಸೇರಿದರೂ ಪ್ರಯೋಜನವಿಲ್ಲದಷ್ಟು ಚಿಕ್ಕವನಾಗಿದ್ದನು. ಆದರೆ ಗುಂಡಣ್ಣನವರು ಮಾಡಿದುದು ಅವಿವೇಕವೆನ್ನುವುದರಲ್ಲಿ ಎಲ್ಲರದೂ ಒಮ್ಮತವಾಗಿದ್ದುದರಿಂದ ಎಲ್ಲರ ಕ್ರೋಧದ ಬಹು ಭಾಗ ಅವರೆಡೆಗೇ ತಿರುಗಿತ್ತು.

ಈ ಪರಸ್ಪರ ಅಸೂಯೆ ಅಸಮಾಧಾನದಲ್ಲಿ ಮನೆಯಲ್ಲಿ ದುಡಿಯುವವರು ಯಾರೂ ಆಗಲೇ ಇಲ್ಲ. ಒಬ್ಬರಿಗಿಂತ ಒಬ್ಬರು ಹೆಚ್ಚು ವಿವೇಕಿಗಳಲ್ಲವಾದುದರಿಂದ ಪರಸ್ಪರ ಅತೃಪ್ತಿ ಕ್ರೋಧಗಳು ನಿತ್ಯ ಪ್ರಕಟವಾಗುತ್ತಿದ್ದವು. ಗುಂಡಣ್ಣನವರ ಅಕ್ಕ ಒಬ್ಬಳು ವಿಧವೆ ಮನೆಯಲ್ಲಿ ಸೇರಿಕೊಂಡು ಉದ್ದಕ್ಕೂ ಒಬ್ಬರಮೇಲೆ ಒಬ್ಬರನ್ನು ಎತ್ತಿ ಕಟ್ಟುತ್ತಿದ್ದಳು. ಮೊದಲು ಅವಳ ಅಸಮಾಧಾನ ಗುಂಡಣ್ಣನವರ ಮೊದಲನೆಯ ಹೆಂಡತಿಯಮೇಲೆ, ಅನಂತರ ಮಕ್ಕಳ ಮೇಲೆ. ಗುಂಡಣ್ಣನವರ ಮೊದಲನೆಯ ಹೆಂಡತಿ ಸ್ವರ್ಗಸ್ಥಳಾದ ಕೆಲವು ತಿಂಗಳು, ಮನೆಯಲ್ಲಿ ಅವಳ ಸರ್ವಾಧಿಕಾರದಿಂದ ಗುಂಡಣ್ಣನವರಾದಿಯಾಗಿ

ಎಲ್ಲರಿಗೂ ಮನೆ ನರಕವಾಯಿತು. ಗುಂಡಣ್ಣನ ಮನೆಯ ಯಜಮಾನಿಕೆಗೆ ಪೂರ್ತಿ ತನ್ನ ಮೇಲೆ ಅವಲಂಬಿಸಿದುದನ್ನು ಕಂಡು ಅವಳಿಗೆ ಹೊಸ ಕೋರೆಹಲ್ಲು ಮೊಳೆಯಿತು. ಒಂದು ದೃಷ್ಟಿಯಿಂದ ಅವಳ ಸರ್ವಾಧಿಕಾರವನ್ನು ಮುರಿಯುವುದಕ್ಕೇ ಗುಂಡಣ್ಣನವರು ಎರಡನೆಯ ಹೆಂಡತಿಯನ್ನು ಮದುವೆ ಮಾದುದು.

ಗುಂಡಣ್ಣನವರ ಅಕ್ಕನಿಗೆ ಮಡಿ ಮೈಲಿಗೆಗಳ ಆರ್ಭಟ ಅವಾಂತರ ಹೆಚ್ಚಾಗಿತ್ತು. ಅದರಲ್ಲಿ ಅವಳಿಗೆ ವಿವೇಕವಾಗಲಿ, ವೈರಾಗ್ಯವಾಗಲಿ ಇರಲಿಲ್ಲ. ಬಾಳಿನ ಸಮಸ್ತ ಸುಖದಿಂದಲೂ ವಂಚಿತಳಾದ ಆಕೆ ಮತ್ತೇನನ್ನೂ ಮಾಡಲು ತೋಚದೆ, ಈ ಮಡಿ ಮೈಲಿಗೆಗಳ ಪವಾಡವನ್ನು ಸೃಷ್ಟಿಮಾಡಿಕೊಂಡಿದ್ದಳು. ಇವು ಅವಳ ತೃಪ್ತ್ಯರ್ಥವಾಗಿ ಮಾಡಿಕೊಂಡುದಾದರೂ ಅದರಿಂದ ಅನೇಕ ವೇಳೆ ಅವಳಿಗೆ ತಿಳಿಯದಂತೆ ಇತರರಿಗೆ ಬಹಳ ಹಿಂಸೆಯಾಗುತ್ತಿದ್ದಿತು. ಬೇರೆ ಕಾರಣದಿಂದ ಅವಳಿಗೆ ಅಸಮಾಧಾನವಾದಾಗ, ಮಡಿಯ ನೆಪದಿಂದ ಆಕೆ ಊಟವನ್ನು ಬಿಟ್ಟುಬಿಡುತ್ತಿದ್ದಳು ಮಡಿಯ ನೆಪದಿಂದ ಬೇರೆ ಅಡಿಗೆ ಹೂಡಿ ಕೊಂಡು ಧಾಮ್ ಧೂಮ್ ಎಂದು ಘರ್ಜಿಸುತ್ತಾ ಉಳಿದವರನ್ನು ನಾಯಿ ಗಳಿಗಿಂತ ಹೀನವಾಗಿ ಕಂಡು ತಿರಸ್ಕಾರವನ್ನೂ ಅಸಹನೆಯನ್ನೂ ತೋರಿಸು ತ್ತಿದ್ದಳು. ತನ್ನ ಮನಸ್ಸಿನ ಎಲ್ಲ ಅಸಮಾಧಾನವನ್ನೂ ಪ್ರಕಟಿಸಲು ಅವಳು ತನ್ನ ಮಡಿಯನ್ನೇ ಅಸ್ತ್ರವಾಗಿ ಮಾಡಿಕೊಂಡಿದ್ದಳು. ಆಕೆಯನ್ನು ನೋಡಿ ದೊಡನೆಯೇ, ಶುಚಿತ್ವವೆಂಬ ಒಳ್ಳೆಯ ಗುಣ, ಮಡಿ ಎಂಬ ವಿಕೃತರೂಪವನ್ನು ಹೊಂದಿ ಹೇಗೆ ಅಸಹನೆಗೆ ಆಗರವಾಗುದೆಂಬುದು ಕಾಣುತ್ತಿದ್ದಿತು.

ತಮ್ಮ ಅಕ್ಕನವರಲ್ಲಿ ಗುಂಡಣ್ಣನವರಿಗೆ ಈ ಎಲ್ಲ ಕಾರಣಗಳಿಂದ ಅಸ ಮಾಧಾನವಾಗಿದ್ದರೂ, ಇದು ಮೈಯೊಳಗಿನ ಹುಣ್ಣು ಎಂದು ಅವರು ಸುಮ್ಮನೆ ಸಹಿಸಿಕೊಂಡಿದ್ದರು. ಗುಂಡಣ್ಣನವರ ಮನೆ ದೊಡ್ಡ ದೊಡ್ಡಿ ಯಾಗಿತ್ತು. ಶಾಮು, ಕೃಷ್ಣ, ನೆಂಟರು, ರಂಗಸ್ವಾಮಿ ಎಲ್ಲರೂ ತಮ್ಮ ಹೆಂಡಿರೊಂದಿಗೆ ಅಲ್ಲಿಯೇ ಇದ್ದರು. ಶಾಮುನಿಗೆ ಕೃಷ್ಣನಿಗೆ ಎರಡೆರಡು ಹೆಣ್ಣು ಗಂಡು ಮಕ್ಕಳಿದ್ದರು. ರಂಗಸ್ವಾಮಿಗೆ ಇನ್ನೂ ಮಕ್ಕಳಾಗಿರಲಿಲ್ಲ. ಸೀತಾಲಕ್ಷ್ಮಿ ತೆರೆದ ಹುಲಿಯ ಬಾಯಿನಂತಿದ್ದ ಆ ಮನೆಯನ್ನು ಪ್ರವೇಶಿಸಲು ಬಂದಿದ್ದಳು. ತನ್ನ ಅತ್ತೆ ಕಲ್ಯಾಣಿ ಒಳ್ಳೆಯವಳೆಂಬುದು ಅವಳಿಗೆ ತನ್ನ

ಮದುವೆಯ ಕಾಲದಲ್ಲಿ ಉಂಟಾದ ಅನುಭವದಿಂದ ಗೊತ್ತಾಗಿತ್ತು. ಹಾಗೆಯೇ ಗುಂಡಣ್ಣನವರ ಅಕ್ಕನ ಆರ್ಭಟವೂ ಆಕೆಗೆ ತಿಳಿದಿದ್ದಿತು.

ಸಾಧಾರಣವಾಗಿ ಗುಂಡಣ್ಣನವರ ಮನೆಯಲ್ಲಿ ಅವರ ನಾಲ್ಕು ಜನ ಮಕ್ಕಳೂ ಒಟ್ಟಿಗೆ ಒಂದು ದಿನವೂ ಊರಲ್ಲಿ ಇರುತ್ತಿರಲಿಲ್ಲ. ಆದರೆ ಸೀತಾ ಲಕ್ಷ್ಮಿ ಬಂದ ದಿನ ಮಾತ್ರ ಅವರೆಲ್ಲ ಬೀದಿಯ ಬಾಗಿಲು ಜಗಲಿಯ ಮೇಲೆಯೇ ಕುಳಿತು ಏನನ್ನೋ ಚರ್ಚಿಸುತ್ತಿದ್ದರು. ಒಟ್ಟಿನಲ್ಲಿ ಯಾವಾಗಲೂ ಏನನ್ನಾದರೂ ಚರ್ಚಿಸುವುದೇ ಅವರ ಸ್ವಭಾವವಾಗಿತ್ತು. ಹೊರಗಿನವರು ಯಾರೂ ಅವರ ಹತ್ತಿರ ಹೆಚ್ಚಾಗಿ ಮಾತು ಕತೆಗಳಿಗೆ ಸೇರುತ್ತಿರಲಿಲ್ಲ. ಅದಕ್ಕೆ ಮುಖ್ಯ ಕಾರಣ ಅವರಲ್ಲಿ ಯಾರಿಗಾದರೂ ಅಸಮಾಧಾನವಾಗಿದ್ದಿತೆಂಬುದಲ್ಲ. ಗುಂಡಣ್ಣನವರ ಮಕ್ಕಳೇ ಒಬ್ಬರಿಗೊಬ್ಬರು ಕಕ್ಷಿ ಪ್ರತಿಕಕ್ಷಿಗಳಾಗಿ ಯಾವ ಮಾತಿನ ಪರವಾಗಿಯೂ ವಿರೋಧವಾಗಿಯೂ ತಾವೇ ತೀವ್ರಾಸಕ್ತಿಯಿಂದ ದಪ್ಪ ಧ್ವನಿಯಲ್ಲಿ ಚರ್ಚಿಸಿ, ಇತರಾರಿಗೂ ಮಾತನಾಡುವುದಕ್ಕೆ ಅವಕಾಶ ವನ್ನೇ ಕೊಡುತ್ತಿರಲಿಲ್ಲ.

ಸೀತಾಲಕ್ಷ್ಮಿಯೂ ಶ್ರೀನಿವಾಸನೂ ಬಂದ ದಿವಸ ಅವರಲ್ಲಿ ಅದಾವುದೋ ಸ್ವಂತ ಸಂಸಾರಕ್ಕೆ ಸಂಬಂಧಿಸಿದ ಚರ್ಚೆ ಪ್ರಾರಂಭವಾಗಿತ್ತು. ಮಾತಿನ ಕಾವಿನ ಭರದಲ್ಲಿ ತಾವು ಜಗಲಿಯ ಮೇಲೆ ಕುಳಿತು ಮಾತನಾಡುತ್ತಿರುವೆ ವೆಂಬುದೂ, ಸಂಸಾರದ ಈ ಗುಟ್ಟು ಮನಸ್ತಾಪಗಳು ಹೊರಗಿನವರ ಕಿವಿಗೆ ಬೀಳಬಾರದೆಂಬುದೂ ಅವರಿಗೆಲ್ಲ ಮರೆತೇಹೋಗಿತ್ತು. ಗುಂಡಣ್ಣನವರ ಅಕ್ಕನೂ ಬಾಗಿಲಿನ ಒಳಗಡೆಗೆ ನಿಂತಿದ್ದರೂ ಮುಖವನ್ನು ಮಾತ್ರ ಹೊರಕ್ಕೆ ನೀಡಿಕೊಂಡು ಅವರ ಸಂಭಾಷಣೆಯಲ್ಲಿ ಭಾಗಿಯಾಗಿದ್ದಳು. ಮಾತಿನ ಕಾವಿನಲ್ಲಿ ಗಾಡಿ ಹತ್ತಿರ ಹತ್ತಿರ ಬರುತ್ತಿದ್ದರೂ ಅವರ ದೃಷ್ಟಿ ಅದರ ಕಡೆಗೆ ಹೋಗಲೇ ಇಲ್ಲ. ಗಾಡಿಯಲ್ಲಿ ಬರುತ್ತಿದ್ದ ಶ್ರೀನಿವಾಸನಿಗೂ ಸೀತಾ ಲಕ್ಷ್ಮಿಗೂ ಅವರು ಇನ್ನೂ ಹತ್ತು ಮಾರು ಆಚೆ ಇರುವಾಗಲೇ ಇವರ ಗದ್ದಲ ಕೇಳಿಸಿತು. ಸುಂದರರಾಜ ಬಾಗಿಲಿನಲ್ಲಿ ಕುಳಿತಿರಲಿಲ್ಲವೆಂಬುದೂ ಹತ್ತಿರ ಹತ್ತಿರ ಬಂದ ಕೂಡಲೇ ಅವರಿಗೆ ಗೊತ್ತಾಯಿತು. ಶ್ರೀನಿವಾಸ ಬಾಗಿಲಿನಲ್ಲಿ ಗಾಡಿ ನಿಲ್ಲಿಸುವ ವೇಳೆಗೆ ಸರಿಯಾಗಿ ಕೃಷ್ಣನು ಹಿಂದಲಿಂದ ತಾನು ಆಡುತ್ತಿದ್ದ ಮಾತನ್ನು ಮುಂದುವರಿಸಿ " ಸಾಲದ್ದಕ್ಕೆ ಸುಂದರರಾಜನ ಪೀಡೆ

ಒಂದು ಸೇರಿತೆ. ಅವನು ಒಂದು ದಿನ ಊರಲ್ಲಿದ್ದರೆ ನಾಲ್ಕು ದಿನ ಇರುವುದಿಲ್ಲ. ಎಲ್ಲಿ ತಿರುಗುತ್ತಾನೋ ದೇವರಿಗೇ ಗೊತ್ತು. ಅವನಿಗೆ ಆ ಮೂದೇವಿ ಹೆಂಡತಿಯ ಮೋಹಿನಿ ಹಿಡಿದಿದೆ. ಅವನು ಊರು ಬಿಟ್ಟು ಈವತ್ತಿಗೆ ಹತ್ತು ದಿನಗಳಾಯಿತು. ಹೀಗೆ ಒಬ್ಬೊಬ್ಬರೂ ತಲಾತಟ್ಟಿಗೆ ತಿರುಗುತ್ತಿದ್ದರೆ ನಮ್ಮ ಬದುಕು ನೇರವಾಗುವುದೆಂತು ?"

ಕೃಷ್ಣ ಒಳ್ಳೆಯ ಗಟ್ಟಿ ಧ್ವನಿಯಲ್ಲಿ ಮಾತನಾದುತ್ತಿದ್ದುದರಿಂದ ಅಲ್ಲಿಗೆ ಆಗತಾನೇ ಬಂದು ಗಾಡಿಯನ್ನು ನಿಲ್ಲಿಸಿದ ಶ್ರೀನಿವಾಸನಿಗೂ ಒಳಗಿದ್ದ ಸೀತಾ ಲಕ್ಷ್ಮಿಗೂ ಆ ಮಾತುಗಳು ಸ್ಪಷ್ಟವಾಗಿ ಕೇಳಿಸಿದವು. ಗಂಡ ಊರಿನಲ್ಲಿಲ್ಲ ವೆಂದು ತಿಳಿದು ಸೀತಾಲಕ್ಷ್ಮಿಗೆ ಇದ್ದಕ್ಕಿದ್ದಂತೆ ಎದೆಯಲ್ಲಿ ಚೂರಿಯಿಂದ ಇರಿದಂತೆ ವೇದನೆಯಾಯಿತು. ಕೃಷ್ಣನು ಹೇಳಿದ್ದ ಮೋಹಿನಿ ಮೂದೇವಿ ಎರಡು ಮಾತೂ ಅವಳ ಮನಸ್ಸನ್ನು ಸರ್‍ರನೆ ಹಿಡಿಯಿತು. ಅವಳು ತನ್ನ ಆ ಸೊಗಸಾದ ದೇಹವನ್ನೂ ಮನೋಹರವಾದ ಅದ್ಭುತವಾದ ಅಲಂಕಾರ ವನ್ನೂ ನೋಡಿಕೊಂಡಳು. ಗಂಡನಿಗಾಗಿಯೇ ಮಾಡಿಕೊಂಡ ಆ ಅಲಂಕಾರ ಅವನಿಲ್ಲದುದರಿಂದ ವ್ಯರ್ಥವಾಯಿತೆಂಬುದು ಅವಳಿಗೆ ತತ್‌ಕ್ಷಣ ಹೊಳೆಯಿತು. ಗಂಡನಿಲ್ಲದಿರುವಾಗ, ತಿರಸ್ಕೃತಳಾದ ತಾನು ಅಂತಹ ಅಲಂಕಾರದಿಂದ ಬಂದುದರ ಪರಿಣಾಮ ತನಗೆ ವಿರೋಧವಾಗುವುದೆಂದು ಅವಳಿಗೆ ತತ್‌ಕ್ಷಣ ಹೊಳೆಯಿತು. ಶ್ರೀನಿವಾಸನು ಗಾಡಿಯನ್ನು ನಿಲ್ಲಿಸಿ ಎತ್ತುಗಳ ಕೊರಳನ್ನು ಇಳಿಸಿದನು. ಆಗ ಗಾಡಿ ತಮ್ಮ ಮನೆಯ ಬಾಗಿಲಿಗೇ ಬಂದುದೆಂದು ತಿಳಿದ ಆ ಶಾಮ, ಕೃಷ್ಣ, ಗುಂಡಣ್ಣ, ರಂಗಸ್ವಾಮಿಗಳು ಕೂಡಲೇ ಶ್ರೀನಿವಾಸನನ್ನು ಗುರುತಿಸಿದರು. ಮುಂದಲ ನಿಮಿಷದಲ್ಲಿ ಮದುವೆಯಲ್ಲಿ ತಮ್ಮ ಮನೆಯವರೇ ಕೊಟ್ಟಿದ್ದ ನವಿಲು ನೀಲಿಯ ಸೀರೆಯನ್ನುಟ್ಟು ಗಂಧರ್ವಕನ್ನಿಕೆಯಂತೆ ಸೀತಾ ಲಕ್ಷ್ಮಿ ಕೆಳಗಿಳಿದಳು.

ಗಾಡಿಯಿಂದ ದಂತದಂತಿರುವ ಹೆಜ್ಜೆಗಳನ್ನು ನೀಡಿ ಇಳಿದ ಹೂವಿನ ಲತೆಯಂತಿದ್ದ ಆಕೆಯನ್ನು ನೋಡಿದ ಕೂಡಲೇ ಅವಳ ಹಿರಿಯ ಎಲ್ಲ ಮೈದುನರಿಗೂ ಮೊದಲು ಉಂಟಾದುದು ಒಂದು ಅದ್ಭುತ ಆಶ್ಚರ್ಯ. ಆ ಆಶ್ಚರ್ಯದಲ್ಲಿ ಅವರಿಗೆ ಶ್ರೀನಿವಾಸನು ಬಂದುದಾಗಲಿ ಬಂದುದರ ಕಾರಣ ವಾಗಲಿ ಮರೆತೇಹೋಯಿತು. ಗಾಡಿಯಿಂದ ಮೊದಲು ಮುಂದಕ್ಕೆ ಹೊಳೆ

ಯುವ ಮೋಹಕಾಲನ್ನು ನೀಡಿ, ಅದರ ಸಮ್ಮೋಹನಶಕ್ತಿ ಇನ್ನೂ ಮರೆಯಾಗುವುದರೊಳಗೇ ಕೆಳಗೆ ಇಳಿದ ಆ ಅದ್ಭುತ ಸೌಂದರ್ಯವನ್ನ ನೋಡಿ, ಮಿಂಚನ್ನು ಫಳಾರನೆ ನೋಡಿ ಮುಚ್ಚುವ ಕಣ್ಣುಗಳಂತೆ ಅವರು ಅವಾಕ್ಕಾದರು. ಶ್ರೀನಿವಾಸನು ಎಲ್ಲರನ್ನೂ ತಾನೇ ಮೊದಲನೆಯವನಾಗಿ "ಕ್ಷೇಮವೆ?" ಎಂದು ಕೇಳಿದುದು ಅವರ ಕಿವಿಗೆ ಬೀಳಲೇ ಇಲ್ಲ. "ಕೋಮಲಾಂಗದ ಸೊಬಸು, ಕಾಯರೇಖೆಯ ಬೆಡಗು, ಕಣ್ಣಿನರಳಿದ ಬೆಳಕು, ಕೆಳೆಯ ಮೊಳಗು, ಮುಖವಿಲಾಸದ ಮೆರಗು, ಮಧುರ ಕಂಠದ ಮೊಳಗು, •ಮಂದಹಾಸದ ಮಿನುಗು, ಮಾತಿನೊಳ್ಗು"ಗಳ ಮೋಹನವಾಹಿನಿಯು, ತಮ್ಮ ತಮ್ಮನಾದ ಸುಂದರರಾಜನ ತಿರಸ್ಕೃತ ಪತ್ನಿ ಸೀತಾಲಕ್ಷ್ಮಿ ಎಂಬುದು ಮೊದಲು ಅವರಿಗೆ ಗೊತ್ತಾಗಲೇ ಇಲ್ಲ.

ಆದರೆ ಸೀತಾಲಕ್ಷ್ಮಿಯ ಸೊಬಗುಗಳು ಆ ತನ್ನ ಮೈದುನರ ಕಣ್ಮನಗಳನ್ನು ಸೆರೆಹಿಡಿದು ಕುರುಡುಮಾಡಿದರೂ, ಗುಂಡಣ್ಣನವರ ಅಕ್ಕನಿಗೆ ಅವರು ಬಂದ ಉದ್ದೇಶ ತತ್‌ಕ್ಷಣ ಗೊತ್ತಾಯಿತು. ಆಕೆ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿಕೊಂಡು ಸರ್ರನೆ ಒಳಕ್ಕೆ ಹೋದಳು. ಗುಂಡಣ್ಣನವರು ಹಿತ್ತಲಿನಲ್ಲಿ ಮೆಣಸಿನ ಗಿಡಕ್ಕೆ ಗೊಬ್ಬರ ಹಾಕುತ್ತಿದ್ದರು ಅವರ ಅಕ್ಕ ಅವರ ಬಳಿ ಹೋಗಿ "ಶ್ರೀನಿವಾಸ ತಂಗೀನ ಕರೆಕೊಂಡು ಬಂದಿದ್ದಾನೆ. ಬಾ ಅಂತ ನಾವೇನು ಬರೆದಿದ್ವೆ? ಬಂದ ದಾರೀಲಿ ನೆಟ್ಟಗೆ ಹಿಂದಕ್ಕೆ ಕಳುಹಿಸು" ಎಂದಳು. ಒಂದು ದಿನ ಕರೆದುಕೊಂಡು ಬಂದುಬಿಟ್ಟರೆ ಏನು ಮಾಡುವುದೆಂದು ಗುಂಡಣ್ಣನವರು ಯೋಚಿಸಿದ್ದ ಆ ದಿನ ಇಂದು ಬಂದೇ ಇತ್ತು. ಗುಂಡಣ್ಣನವರು ಅಕ್ಕನಿಗೆ "ನೀನು ಸುಮ್ಮನಿರು" ಎಂದು ಹೇಳಿ ಹೊರಕ್ಕೆ ಬಂದರು. ಅವರ ಹಿಂದೆಯೇ ಅವರ ಅಕ್ಕನೂ ಕಲ್ಯಾಣಿಯೂ ಬಂದರು.

ಸೀತಾಲಕ್ಷ್ಮಿ ನಡವೆಯ ಮೂಲೆಯಲ್ಲಿ ಪೆಟ್ಟಿಗೆಯನ್ನಿಟ್ಟು, ಹೆದರಿದ ಕರುವಿನಂತೆ ಅದರ ಮುಂದೆ ನಿಂತಿದ್ದಳು. ಭಯದಿಂದಲೂ ಗಾಬರಿಯಿಂದಲೂ ಅವಳ ತುಟಿಗಳೂ ಭುಜಗಳೂ ನಡುಗುತ್ತಿದ್ದವು. ಇನ್ನೊಂದು ಮೂಲೆಯಲ್ಲಿ ಶ್ರೀನಿವಾಸ ನಿಂತಿದ್ದನು ಗುಂಡಣ್ಣನವರಿಗೆ ಸೀತಾಲಕ್ಷ್ಮಿ ನಮಸ್ಕಾರ ಮಾಡಿದಳು. ಅನಂತರ ಕಲ್ಯಾಣಿಗೂ ನಮಸ್ಕರಿಸಿದಳು. ಕಲ್ಯಾಣಿಯ ಮಗ್ಗುಲಲ್ಲಿದ್ದ ಗುಂಡಣ್ಣನವರ ಅಕ್ಕನಿಗೆ ಸೀತಾಲಕ್ಷ್ಮಿ ನಮಸ್ಕರಿಸಲು ಹೋದಾಗ

ಆಕೆ, ಹಾವು ಹತ್ತಿರಕ್ಕೆ ಬಂದವಳಂತೆ ಹಿಂದಕ್ಕೆ ಹಾರಿ "ಸದ್ಯ ಎಲ್ಲಾದರೂ ಮುಟ್ಟಿಬಿಡ್ತೀಯ? ನಿನ್ನ ನಮಸ್ಕಾರವೂ ಸಾಕು. ಪುನಸ್ಕಾರವೂ ಸಾಕು" ಎಂದಳು. ಸೀತಾಲಕ್ಷ್ಮಿಗೆ ದವಡೆಗೆ ಏಟು ಬಿದ್ದಂತಾಗಿ ಅವಳು ನಮಸ್ಕಾರ ವನ್ನೇ ಮಾಡದೆ ಕಣ್ಣುಮುಚ್ಚಿಕೊಂಡು ಅಳುತ್ತಾ ಹಿಂದೆ ನಿಂತಳು.

ಮುಂದಲ ಅರ್ಧ ಗಂಟೆಯೊಳಗೇ ವಿಷಯವೆಲ್ಲ ತೀರ್ಮಾನವಾಗಿ ಹೋಯಿತು. ಸುಂದರರಾಜ ಊರಲ್ಲಿ ಇರಲಿಲ್ಲ. ಈಚೆಗೆ ಅವನು ಊರು ಸೇರುವುದೇ ಅಪರೂಪವಾಗುತ್ತಿತ್ತು. ಹೆಂಡತಿಯ ಮೇಲಿನ ಆಸೆ, ಆದರೆ ವಿಧಿಯ ವಿಕಟ ಚೇಷ್ಟೆಯಿಂದ ಅದು ಕನ್ನಡಿಯೊಳಗಣ ಗಂಟು ಆಗಿದ್ದುದು, ಹೆಂಡತಿಯದು ಪ್ರಾಯಶಃ ತಪ್ಪು ಇದ್ದಿರಲಾರದೆಂಬ ಭಾವನೆ, ಅವಳಲ್ಲಿಯೂ ಕನಿಕರ, ಆದರೆ ಮನೆಯಲ್ಲಿ ತನ್ನಲ್ಲಿ ಯಾರಿಗೂ ಸಹಾನುಭೂತಿ ಇಲ್ಲದಿರು ವುದು, ತನ್ನ ಸಂಕಟವನ್ನು ಹೇಳಿಕೊಳ್ಳಲು ಆಪ್ತರು ಯಾರೂ ಇಲ್ಲ ದಿರುವುದು, ಹತ್ತು ಮೈಲಿಯ ದೂರದಲ್ಲಿ ತನ್ನ ಸಮಸ್ತ ಆಸೆಗಳೂ ಮೂರ್ತಿ ಮತ್ತಾದ ತನ್ನ ಹೆಂಡತಿ ಇದ್ದರೂ ತಾನು ಒಬ್ಬಂಟಿಗನೂ, ಅನಾಥನೂ ಆಗಿರು ವುದು; ಈ ಎಲ್ಲ ಕಾರಣಗಳಿಂದ ಅವನಿಗೆ ಬೇಸರಿಕೆಯಾಗಿ ಅವನ ಬಾಳು ಇನ್ನೂ ಆ ಬಾಲ್ಯದಲ್ಲಿಯೇ ನಿಸ್ಸಾರವಾಗಿತ್ತು. ಹೆಂಡತಿಯನ್ನು ತನ್ನ ಮನಸ್ಸಿ ನಿಂದ ಕಿತ್ತೊಗೆಯಲು ಅವನು ಪ್ರಯತ್ನಿಸಿ ಸೋತಿದ್ದನು. "ಅವಳು ಅತಿ ದುಷ್ಟೆ, ವ್ಯಭಿಚಾರಿಣಿ, ಸ್ವೈರಿಣಿ, ತನ್ನ ಸ್ವಂತ ಥಳಕಿನಿಂದಲೇ ನರಸಿಂಹನನ್ನು ಆಕರ್ಷಿಸಿದ್ದಾಳೆ. ಈಗಲೂ ಮಲ್ಲಿಗೆಹಳ್ಳಿಯಲ್ಲಿ ಎಷ್ಟು ಜನ ಇವಳ ಹಿಂದೆ ಮುಂದೆ ತಿರುಗುತ್ತಿದ್ದಾರೊ? ಅವಳಿಗೆ ಇಷ್ಟವಿಲ್ಲದಿದ್ದರೆ ಈ ಕಾರ್ಯಗಳೆಲ್ಲ ನಡೆಯುತ್ತಿರಲಿಲ್ಲ. ಮುಖ್ಯ ತಪ್ಪು ಇವಳದೇ" ಎಂದು ಅವನು ಎಷ್ಟೇ ದೃಢವಾಗಿ ತೀರ್ಮಾನಿಸಿ ಹೆಂಡತಿಯಮೇಲೆ ತಪ್ಪನ್ನು ಹಾಕಿದ್ದರೂ, ಅವನ ಮನಸ್ಸಿನೊಳಗಿನ ಮನಸ್ಸು "ಈ ಪ್ರಶ್ನೆ ಅಷ್ಟು ಸುಲಭವಲ್ಲ" ಎಂದು ಹೇಳು ತ್ತಿತ್ತು. ಒಂದು ಸಲವಂತೂ ಅವನು ಸೀತಾಲಕ್ಷ್ಮಿಯನ್ನು ಕೊಲ್ಲಬೇಕೆಂಬ ಉದ್ದೇಶದಿಂದ ರಂಭಾಪುರಿಯಿಂದ ಹೊರಟಿದ್ದನು. ಹೋಗಿ ಆ [illegible]ಳನ್ನು ಕೊಂದು ನದಿಗೆ ಎಸೆದು, ನಾನೂ ಪೋಲೀಸರ ವಶನಾಗಿ ಈ ಹೊಟ್ಟೆಯಲ್ಲಿ ಉರಿಯುತ್ತಿರುವ ಬಡಬಾನಲವನ್ನು ತಣ್ಣಗೆ ಮಾಡೋಣವೆಂದು ಹೊರ ಟಿದ್ದನು. ಆದರೆ ಅರ್ಧ ದಾರಿ ನಡೆಯುವುದರೊಳಗಾಗಿ ಈ ಸಮಸ್ಯೆಯ

ತೀರ್ಮಾನ ಈ ಮಾರ್ಗದಿಂದಲ್ಲ ಎಂಬುದು ಅವನಿಗೆ ಹೊಳೆದು ಹಿಂದಿರುಗಿದ್ದನು. ಮತ್ತು ಆ ಗಳಿಗೆಯಲ್ಲಿಯೇ ಅವನಿಗೆ "ಯಾವುದು ಹೇಗೆ ಬೇಕಾದರೂ ಆಗಲಿ. ಈ ಪ್ರಶ್ನೆ ತೀರ್ಮಾನವಾಗುವುದು ನಾವಿಬ್ಬರೂ ಒಟ್ಟಿಗೆ ಸೇರಿ ಜೀವಿಸುವುದರಿಂದ ಮಾತ್ರ" ಎಂದು ಮುಂದಟ್ಟಾಯಿತು. ಅವರೆ ಆ ಸನ್ನಿವೇಶವನ್ನು ತರುವುದು ಹೇಗೆ ಎಂಬುದು ಅವನಿಗೆ ಗೊತ್ತಾಗಲಿಲ್ಲ.

ಮನೆಯಲ್ಲಿ ಅವನಿಗೆ ಸರಿಯಾದ ಸಲಹೆ ಕೊಡುವವರು ಯಾರೂ ಇರಲಿಲ್ಲ. ತಂದೆ ಗುಂಡಣ್ಣನವರು ಮುಪ್ಪಿನಿಂದಲೂ, ದಾರಿದ್ರ್ಯದಿಂದಲೂ, ಜರ್ಜರಿತರಾಗಿ, ನಿತ್ಯದ ಅಕ್ಕಿ ಬೇಳೆ ತಾಪತ್ರಯದಲ್ಲಿ ಮಗ್ನರಾಗಿದ್ದರು. ಅಣ್ಣಂದಿರಾದ ಶಾಮು, ಕೃಷ್ಣ, ರಂಗಸ್ವಾಮಿ ಎಲ್ಲರಿಗೂ ಸುಂದರರಾಜ ಮಲತಾಯಿಯ ಮಗನಾದುದರಿಂದ ಇವನ ಸುಖ ದುಃಖ ಅಷ್ಟಾಗಿ ಬೇಕಾಗಿರಲಿಲ್ಲ. ಅವರ ಹೆಂಡತಿಯರಿಗೆ "ಇರುವ ಮೂರು ಓರಗಿತ್ತಿಯರೇ ಸಾಕು. ಈ ವ್ಯಾಜ್ಯದಿಂದಲೇ ಮನೆ ಕುರುಕ್ಷೇತ್ರವಾಗಿದೆ. ಇನ್ನೊಬ್ಬಳು ಬಂದರೆ ಈ ಕದನ ಇನ್ನೂ ಹೆಚ್ಚಬಹುದು. ಅಲ್ಲದೆ ಹೊಸ ಸೊಸೆ ಬಂದರೆ ಕಲ್ಯಾಣಿ ಅವಳ ಪಕ್ಷ ಹಿಡಿಯಬಹುದು" ಎಂಬ ಭಾವನೆ ಇತ್ತು. ಅವರೆಲ್ಲ ಸುಂದರರಾಜನ ಹೆಂಡತಿ, ಗಂಡನ ಮನೆಗೆ ಬರಲೇಕೂಡದೆಂದು ತಮ್ಮ ಗಂಡಂದಿರೊಂದಿಗೆ ನಿತ್ಯ ಪ್ರಚಾರಮಾಡುತ್ತಿದ್ದರು. ಸುಂದರರಾಜನ ತಾಯಿ ಕಲ್ಯಾಣಿಗೆ ಏನೂ ಗೊತ್ತಾಗುತ್ತಿರಲಿಲ್ಲ. ಹೀಗಾಗಿ ಸುಂದರರಾಜ ಮದುವೆಯಾದನಂತರ ವರುಷದಲ್ಲಿ ೮ ತಿಂಗಳು ೧೦ ತಿಂಗಳು ಮನೆಯನ್ನೇ ಸೇರದೆ ಎಲ್ಲೆಲ್ಲೊ ಅಲೆಯುತ್ತಿದ್ದನು. ಹೆಚ್ಚು ಕಾಲವನ್ನು ಮೈಸೂರು ಬೆಂಗಳೂರುಗಳಲ್ಲಿ ಸಿನಿಮಾ ಸಂಗೀತ ಕಛೇರಿಗಳಲ್ಲಿ ಕಳೆಯುತ್ತಿದ್ದನು. ಮನೆಯವರಿಗೆ ತಿಳಿಯದಂತೆ ಆದಕ್ಕಾಗಿ ಸಾವಿರಾರು ರೂಪಾಯಿಗಳನ್ನು ಸಾಲಮಾಡಿದ್ದನು.

ಸೀತಾಲಕ್ಷ್ಮಿ, ರಂಭಾಪುರಿಗೆ ಬಂದಾಗ, ಸುಂದರರಾಜ ಹಾಗೆ ಊರು ಬಿಟ್ಟುಹೋಗಿ ಆಗಲೇ ಮೂರು ವಾರವಾಗಿತ್ತು. ಸೀತಾಲಕ್ಷ್ಮಿ ಬಂದ ಕೂಡಲೇ ಒಂದೇ ನಿಮಿಷದಲ್ಲಿ ಅಂಗಳದಲ್ಲಿ ಮನೆಯವರೆಲ್ಲ ಸೇರಿದರು. ಗುಂಡಣ್ಣ, ಕಲ್ಯಾಣಿ, ಶಾಮು, ಕೃಷ್ಣ, ರಂಗಸ್ವಾಮಿ, ಅವರ ಹೆಂಡತಿಯರು, ರಂಗಣ್ಣನವರ ಅಕ್ಕ ಎಲ್ಲರೂ ಬಂದು ನಿಂತರು. ಸುಂದರರಾಜ ಊರಿನಲ್ಲಿಲ್ಲದುದರಿಂದ ಸೀತಾಲಕ್ಷ್ಮಿಯ ಮತ್ತು ತನ್ನ ಉದ್ದೇಶ ಸಫಲವಾಗುವುದಿಲ್ಲ

ವೆಂಬುದು ಶ್ರೀನಿವಾಸನಿಗೆ ಹೊಳೆಯಿತು. ಗಂಡನನ್ನು ಹುಡುಕಿ ಹುಡುಕಿ ಸೀತಾಲಕ್ಷ್ಮಿಯ ಕಣ್ಣುಗಳು ಬೇಸತ್ತಿದ್ದವು. ಶ್ರೀನಿವಾಸನು ಗುಂಡಣ್ಣನವರಿಗೆ "ನಿಮ್ಮ ಹುಡುಗಿಯನ್ನು ನಿಮ್ಮಲ್ಲಿಗೆ ಕರೆತಂದು ಬಿಟ್ಟಿದ್ದೇನೆ. ನಿಮ್ಮ ಇಷ್ಟ ಇನ್ನು" ಎಂದನು. ಗುಂಡಣ್ಣನವರು ಮಾತನಾಡುವುದಕ್ಕೆ ಮುಂಚೆಯೇ ಶಾಮು, ಕೃಷ್ಣ, ರಂಗಸ್ವಾಮಿ ಮನಬಂದಂತೆ ಮಾತನಾಡಿಬಿಟ್ಟರು. ಶಾಮನು "ಇನ್ನು ಇವಳ ಆಟ ಮಲ್ಲಿಗೆಹಳ್ಳಿಯಲ್ಲಿ ನಡೆಯುವುದಿಲ್ಲ ಅಂತ ಕಾಣುತ್ತೆ. ಅದಕ್ಕೇ ಇಲ್ಲಿಗೆ ಕರೆದುಕೊಂಡು ಬಂದೆಯೇನೋ?" ಎಂದನು. ಕೃಷ್ಣನು "ಇದು ನಾಯಿ ಮುಟ್ಟಿದ ಮಡಕೆ. ಅಲ್ಲಿಯೇ ಎಲ್ಲಿಯಾದರೂ ಹೊಳೆಗೆ ನೂಕಿ ಬಿಟ್ಟು ಬರದೆ ಇಲ್ಲಿ ಯಾಕೆ ಕರತಂದೆ?" ಎಂದನು. ಎಲ್ಲಕ್ಕಿಂತ ಹೆಚ್ಚಾಗಿ ಗುಂಡಣ್ಣನ ಅಕ್ಕ "ಮನೆಹಾಳಿ ಹಾದರಗಿತ್ತಿ ತಾಟಕಿ ಮಾಯಾವಿ" ಎಂದೆಲ್ಲ ಬಯ್ದು "ಪಾಪ ನರಸಿಂಹನದು ತಾನೇ ಏನು ತಪ್ಪು? ಇಂತಹ ಮಾಯಾ ವಿನಿಯರ ಚಾತುರ್ಯದಿಂದ ತಪ್ಪಿಸಿಕೊಳ್ಳಲು ಯಾವ ಗಂಡಸಿಗೆತಾನೇ ಸಾಧ್ಯ? ಅವಳ ಕಣ್ಣು ನೋಡೆ, ಹುಬ್ಬಿನ ವೈಯ್ಯಾರ ನೋಡೆ, ಸೀರೆ ಉಟ್ಟಿರುವ ಠೀವಿ ನೋಡೆ, ಹೂವು ಮುಡಕೊಂಡಿರೋ ಝೋಕೊ? ಅಯ್ಯೊ ಸಂಸಾರಿಕರ ಮನೆ ಹೆಣ್ಣುಗಳು ಹೀಗೆ ಇರ್ತಾರ್ಯೆ ಇವಳು ನಾಟಕ ಸೇರೋಕೇ ಲಾಯಕ್ಕು. ನರಸಿಂಹನ ಮನೆ ಮುರಿದಾಯ್ತು. ಇನ್ನು ಇಲ್ಲಿ ಬಂದಳು" ಎಂದು ಒಂದೇ ಉಸುರಿಗೆ ಆರ್ಭಟಿಸಿದಳು. ಶಾಮು, ಕೃಷ್ಣ, ರಂಗಸ್ವಾಮಿ ಅವರ ಹೆಂಡತಿಯ ಕಡೆ ಕೈ ತೋರಿಸಿ "ನಿಮ್ಮ ಗಂಡಂದಿರನ್ನ ಜೋಪಾನ ಮಾಡಿಕೊಳ್ರಿ" ಎಂದು ಕೂಗಿದಳು.

ಈ ಎಲ್ಲ ಅವಾಂತರದಲ್ಲಿ ಗುಂಡಣ್ಣನವರ ಬಾಯಿನಿಂದ ಮಾತೇ ಹೊರ ಡಲಿಲ್ಲ. ಅವರು ಇಂತಹ ಸಂದಿಗ್ಧ ಪರಿಸ್ಥಿತಿಯೊದಗಿದಾಗ ತಮ್ಮ ಮೂರು ಜನ ಹಿರಿಯ ಮಕ್ಕಳೂ ಪ್ರಶ್ನೆಯನ್ನು ಹೇಗೋ ಸಮರಸವಾಗಿ ಬಗೆಹರಿಸುವ ರೆಂದು ಆಸೆಗೊಂಡಿದ್ದರು. ಈಗ ನೋಡುವಲ್ಲಿ ಸಂಭಾಷಣೆ ಅವರು ನಿರೀಕ್ಷಿ ಸಿದ ಮಾರ್ಗದಲ್ಲಿ ಹೋಗುತ್ತಿರಲಿಲ್ಲ. ಸೊಸೆ ಬಂದಾಗ ಅವಳನ್ನು ಹೇಗೆ ಮಾತನಾಡಿಸಬೇಕೆಂದು ಅವರು ಯೋಚಿಸಿರಲಿಲ್ಲ. ಈ ಸಂದರ್ಭದಲ್ಲಿ ಸುಂದರರಾಜ ಮನೆಯಲ್ಲಿಲ್ಲದುದೂ ಅವರಿಗೆ ಬಹಳ ಕೆಡಕೆನಿಸಿತು. ಅವರು ಒಂದು ಸಲ ತಲೆ ಎತ್ತಿ ಸೀತಾಲಕ್ಷ್ಮಿಯ ಮುಖವನ್ನು ನೋಡಿದರು. ಕಮಲದ

ಮೇಲೆ ಮಂಜಿನ ಹನಿಗಳಂತೆ ಅವಳ ಕಣ್ಣುಗಳ ನೀರು ಕೆನ್ನೆಗಳ ಮೇಲೆ ಬಿದ್ದು ನೆಲಕ್ಕೆ ಸೋರುತ್ತಿದ್ದಿತು. ಆ ಪ್ರವಾಹಕ್ಕೆ ತಡೆಯೇ ಇರುವಂತೆ ಕಾಣಲಿಲ್ಲ. ಒಂದೇ ಉಸುರಿಗೆ ವಿಚ್ಛಿತಿಯಿಲ್ಲದೆ ಬೀಳುತ್ತಿದ್ದ ಆ ಅಶ್ರುಧಾರೆ, ಅವಳ ಹೃದಯದ ದ್ರವವನ್ನೆಲ್ಲ ಹೊರಕ್ಕೆ ತೋಡಿ ಎಲ್ಲಿ ಹೃದಯವನ್ನೇ ಒಣಗಿಸಿಬಿಡುವುದೋ ಎಂದು ಗುಂಡಣ್ಣನವರಿಗೆ ಭಯವಾಯಿತು. ಇದರಲ್ಲಿ ನಮ್ಮದೂ ತಪ್ಪಿದೆ ಎಂದು ಅವರಿಗೆ ಭಾಸವಾಯಿತು. ಅವರು "ಸುಮ್ಮನೆ ಅತ್ತು ಯಾಕೆ ಕಣ್ಣು ಹಾಳುಮಾಡಿಕೊಳ್ಳುತ್ತೀ. ಅಳಬೇಡ ನಿಲ್ಲಿಸು" ಎಂದರು. ಅವರು ಹಾಗೆ ಅಂದುದೇ ಅವರ ಮಕ್ಕಳ ಮುಂದಲ ಆಕ್ರೋಶಕ್ಕೆ ಕಾರಣವಾಯಿತು. ಶಾಮನು "ಈ ಅಳುವಿನಿಂದ ನೀನು ನಮ್ಮನ್ನು ಮರುಳು ಮಾಡುವುದಕ್ಕೆ ಆಗುವುದಿಲ್ಲ" ಎಂದನು. ಕೃಷ್ಣನು "ಸಾಕು ಸಾಕು, ನಿಲ್ಲಿಸು ನಿನ್ನ ಗೋಳು. ಅಬ್ಬ ಯಾವ ಪ್ರತಿವ್ರತೆಯೂ ಇಷ್ಟು ಅಳುವುದಿಲ್ಲ" ಎಂದನು. ಸಾಧಾರಣವಾಗಿ ಮಾತನಾಡದ ರಂಗಸ್ವಾಮಿ ಸಹ "ಇಲ್ಲಿ ನಾವ್ಯಾರೂ ನರಸಿಂಹನಲ್ಲ" ಎಂದನು. ಗುಂಡಣ್ಣನವರ ಅಕ್ಕನು "ನಿನ್ನ ಆಟಗಾರಿಕೆಗೆ ಬೆಂಕಿ ಹಾಕಿತು ಕಣೆ. ಈ ಮಾಯಾ ವಿದ್ಯೆ ಇಲ್ಲಿ ನಡೆಯೊಲ್ಲ. ಬಂದ ದಾರಿ ಹಿಡಕೊಂಡು ಹೊರಡು. ಈ ಸಂಸಾರಕ್ಕೆ ಕಾಲು ಹಾಕಿ ಈ ಬಾಳೊ ಸಂಸಾರನ ಯಾಕೆ ಹಾಳುಮಾಡ್ತೀಯೆ, ಮೂದೇವಿ" ಎಂದಳು.

ಸೀತಾಲಕ್ಷ್ಮಿಗೆ ಅವರೆಲ್ಲರಿಗೂ ಪ್ರತ್ಯುತ್ತರ ಕೊಡುವ ಹುಮ್ಮಸ್ಸೂ ಬುದ್ಧಿಯೂ ಇತ್ತು. ಅವಳ ದೇಹದಲ್ಲಿ ಯವ್ವನದ ಕಾವೂ ಕೆಚ್ಚೂ ಇದ್ದವು. ಅವಳು ಎದುರಿಗೆ ನಿಂತಿದ್ದ ಶಾಮು, ಕೃಷ್ಣ, ರಂಗಸ್ವಾಮಿ, ಇವರೆಲ್ಲರ ಹೆಂಡತಿಯರನ್ನೂ ನೋಡಿದಳು. ಅತಿಯಾದ ಮಕ್ಕಳನ್ನು ಹೆತ್ತು ತಮ್ಮ ವಯಸ್ಸಿನಲ್ಲಿ ಅರ್ಧ ಬರುವುದಕ್ಕಿಂತಲೂ ಮುಂಚಿತವಾಗಿಯೇ ಮುಪ್ಪಾಗಿ ಹಲ್ಲು ಉದುರಿ ಒಳಕ್ಕೆ ಹೋದ ಕೆನ್ನೆ ಕಣ್ಣುಗಳುಳ್ಳ ಅವರಿಗೆಲ್ಲ, ತನ್ನ ರೂಪು ಯೌವ್ವನವನ್ನು ನೋಡಿ ಹೊಟ್ಟೆಗಿಚ್ಚು ಉಂಟಾಗಿರುವುದು ಆಕೆಗೆ ಕೂಡಲೇ ತಿಳಿಯಿತು. ತನ್ನ ರೂಪವನ್ನು ಪಡೆಯಲು ಬೇಕಾದರೆ ಇವರು ಅಗ್ನಿ ಪ್ರವೇಶ ಮಾಡಲೂ ಸಹ ಹಿಂದೆಗೆಯರೆಂದು ಆಕೆಗೆ ಗೊತ್ತಾಗಿತ್ತು. ಹೆಣ್ಣಿನ ಹೃದಯದ ಅಂತರಾಳದ ಆಸೆಯನ್ನು ಹೆಣ್ಣು ತತ್‌ಕ್ಷಣ ಸ್ವಾಭಾವಿಕವಾಗಿ ಕಂಡುಹಿಡಿಯುತ್ತದೆ. ರಂಗಸ್ವಾಮಿ, ಶಾಮು, ಕೃಷ್ಣರು, "ನಮ್ಮನ್ನು ನೀನು ಮರುಳು

ಮಾಡಲಾರೆ” ಎಂದು ಪದೇ ಪದೆ ಒತ್ತಿ ಒತ್ತಿ ಹೇಳಿದಾಗಲೂ ಆಕೆಗೆ ಆ ದುಃಖದಲ್ಲಿಯೇ ಮನಸ್ಸಿನಲ್ಲಿ ನಗು ಬಂತು. ತನ್ನೊಳಗೇ ಅವಳು “ನಿಮ್ಮನ್ನು ಮರುಳು ಮಾಡಲಾರೆ ಅಲ್ಲವೆ? ನೀವೇನು ವಿಶ್ವಾಮಿತ್ರರೋ ಅಂತಹ ವಿಶ್ವಾಮಿತ್ರರನ್ನೇ ಮೇನಕೆ ತನ್ನ ನಾಯಿಯನ್ನಾಗಿ ಮಾಡಿಕೊಂಡು ಸ್ವರ್ಗಕ್ಕೆ ಕೊಂಡುಹೋದಳೆಂದು ಪದಂತಿ. ನಾನು ಮನಸ್ಸು ಮಾಡಿದರೆ ನೀವು ಮೂರು ಜನರೂ ನನ್ನ ಹಿಂದೆ ತಿರುಗಿ ನನಗಾಗಿ ಒಬ್ಬರೊಂದಿಗೆ ಒಬ್ಬರು ಕಾದಿ ಪಡಿಯುವಿರಿ” ಎಂದುಕೊಂಡಳು ಮರುಕ್ಷಣದಲ್ಲಿಯೇ “ಆದರೆ ಅಯ್ಯೋ ನನಗೆ ಬೇಕಾಗಿರುವುದು ನೀವಲ್ಲವೆಲ್ಲ? ನನಗೆ ಬೇಕಾದವರು ಇಲ್ಲಿ ಇಲ್ಲವೇ ಇಲ್ಲವೆಲ್ಲ” ಎಂದು ಗಳಗಳನೆ ಅತ್ತಳು. ಆಕೆಗೆ ಮುಖ್ಯವಾಗಿ “ನರಸಿಂಹನೊಂದಿಗೆ ನಡೆದ ಆಕಸ್ಮಿಕ ಘಟನೆ ಇವರಿಗೆ ಅರ್ಥವಾಗಲಿಲ್ಲವೆಲ್ಲ? ಅಂತಹ ಘಟನೆ ನಡೆದರೂ ನಾನು ನನ್ನ ಗಂಡ ಸುಂದರರಾಜನಿಗಾಗಿ ಪ್ರಾಣ ಬಿಡಲು ಸಿದ್ಧಳಾಗಿರುವ ಹೆಂಡತಿ ಎಂಬುದು ಇವರಿಗೆ ಹೇಗೂ ತಿಳಿಯುವುದಿಲ್ಲ ವೆಲ್ಲ” ಎಂದು ಪಶ್ಚಾತ್ತಾಪವಾಯಿತು. ತನ್ನ ಗಂಡ ಸುಂದರರಾಜನಲ್ಲಿರುವ ತನ್ನ ಅಮೃತ ಪ್ರೇಮ ಅವಳಿಗೇ ಅರ್ಥವಾಗಲಿಲ್ಲ. ಅದು ಇತರರಿಗೆ ಅರ್ಥ ವಾಗುವಂತೆಯೂ ಇರಲಿಲ್ಲ. ತಾನು ನರಸಿಂಹನ ಕೈಗೆ ಸಿಕ್ಕಿ, ಆನೆ ಲತೆಯನ್ನು ಹೊಸಕುವಂತೆ ಆ ನೀಚನು ತನ್ನನ್ನು ಹೊಸಕಿದ್ದರೂ ತಾನು ಅವನನ್ನು ಸ್ವಲ್ಪವೂ ಪ್ರೀತಿಸದೆ, ತನ್ನ ಹೃದಯಾಂತರಾಳದಲ್ಲಿ ಸುಂದರರಾಜನ ಪ್ರೇಮ ಕ್ಕಾಗಿ ಬಾಯಾರಿ ಕಂಗೆಡುತ್ತಿದ್ದುದೇ ಅವಳ ಜೀವನದ ದುಃಖನಾಟಕ ವಾಗಿತ್ತು.

ಈ ಯೋಚನೆಗಳೆಲ್ಲ ಒಂದೇ ಗಳಿಗೆಯಲ್ಲಿ ಸೀತಾಲಕ್ಷ್ಮಿಯ ಮನಸ್ಸಿನ ಮೇಲೆ ಹಾಯ್ದುಹೋಯಿತು. ಅವಳು ಅರ್ಥಮುಟ್ಟಿಗೆ ಕಣ್ಣೆತ್ತಿ, ಅಂಗಳದ ಮತ್ತೊಂದು ಮೂಲೆಯಲ್ಲಿ, ತನ್ನಂತೆಯೇ ಮಂಕಾಗಿ ನಿಂತಿದ್ದ ತನ್ನ ಅಣ್ಣ ಶ್ರೀನಿವಾಸನನ್ನು ನೋಡಿದಳು. ಗುಂಡಣ್ಣನವರ ಅಕ್ಕ ಮಾತನಾಡುತ್ತಿರು ವಾಗ ಶ್ರೀನಿವಾಸ ಮಧ್ಯೆ ಒಂದು ಸಲ ಮಾತನಾಡಲು ಪ್ರಯತ್ನಿಸಿದ್ದನು. ಆದರೆ ಆ ಮಾರಿ, ಕಸವನ್ನು ದೂರ ತಳ್ಳುವಂತೆ ಕೈಯನ್ನು ತಿರಸ್ಕಾರದಿಂದ ಅವನ ಕಡೆಗೆ ನೂಕಿ, ಅವನನ್ನು ಮೂಲೆಗೆ ಕೂರಿಸಿದ್ದಳು. ಈ ದೊಡ್ಡ ತಿದಿಯ ಮುಂದೆ ತಾನು ಮಾತನಾಡುವುದು ಪ್ರಯೋಜನವಿಲ್ಲವೆಂದು ಶ್ರೀನಿವಾಸ

ಸುಮ್ಮನಾಗಿದ್ದನು. ಈಗ ಗುಂಡಣ್ಣನವರ ಅಕ್ಕ ತನಗೆ ತೃಪ್ತಿಯಾಗುವ ವರೆಗೆ ಕೂಗಿ ನಿಲ್ಲಿಸಿದನಂತರ, ಶ್ರೀನಿವಾಸನು ಸುತ್ತ ನಿಂತಿದ್ದವರಾರನ್ನೂ ಗಮನಿಸದೆ, ಗುಂಡಣ್ಣನವರನ್ನೂ ಕಲ್ಯಾಣಿಯನ್ನೂ ಮಾತ್ರ ನೋಡುತ್ತಾ ಅವರಿಬ್ಬರೊಂದಿಗೆ ಹೇಳುವಂತೆ "ಈಗ ನಿಮ್ಮ ಸೊಸೆಯನ್ನು ಇಲ್ಲಿ ಬಿಟ್ಟು ಹೋಗಲು ಬಂದಿದ್ದೇನೆ" ಎಂದನು. ಗುಂಡಣ್ಣನವರು ಪ್ರತ್ಯುತ್ತರ ಕೊಡುವುದಕ್ಕೆ ಮುಂಚೆಯೇ ಉಳಿದವರೆಲ್ಲ "ಖಂಡಿತ ಆಗದು. ಇದೇ ಗಾಡಿಯಲ್ಲಿ ಕೂರಿಸಿಕೊಂಡು ಹೊರಡಿ" ಎಂದರು. ಶ್ರೀನಿವಾಸನು ಬೇಸರಿಕೆಯಿಂದ "ನೀವೂ ಸಂಸಾರಿಗಳು. ಹೀಗೆ ದುಡುಕುವುದು ಪ್ರಯೋಜನವಿಲ್ಲ ಸುಂದರ ರಾಜ ಹಿಂದಿರುಗುವವರೆಗಾದರೂ ಇಲ್ಲಿರಲಿ" ಎಂದನು. ಗುಂಡಣ್ಣನವರ ಅಕ್ಕನು "ಆಗೋದಿಲ್ಲ. ಖಂಡಿತ ಇಲ್ಲ. ಒಂದು ಗಳಿಗೆಯೂ ಬೇಡ" ಎಂದಳು. ಶ್ರೀನಿವಾಸನು ಗುಂಡಣ್ಣನವರಿಗೆ "ನಿಮ್ಮ ಇಷ್ಟ, ನಿಮ್ಮ ಪದಾರ್ಥ ತಂದು ಇಲ್ಲಿ ಬಿಟ್ಟಿದ್ದೇನೆ. (ಉಳಿದವರ ಕಡೆ ತಿರುಗಿ) ಹೊಳೆಗೆ ತಳ್ಳಬೇಕಾದರೂ ನೀವೇ ತಳ್ಳಿ. ಕತ್ತರಿಸಿ ಹಾಕಬೇಕಾದರೂ ನೀವೇ ಹಾಕಿ, ಆ ಪಾಪ ಯಾವುದಿದ್ದರೂ ನಿಮ್ಮ ತಲೆಯಮೇಲೆಯೇ ಇರಲಿ. ನಮಗೆ ಬೇಡ" ಎಂದು ಹೇಳಿ ಸೀತಾಲಕ್ಷ್ಮಿಯ ಕಡೆ ತಿರುಗಿಕೂಡ ನೋಡದೆ ಗಾಡಿ ಹೊಡಿಕೊಂಡು ಹೊರಟೇಹೋದನು.

## ೧೭

ಅಂದು ಹೇಗೋ ಕಳೆದುಹೋಯಿತು. ಮರುದಿನ ಬೆಳಿಗ್ಗೆ ಸೀತಾಲಕ್ಷ್ಮಿ ಎಲ್ಲರಿಗಿಂತಲೂ ಮುಂಚಿತವಾಗಿ ಹಾಸಿಗೆಯಿಂದ ಎದ್ದು ಬೀದಿಯ ಬಾಗಿಲಿಗೆ ನೀರು ಚಿಮುಕಿಸಿ ರಂಗೋಲೆ ಹಾಕಿದ್ದಳು. ರಂಗೋಲೆ ಹಾಕುವುದರಲ್ಲಿ ಅವಳದು ನುರಿತ ಕೈ. ಅವಳು ಅದನ್ನೇ ಒಂದು ಕಲೆಯಾಗಿ ಅಭ್ಯಾಸ ಮಾಡಿದ್ದಳು. ಅವಳಿಗೆ ಮದುವೆಯಾಗುವುದಕ್ಕೆ ಮುಂಚೆ, ಮಲ್ಲಿಗೆಹಳ್ಳಿಯಲ್ಲಿ ಪ್ರತಿ ಹೆಣ್ಣೂ ಅವಳಿಂದ ನಿತ್ಯ ಒಂದೊಂದು ಹೊಸ ಹಸೆಯನ್ನು ಕಲಿಯುತ್ತಿದ್ದಳು. ರಥೋತ್ಸವದ ಕಾಲದಲ್ಲಿ ನಿತ್ಯದ ಉತ್ಸವ ರಾತ್ರಿಯ ವೇಳೆ ಬರುವ ಹೊತ್ತಿಗೆ ಪ್ರತಿಯೊಬ್ಬರ ಮನೆಯ ಬಾಗಿಲಿನಲ್ಲಿಯೂ ರಂಗೋಲೆ ಹಾಕಿರುತ್ತಿದ್ದರಷ್ಟೆ. ಆಗ ಸೀತಾಲಕ್ಷ್ಮಿ ಭಕ್ತಿ ಪಾರವಶ್ಯದಿಂದಲೂ ಸ್ವಾಭಾವಿಕ ಕಲಾ

ಜ್ಞಾನದಿಂದಲೂ, ಉಳಿದವರಾರೂ ಹಾಕದಂತಹ ಹೊಸಹೊಸ ಹಸೆಯನ್ನು ನಿತ್ಯಾ ಹಾಕುತ್ತಿದ್ದಳು. ಮೊದಲ ದಿವಸ ಅವಳು ಹಾಕಿದನಂತರ ಮರುದಿನ ಇತರರು ಅದನ್ನು ಅನುಸರಿಸುತ್ತಿದ್ದರು. ಅನೇಕರಿಗೆ ಅನಂತರ ಬಹುಕಾಲದ ವರೆಗೆ ದೇವರ ಉತ್ಸವ ಮರೆತರೂ ಆ ರಂಗೋಲೆ ಹಸೆಗಳು ಮರೆಯು ತ್ತಿರಲಿಲ್ಲ.

ರಂಭಾಪುರಿಯನ್ನು ಸೇರಿದ ಮರುದಿನ ಬೆಳಿಗ್ಗೆ ಸೀತಾಲಕ್ಷ್ಮಿಗೆ ಬೆಳಗಿನ ಜಾವಕ್ಕೆ ಎಚ್ಚರವಾಯಿತು. ಆಗತಾನೆ ಕಾಗೆಗಳು ಕೂಗಿದ್ದವು. ಅಂತರಿಕ್ಷ ಸ್ವಚ್ಛವಾಗಿ ಜಗತ್ತಿನಮೇಲೆ ಆಗಲೇ ಒಂದು ಹಿತವಾದ ಸ್ವಚ್ಛವಾದ ಬೆಳಕು ಹರಡಿತ್ತು. ಅಂಗಳದಲ್ಲಿ ಮಲಗಿದ್ದ ಸೀತಾಲಕ್ಷ್ಮಿ ಎದ್ದು ಬಾಗಿಲಿನ ಮೆಟ್ಟಲು ಗಳಿಗೆ ರಂಗವಲ್ಲಿ ಹಾಕಿದ ತರುವಾಯ ಮನೆಯ ಮುಂದಲ ನೆಲದಮೇಲೆ ಒಂದು ಹೊಸ ಹಸೆಯನ್ನು ಬರೆದಳು. ದೇವಸ್ಥಾನದ ಗೋಪುರ, ಗೋಪುರದ ತಳಹದಿಗೆ ಆನೆಗಳು, ಸುತ್ತಲೂ ಕಮಲಗಳುಳ್ಳ ಸರಸ್ಸು. ಕಮಲ, ಸರಸ್ಸಿನಿಂದ ಗೋಪುರ ಮೇಲೆ ಎದ್ದಿರುವಂತೆ ಬರೆದಿದ್ದಳು. ಅಂದು ಹಸೆಯನ್ನು ಬರೆಯಬೇಕೆಂಬುದು ಅವಳ ಇಷ್ಟವಾಗಿರಲಿಲ್ಲ. ಅವಳ ಮನಸ್ಸೂ ದುಗುಡ ದಲ್ಲಿತ್ತು. ಆದರೆ ಅವಳು ಹಾಸಿಗೆಯಿಂದ ಎದ್ದಾಗ ಇತರರಾರೂ ಎಚ್ಚೆತ್ತಿರ ಲಿಲ್ಲ. ಎಲ್ಲರೂ ಏಳಲು ಬೇಕಾದಷ್ಟು ಹೊತ್ತು ಇದ್ದುದರಿಂದ, ಸೀತಾಲಕ್ಷ್ಮಿ ಮತ್ತೇನೂ ತೋರದೆ ರಂಗವಲ್ಲಿಯನ್ನೇ ಬರೆದಳು. ಆ ಕಾರ್ಯವನ್ನು ಮಾಡು ವಾಗ, ಅವಳು ಅದರಲ್ಲಿಯೇ ಏಕಾಗ್ರವಾಗಿ ಮಾಡುತ್ತಿದ್ದುದರಿಂದ, ಅವಳ ಮನಸ್ಸಿನ ನೋವು ಆಗ್ಗೆ ಮರೆತು ಅವಳಿಗೆ ಸ್ವಲ್ಪ ನೆಮ್ಮದಿಯಾಗುತ್ತಿತ್ತು. ಅಂದಿನ ಹಸೆಯಂತೂ ಇತರ ದಿನಗಳ ಹಸೆಗಿಂತ ಬಹಳ ಮನೋಹರವಾಗಿತ್ತು. ತನಗೆ ಹಸೆ ಬರೆಯುವುದನ್ನು ಕಲಿಸಿದ ಸ್ಕೂಲಿನ ಮುಖ್ಯೋಪಾಧ್ಯಾಯಿನಿ ಕಮಲಮ್ಮ ಸಹ ಈ ಹಸೆಯನ್ನು ಮೆಚ್ಚುವಳೆಂದು ಸೀತಾಲಕ್ಷ್ಮಿಗೆ ನಂಬಿಕೆ ಯಾಯಿತು. ತನ್ನಿಂದ ಹಸೆ ಬರೆಯುವುದನ್ನು ಕಲಿಯುತ್ತಿದ್ದ ಮಲ್ಲಿಗೆ ಹಳ್ಳಿಯ ಹುಡುಗಿಯರು—ಈಚೆಗೆ ಅವರ ಮನೆಯವರು ತನ್ನ ಹತ್ತಿರಕ್ಕೆ ಅವರು ಬರುವುದನ್ನು ತಡೆದರೂ ರಹಸ್ಯವಾಗಿ ಬರುತ್ತಿದ್ದ ಹುಡುಗಿಯರು— ತಾವು ಇಂತಹ ಹಸೆಯನ್ನು ಬರೆಯಬಲ್ಲವರಾದರೆ ಎಷ್ಟು ಆನಂದದಿಂದ ಕುಣಿ ದಾಡುತ್ತಾರೆ! ಎಂದು ಅವಳು ಭಾವಿಸಿದಳು. ಆ ಗಳಿಗೆಯಲ್ಲಿ ಅವಳಿಗೆ

ಅದು ತನ್ನ ಕೃತಿ ಎಂಬುದು ಮರೆತೇಹೋಯಿತು. ಕಲಾಕೃತಿಯನ್ನು ಪರೀಕ್ಷಿಸುವ ಸ್ವಾಭಾವಿಕ ವಿಮರ್ಶಾ ಬುದ್ಧಿಯಿಂದ ಅವಳು, ಮತ್ತಾವುದೋ ಕೃತಿಯನ್ನು ಪರೀಕ್ಷಿಸುವಂತೆ ತನ್ನ ಹಸೆಯನ್ನೇ ನೋಡಿ, ಒಂದು ಅನಿರ್ವಚನೀಯವಾದ ಆನಂದವನ್ನು ಅನುಭವಿಸುತ್ತಿದ್ದಳು.

ನಿತ್ಯ ಎಲ್ಲರಿಗಿಂತ ಮುಂಚಿತವಾಗಿ ಹಾಸಿಗೆಯಿಂದ ಏಳುತ್ತಿದ್ದ ಗುಂಡಣ್ಣನವರ ಅಕ್ಕ, ಆ ವೇಳೆಗೆ ಎದ್ದು ಹೊರಕ್ಕೆ ಬಂದರು. ಬೀದಿಯ ಬಾಗಿಲಿನ ಮೆಟ್ಟಲುಗಳಿಗೆ ನೀರು ಹಾಕಿ ರಂಗೋಲೆ ಹಾಕಿದ್ದುದನ್ನು ಕಂಡು, ಸೀತಾಲಕ್ಷ್ಮಿಯ ಕಡೆ ತಿರುಗಿ "ಇದಾರೆ ಇಲ್ಲಿ ನೀರು ಹಾಕಿದವಳು?" ಎಂದಳು. ಸೀತಾಲಕ್ಷ್ಮಿಯು "ನಾನೇಯ" ಎಂದು ಉತ್ತರವಿತ್ತಳು. ಶ್ರೀರಂಗಮ್ಮನು "ಅಲ್ಲಕಣೆ ನಿನಗೆ ಯಾರೆ ಈ ಪಾರುಪತ್ಯ ಕೊಟ್ಟೋರು? ನೀನು ಹಾಕಿದ ಮೈಲಿಗೆ ನೀರಿನಮೇಲೆ ನಾವೆಲ್ಲ ತಿರುಗೋದೆ? ನೀನು ಕೆಟ್ಟಿದ್ದಲ್ಲದೆ ನಮ್ಮನ್ನೂ ಕೆಡಿಸೋಕೆ ಬಂದೆಯ? ಛೀ" ಎಂದು ಹೇಳಿ ಒಂದು ಬಿಂದಿಗೆ ನೀರು ತಂದು ಧಡಧಡನೆ ಬಾಗಿಲು ಮೆಟ್ಟಲುಗಳಮೇಲೆ ಸುರಿದು, ಅನಂತರ ಚೆನ್ನಾಗಿ ಗುಡಿಸಿ, ಸುಟ್ಟ ಬದನೆಕಾಯಿನಂತಹ ತನ್ನ ಕೈ ಬೆರಳುಗಳಿಂದ ತೊಪ್ಪೆತೊಪ್ಪೆಯಾಗಿ ಗುಡ್ಡಗುಡ್ಡೆಯಾಗಿ ಚೊಟ್ಟನಾಗಿ ರಂಗೋಲೆ ಹಾಕಿದಳು. ಅವಳು ರಂಗೋಲೆಯನ್ನು ಗೆರೆಯಾಗಿ ಹಾಕಿದ್ದರೂ ಅವು ಮೆಟ್ಟಲುಗಳ ಮೇಲೆಲ್ಲ ಚಲ್ಲಾಪಿಲ್ಲಿಯಾಗಿದ್ದವು. ಮತ್ತೊಂದು ಬಿಂದಿಗೆ ನೀರನ್ನು ಎತ್ತಿಕೊಂಡು ಬರಲು ಅವಳಿಗೆ ಮೈ ಬಗ್ಗದುದರಿಂದ ಬೀದಿಯಲ್ಲಿ ಹೊಳೆಯುತ್ತಿದ್ದ ರಂಗವಲ್ಲಿಯ ಗೋಪುರವನ್ನು ಆಕೆ ಇನ್ನೂ ಹಾಳುಮಾಡಿರಲಿಲ್ಲ.

ಈ ಗದ್ದಲವನ್ನು ಕೇಳಿ ಕಲ್ಯಾಣಿ ಎದ್ದು ಬಂದಳು. ಶ್ರೀರಂಗಮ್ಮನು "ಏಳುವ ಹೊತ್ತಿಗೆ ನಾವೆಲ್ಲ ಇವಳ ಮೈಲಿಗೆ ತುಳಿದುಕೊಂಡು ತಿರುಗಬೇಕಂತೆ" ಎಂದು ಗರ್ಜಿಸಿದಳು. ಕಲ್ಯಾಣಿಯ ಕಣ್ಣು ನಡುಬೀದಿಯಲ್ಲಿ ಮಲ್ಲಿಗೆಯ ಹೂವಿನ ರಥದಂತೆ ಎದ್ದು ನಿಂತಿದ್ದ ರಂಗವಲ್ಲಿ ಗೋಪುರದ ಕಡೆ ತಿರುಗಿತು. ಆ ಕಲಾ ವೈಭವವನ್ನು ಕಂಡು ಅವಳಿಗೆ ರೋಮಾಂಚವಾಯಿತು. ಇದ್ದಕ್ಕಿದ್ದಂತೆ ಆ ಪ್ರದೇಶವೇ ಒಂದು ಹೊಸ ಬೆಡಗಿನಿಂದ ಹೊಳೆಯುವಂತೆ ಆಕೆಗೆ ತೋರಿತು. ಕಲ್ಯಾಣಿಯೂ ತನ್ನ ಬಾಲ್ಯದಲ್ಲಿ ರಂಗೋಲೆ ಇಡುವುದರಲ್ಲಿ ಹೆಸರಾದವಳೇ. ಯಾರು ರಂಗವಲ್ಲಿ ಇಡುವುದನ್ನು ಕಂಡಾಗಲೂ,

ಅವಳಿಗೆ ನಾನು ಇದಕ್ಕಿಂತ ಚೆನ್ನಾಗಿ ಇಡಬಲ್ಲೆ ಎಂಬ ನಂಬಿಕೆ ಬರುತ್ತಿದ್ದಿತು. ಆದರೆ ಈ ಕೃತಿ ನೋಡಿ ಅವಳೂ ಅವಾಕ್ಕಾದಳು. ಅವಳ ಆಶ್ಚರ್ಯ ಮುಗಿಯುವುದಕ್ಕೆ ಮುಂಚಿತವಾಗಿಯೇ ಈ ಗದ್ದಲದಿಂದ ಎಚ್ಚರಗೊಂಡು, ಗುಂಡಣ್ಣ, ಶಾಮು, ಕೃಷ್ಣ, ರಂಗಸ್ವಾಮಿ ಮತ್ತು ಅವರ ಹೆಂಡತಿಯರು ನಿತ್ಯಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ಎದ್ದು ಹೊರಗೆ ಬಂದರು. ವಿಷಯವೆಲ್ಲ ತಿಳಿದಮೇಲೆ ಗುಂಡಣ್ಣನವರು ಶ್ರೀರಂಗಮ್ಮನಿಗೆ "ಏಳುವ ಹೊತ್ತಿಗೆ ಯಾಕೆ ಬೀದಿ ಬಾಗಲಿನಲ್ಲಿ ಬಯ್ಯುತ್ತ ನಿಂತೆ. ಹೋಗು ಒಳಕ್ಕೆ" ಎಂದರು.

ಅಂದಿನಿಂದ ಸೀತಾಲಕ್ಷ್ಮಿಯನ್ನು, ವೈದಿಕರ ಮನೆಯಲ್ಲಿ ಹೊಲತಿಯನ್ನು ನಡೆಸಿಕೊಳ್ಳುವಂತೆ ನಡೆಸಿಕೊಳ್ಳತೊಡಗಿದರು. ಮಡಿ ಮೈಲಿಗೆಗಳ ಆರ್ಭಟವನ್ನು ಹೆಚ್ಚಾಗಿ ಇಟ್ಟುಕೊಂಡಿದ್ದ ಶ್ರೀರಂಗಮ್ಮನದೇ ಅದರಲ್ಲಿ ಸರ್ವಾಧಿಕಾರವಾಗಿತ್ತು. ಸೀತಾಲಕ್ಷ್ಮಿಯ ಕೈಯಲ್ಲಿ ಯಾವ ಮಡಿ ಪದಾರ್ಥವನ್ನೂ ಮುಟ್ಟಿಸುತ್ತಿರಲಿಲ್ಲ. ಹಾಗೆಂದು ಅವಳಿಗೆ ಕೆಲಸ ಕಡಿಮೆ ಇರಲಿಲ್ಲ. ಆ ಹಳ್ಳಿಯ ಮನೆಯಲ್ಲಿ ಸೀತಾಲಕ್ಷ್ಮಿ ನಾಲ್ಕು ಗಂಡಾಳುಗಳ ಕೆಲಸ ಮಾಡಬೇಕಾಗಿತ್ತು. ಕೊಟ್ಟಿಗೆ ಗುಡಿಸಿ ಕಸವನ್ನೆಲ್ಲ ತಿಪ್ಪೆಗೆ ಎತ್ತಿ ಹಾಕುವುದು; ಸಗಣಿಯನ್ನೆಲ್ಲ ಗುಡ್ಡೆಹಾಕಿ ಬೆರಣಿ ತಟ್ಟುವುದು; ದನ ಕರು, ಎಮ್ಮೆಗಳನ್ನೆಲ್ಲ ಕಟ್ಟಿ ಹುಲ್ಲು ಹಾಕಿ ಅವುಗಳ ಹಾಲು ಕರೆಯುವುದು, ಭತ್ತ ಕುಟ್ಟುವುದು, ಅಕ್ಕಿ, ರಾಗಿ ಬೀಸುವುದು. ದನಗಳಿಗೆ ಬಾವಿಯಿಂದ ಸೇದಿ ನೀರು ಕುಡಿಸುವುದು, ಕೇರುವುದು, ಮಾಡುವುದು ಒಟ್ಟಿನಲ್ಲಿ ಆ ದೊಡ್ಡಮನೆಯ ಎಲ್ಲ ಕೆಲಸಗಳಿಗೂ ಒಂದು ಆಳು ಸಿಕ್ಕಿದಂತಾಯಿತು. ಸೀತಾಲಕ್ಷ್ಮಿ ಮನೆಗೆ ಬಂದಮೇಲೆ ಮನೆಯಲ್ಲಿದ್ದವರೆಲ್ಲ ಪೂರ್ಣ ಮೈಗಳ್ಳರಾದರು. ಶಾಮುನ ಹೆಂಡತಿ ಮೊದಲಾದ ಆಕೆಯ ಓರಗಿತ್ತಿಯರೆಲ್ಲ ಮೊದಲು ಮೊದಲು ತಮ್ಮ ಗಂಡಂದಿರ ಮತ್ತು ಮಕ್ಕಳ ಬಟ್ಟೆಗಳನ್ನೂ, ತಮ್ಮ ಸೀರೆ ರವಿಕೆಗಳನ್ನೂ ತಾವೇ ಒಗೆದುಕೊಳ್ಳುತ್ತಿದ್ದವರು ಈಗ ಎಲ್ಲವನ್ನೂ ಸೀತಾಲಕ್ಷ್ಮಿಗೇ ಹೇರಿದರು. ಬಟ್ಟೆಗಳನ್ನು ಒಗೆಯುವುದಕ್ಕೇ ಸೀತಾಲಕ್ಷ್ಮಿ ದಿನಕ್ಕೆ ಎರಡು ಮೂರು ಸಲ ಹೊಳೆಗೆ ಹೋಗಬೇಕಾಗಿತ್ತು. ಅವಳು ಒಗೆದು ತಂದು ಇಟ್ಟ ನಂತರ ಅದಕ್ಕೆ ನೀರು ಹಾಕಿ ಹಿಂಡಿಕೊಂಡು ಒಳಕ್ಕೆ ತೆಗೆದುಕೊಳ್ಳುತ್ತಿದ್ದರು. ಸೀತಾಲಕ್ಷ್ಮಿ ಬಂದಮೇಲೆ ಮನೆಯಲ್ಲಿದ್ದವರೆಲ್ಲರ ಬಟ್ಟೆಗಳೂ

ಹಿಂದೆಂದೂ ಇರವಷ್ಟು ಶುಭ್ರವಾದುವು. ಆದರೂ ಅವಳು ಚೆನ್ನಾಗಿ ಒಗೆ ಯುತ್ತಿರಲಿಲ್ಲವೆಂದು ವಾರಗಿತ್ತಿಯರು ಹೇಳುವುದು ತಪ್ಪಿರಲಿಲ್ಲ. ಅಲ್ಲದೆ ಪಾತ್ರೆಗಳನ್ನೆಲ್ಲ ಬೆಳಗುವುದಕ್ಕಾಗಿ ಸೀತಾಲಕ್ಷ್ಮಿ ದಿನಕ್ಕೆ ಎರಡು ಸಲ ಹೊಳೆಗೆ ಹೋಗಬೇಕಾಗಿತ್ತು. ಬೆಸ್ತರವಳು ಬೆಳಗಿ ತಂದ ಪಾತ್ರೆಗೆ ಶ್ರೀರಂಗಮ್ಮ ಹತ್ತು ಸಲ ಹುಳಿ ಹಾಕಿದರೆ, ಸೀತಾಲಕ್ಷ್ಮಿ ಬೆಳಗಿದ ಪಾತ್ರೆಗೆ ಇಪ್ಪತ್ತು ಮುವ್ವತ್ತು ಸಲ ಹಾಕುತ್ತಿದ್ದಳು. ಒಂದು ಸಲ ಕಲ್ಯಾಣಿಯು ಬೆಸ್ತರವಳಿ ಗಿಂತ ಇವಳು ಹೆಚ್ಚು ಮೈಲಿಗೆಯೇ ?'' ಎಂದು ಕೇಳಲು ಶ್ರೀರಂಗಮ್ಮನು ನಿಸ್ಸಂಕೋಚವಾಗಿ "ಬೆಸ್ತರವಳು ಬೆಸ್ತರವಳೇ, ಕೆಟ್ಟ ಬ್ರಾಹ್ಮಣರವಳು ಬೆಸ್ತರವಳಿಗಿಂತ ಹೀನ. ನೀರು ಮಜ್ಜಿಗೆ, ನೀರಾದರೂ ಮಜ್ಜಿಗೆಯೇ. ಆದರೆ ಒಡೆದ ಹಾಲು, ನೀರು ಮಜ್ಜಿಗೆ ಎಂದೂ ಆಗಲಾರದು" ಎಂದುಬಿಟ್ಟಳು. ಉಳಿದ ವಿಚಾರಗಳಲ್ಲಿ ಹೇಗೆ ಯಾರೂ ಶ್ರೀರಂಗಮ್ಮನೊಂದಿಗೆ ವಾದಿಸಲು ಇಷ್ಟಪಡುತ್ತಿರಲಿಲ್ಲವೋ. ಸೀತಾಲಕ್ಷ್ಮಿಯ ವಿಚಾರದಲ್ಲಿಯೂ ಹಾಗೆಯೇ ಆಯಿತು. ಯಾವುದಕ್ಕೂ ಯಾರಿಗೂ ಉತ್ಸಾಹವಿಲ್ಲದಿದ್ದ ಆ ಮನೆಯಲ್ಲಿ, ಸೀತಾಲಕ್ಷ್ಮಿಯ ವಿಚಾರ ಹಚ್ಚಿಕೊಂಡು ಹೋರಾಡಲು ಯಾರೂ ಸಿದ್ಧರಾಗಿರ ಲಿಲ್ಲ. ಮೊದಲೇ ತಿಳಿಸಿದಂತೆ ಸೀತಾಲಕ್ಷ್ಮಿ ವೈದಿಕರ ಮನೆಯಲ್ಲಿ ಹರಿಜನರಂತೆ ಒಂದು ಅಂಗಳದ ಮೂಲೆಯಲ್ಲಿ ತನ್ನ ಹಾಸಿಗೆ, ಪೆಟ್ಟಿಗೆ ಇಟ್ಟುಕೊಂಡು ಒರಗಿರುತ್ತಿದ್ದಳು. ಒಂದಲ್ಲ ಒಂದು ನೆಪದಿಂದ ಆಕೆಯ ಕಾರಣದಿಂದ ಶ್ರೀರಂಗಮ್ಮ, ನಿತ್ಯ ಒಂದು ಸಲ ಹೊಳೆಗೆ ಬೀಳುವವಳಂತೆ ಓಡಿಹೋಗಿ ನದಿಯಲ್ಲಿ ಸ್ನಾನಮಾಡಿ ತಣ್ಣೀರನ್ನು ಮೈಯಿನ ಒದ್ದೆಬಟ್ಟೆಯಿಂದ ಸೋರಿ ಸುತ್ತಾ ಮನೆಗೆ ಬರುತ್ತಿದ್ದಳು "ಸೀತಾಲಕ್ಷ್ಮಿಗೆ ಬಡಿಸುವಾಗ ನೀರು ಹಾರಿ ಮೈಲಿಗೆಯಾಯಿತು. ಅವಳು ಕಾಫಿ ಕುಡಿದು ಎಂಜಲು ಲೋಟ ಇಟ್ಟಿದ್ದ ಜಾಗವನ್ನು ತುಳಿದುಬಿಟ್ಟೆ" ಎಂಬ ಕಾರಣಗಳೇ ಸ್ನಾನಕ್ಕೆ ಸಾಕಾಗಿದ್ದವು. ಮನೆಯಲ್ಲಿ ಯಾರಿಗೆ ಯಾರಮೇಲೆ ಅಸಮಾಧಾನವಾದರೂ ಎಲ್ಲರೂ ಎಲ್ಲ ಕೋಪವನ್ನೂ ಸೀತಾಲಕ್ಷ್ಮಿಯ ಮೇಲೆಯೇ ಹಾಕುತ್ತಿದ್ದರು. ಶ್ರೀರಂಗಮ್ಮನು ಮಾತ್ರವೇ ಅಲ್ಲ; ಮಡಿ ಮೈಲಿಗೆಗಳ ವಿಷಯದಲ್ಲಿ ಅಷ್ಟೊಂದು ಕಟ್ಟುನಿಟ್ಟಾ ಗಿಲ್ಲದಿದ್ದ ಚಿಕ್ಕವಯಸ್ಸಿನವರಾದ ಓರಗಿತ್ತಿಯರೂ ಸಹ ಸೀತಾಲಕ್ಷ್ಮಿಯ ಸಂಪರ್ಕದಿಂದಲ್ಲ—ಕಾರಣದಿಂದ — ಮೈಲಿಗೆಯಾಯಿತೆಂದು ಹಾರತೊಡಗಿ

ದರು. ಓರಗಿತ್ತಿಯರು ಭಾವಿಯ ನೀರು ಸೇದಬೇಕಾದರೆ, ಬಿಂದಿಗೆಯನ್ನು ಹಗ್ಗಕ್ಕೆ ಕಟ್ಟಿ ಭಾವಿಗೆ ಬಿಡುತ್ತಿದ್ದರು. ಅನಂತರ ಬಿಂದಿಗೆಯನ್ನು ಮುಳುಗಿಸಿ ನೀರನ್ನು ಸೀತಾಲಕ್ಷ್ಮಿ ಮೇಲಕ್ಕೆ ಎತ್ತುತ್ತಿದ್ದಳು. ಅದು ಮೇಲಕ್ಕೆ ಬಂದ ಮೇಲೆ, ಸೀತಾಲಕ್ಷ್ಮಿ ಹಗ್ಗದ ಕೈಯೊಂದಿಗೆ ಮಗ್ಗುಲಿಗೆ ನಿಲ್ಲುತ್ತಿದ್ದಳು. ಆಗ ಓರಗಿತ್ತಿಯರು ಬಿಂದಿಗೆಯನ್ನು ಮೇಲಕ್ಕೆ ಎತ್ತಿಕೊಳ್ಳುತ್ತಿದ್ದರು. ಅಂತಹ ವೇಳೆಯಲ್ಲಿ ಆಕಸ್ಮಿಕವಾಗಿ ಹಗ್ಗವನ್ನು ಹಿಡಿದಿರುತ್ತಿದ್ದ ಸೀತಾಲಕ್ಷ್ಮಿಯ ಕೈ ಓರಗಿತ್ತಿಯ ಕೈಗೆ ಸೋಕಿತೆಂದು ಓರಗಿತ್ತಿ ಹಾರಾಡಿ ಧಡಧಡನೆ ಭಾವಿಯ ನೀರನ್ನೇ ಮೈಮೇಲೆ ಸುರಿದುಕೊಂಡು, ಮಡಿಸೀರೆ ತನ್ನಿರೆಂದು ಮನೆಯಲ್ಲಿದ್ದ ವರನ್ನು ಕೂಗುತ್ತಿದ್ದಳು. ಆಗ ಎಲ್ಲರೂ ಒಟ್ಟಾಗಿ ಬಂದು ಸೀತಾಲಕ್ಷ್ಮಿ ಯಿಂದ ಮನೆಯ ಮಡಿಯೆಲ್ಲ ಕೆಟ್ಟಿತೆಂದು ಆಕೆಯನ್ನು ಮನಸ್ಸಿಗೆ ಬಂದಂತೆ ಬಯ್ಯುತ್ತಿದ್ದರು. ಹೀಗೆ ಸೀತಾಲಕ್ಷ್ಮಿಯಿಂದ ಮಡಿ ಕೆಟ್ಟರೂ ಅವಳಿಂದ ಯಾವ ಕೆಲಸವನ್ನೂ ಮಾಡಿಸಿಕೊಳ್ಳುವುದನ್ನು ಯಾರೂ ಬಿಡಲಿಲ್ಲ. ಅಷ್ಟು ಜನರ ಅನ್ನಕ್ಕೆ ಭತ್ತ ಕುಟ್ಟಿ ಕೇರಿ ಆಕೆಯ ಭುಜಗಳು ಯಾವಾಗಲೂ ನೋಯುತ್ತಲೇ ಇದ್ದವು. ಬೀಸಿ ಕೈ ಬೆರಳುಗಳೆಲ್ಲ ಕೊಪ್ಪಳವಾಗಿದ್ದುವು. ದಿನಕ್ಕೆ ಮೂರು ನಾಲ್ಕು ಗಂಟೆ ಅಗಸಗಿತ್ತಿಯಂತೆ ನದಿಯ ನೀರಿನಲ್ಲಿ ನಿಂತು ಪಾತ್ರೆ ಬೆಳಗಿ ಬಟ್ಟೆಗಳ್ನು ಒಗೆಯುತ್ತಿದ್ದವರಿಂದ ನೆಗಡಿ, ಕೆಮ್ಮಲು, ಛಳಿ, ಆಕೆಗೆ ತಪ್ಪಲೇ ಇಲ್ಲ. ಸ್ವಾಮಿಭಕ್ತಿಯುಳ್ಳ ನಾಯಿಯಂತೆ ಆಕೆ ಸ್ವಲ್ಪವೂ ಅಸಮಾಧಾನವನ್ನು ತೋರಿಸದೆ, ಕನಿಕರದ ಒಂದು ಮಾತನ್ನೂ ನಿರೀಕ್ಷಿಸದೆ, ತನ್ನ ಪಾಡಿಗೆ ತಾನು ದುಡಿಯುತ್ತಿದ್ದಳು. ಅವಳನ್ನು ಕುರಿತು "ಅಯ್ಯೋ" ಎನ್ನುವವರು ಆ ಮನೆಯಲ್ಲಿ ಯಾರು ಇರಲಿಲ್ಲ.

ಆದರೆ ಯವ್ವನದ ಆವಿರ್ಭಾವದಲ್ಲಿ, ಜಗತ್ತು ಒಂದು ಹೊಸ ಬೆಳಕಿನಿಂದ ತೋರುತ್ತಿರುವಾಗ, ಬದುಕಿರುವುದೇ ಒಂದು ದೊಡ್ಡ ಹಬ್ಬವೆಂಬ ಭಾವನೆ ಇರುವಾಗ, ವ್ಯಕ್ತಿ ತನ್ನಲ್ಲಿ ತಾನು ಲೀನಳಾಗಿ ಬಾಹ್ಯಪ್ರಪಂಚದ ಜ್ಞಾನವನ್ನೇ ಮರೆತು ಗಂಡನಿಗೆ ತನ್ನಲ್ಲಿ ಪ್ರೇಮವಿಲ್ಲದಿದ್ದರೂ ತಾನು ಮಾತ್ರ ಅವನನ್ನು ಪ್ರೀತಿಸುವಷ್ಟರ ಆನಂದವೇ ತನಗೆ ಸಾಕೆಂದಿರುವಾಗ, ಇತರರ ತಿರಸ್ಕಾರ ಪುರಸ್ಕಾರಗಳೆಂಬ ಸಣ್ಣ ಮುಳ್ಳುಗಳ ಚುಚ್ಚಾಟದಿಂದ ಅವಳ ಆನಂದ ಶಾಂತಿ ಹೆಚ್ಚು ಭಂಗವಾಗುವ ಸಂಭವವಿಲ್ಲ. ಗಂಡನ ಗುರಿಯನ್ನು ಕುರಿತು

ಓಡುತ್ತಿರುವ ಕೈ ಕಾಲುಗಳಿಗೆ, ತೊಡರಿಕೊಳ್ಳುವ ಹುಲ್ಲುಕಡ್ಡಿಗಳಂತೆ, ಮನೆಯವರ ಅನಾದರ ಕಂಡರೂ, ಸೀತಾಲಕ್ಷ್ಮಿಗೆ ಗಂಡನ ಮೇಲಿನ ಆಸೆಯನ್ನು ಬಿಡಿಸುವಷ್ಟು ಕ್ರೂರವಾಗಿ ತೋರಲಿಲ್ಲ ಆ ಅನಾದರ. ಆದುದರಿಂದ ಬೆಂಗಳೂರಿಗೆ ಹೋಗಿದ್ದ ಸುಂದರರಾಜ ಬರುವವರೆಗೆ, ತಾನು ರಂಭಾಪುರಿಯಲ್ಲಿ ಮಾವನ ಮನೆಯಲ್ಲಿಯೇ ಇರಬೇಕೆಂದು ಸೀತಾಲಕ್ಷ್ಮಿ ನಿಶ್ಚಯಿಸಿದಳು.

ಹೀಗೆ ನಾಲ್ಕಾರು ದಿನಗಳು ರಂಭಾಪುರಿಯಲ್ಲಿರುವುದರೊಳಗಾಗಿ, ಮಲ್ಲಿಗೆಹಳ್ಳಿಯ ಯುವಕರು ಹೇಗೆಯೋ ಹಾಗೆ ರಂಭಾಪುರಿಯ ಯುವಕರೂ ತನ್ನ ಮೋಹನರೂಪಿನಿಂದ ಸಂಭ್ರಾಂತರಾಗಿರುವುದು ಸೀತಾಲಕ್ಷ್ಮಿಗೆ ಗೊತ್ತಾಯಿತು. ಇದ್ದಕ್ಕಿದ್ದಂತೆ ಗುಂಡಣ್ಣನವರ ಮನೆ ಆಕರ್ಷಣೀಯವಾಗಿ, ಯುವಕರು ಒಂದಿಲ್ಲೊಂದು ಕಾರಣದಿಂದ ಆವರ ಮನೆಗೆ ಬಂದು, ಆಸೆಯ ಕಣ್ಣುಗಳಿಂದ ಸೀತಾಲಕ್ಷ್ಮಿಯನ್ನು ಹುಡುಕಿ, ಅವಳು ಕಣ್ಣಿಗೆ ಬಿದ್ದ ಕೂಡಲೇ ತಾವು ಬಂದ ಉದ್ದೇಶ ಸಾರ್ಥಕವಾದುದರಿಂದ, ಆಡಬೇಕೆಂದಿದ್ದ ಮಾತನ್ನು ಮರೆತೇ ಹಿಂದಕ್ಕೆ ಹೋಗಿಬಿಡುತ್ತಿದ್ದರು. ಸೀತಾಲಕ್ಷ್ಮಿ ಎಲ್ಲಿ ಹೋಗಲಿ ಅವಳನ್ನು ಅನುಸರಿಸಿಕೊಂಡು ನಾಲ್ಕಾರು ಜತೆ ಪುರುಷ ಕಣ್ಣುಗಳು ಸಂಚರಿಸುತ್ತಿದ್ದವು. ತನ್ನ ಮೈ ಮೋಹಕ್ಕಾಗಿ ಅವರು ತನ್ನ ಹಿಂದೆ ತಿರುಗುತ್ತಿರುವುದು ಸೀತಾಲಕ್ಷ್ಮಿಗೆ ಅರ್ಥವಾಯಿತು. ಆದರೆ ಒಂದು ಸಲ ದಾರಿಬಿಟ್ಟ ಸೀತಾಲಕ್ಷ್ಮಿ, ಮತ್ತೆ ಮತ್ತೆ ಯಾಕೆ ಬಿಡುವುದಿಲ್ಲ ಎಂಬುದು ಆ ಮೋಹಾಂಧರಿಗೆ ಅರ್ಥವಾಗಲಿಲ್ಲ.

ಸುಂದರರಾಜನು ಯಾವಾಗ ಹಿಂದಿರುಗುತ್ತಾನೆಂಬುದು ಯಾರಿಗೂ ತಿಳಿದಿರಲಿಲ್ಲ. ಅವನು, ಬೇಸರಿಕೆಯಿಂದ ಊರೂ ಬಿಟ್ಟು ಓಡಿಬಿಡುತ್ತಿದ್ದುದರಿಂದ ಹೋಗುವಾಗಲೂ ಹೇಳುತ್ತಿರಲಿಲ್ಲ. ಹೋದ ಊರಿನಿಂದ ಕಾಗದವನ್ನೂ ಬರೆಯುತ್ತಿರಲಿಲ್ಲ. ತಾಯಿ ಕಲ್ಯಾಣಿ ಹೊರತು ಉಳಿದವರಾರೂ ಅವನು ಊರು ಬಿಟ್ಟುದನ್ನೂ ಗಮನಿಸುತ್ತಿರಲಿಲ್ಲ. ಆದರೆ, ಸಾಧಾರಣವಾಗಿ ಹೋಗುವಾಗ ಅವನು ಸಾಲಮಾಡಿಕೊಂಡು ಹೋಗುತ್ತಿದ್ದುದರಿಂದ ಸಾಲ ಕೊಟ್ಟವರು ಅವನು ಹೇಳಿದ ದಿನ ಹಿಂದಿರುಗದಿದ್ದರೆ ಬಂದು ಗುಂಡಣ್ಣನವರಿಗೆ ಹೇಳುತ್ತಿದ್ದರು. ಕೂಡಲೇ ಗುಂಡಣ್ಣನವರಂತೆಯೇ ಶಾಮು, ಕೃಷ್ಣ, ರಂಗಸ್ವಾಮಿ ಎಲ್ಲರೂ “ಸಾಲಮಾಡಿ ಅವನು ಮನೆ ಹಾಳುಮಾಡುತ್ತಾ

ನೆಂದೂ, ಅವನೊಬ್ಬನ ಸಾಲಕ್ಕಾಗಿಯೇ ಮನೆಯ ಆಸ್ತಿಯೆಲ್ಲ ಹೋಗುವುದೆಂದೂ ಅವನ ಸಾಲಕ್ಕೆ ತಾವು ಜವಾಬ್ದಾರರಲ್ಲವೆಂದೂ" ರೇಗಾಡುತ್ತಿದ್ದರು. ಸೀತಾಲಕ್ಷ್ಮಿ ರಂಭಾಪುರಿಗೆ ಬಂದ ನಾಲ್ಕಾರು ದಿನಗಳನಂತರ ಇಂತಹ ದೃಶ್ಯ ಮನೆಯಲ್ಲಿ ನಡೆದಾಗ, ಸಾವಿರಾರು ರೂಪಾಯಿಗಳವರೆಗೆ ಸುಂದರರಾಜ ಸಾಲಮಾಡಿರುವ ಮಾತು ಸೀತಾಲಕ್ಷ್ಮಿಯ ಕಿವಿಗೆ ಬಿದ್ದಿತು.

ಸೀತಾಲಕ್ಷ್ಮಿ ರಂಭಾಪುರಿಯನ್ನು ಸೇರಿ ಒಂದು ವಾರವಾದರೂ, ಅವಳನ್ನು ಕಂಡರೆ ಎಲ್ಲರೂ ಮೊದಲಿನಷ್ಟೇ ತಿರಸ್ಕಾರದಿಂದಿದ್ದರೇ ಹೊರತು, ಯಾರೊಬ್ಬರೂ ಅವಳು ತಮ್ಮ ಸಂಸಾರಕ್ಕೆ ಸೇರಿದವಳೆಂಬ ಭಾವನೆ ಹೊಂದಿದಂತೆ ತೋರಲಿಲ್ಲ. ತನ್ನ ಅತ್ತೆ ಕಲ್ಯಾಣಿಗೆ ಮಾತ್ರ ಎಲ್ಲೋ ಒಂದೊಂದು ಕ್ಷಣ ತನ್ನಮೇಲೆ ಕನಿಕರ ಉಂಟಾದಂತೆ ಸೀತಾಲಕ್ಷ್ಮಿಗೆ ಭಾಸವಾಗುತ್ತಿದ್ದಿತು. ಆದರೆ ಕಲ್ಯಾಣಿಯೂ ಅದನ್ನು ಹೊರಕ್ಕೆ ತೋರಗೊಡುತ್ತಿರಲಿಲ್ಲ. ಮನೆಯವರೆಲ್ಲ ಆಕೆಯ ವಿಷಯದಲ್ಲಿ ತಮ್ಮ ಸ್ವಾಭಾವಿಕವಾದ ಪ್ರವೃತ್ತಿಯನ್ನು ಅಮುಕಿಕೊಂಡು, ಒಂದು ವಿಧವಾದ ಒಮ್ಮುಖ ಆಕ್ರೋಶವನ್ನೇ, ಪೂರ್ವ ಸಂಕೇತದ ತೀರ್ಮಾನದಂತೆ ತೋರಿಸಿಕೊಂಡು ಇದ್ದರು "ಸುಂದರರಾಜ ಬೇಗ ಹಿಂದಿರುಗದುದೂ ಈಗ ಒಳ್ಳೆಯದೆ. ಇಂತಹ ರೂಪರಾಶಿಯ ಎದುರಿಗೆ ಅವನು ಕ್ರೂರನಾಗಿರುವುದು ಕಷ್ಟ. ನಿಧಾನವಾಗಿಯೇ ಬರಲಿ" ಎಂದುಕೊಂಡರು ಗುಂಡಣ್ಣನವರು. ಸುಂದರರಾಜ ಹಿಂದಿರುಗುವುದಕ್ಕೆ ಮುಂಚೆಯೇ ಸೀತಾಲಕ್ಷ್ಮಿಯನ್ನು ರಂಭಾಪುರಿಯಿಂದ ಕಳುಹಿಸಿಬಿಡಬೇಕೆಂಬುದೂ ಮನೆಯವರೆಲ್ಲರ ತೀರ್ಮಾನವಾಗಿತ್ತು. ಈ ಮಾತುಗಳು ತನ್ನ ಎದುರಿಗೆ ನಡೆಯದೆ ಇದ್ದರೂ, ಸೀತಾಲಕ್ಷ್ಮಿಗೆ ಮನೆಯವರೆಲ್ಲರ ಅಭಿಪ್ರಾಯವೂ ಗೊತ್ತಾಗಿತ್ತು.

ಒಂದು ಸಲ ಇದ್ದಕ್ಕಿದ್ದಂತೆ, ಸೀತಾಲಕ್ಷ್ಮಿಗೆ, ತನ್ನ ಭಾವ ಕೃಷ್ಣ, ವಿಧೇಯವಾದ ನಾಯಿ ತನ್ನ ಯಜಮಾನನನ್ನು ದೈನ್ಯದಿಂದ ಅನುಸರಿಸುವಂತೆ ತನ್ನನ್ನೇ ಅನುಸರಿಸುತ್ತಿರುವದು ಕಂಡಿತು. ಕೃಷ್ಣನ ಕಣ್ಣುಗಳಲ್ಲಿ ಕಾಮವೂ ಪಾಶವೀ ಆಸೆಯೂ ಒಡೆದು ಕಾಣುತ್ತಿತ್ತು. ಅದನ್ನು ಅವನು ಇತರರ ಕಣ್ಣುಗಳಿಂದ ಮುಚ್ಚಿಕೊಂಡರೂ ಸೀತಾಲಕ್ಷ್ಮಿಗೆ ಅವನನ್ನು ನೋಡಿದ ಕ್ಷಣ ಅದು ಸ್ವಾಭಾವಿಕವಾಗಿ ಗೊತ್ತಾಯಿತು. ಒಂದೇ ಗಳಿಗೆ ಆಕೆಗೆ "ಮದುವೆಯಾಗಿದ್ದರೂ ಇವರ ತಮ್ಮನೊಂದಿಗೆ ನಾನು ಇದ್ದರೆ ತಪ್ಪು. ಆದರೆ ಹಿರಿಯರಾದ ಇವರು ಮಾತ್ರ

ನನ್ನೊಂದಿಗೆ ಯಾವ ನರಕಕ್ಕೆ ಬೇಕಾದರೂ ಬೀಳಬಹುದಂತೆ!" ಎಂದು ವಿನೋದವಾಯಿತು. ತಾನು ಬಂದಷ್ಟು ದಿನಗಳಿಂದ ಕೃಷ್ಣ ತನ್ನನ್ನು ಉಳಿದ ಮೈದುನರಿಗಿಂತ ಹೆಚ್ಚು ಕ್ರೂರವಾಗಿ ಗದರಿಸುತ್ತಿದ್ದುದೂ ಮಡಿ ಮೈಲಿಗೆಗಳ ವಿಷಯದಲ್ಲಿಯೂ ತನ್ನನ್ನು ತಿರಸ್ಕರಿಸುತ್ತಿದ್ದುದೂ ಆಕೆಗೆ ಚೆನ್ನಾಗಿ ಗೊತ್ತಾಗಿದ್ದಿತು. ಅಂತಹ ಸಂದರ್ಭಗಳಲ್ಲಿ ಅವಳು "ಉಳಿದವರು ಒಪ್ಪಿದರೂ ಇವರು ಬೇರೆ ನಾನು ಮನೆಯಲ್ಲಿರಲು ಒಪ್ಪುವುದಿಲ್ಲ" ಎಂದು ಭಾವಿಸಿದ್ದಳು.

ಎರಡು ಮೂರು ದಿನಗಳಲ್ಲಿಯೇ ಕೃಷ್ಣನ ಕಾಮುಕ ವೃತ್ತಿ ಪರಮಾವಧಿಗೆ ಏರಿತು. ನರಸಿಂಹನೊಂದಿಗೆ ನಡೆದ ವ್ಯವಹಾರದನಂತರ ಸೀತಾಲಕ್ಷ್ಮಿಗೆ ಯಾವ ಗಂಡು ಪ್ರಾಣಿಯಲ್ಲಿಯೂ ಗೌರವವಾಗಲಿ, ಅದೊಂದು ಅದ್ಭುತ ವಸ್ತುವೆಂಬ ಹಿಂದಲ ಮಂಕು ಆಗಲಿ ಇರಲಿಲ್ಲ. ತನ್ನ ವಿಷಯದಲ್ಲಿ ಜನರ ಚೇಷ್ಟೆಯನ್ನೂ ಆಸೆಯನ್ನೂ ಸ್ವಾಭಾವಿಕವಾಗಿ ನೋಡುವುದು ಅವಳಿಗೆ ಅಭ್ಯಾಸವಾಗಿತ್ತು. ಅವಳಿಗೆ ಬೇಕಾಗಿದ್ದರೆ, ಅವಳು, ನಿತ್ಯ ಗಂಡಸರು ತನಗಾಗಿ ಹೋರಾಡುವಂತೆ ಮಾಡಬಹುದಾಗಿತ್ತು. ಆದರೆ ಅವಳ ದೃಷ್ಟಿ ಯಾವಾಗಲೂ ಸುಂದರರಾಜನ ಕಡೆಗೇ ಇದ್ದುದರಿಂದ, ಯಾವ ಗಂಡಿನ ಬಾಲಬಡಕತನವನ್ನೂ ಅವಳು ಕಂಡರೂ ಕಾಣದಂತೆಯೇ ಇರುತ್ತಿದ್ದಳು. ತಾನು ರಂಭಾಪುರಿಗೆ ಬಂದ ಮೊದಲ ಎರಡು ದಿನಗಳಲ್ಲಿ ಕೃಷ್ಣನ ಮಡಿ ಅವಳಿಗೆ ಅಸಾಧ್ಯ ಅಸಹನೆಯಾದ ತೋರಿತು. ಅವನು ವಿಧವೆಯಾದ ಮಡಿ ಹೆಂಗಸಾದ ಶ್ರೀರಂಗಮ್ಮನಿಗಿಂತ ಹೆಚ್ಚು ಹಾರಾಡುತ್ತಿದ್ದನು. ಆ ಮಡಿ ಮೈಲಿಗೆ ನಿಜವಾದ ಶ್ರದ್ಧೆಗಿಂತ ಹೆಚ್ಚಾಗಿ ಬೂಟಾಟಿಕೆಯಾಗಿಯೇ ಸೀತಾಲಕ್ಷ್ಮಿಗೆ ತೋರಿತ್ತು. ಅವಳಿಗೆ ಚೇಷ್ಟೆಯ ಕೋಪದಲ್ಲಿ, "ಈ ಮಡಿ ಜನಿವಾರ ನಾಮ ಇವರು, ಎಲ್ಲರನ್ನೂ ಕಾಲಿನಲ್ಲಿ ಹಾಕಿ ಚೆನ್ನಾಗಿ ತುಳಿಯಬೇಕು" ಎಂಬ ಆಕ್ರೋಶವುಂಟಾಯಿತು.

ಈ ಭಾವನೆಯಿಂದಲೇ ಇರಬಹುದು. ಕೃಷ್ಣ ಅವಳನ್ನು ನೋಡಿ, ದೇಶಾವರದ ನಗೆಯನ್ನು ನಕ್ಕು ಹಿಂದುಮುಂದೆ ತಿರುಗಲು ಪ್ರಾರಂಭಿಸಿದಾಗ, ಸೀತಾಲಕ್ಷ್ಮಿ ಚೇಷ್ಟೆಯಿಂದ ಒಂದೆರಡು ಸಲ ಆ ನಗೆಯನ್ನು ಹಿಂದಿರುಗಿಸಿಬಿಟ್ಟಳು. ಅಲ್ಲಿಗೆ ಕೃಷ್ಣನ ಕೆಲಸ ಮುಗಿದೇಹೋಯಿತು. ಸೀತಾಲಕ್ಷ್ಮಿಯನ್ನು ಮಡಿಯ ಹೆಸರಿನಲ್ಲಿ ತಿರಸ್ಕರಿಸುತ್ತಿದ್ದ ಕೃಷ್ಣ, ಕೂಡಲೇ ಅವಳ ಭಕ್ತನಾದನು. ತನ್ನ

ಪ್ರೀತಿಗಾಗಿ ಅವನು ಏನು ಮಾಡುವುದಕ್ಕೂ ಸಿದ್ಧನಾಗಿರುವನೆಂಬುದೂ, ತನ್ನ ಮಡಿಯನ್ನೂ— ಬೇಕಾದರೆ ದೇವರನ್ನೂ— ಅವನು ತನಗಾಗಿ ನರಕಕ್ಕೆ ಎಸೆಯಲು ಸಹ ಸಿದ್ಧನಾಗಿರುವುದೂ ಸೀತಾಲಕ್ಷ್ಮಿಗೆ ಗೊತ್ತಾಯಿತು. ಆಕೆ "ಈ ನಾಯಿ ಕೈಗೆ ಸಿಕ್ಕಿದೆ. ಕತ್ತಿಗೆ ಹುರಿ ಕಟ್ಟಿ ಸ್ವಲ್ಪಹೊತ್ತು ಆಡಿಸೋಣ" ಎಂದುಕೊಂಡಳು.

ಆ ದಿವಸ ಶಾಮು ಕೃಷ್ಣ ರಂಗಸ್ವಾಮಿ ಇವರೆಲ್ಲರ ತಾಯಿಯ (ಗುಂಡಣ್ಣನವರ ಮೊದಲನೆಯ ಹೆಂಡತಿ) ಶ್ರಾದ್ಧ. ಶ್ರೀರಂಗಮ್ಮನಿಗಂತೂ ಶ್ರಾದ್ಧಾದಿಗಳು ಬಂದ ದಿನ ಸಂಭ್ರಮವೋ ಸಂಭ್ರಮ. ಯಾಕೆಂದರೆ ಆ ದಿನ ಮಡಿ ಮೈಲಿಗೆಗಳ ವಿಷಯದಲ್ಲಿ ಅವಳದು ಸರ್ವಾಧಿಕಾರ. ಅಂದು ಚಿಕ್ಕ ಮಕ್ಕಳಿಗೆ ಸಹ ಅವಳಿಂದ ರಿಯಾಯ್ತಿ ದೊರೆಯುತ್ತಿರಲಿಲ್ಲ. ಅಡಿಗೆ ಕೆಲಸ ಮುಗಿಯುವವರೆಗೆ ಅವಳು ಮಕ್ಕಳನ್ನೂ ಒಳಕ್ಕೆ ಬಿಡುತ್ತಿರಲಿಲ್ಲ. ಎರಡು ಮೂರು ವರುಷದ ಹುಡುಗರು ಅಂಗಿಗಳನ್ನು ಹಾಕಿಕೊಂಡು ಒಳಕ್ಕೆ ಹೋಗುವಂತೆಯೇ ಇರಲಿಲ್ಲ. ಶ್ರೀರಂಗಮ್ಮ ವಿಕಾರವಾಗಿ ಕೂಗಿಬಿಡುತ್ತಿದ್ದಳು. "ಮಕ್ಕಳಲ್ಲಿ ಸಹ ನಿನಗೆ ಯಾಕೆ ಈ ಬೂಟಾಟಿಕೆ?" ಎಂದು ಗುಂಡಣ್ಣನವರು ಹೇಳಿದುದೊಂದೂ ಪ್ರಯೋಜನವಾಗಿರಲಿಲ್ಲ.

ಶ್ರಾದ್ಧದ ಮೊದಲ ದಿನ ಸೀತಾಲಕ್ಷ್ಮಿ ಹೊರಗಾಗಿದ್ದಳು. ಅವಳು ಮರುದಿನ ಕಣ್ಣಿಗೇ ಬೀಳಕೂಡದೆಂದು ಶ್ರೀರಂಗಮ್ಮನೂ ಶಾಮು ಕೃಷ್ಣ ಅವರ ಹೆಂಡತಿಯರೂ ಸೀತಾಲಕ್ಷ್ಮಿಗೆ ಸಾವಿರ ಸಲ ಬೋಧಿಸಿದ್ದರು. ಗುಂಡಣ್ಣನವರು "ನಿಮ್ಮ ಕೆಲಸ ನೀವು ಮಾಡಿಕೊಳ್ಳಿ. ಅವಳ್ಯಾಕೆ ನಿಮ್ಮ ಕಣ್ಣಿಗೆ ಬೀಳುತ್ತಾಳೆ. ಅದನ್ನೇ ಯಾಕೆ ಎಲ್ಲರೂ ಇಷ್ಟು ಕೂಗಬೇಕು?" ಎಂದು ಹೇಳಿದರೂ ಶ್ರೀರಂಗಮ್ಮ ಮತ್ತೆ ಮತ್ತೆ ಆ ಮಾತನ್ನು ಆಡುತ್ತಲೇ ಇದ್ದಳು. ಮರುದಿನ ಎದ್ದವಳೇ ಸೀತಾಲಕ್ಷ್ಮಿ, ತಾನು ಮನೆಯಲ್ಲಿದ್ದರೆ ಏನಾದರೂ ಒಂದು ರಾದ್ಧಾಂತವಾಗಬಹುದೆಂದು ಹೆದರಿ ಮನೆಯನ್ನೇ ಬಿಟ್ಟುಹೋಗಿ ನದಿಯ ತೀರದ ತೋಪಿನಲ್ಲಿ ಕುಳಿತಿದ್ದಳು. ಆದರೆ ಅವಳು ಹಾಗೆ ಕಣ್ಣು ಮರೆಯಾಗಿ ಹೋಗಿಬಿಟ್ಟುದರಿಂದ, ಅವಳು ಮಾಡಬಹುದಾದ ಒಂದೆರಡು ಸಣ್ಣ ಕೈ ಕೆಲಸಗಳು ಕಲ್ಯಾಣಿ ಮತ್ತು ಶ್ರೀರಂಗಮ್ಮನವರ ತಲೆಗೆ ಕಟ್ಟಿದವು. ಒಳಗೆ ಮಡಿ ಕಾರ್ಯದಲ್ಲಿರುವ ಅವರಿಗೆ, ಹೊರಗೆ ಕುಳಿತು ಸಾಸಿವೆ ಆರಿಸಿಕೊಳ್ಳಲು ಹೊತ್ತು ಎಲ್ಲಿ?

ಸಾಸಿವೆಯನ್ನು ಆರಿಸಿಕೊಳ್ಳಬೇಕಾಗಿ ಬಂದುದರಿಂದ, ಕಲ್ಯಾಣಮ್ಮನೇ ಒಬ್ಬ ಹುಡುಗನನ್ನು ತೋಪಿಗೆ ಕಳುಹಿಸಿ, ಸೀತಾಲಕ್ಷ್ಮಿಯನ್ನು ಮನೆಗೆ ಕರೆಸಿದಳು. ಸೀತಾಲಕ್ಷ್ಮಿ ಮನೆಗೆ ಬಂದು ಸಾಸಿವೆಯನ್ನು ಕೇರಿ ಮಾಡಿ ಕಲ್ಲುಗಳನ್ನು ಆರಿಸಿಕೊಟ್ಟು, ಮನೆಯ ಹಿಂದು ಹಿತ್ತಲಿಗೆ ಹೋಗಿ ಭಾವಿಯ ಕಟಕಟೆಯ ಹಿಂದೆ ಒಂದು ಗಳಿಗೆ ಬಿಸಿಲಿನಲ್ಲಿ ಕುಳಿತು ಮೈ ಬೆಚ್ಚಗೆ ಮಾಡಿಕೊಂಡು ತನ್ನ ಬಟ್ಟೆಯನ್ನು ಒಣಗಿಹಾಕಿಕೊಂಡಿದ್ದಳು. ಆ ವೇಳೆಗೆ ಶ್ರೀರಂಗಮ್ಮನೂ ಕೃಷ್ಣನೂ ಭಾವಿಯ ಸಮೀಪಕ್ಕೆ ಬಂಮುದರಿಂದ, ಹೋಗಿ ದನದ ಕೊಟ್ಟಿಗೆಯನ್ನು ಸೇರಿಕೊಂಡಳು.

ಶ್ರೀರಂಗಮ್ಮ ಶ್ರಾದ್ಧದ ವಡೆಗಾಗಿ ನೆನೆಸಿದ್ದ ಉದ್ದಿನ ಬೇಳೆಯ ಮೇಲಿನ ಹೊಟ್ಟನ್ನೆಲ್ಲ ಜಾಲಿಸಿ ಜಾಲಿಸಿ ಶುದ್ಧಿಮಾಡುತ್ತಿದ್ದಳು. ಕೃಷ್ಣ ನೀರನ್ನು ಸೇದಿ ಬೇಳೆಯ ಪಾತ್ರೆಗೆ ಹಾಕುತ್ತಿದ್ದನು. ಬೇಳೆಯನ್ನೆಲ್ಲ ಸೋದಿಸಿದನಂತರ ಶ್ರೀರಂಗಮ್ಮ ನೀನು ಇದನ್ನು ತೆಗೆದುಕೊ ಎಂದು ಬೇಳೆಯನ್ನು ಕೃಷ್ಣನ ಕೈಗೆ ಕೊಟ್ಟು ತಾನು ಬಿಂದಿಗೆಯಲ್ಲಿ ನೀರು ಸೇದಿಕೊಂಡು ಹೋಗೋಣವೆಂದು ಭಾವಿಯ ಕಟ್ಟೆಯ ಬಳಿಗೆ ಬಂದಳು ಎತ್ತರವಾದ ಎದುರು ಕಟ್ಟೆಯ ಗೋಡೆಯ ಹಿಂದೆ ನೆಲದಮೇಲೆ ಹಾಕಿದ್ದ ಬಟ್ಟೆ ಅವಳ ಕಣ್ಣಿಗೆ ಬಿದ್ದಿತು. ಅದು ಸೀತಾಲಕ್ಷ್ಮಿಯ ಚೌಕವೆಂದು ಆದನ್ನು ನೋಡಿದ ಕೂಡಲೇ ಅವಳಿಗೆ ಗೊತ್ತಾಯಿತು. ಯಾವ ಗದ್ದಲವೂ ಇಲ್ಲದೆ ಶಾಂತವಾಗಿ ಶ್ರಾದ್ಧ ನಡೆಯುತ್ತಿದ್ದುದರಿಂದ ಆಕೆಗೆ ಬಿಮ್ ಎನ್ನುತ್ತಿತ್ತು. ಸೀತಾಲಕ್ಷ್ಮಿಯ ಚೌಕವನ್ನು ನೋಡಿ, ಹಸಿವಿನಿಂದಲೂ ಕಾರ್ಯಮಾಡಿಯೂ ಬಳಲಿದ್ದರೂ ಆಕೆಗೆ ತನ್ನ ಮಡಿಪ್ರಕಾಶನದ ಒಂದು ಪ್ರಸಂಗ ದೊರೆಯಿತೆಂದು ಉತ್ಸಾಹವಾಯಿತು. ಅರ್ಧಭಾವಿಗೆ ಬಿಟ್ಟಿದ್ದ ಬಿಂದಿಗೆಯನ್ನು ಹಾಗೆಯೇ ಅವಳು ಹಿಂದಕ್ಕೆ ಎಳೆದು ಕಟ್ಟೆಯ ಮೇಲಿಟ್ಟು ಕೃಷ್ಣನಿಗೆ “ಆ ಚೌಕ ಯಾರದು ನೋಡು” ಎಂದಳು. ಅಲ್ಲಿಯವರೆಗೆ ಅದು ಕೃಷ್ಣನ ಕಣ್ಣಿಗೂ ಬಿದ್ದಿರಲಿಲ್ಲ. ನೋಡಿದಕೂಡಲೇ ಅವನಿಗೂ ಅದು ಸೀತಾಲಕ್ಷ್ಮಿಯದೆಂದು ಗೊತ್ತಾಯಿತು. ಆ ಹೆಸರಿನ ಉಚ್ಚಾರಣೆಯೇ ಕೃಷ್ಣನಿಗೆ ಸಂತೋಷವಾಗಿ “ಸೀತಾಲಕ್ಷ್ಮಿಯದು” ಎಂದನು. ಶ್ರೀರಂಗಮ್ಮನ ಮುಖ ಕೋಪದಿಂದ ಕೆಂಪಾದಂತೆ ಅವನದೂ ಆಸೆಯಿಂದ ಕೆಂಪಾಯಿತು. ಶ್ರೀರಂಗಮ್ಮನು “ಆ ಮೂಳಿಯದಲ್ಲದೆ ಇನ್ನಾರದು? ಭಾವಿ

ಆಚೆ ಅದು, ಭಾವಿ ಈಚೆ ನಾವು. ಅವಳ ಮೈಲಿಗೆಗೂ ನಮಗೂ ಎರಡು ಮೊಳ ಕೂಡ ಬಿಟ್ಟಿಲ್ಲ. ದೈವವಶಾತ್ ಈಗ ನನ್ನ ಕಣ್ಣಿಗೆ ಬಿತ್ತು. ಇಲ್ಲದೆ ಹೋಗಿದ್ದರೆ ಶ್ರಾದ್ಧವೆಲ್ಲ ಕುಲಗೆಟ್ಟು ಹೋಗುತ್ತಿತ್ತು. ಭಾವಿ ಹತ್ತಿರವೇ ಬಟ್ಟೆ ಹಾಕಬೇಕೆ? ಈ ದೊಡ್ಡ ಹಿತ್ತಲಲ್ಲಿ ಇನ್ನೆಲ್ಲೂ ಜಾಗ ಇಲ್ಲವೆ?" ಎಂದು ಹಾರಾಡಿ ಗಟ್ಟಿಯಾಗಿ "ಕಲ್ಯಾಣಿ ಕಲ್ಯಾಣಿ ಬಾ. ಈ ಬಿಂದಿಗೆಗೆ ಹುಳಿ ಹಾಕಿ ನನ್ನ ತಲೆಗೆ ಒಂದು ಬಿಂದಿಗೆ ನೀರು ಹಾಕು. ಆಮೇಲೆ ಬೇಳೇ ನೆಲ್ಲ ಮತ್ತೆ ತೊಳೆಯಬೇಕು. ಅಯ್ಯೋ! ಅಯ್ಯೋ! ಮೊದಲು ಆ ಮೂಳಿನ ಕರೆ; ಅಲ್ಲೆಲ್ಲೋ ದನದ ಕೊಟ್ಟಿಗೇಲಿ ಇರಬೇಕು. ಅವಳ ಬಟ್ಟೆ ತೆಗೆದು ಕೊಂಡು ಎಲ್ಲಾದರೂ ದೂರ ಹಾಳಾಗಲಿ ನೀನೂ ಸ್ನಾನಮಾಡಿ ಬಿಡು" ಎಂದಳು.

ಕೃಷ್ಣ, ಸೀತಾಲಕ್ಷ್ಮಿಯನ್ನು ಕರೆಯಬೇಕಾಗಲಿಲ್ಲ. ಕೊಟ್ಟಿಗೆ ಒಳಗೆ ನಿಂತಿದ್ದು ಈ ಅವಾಂತರವನ್ನು ನೋಡುತ್ತಾ ನಿರೀಕ್ಷಿಸಿದಂತೆ ಇದೊಂದು ತಲೆಯಮೇಲೆ ಬಂತೆಂದು ಹೆದರಿ ನಿಂತಿದ್ದ ಸೀತಾಲಕ್ಷ್ಮಿ, ಆ ದುರದೃಷ್ಟದ ಚೌಕವನ್ನು ತೆಗೆದುಕೊಳ್ಳಲು ತಾನೇ ಮುಂದೆ ಬಂದಳು. ಅದನ್ನು ಕಂಡು ಶ್ರೀರಂಗಮ್ಮ ಬಿಂದಿಗೆಯನ್ನೂ, ಬೇಳೆಯನ್ನೂ ಅಲ್ಲಿಯೇ ಬಿಟ್ಟು ನಾಲ್ಕು ಮಾರು ಹಿಂದಕ್ಕೆ ಓಡಿಬಿಟ್ಟಳು. ಸ್ವಲ್ಪ ತಲೆ ಕೆದರಿಕೊಂಡು ಹುಲ್ಲೆಯಂತೆ ಬೆದರುಗಣ್ಣನ್ನು ಶ್ರೀರಂಗಮ್ಮನವರೆಡೆಗೆ ಹೊಳೆಸುತ್ತ ಬರುತ್ತಿದ್ದ ಸೀತಾಲಕ್ಷ್ಮಿ ಯನ್ನು ನೋಡುತ್ತಾ ಕೃಷ್ಣ ಹಿಂದಕ್ಕೆ ಹೋಗುವುದನ್ನು ಮರೆತು, ಎಲ್ಲವನ್ನೂ ಮರೆತು, ಆಕೆಯ ಹೆಜ್ಜೆಗಳನ್ನೆಲ್ಲ ಗಮನಿಸುತ್ತಾ ಭಾವಿಯ ಕಟ್ಟೆಯ ಬಳಿ ನಿಂತನು. ಅವಳು ನೆಲದಮೇಲೆ ಹೆಜ್ಜೆಗಳನ್ನು ಇಡುತ್ತಿದ್ದರೂ ತನ್ನ ಎದೆಯ ಮೇಲೆ ಇಟ್ಟುಕೊಂಡು ಬರುತ್ತಿರುವಂತೆ ಕೃಷ್ಣನಿಗೆ ಭಾಸವಾಯಿತು. ಸೀತಾ ಲಕ್ಷ್ಮಿ ಭಾವಿಯ ಆಚೆ ಕಡೆ ಬಂದು, ಒಂದುವರೆ ಮೊಳದ ದೂರದಲ್ಲಿ ನಿಂತು ತನಗೆ ಮೈಲಿಗೆಯಾಗುತ್ತಿದ್ದರೂ, ಕೃಷ್ಣ ಮಂಕಾಗಿ ಅವಳನ್ನೇ ನೋಡುತ್ತ ನಿಂತಿದ್ದನು. ತನ್ನನ್ನು ಕೊರೆಯುವಂತೆ ಕೃಷ್ಣನ ಕಣ್ಣು ತನ್ನ ಮೇಲೆ ನೆಟ್ಟಿ ದ್ದದ್ದು ಸೀತಾಲಕ್ಷ್ಮಿಗೆ ತಿಳಿಯದೆ ಹೋಗಲಿಲ್ಲ. ಆದರೆ, ಅದರಿಂದ ಅವಳಿಗೆ ವಿನೋದವಾಯಿತೇ ಹೊರತು, ಅವಳ ಮನಸ್ಸಿನಮೇಲೆ ಮತ್ತಾವ ಪರಿ ಣಾಮವೂ ಉಂಟಾಗಲಿಲ್ಲ. ಶ್ರೀರಂಗಮ್ಮನು "ಇದೇನೊ ಹಿಂದಕ್ಕೆ ಬಾರೊ.

ಅಷ್ಟು ಹತ್ತಿರದಲ್ಲಿ ಯಾಕೆ ನಿಂತೆ" ಎಂದು ಕೂಗಿದಾಗ ಎಚ್ಚರಗೊಂಡ ಕೃಷ್ಣ ಬೆಚ್ಚಿ ಸರ್ರನೆ ನಾಲ್ಕು ಹೆಜ್ಜೆ ಹಿಂದೆ ಸರಿದನು. ಕಳ್ಳನನ್ನು ಹಿಡಿದಂತೆ ಸೀತಾಲಕ್ಷ್ಮಿ ಅವನನ್ನು ನೋಡಿ ಚೇಷ್ಟೆಯ ನಗುವನ್ನು ನಗುತ್ತಾ ತನ್ನ ಚೌಕವನ್ನು ತೆಗೆದುಕೊಂಡು ಹೊರಟುಹೋದಳು. ಅವಳು ಹೋಗಿ ಎಷ್ಟೋ ಹೊತ್ತು ಆದರೂ, ಕೃಷ್ಣನು ಅವಳ ಹೆಜ್ಜೆಯ ಗುರುತುಗಳ ಮೇಲೆ ಕಣ್ಣಿಟ್ಟು ಕೊಂಡು ಬಹಳ ಹೊತ್ತು ಅದನ್ನೇ ಮೆಲುಕುಹಾಕುತ್ತಿದ್ದನು. ಕಲ್ಯಾಣಮ್ಮ ಬಂದು ಬಿಂದಿಗೆಗೆ ಹುಳಿ ಹಾಕಿ ಶ್ರೀರಂಗಮ್ಮನ ತಲೆಗೆ ಬಿಂದಿಗೆ ನೀರು ಸುರಿದಳು. ಶಾಮು ಬಂದು ಕೃಷ್ಣನ ತಲೆಗೂ ಮತ್ತೆ ನೀರು ಹಾಕಿದನು. ಸೀತಾಲಕ್ಷ್ಮಿ ಇದನ್ನೆಲ್ಲ ನೋಡುತ್ತ ದನದ ಕೊಟ್ಟಿಗೆಯಲ್ಲಿಯೇ ಕುಳಿತಿದ್ದಳು. ಶ್ರೀರಂಗಮ್ಮ ಆವತ್ತೆಲ್ಲ ಆ ರಾದ್ಧಾಂತ ಬಿಡಲೇ ಇಲ್ಲ. ಮುಂದೆ ಅನೇಕ ದಿನಗಳವರೆಗೆ ಮಾತನಾಡಲು ಅದೇ ಅವಳಿಗೆ ಒಂದು ಸಂಗತಿ ಯಾಯಿತು.

ಆ ಮಧ್ಯಾಹ್ನ ಮೊದಲನೆಯ ಪಂಕ್ತಿಯಲ್ಲಿ ಬ್ರಾಹ್ಮಣರು ಊಟಕ್ಕೆ ಕುಳಿತರು. ಯಾರನ್ನು ಕುರಿತು ಶ್ರಾದ್ಧ ಮಾಡುತ್ತೇವೆಯೋ ಅವರ ಪ್ರತಿನಿಧಿಗಳೇ ಇವರೆಂದು ನಮ್ಮ ನಂಬಿಕೆ. ಆದುದರಿಂದ ಇವರಿಗೆ ಪಿತೃಗಳೆಂದೇ ಹೆಸರು. ಅವರು ಊಟಮಾಡುವಾಗ ಮಡಿ ಮೈಲಿಗೆಗಳ ಅವಾಂತರ ಇನ್ನೂ ಹೆಚ್ಚಾದುದರಿಂದ ಸೀತಾಲಕ್ಷ್ಮಿ ಮನೆ ಬಿಟ್ಟು ನದಿಗೆ ಹೊರಟುಹೋದಳು. ಬ್ರಾಹ್ಮಣರಿಗೂ ಅನಂತರ ಹಿಂದಲ ಪಂಕ್ತಿಯವರಿಗೂ ಊಟವಾದಮೇಲೆ ತಾನು ನಿಧಾನವಾಗಿ ಮನೆಗೆ ಬರುವುದೆಂದು ಆಕೆ ಯೋಚಿಸಿದ್ದಳು. ಶ್ರಾದ್ಧದ ದಿನದ ಅಡಿಗೆ ಊಟಮಾಡಲು ಮುಟ್ಟಾದವರಿಗೆ ಹಕ್ಕಿಲ್ಲ. ಆದುದರಿಂದ ತನಗೆ ಅಂದು ಉಪವಾಸವೇ ಆಗಬಹುದೆಂದೂ ಅವಳು ಅದಕ್ಕೆ ಸಿದ್ಧವಾಗಿದ್ದಳು. ನದಿಯಲ್ಲಿ ಬಟ್ಟೆಗಳನ್ನೆಲ್ಲ ಒಗೆದು ದಡದಲ್ಲಿ ಅವನ್ನು ಬಿಸಿಲಿನಲ್ಲಿ ಒಣಗಿಸಿ, ಬಿಸಿಲಿನ ಬೇಗೆ ಹೆಚ್ಚಾಗಿದ್ದುದರಿಂದ ತಾನೂ ನದಿಯ ಶೀತಳವಾದ ಪಾತ್ರವನ್ನು ಹೊಕ್ಕು, ಅಲ್ಲಿ ತನ್ನ ಮೈಯನ್ನು ಆ ತಂಪಾದ ನೀರಿನಲ್ಲಿ ಮುಳುಗಿಸಿಕೊಂಡಳು. ಮಧ್ಯಾಹ್ನದ ಬಿಸಿಲಿನಿಂದ ಒಂದು ಹಕ್ಕಿಯಾಗಲಿ,, ಹುಲ್ಲು ಧೂಳಾಗಲಿ ಗಾಳಿಯಲ್ಲಿ ಹಾರಾಡುತ್ತಿರಲಿಲ್ಲ. ಉರಿಬಿಸಿಲಿನಲ್ಲಿ ಹೊರಕ್ಕೆ ತಲೆಹಾಕುವ ಮನುಷ್ಯಪ್ರಾಣಿ ಯಾವುದೂ ಇರಲಿಲ್ಲ. ಎಲ್ಲಿಂದ ಎಲ್ಲಿಯ

ವರೆಗೆ ನೋಡಿದರೂ ನದಿಯ ಬೈಲು ನಿರ್ಜನವಾಗಿತ್ತು. ಆದರೆ ದಡದಿಂದ ಮೇಲಕ್ಕೆ ಕಾಣುತ್ತಿದ್ದಂತೆ, ನದಿಯತೀರ ಒಣಗಿ ನಿಂತಿರಲಿಲ್ಲ. ತೀರದ ತೋಪಿನ ಮರಗಳು ತಮ್ಮ ಹಸಿರು ಎಲೆಗಳನ್ನು ಹರಿಯುತ್ತಿದ್ದ ನೀರಿನಮೇಲೆ ಬಾಗಿಸಿ ನೀರಿನ ಕಲಕಲ ರವದ ಸಣ್ಣ ಅಲೆಗಳೊಂದಿಗೆ ಪಿಸುಮಾತನ್ನಾಡು ತ್ತಿದ್ದವು. ತೀರದ ಎರಡು ಕಡೆಯ ಮರಗಳೂ, ದೂರದಲ್ಲಿ ನದಿಯ ಮೇಲೆ ಕೆಳಗೆ ಎದ್ದು ಕಾಣುತ್ತಿದ್ದ ಗುಡ್ಡಗಳ ಮೇಲಿನಿಂದ ಬಾಗಿದ್ದ ಮರಗಳೂ ಸೇರಿ ನದಿ, ಹಸಿರು ಬಯಲಿನ ಒಂದು ಸರಸ್ಸಿನಂತೆಯೇ ತೋರುತ್ತಿತ್ತು. ಊರಿನ ಮುಂದೆ ಬಾಗಿ ಹೋಗುತ್ತಿದ್ದ ನದಿ ಶುಭ್ರವಾಗಿ ಬೆಳ್ಳಿಯ ನೊರೆಯಾಗಿ ಕುಡುಗೋಲಿನಂತೆ ಕಾಣುತ್ತಿತ್ತು. ಆ ನಿರ್ಜನಪ್ರದೇಶದಲ್ಲಿ ಸೀತಾಲಕ್ಷ್ಮಿ ತಾನೊಬ್ಬಳೇ ನದಿಯ ರಾಣಿಯಾಗಿ ಕತ್ತುದ್ದದ ನೀರಿನಲ್ಲಿ ವಿಹರಿಸುತ್ತಿದ್ದಳು. ಬಾಲ್ಯದಲ್ಲಿ ವಿನೋದಕ್ಕಾಗಿ ಇತರ ಹುಡುಗಿಯರೊಂದಿಗೆ ಮಲ್ಲಿಗೆಹಳ್ಳಿಯಲ್ಲಿ ಆಕೆ ಈಜುವುದನ್ನೂ ಕಲಿತಿದ್ದಳು. ಈಗ ನೀರನ್ನು ಹೊಕ್ಕ ಕೂಡಲೇ ಸ್ವಾಭಾವಿಕವಾಗಿ ಹಳೆಯ ಅಭ್ಯಾಸದಿಂದ ಈಜಾಡತೊಡಗಿದಳು.

ಹೀಗೆ ಬಹಳ ಹೊತ್ತು ನೀರಿನಲ್ಲಿದ್ದು ಅನಂತರ ಸೀತಾಲಕ್ಷ್ಮಿ ಮೇಲೆ ದ್ದಳು. ಕಣ್ಣಿಗೆ ಕಾಣುವವರೆಗೆ ಎಲ್ಲಿಯೂ ಮನುಷ್ಯಪ್ರಾಣಿಯ ಸಂಚಾರವೇ ಇಲ್ಲದಿದ್ದುದರಿಂದ, ಆಕೆ, ಅಸ್ತವ್ಯಸ್ತವಾಗಿದ್ದ ತನ್ನ ನೆನೆದ ಸೀರೆಯನ್ನು ಸ್ವಾಭಾ ವಿಕವಾಗಿ ನೆಲಕ್ಕೆ ಜಾರಿಸಿ ಬಿಸಿಲಿನಲ್ಲಿ ಒಣಗಿಸಿದ್ದ ತನ್ನ ಮಡಿಸೀರೆಯನ್ನು ತೆಗೆದು ಉಟ್ಟುಕೊಂಡಳು. ಆಕೆಯ ಬೆನ್ನಿನ ಕಡೆಗೆ ಹತ್ತು ಮಾರು ದೂರದಲ್ಲಿ ಮರಳಿನಮೇಲೆ ಒಂದು ಬಂಡೆಗಳ ಸಾಲು ಇತ್ತು. ಅಲ್ಲಿ ಎರಡು ಬಂಡೆಗಳು ಸೇರಿದ್ದರೂ ಅದರ ಮಧ್ಯೆ ನಿಂತರೆ, ಇತರರಿಗೆ ತಾವು ಕಾಣದಿದ್ದರೂ, ತಮಗೆ ಇತರರು ಕಾಣುವ ಒಂದು ಕಂಡಿ ಇತ್ತು. ಸೀರೆ ಉಟ್ಟುಕೊಂಡು ಸೀತಾಲಕ್ಷ್ಮಿ ಒಂದು ಸಲ ಸ್ವಾಭಾವಿಕವಾಗಿ ಆ ಕಡೆ ನೋಡಿದಳು. ಆ ಕಂಡಿಯಲ್ಲಿ ಇದ್ದ ಕ್ಕಿದ್ದಂತೆ ಅವಳಿಗೆ ಎರಡು ಕಣ್ಣುಗಳು ಕಂಡವು. ಅವು ಕೃಷ್ಣನ ಕಣ್ಣುಗಳೇ ಎಂದು ಅವಳಿಗೆ ತತ್‌ಕ್ಷಣ ಗೊತ್ತಾಯಿತು. ಕೃಷ್ಣನೂ ದೇಶಾವಾರದ ಪೆಚ್ಚು ನಗೆಯನ್ನು ನಗುತ್ತಾ ಬಂಡೆಯ ಈಚೆಗೆ ಬಂದನು. ಅವನನ್ನು ನೋಡಿದ ಕೂಡಲೇ ಅವನು ಅಲ್ಲಿ ಬಹಳ ಹೊತ್ತಿನಿಂದ ಇದ್ದಿರಬೇಕೆಂಬುದೂ, ತಾನು ಸೀರೆ ಉಟ್ಟುಕೊಳ್ಳುವಾಗ ತನ್ನ ಬರಿಮೈಯೆಲ್ಲ ಅತನಿಗೆ ಗೋಚರವಾಗಿದ್ದಿತ

ಬೇಕೆಂದೂ ಸೀತಾಲಕ್ಷ್ಮಿಗೆ ಹೊಳೆಯಿತು. ಬ್ರಾಹ್ಮಣರು ಊಟಮಾಡಿದ ಎಲೆಯನ್ನು ಶ್ರಾದ್ಧದ ದಿನ ಭೂಮಿಯಲ್ಲಿ ಹೂಳುವುದೋ ಅಥವ ನೀರಿನಲ್ಲಿ ಎಸೆಯುವುದೋ ಪದ್ಧತಿ. ಕೃಷ್ಣ ಹೊಳೆಗೆ ಎಸೆಯಲು ಬ್ರಾಹ್ಮಣರ ಎಂಜಲು ಎಲೆಗಳನ್ನು ಒಂದು ಚೌಕದಲ್ಲಿ ಕಟ್ಟಿ, ಆ ಚೌಕವನ್ನು ಕೈಯಲ್ಲಿ ಹಿಡಿದಿದ್ದವನು, ಸೀತಾಲಕ್ಷ್ಮಿಯನ್ನು ನೋಡಿದಕೂಡಲೇ, ಅವಳ ಮೂಲರೂಪದಲ್ಲಿ ಮನಸ್ಸು ನೆಟ್ಟು, ತಾನು ಬಂದ ಕಾರ್ಯವನ್ನೇ ಮರೆತು ಕೈಯಿನ ಗಂಟಿನೊಂದಿಗೆ ಸುಮ್ಮನೆ ನಿಂತಿದ್ದನು. ಸೀತಾಲಕ್ಷ್ಮಿ ತನ್ನ ಅಭಿಪ್ರಾಯ ತಿಳಿದಳೆಂಬುದು ಅವನಿಗೆ ತಿಳಿದು ಸ್ವಲ್ಪ ನಾಚಿಕೆಯಾದರೂ, ಅವನ ವಿವೇಕ ಬುದ್ಧಿ ಜಾಗ್ರತವಾಗಲಿಲ್ಲ. ಕೈಯ್ಯಲ್ಲಿದ್ದ ಗಂಟನ್ನು ಅವನು ನೋಡುತ್ತಾ "ಬ್ರಾಹ್ಮಣರ ಎಂಜಲೆಲೆ. ನೀರಿಗೆ ಹಾಕಲು ತಂದೆ" ಎಂದು ಹೇಳಿ ಅವನ್ನು ನೀರಿಗೆ ಬಿಸಾಡಿದನು. ಮನೆಯಲ್ಲಿ ನಾಲ್ಕು ಮೊಳ ದೂರದಲ್ಲಿದ್ದರೂ ಮತ್ತೊಮ್ಮೆ ಸ್ನಾನಮಾಡಿದ್ದ ಕೃಷ್ಣ, ಈಗ ತನ್ನನ್ನು ಮುಟ್ಟಿಕೊಳ್ಳುವಷ್ಟು ಹತ್ತಿರದಲ್ಲಿ ನಿಂತಿದ್ದುದು ಸೀತಾಲಕ್ಷ್ಮಿಗೆ ವಿನೋದವಾಯಿತು. ಬರಿಮೈಯಲ್ಲಿದ್ದ ತನ್ನನ್ನು ಕದ್ದು ನೋಡಿದುದರಿಂದ ಅವನಲ್ಲಿ ಅವಳಿಗೆ ಕೋಪವೂ, ತಿರಸ್ಕಾರವೂ ಉಂಟಾದರೂ, ಒಂದು ಬಗೆಯ ವಿನೋದದ ಚೇಷ್ಟೆಯೂ ಉಂಟಾಯಿತು. ಆಕೆಯು "ನನ್ನ ಮೈಲಿಗೆಯಾಗುತ್ತೆ, ದೂರ ನಿಂತುಕೊಳ್ಳಿ" ಎಂದಳು. ಕೃಷ್ಣನು "ಹಾ! ಮೈಲಿಗೆ ಮಡಿ. ನಿನಗೆ ಮೈಲಿಗೆಯೂ ಇಲ್ಲ, ಮಡಿಯೂ ಇಲ್ಲ. ನೀನು ಎಲ್ಲವನ್ನೂ ಮೀರಿದವಳು. ಅದೆಲ್ಲ ಮನೆಯವರ ಎದುರಿಗೆ ಮಾತ್ರ" ಎಂದನು. ಸೀತಾಲಕ್ಷ್ಮಿಯು "ಶ್ರೀರಂಗಮ್ಮ ಕಂಡರೆ ಮತ್ತೆ ನಿಮ್ಮನ್ನು ತಣ್ಣೀರಿನಲ್ಲಿ ಮುಳುಗಿಸುತ್ತಾಳೆ" ಎಂದಳು. ಕೃಷ್ಣನು "ಅದೊಂದು ಮುದಿ. ಅದರ ಸುದ್ದಿ ಯಾಕೆ? ಅದಕ್ಕೆ ಹುಟ್ಟಿ ಸಾಯುವವರೆಗೆ ಮಡಿ ಮೈಲಿಗೆಗಳ ಹೋರಾಟವೇ ಆಯಿತು. ನಿನಗೆ ಮೈಲಿಗೆ ಎಲ್ಲಿ ಬಂತು?" ಎಂದನು.

ಕೃಷ್ಣನು ಇನ್ನೂ ನಾಲ್ಕಾರು ಪೆಚ್ಚು ಪೆಚ್ಚು ಮಾತನ್ನಾಡಿದನು. ಮುಂದಲ ಹೆಚ್ಚು ಸರಸ ಸಂಭಾಷಣೆಗಳಿಗೆ, ಅವು ಪೀಠಿಕೆಗಳೆಂದು ಅವನ ಅಭಿಪ್ರಾಯವಾಗಿತ್ತು. ಸೀತಾಲಕ್ಷ್ಮಿಗೆ ಅವಳು ರಂಭಾಪುರಿಗೆ ಬಂದ ದಿನವೇ ಅವನ ನೀಚಸ್ವಭಾವ ಗೊತ್ತಾಗಿದ್ದುದರಿಂದ, ಅವನ ಬಲೆಗೆ ಅವಳು ಬೀಳುವ

ವಳಾಗಿರಲಿಲ್ಲ. ಆದರೆ, ಕೋಳಿಯ ಕತ್ತಿಗೆ ಹುರಿ ಕಟ್ಟಿ ಆಡಿಸುವಂತೆ ಅವನನ್ನು ಸ್ವಲ್ಪ ಲಾಗಹಾಕಿಸುವುದು, ಅವಳ ನೀರಸಬಾಳ್ವೆಗೆ ವಿನೋದವಾಗಿ ತೋರಿತು. ಗಂಡನೊಬ್ಬನನ್ನು ಬಿಟ್ಟು ಆ ಮನೆಯವರೆಲ್ಲರಮೇಲೂ ಆಕೆಗೆ ಒಂದು ವಿಧವಾದ ಸೇಡು ಇತ್ತು. ಕೃಷ್ಣನ ಹೆಂಡತಿ ಮಹಾಲಕ್ಷ್ಮಿ, ತನ್ನನ್ನು ಎಲ್ಲರಿಗಿಂತ ಹೆಚ್ಚು ನಿಕೃಷ್ಟವಾಗಿ ಕಾಣುತ್ತಿದ್ದಳು. ಅವಳು ದಿನಕ್ಕೆ ನಾಲ್ಕು ಸಲವಾದರೂ ಸೀತಾಲಕ್ಷ್ಮಿಯನ್ನು "ಹಾದರಗಿತ್ತಿ, ರಂಡೆ" ಎನ್ನದೆ ಇರುತ್ತಿರಲಿಲ್ಲ. ಆಕೆಯ ಗಂಡನನ್ನು ತನ್ನ ಕಾಲ ಕೆಳಗೆ ತುಳಿಯುವುದರಿಂದ ಅಲ ಮೇಲುವಿನ ಸೇಡನ್ನು ತೀರಿಸಿಕೊಂಡಂತೆ ಸೀತಾಲಕ್ಷ್ಮಿಗೆ ಸಮಾಧಾನ ವಾಯಿತು. ಕೃಷ್ಣನ ಪೆಚ್ಚುತನವನ್ನು ಅವಳು ಪ್ರೋತ್ಸಾಹಿಸುತ್ತಲೇ ನಡೆದಳು. ಕೃಷ್ಣನಿಗೆ ಆ ವೇಳೆಯಲ್ಲಿ ಹೆಂಡ ಕುಡಿದಂತೆಯೇ ಆಯಿತು. ಅವನಿಗೆ ಸೀತಾಲಕ್ಷ್ಮಿಯ ಮೋಹಕರೂಪಿನಿಂದ ಭ್ರಮೆಯಾಗಿತ್ತು. ಅವಳನ್ನು ಅವಳ ಮೂಲರೂಪದಲ್ಲಿ, ಮರೆಯಲ್ಲಿ ನಿಂತು ನೋಡಿದ್ದ ಅವನಿಗೆ, ನೆರಿಸೀರೆ ಯನ್ನುಟ್ಟ ನೀಳವಾದ ಅವಳ ದೇಹ ಇಮ್ಮಡಿ ಮೋಹಕವಾಗಿ ಕಾಣುತ್ತಿತ್ತು. ನೆನೆದಿದ್ದ ರೇಸಿಮೆಯಂತಹ ತನ್ನ ಹೊಳಪಾದ ಕೂದಲುಗಳನ್ನು ಬಿಡಿಸುತ್ತಿದ್ದ ಅವಳ ಚಿಗುರಿನಂತಹ ಬೆರಳುಗಳು, ಅವನ ಹೃದಯದ ವೀಣೆಯ ತಂತಿಗಳನ್ನು ಆಡಿಸುತ್ತಿದ್ದ ಬೆರಳುಗಳಾಗಿ ತೋರಿದುವು. ಆ ಗಳಿಗೆಯಲ್ಲಿ ಅವನಿಗೆ ಅವಳು "ತನ್ನ ತಮ್ಮನ ಹೆಂಡತಿ, ದಾರಿ ತಪ್ಪಿದವಳೆಂದು ನಾನು ತಿರಸ್ಕರಿಸಿದವಳು. ಯಾವಾಗಲೂ ಮೈಲಿಗೆಯವಳಂತೆ ನಮ್ಮ ಮನೆಯ ಹೊರಗೆ ನಾವು ನಿಲ್ಲಿ ಸಿರುವವಳು" ಎಂಬುದೆಲ್ಲ ಮರೆತು ಈ ಮಾಧುರ್ಯಾಕೃತಿಯನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆಯೊಂದೇ ಪ್ರಬಲವಾಯಿತು. ಆದರೂ ಕೃಷ್ಣ ಆ ಗಳಿಗೆಯಲ್ಲಿ ದುಡಕಲಿಲ್ಲ. ತನ್ನ ಆಸೆ ಸೀತಾಲಕ್ಷ್ಮಿಗೆ ತಿಳಿದಿದೆ ಎಂದು ಮಾತ್ರ ಅವನು ಸಂತೋಷಗೊಂಡನು.

ಆ ಸಾನ್ನಿಧ್ಯ ಮತ್ತಷ್ಟು ಹೊತ್ತು ಇರಲಿ ಎಂದುಕೊಂಡು ಜತೆಯಲ್ಲಿ ಮನೆಗೆ ಹೋಗೋಣವೆಂದು ಕೃಷ್ಣನು ಸೀತಾಲಕ್ಷ್ಮಿಯನ್ನು "ನಡಿ. ಮನೆಗೆ ಹೋಗೋಣ. ಇನ್ಯಾಕೆ ಈ ಬಿಸಿಲಿನಲ್ಲಿ ನಿಂತಿದ್ದೀಯ?" ಎಂದನು. ನಿರ್ಜನ ವಾದ, ಮನೆಗೆ ಹೋಗುವ ದಾರಿಯಲ್ಲಿ ಇನ್ನಷ್ಟು ಪೆಚ್ಚುಮಾತುಗಳನ್ನಾಡು ವುದು ಅವನ ಆಸೆಯೆಂದು ಆಕೆಗೆ ತಿಳಿಯಿತು. ಅವಳು ಆಗತಾನೇ ಸ್ನಾನ

ಮಾಡಿ ನೆಲದಮೇಲೆ ಕೆಡವಿದ್ದ ಒದ್ದೆ ಸೀರೆಯಕಡೆ ನೋಡುತ್ತಾ “ಇಲ್ಲ. ನೀವು ಹೋಗಿ. ನಾನು ಇನ್ನೂ ಸೀರೆ ಒಗೆದಿಲ್ಲ” ಎಂದಳು. ಕೃಷ್ಣನು “ಅದಕ್ಕೇನು ತತ್ತಾ, ನಾನು ಸೀರೆ ಒಗೆದುಕೊಡುತ್ತೇನೆ. ನಿನ್ನ ಸೀರೆ ಒಗೆದರೆ ಅವಮಾನವಿಲ್ಲ” ಎಂದು ಹೇಳಿ ಸೀತಾಲಕ್ಷ್ಮಿ ಮಾತನಾಡುವುದಕ್ಕೆ ಮುಂಚೆಯೇ ಅವಳ ಸೀರೆಯನ್ನು ಮುದುರಿ ತೆಗೆದುಕೊಂಡು ನದಿಗೆ ಇಳಿದನು. ಸೀತಾಲಕ್ಷ್ಮಿ “ಅಯ್ಯೋ! ಅಯ್ಯೋ! ಬೇಡಿ. ಅದು ಮೈಲಿಗೆ ಸೀರೆ” ಎಂದು ಕೂಗುತ್ತಿದ್ದರೂ ಕೃಷ್ಣನು ಅಗಸ ಬಟ್ಟೆ ಒಗೆಯುವಂತೆ, ಸೀರೆಯನ್ನು ರಪರಪ ಎಂದು ಝಾಡಿಸಿ ಒಗೆಯತೊಡಗಿದನು. ಕಂಬಿ ರೇಸಿಮೆಯ ಪಂಚೆಕಚ್ಚೆ, ಸೊಂಟದಲ್ಲಿ ಸುತ್ತಿದ್ದ ಮಗುಟ. ಪುಷ್ಟವಾಗಿ ಬೆಳೆದಿದ್ದ ತೋಳು, ಹೊಟ್ಟೆ, ಕುತ್ತಿಗೆಯಲ್ಲಿ ತಿದ್ದಿದಂತೆ ಇಟ್ಟುಕೊಂಡಿದ್ದ ಬಿಳಿಯ ಮತ್ತು ಕೆಂಪು ನಾಮ ಈ ಮಡಿ ವ್ಯಕ್ತಿ ಸೀರೆಯನ್ನು ಎತ್ತಿ ಎತ್ತಿ ಒಗೆಯುತ್ತಿರುವುದನ್ನು ನೋಡಿ ಸೀತಾಲಕ್ಷ್ಮಿಗೆ ನಗು ಬಂದುಬಿಟ್ಟಿತು. ಕೃಷ್ಣ ಎರಡೇ ನಿಮಿಷಗಳಲ್ಲಿ ಸೀರೆ ಯನ್ನು ಚೆನ್ನಾಗಿ ಒಗೆದು ಹಿಂಡಿ “ಎಲ್ಲಿ ಆ ಚೌಕವನ್ನೂ ಕೊಡು. ಹಿಂಡು ತ್ತೇನೆ” ಎಂದನು. ಸೀತಾಲಕ್ಷ್ಮಿ “ಬೇಡ ಬೇಡ ಅದು ನಿಮ್ಮನ್ನು ಮೈಲಿಗೆ ಮಾಡಿದ ಚೌಕ” ಎಂದಳು. ಸೀತಾಲಕ್ಷ್ಮಿ ಕೃಷ್ಣನ ಜತೆಯಲ್ಲಿ ಮನೆಗೆ ಹೊರಟಳು. ಅವಳು ಎಷ್ಟು ಸಾರಿ ಕೊಡಿ ಕೊಡಿ ಎಂದು ಕೇಳಿದರೂ ಇರಲಿ ಎಂದುಕೊಂಡು ಕೃಷ್ಣ ಸೀರೆಯನ್ನು ಕೊಡಲಿಲ್ಲ. ಸೀತಾಲಕ್ಷ್ಮಿ “ಎದುರಿಗೆ ಯಾರಾದರೂ ಬರುತ್ತಾರೆ. ಕೊಡಿ ಸೀರೆ” ಎಂದಳು. ಕೃಷ್ಣನು ದೂರದವರೆಗೆ ನೋಡಿದನು. ಎಲ್ಲಿಯೂ ನಿರ್ಜನವಾಗಿತ್ತು. ಬಂದರೆ ಬರುತ್ತಾರೆ ಎಂದು ಸೀರೆಯನ್ನು ಸೀತಾಲಕ್ಷ್ಮಿಗೆ ಕೊಟ್ಟನು. ಕೊಡುವಾಗ ಸೀತಾಲಕ್ಷ್ಮಿ ಕೈ ಯನ್ನು ಎಷ್ಟು ಹಿಂದಕ್ಕೆ ಎಳೆದುಕೊಂಡರೂ ಕೃಷ್ಣ ಅವಳ ಕೈಯನ್ನು ತನ್ನ ಕೈಗೆ ತಗಲಿಸಿಕೊಂಡು ಬಿಟ್ಟನು.

ವಾಸ್ತವವಾಗಿ ಸೀತಾಲಕ್ಷ್ಮಿಗೆ ಕೃಷ್ಣನಲ್ಲಿ ಅಸಹನೆಯಾಗಲೀ, ಜಿಗುಪ್ಸೆ ಯಾಗಲಿ ಇರಲಿಲ್ಲ. ಆದರೆ, ಅವಳು ಗಂಡನಲ್ಲಿ ಪೂರ್ಣಪ್ರೇಮವುಳ್ಳವಳಾಗಿ ಅವನ ಒಲವಿಗಾಗಿ ಹುಚ್ಚಳಾಗಿದ್ದಳು. ಆದರೆ, ಕೃಷ್ಣನಂತೆ ಸ್ತ್ರೀಯರ ಮೈಯನ್ನು ಮಾತ್ರ ಮೋಹಿಸುವವರಿಗೆ, ಅದು ಅರ್ಥವಾಗಿರಲಿಲ್ಲ. ಒಂದು ಸಲ ದಾರಿ ತಪ್ಪಿದವಳು ಎಂದೆಂದೂ ತಪ್ಪುವವಳೇ, ಎಂಬುದು ಅವರ

ಭಾವನೆಯಾಗಿತ್ತು. ಹೀಗೆ ಅವಳು ದಾರಿ ತಪ್ಪಿ ಸಾರ್ವಜನಿಕ ಸ್ವತ್ತು ಆದುದರಿಂದ ಕೃಷ್ಣನೇ ಮೊದಲಾದವರಿಗೆ "ಅವಳು ತಮ್ಮ ತಮ್ಮನ ಸ್ವತ್ತು, ನಮ್ಮ ಆಸೆಗೆ ಅರ್ಹಳಲ್ಲ" ಎಂಬ ಭಾವನೆ ಮರೆಯಾಗಿತ್ತು. ಆದರೆ, ಸೀತಾಲಕ್ಷ್ಮಿಗೆ ಮಟ್ಟಿಗೆ, ಒಂದು ಸಲ ಜಾರಿದುದು ಮರೆತೇ ಹೋಗಿ, ಅದು ಕನಸಾಗಿ ಈಚೆಗೆ ಪುನರ್ಜನ್ಮವಾಗಿ ಗಂಡನ ಹೊರತು ಇತರ ಯಾವ ಭಾವನೆಗಳೂ ನಿಜವಾಗಿ ಅಸಹ್ಯವಾಗಿದ್ದವು.

ಶ್ರಾದ್ಧವಾದ ನಾಲ್ಕು ಐದು ದಿನಗಳನಂತರ ಒಂದು ದಿನ ದೇವಸ್ಥಾನದಲ್ಲಿ ದೇವರಿಗೆ ಎಣ್ಣೆಮಜ್ಜನ (ತಿರುಮಂಜನ) ವಾದುದರಿಂದ ಗುಂಡಣ್ಣನ ಮನೆಯವರೆಲ್ಲ ದೇವಸ್ಥಾನಕ್ಕೆ ಹೋದರು. ದೇವಸ್ಥಾನದಲ್ಲಿ ಹೆಚ್ಚುಗಟ್ಟಲೆ ನಡೆದರೆ ವೈದಿಕರಾದವರ ಮನೆಯವರೆಲ್ಲ ಒಬ್ಬರೂ ಬಿಡದೆ ದೇವಸ್ಥಾನಕ್ಕೆ ಹೋಗುವುದು ಪದ್ಧತಿ. ಹಾಗೆಯೇ ಹೊಳೆಯ ಕೆಲಸವನ್ನೂ ಮುಗಿಸಿಕೊಂಡು ಬರಬಹುದೆಂದು ಹೆಂಗಸರೂ ಹೋಗುತ್ತಿದ್ದರು. ತಿರುಮಂಜನದ ದಿನ ಎಲ್ಲರೂ ದೇವಾಲಯಕ್ಕೆ ಹೋಗುವುದಕ್ಕೆ ಒಂದು ಗಂಟೆ ಮುಂಚಿತವಾಗಿಯೇ ಕೃಷ್ಣ, ಮನೆಯನ್ನು ಬಿಟ್ಟು ಎಲ್ಲಿಗೋ ಹೋದನು. ಸೀತಾಲಕ್ಷ್ಮಿ ದೇವಸ್ಥಾನಕ್ಕೆ ಹೋಗುವಂತೆ ಇರಲಿಲ್ಲ. ಕೃಷ್ಣನ ಹೆಂಡತಿ ಮಹಾಲಕ್ಷ್ಮಿಯು ಅವಳ ಮುಂದೆ ಒಂದು ಒಂದರಿ ಎಸೆದು, ತವಡಿನ ಚೀಲವನ್ನು ತೋರಿಸಿ "ಎರಡು ಸಲ ಚೆನ್ನಾಗಿ ಒನದು ಒಂದರಿಯಾಡು. ತವಡಿನಲ್ಲಿ ಉಯಿ ಸೇರಿಸಬೇಡ. ದನ ಉಚ್ಚಿಕೊಳ್ಳುತ್ತೆ" ಎಂದು ಗದ್ದರಿಸುವ ಧ್ವನಿಯಲ್ಲೇ ಹೇಳಿದಳು. ಮಾವನ ಮನೆಯ ಸ್ತ್ರೀಯರ ಪೈಕಿ ಮಹಾಲಕ್ಷ್ಮಿ ಅತ್ಯಂತ ಅಸಹನೆಯುಳ್ಳವಳೂ, ಕ್ರೂರಿಯೂ ಎಂಬುದು ಆ ಮನೆಗೆ ತಾನು ಬಂದ ದಿನವೇ ಸೀತಾಲಕ್ಷ್ಮಿಗೆ ಗೊತ್ತಾಗಿತ್ತು. ಮಹಾಲಕ್ಷ್ಮಿ, ಪುರೋಹಿತರ ಮಗಳಾಗಿದ್ದುದಲ್ಲದೆ, ಮಡಿಮೈಲಿಗೆಗಳ ಅಟ್ಟಹಾಸವನ್ನು ಬಹಳವಾಗಿ ಇಟ್ಟುಕೊಂಡಿದ್ದಳು. ಶ್ರೀರಂಗಮ್ಮನಿಗೆ ಆ ಮನೆಯಲ್ಲಿ ಪ್ರಿಯಳಾಗಿದ್ದವಳು ಅವಳೊಬ್ಬಳೇ. ಮನೆಯಲ್ಲಿ ಶ್ರೀರಂಗಮ್ಮನ ಬಾಯಿ ಬಲವಾಗಿದ್ದುದರಿಂದ, ಶ್ರೀರಂಗಮ್ಮನನ್ನು ತನ್ನ ಪರವಾಗಿ ಮಾಡಿಕೊಳ್ಳಲು ಮಹಾಲಕ್ಷ್ಮಿ ಮಡಿಯ ವೇಷವನ್ನು ಹಾಕಿದ್ದಳೋ, ಅಥವ ನಿಜವಾಗಿ ಮತ್ತೇನನ್ನೂ ಮಾಡುವುದಕ್ಕೆ ತೋಚದುದರಿಂದ, ಆ ಆಡಂಬರ ಪ್ರಾರಂಭಿಸಿದ್ದಳೋ, ಸೀತಾಲಕ್ಷ್ಮಿಗೆ ಅರ್ಥ

ವಾಗಿರಲಿಲ್ಲ. ಆದರೆ, ರಂಭಾಪುರಿಗೆ ಬಂದದಿನ, ಅವಳನ್ನು ನೋಡಿದ ಕೂಡಲೇ ಅವಳ ಕಠಿಣವಾದ ಮುಖಭಾವವನ್ನು ಕಂಡು ಸೀತಾಲಕ್ಷ್ಮಿ " ಈ ಮನೆಯಲ್ಲಿ ಇವಳೂ ನನ್ನ ಶತ್ರುವೇ " ಎಂದುಕೊಂಡಿದ್ದಳು. ಅವಳ ಆ ಅಂತರಂಗದ ಭೀತಿಗೆ ಅನುಸಾರವಾಗಿ, ಮಹಾಲಕ್ಷ್ಮಿ ಯಾವಾಗಲೂ ನಿಷ್ಕಾರಣವಾಗಿ ಅವಳನ್ನು ಸಿಡುಕುತ್ತಲೇ ಇದ್ದಳು. ಮಹಾಲಕ್ಷ್ಮಿಯ ಗಂಡ ಅವಳೊಂದಿಗೆ ಕೆಲವು ವರ್ಷಗಳಿಂದಲೇ ಸಂಸಾರಮಾಡುತ್ತಿದ್ದರೂ, ಅವನ ಕಾಮತೃಪ್ತಿಗೆ ಅವಳು ಸಾಕಾಗಿರಲಿಲ್ಲವೆಂಬುದೂ, ಗಂಡನ ಆ ಅತೃಪ್ತಿ ತನಗೆ ತಿಳಿದಿದ್ದುದರಿಂದ ಮಹಾಲಕ್ಷ್ಮಿ ಆ ಅಸಮಾಧಾನವನ್ನು ಹೀಗೆ ಬೇರೆ ಬೇರೆ ರೂಪದಲ್ಲಿ ತನ್ನ ಮೇಲೆ ಬಿಡುತ್ತಿದ್ದಳೆಂಬುದೂ, ಆ ಬಡಪಾಯಿ ಸೀತಾಲಕ್ಷ್ಮಿಗೆ ಹೇಗೆ ಗೊತ್ತಾಗ ಬೇಕು? ಮಹಾಲಕ್ಷ್ಮಿಯ ಸಿಡುಕು ಸ್ವಭಾವವನ್ನು ಸೀತಾಲಕ್ಷ್ಮಿ ನಿರೀಕ್ಷಿಸಿ ಕೊಂಡು ಅದಕ್ಕೆ ಹೊಂದಿಕೊಂಡುಬಿಟ್ಟಳು.

ತಿರುಮಂಜನದ ದಿನ ಮಧ್ಯಾಹ್ನ ಒಂದು ಗಂಟೆ ಹೊತ್ತಿನಲ್ಲಿ ಸೀತಾ ಲಕ್ಷ್ಮಿ ಒಬ್ಬಳೇ ತವಡನ್ನು ಒಂದರಿಮಾಡುತ್ತಾ ಕುಳಿತಿದ್ದಳು. ಅವಳ ಕೆದರಿದ ಮುಂಗುರುಗಳಮೇಲೆ ಅಸ್ತವ್ಯಸ್ತವಾಗಿ ತವಡಿನ ಕಣಗಳು ಕುಳಿತು ದುಂಬಿಯ ರೆಕ್ಕೆಗೆ ತಗಲಿಕೊಂಡ ಪುಷ್ಪಪರಾಗದಂತೆ ತೋರುತ್ತಿತ್ತು. ಒಂದರಿ ಯೊಡುತ್ತಾ, ಮನೆಯಲ್ಲಿ ಮತ್ತಾರೂ ಇಲ್ಲದಿದ್ದುದರಿಂದ ಆಕೆ ತನ್ನ ಪಾಡಿಗೆ ತಾನು " ಕೃಷ್ಣನ ಕೊಳಲಿನ ಕರೆ " ಎಂಬ ಹಾಡನ್ನು ಸಣ್ಣ ಒಳಧ್ವನಿಯಲ್ಲಿ ಹಾಡುತ್ತಾ ಹಾಡಿನ ಸವಿಯನ್ನು ಚಪ್ಪರಿಸುತ್ತಾ ತನ್ನಷ್ಟಕ್ಕೆ ತಾನೇ ತಲೆ ಯಲ್ಲಾಡಿಸುತ್ತಿದ್ದಳು. ದೇವಸ್ಥಾನದಲ್ಲಿ ಸಾಧಾರಣವಾಗಿ ತಿರುಮಂಜನ ವಾಗುವುದು ಸಾವಕಾಶವಾಗುತ್ತಿದ್ದುದರಿಂದ, ಇನ್ನು ಎರಡು ಮೂರು ಗಂಟೆಗಳ ಕಾಲ ಮನೆಯಲ್ಲಿ ಅವಳದೇ ಸಾಮ್ರಾಜ್ಯವಾಗಿತ್ತು. ಹೀಗೆ ಏಕಾಂತವಾಗಿ ಆಲೋಚಿಸಲು ಸಮಯ ದೊರೆತಕೂಡಲೇ, ಅವಳ ಮನಸ್ಸು ಸುಂದರರಾಜ ನಲ್ಲಿಗೆ ಹೋಯಿತು. ಅವಳು ರಂಭಾಪುರಿಗೆ ಬಂದು ಆಗಲೇ ಹದಿನೈದು ದಿನ ಗಳಾಗಿತ್ತು. ಸುಂದರರಾಜ ಇವತ್ತು ಬರುತ್ತಾನೆ, ನಾಳೆ ಬರುತ್ತಾನೆ ಎಂದು ನಿರೀಕ್ಷಿಸುವುದರಲ್ಲಿಯೇ ಎರಡು ವಾರ ಕಳೆದುಹೋಗಿತ್ತು. ಸುಂದರರಾಜನ ಮಾತು ಮನೆಯಲ್ಲಿ ನಿತ್ಯ ಬರುತ್ತಿದ್ದರೂ ಆ ಮಾತುಗಳೆಲ್ಲ, ಅವನು ಎಲ್ಲ ರಲ್ಲಿಯೂ ಸಾಲಮಾಡಿ ಹೋದ ಸುದ್ದಿಗಳೇ ಆದುದರಿಂದ, ಆ ಮಾತು

ಗಳಿಂದ ಸೀತಾಲಕ್ಷ್ಮಿಗೆ ಸಂತೋಷದ ಬದಲು ದುಃಖವೇ ಆಗಿತ್ತು. ಆದರೂ "ಎಷ್ಟು ಸಾಲಮಾಡಿದರೂ ಚಿಂತೆಯಿಲ್ಲ. ಒಂದು ಸಲ ಬಂದುಬಿಟ್ಟರೆ ಸಾಕೆಲ್ಲ" ಎಂದು ಅವಳು ಈ ಹದಿನೈದು ದಿನಗಳನ್ನು ಕಳೆದಿದ್ದಳು. ಸುಂದರ ರಾಜ ಬಂದು ಒಂದು ಸಲ ತನ್ನನ್ನು ನೋಡಿದರೆ ಪ್ರಶ್ನೆಯ ಪರಿಹಾರಮಾರ್ಗ ತೆರೆಯುವುದೆಂಬುವುದು ಅವಳ ನಚ್ಚಿನ ನಂಬಿಕೆಯಾಗಿತ್ತು. ಅಲ್ಲಿಂದ ಮುಂದಲ ಸುಖದ ಕನಸುಗಳನ್ನು ಅವಳು ಅನುಭವಿಸುತ್ತಾ ತನ್ನ ಆಗಿನ ಹೀನದೆಸೆಯನ್ನು ಮರೆಯಲು ಪ್ರಯತ್ನಿಸುತ್ತಿದ್ದಳು.

ದೇವಸ್ಥಾನಕ್ಕೆ ಎಲ್ಲರೂ ಹೊರಟುಹೋದ ಅರ್ಧಗಂಟೆಯೊಳಗೆ ಕೃಷ್ಣ ನೊಬ್ಬನೇ ಮನೆಗೆ ಹಿಂದಿರುಗಿದನು. ಹೊರಗೆ ಬಿಸಿಲಿನಲ್ಲಿ ಅಲೆದಿದ್ದುದರಿಂದ ಅವನ ಮುಖ ಬೆವತಿತ್ತು. ಬಿಸಲಿನ ತಾಪಕ್ಕೆ ಕಣ್ಣುಗಳು ಕೆಂಪಾಗಿದ್ದವು. ಅವನನ್ನು ನೋಡಿದಕೂಡಲೇ ಅವನು ಬೇಕೂ ಎಂತಲೇ ದೇವಸ್ಥಾನಕ್ಕೆ ಹೋಗದೆ ಹೀಗೆ ಒಬ್ಬನೇ ಬಂದಿರುವುದರ ಅರ್ಥ ಸೀತಾಲಕ್ಷ್ಮಿಗೆ ತಿಳಿಯಿತು. ಆದರೆ ಅವಳಿಗೆ ಭಯವಾಗಲೀ, ಗಾಬರಿಯಾಗಲೀ, ಆಗಲಿಲ್ಲ. ಜಿಗುಪ್ಸೆ ಮಾತ್ರ ಉಂಟಾಯಿತು. ಕೃಷ್ಣ ಬಂದವನೇ ಸೀತಾಲಕ್ಷ್ಮಿಯ ಮುಂದೆ ಕುಳಿತು ಅವಳು ಒಂದರಿ ಆಡುತ್ತಿದ್ದ ತವಡನ್ನು ಎರಡು ಕೈಗಳಿಂದಲೂ ನೂಕಿ ಗುಡ್ಡೆ ಮಾಡತೊಡಗಿದನು. ಅವನ ಜತೆ ಮಾತನಾಡಕೂಡದೆಂಬುದು ಸೀತಾ ಲಕ್ಷ್ಮಿಯ ಉದ್ದೇಶವಾಗಿದ್ದರೂ, ಹಾಗೆ ಅವನು ಕೆಲಸಮಾಡುತ್ತಿರುವಾಗ ಸುಮ್ಮನಿರುವುದು ಅವಳಿಂದ ಸಾಧ್ಯವಾಗಲಿಲ್ಲ. ಅವಳು "ಬೇಡ ಬಿಡಿ ಧೂಳಾಗುತ್ತೆ" ಎಂದಳು. ಕೃಷ್ಣನು ಇನ್ನೂ ತವುಡನ್ನು ಗುಡ್ಡೆ ಮಾಡುತ್ತಲೇ ಇದ್ದನು. ಸೀತಾಲಕ್ಷ್ಮಿಯು "ಯಾಕೆ ದೇವಸ್ಥಾನಕ್ಕೆ ಹೋಗಲಿಲ್ಲವೆ?" ಎಂದಳು. ಕೃಷ್ಣನು ದೇಶಾವಾರದ ನಗೆಯನ್ನು ನಗುತ್ತ ನಾಟಕದಲ್ಲಿ ಅಭಿ ನಯಿಸುವಂತೆ "ನನ್ನ ದೇವರು ಇರುವುದು ಇಲ್ಲಿ" ಎಂದು ಸೀತಾಲಕ್ಷ್ಮಿಗೆ ಕೈ ಎತ್ತಿ ಮುಗಿದನು. ಯುವಕರ ಬಾಯಿನಿಂದ ಬಂದಿದ್ದರೆ ಆ ಮಾತಿಗೆ ಸ್ವಲ್ಪ ಕಾವೂ ಕಳೆಯೂ ಇರುತ್ತಿತ್ತು. ಕೃಷ್ಣನಂತಹ ವಯಸ್ಸಾದವನ ಬಾಯಲ್ಲಿ ಬಂದ ಮಾತು ಸೀತಾಲಕ್ಷ್ಮಿಗೆ ಪ್ರೇಮದ ಮಾತಾಗಿ ತೋರಲಿಲ್ಲ. ಅದು ಮುದುಕಿಯರು ಹುಡುಗಿಯರಂತೆ ಕಾಣಲು ಮಾಡಿಕೊಳ್ಳುವ ಅಲಂ ಕಾರದಂತೆ ಅಪಹಾಸ್ಯವಾಗಿ ಕಂಡಿತು. ಆ ಮಾತು ಪೂರ್ಣವಾಗಿ ಅರ್ಥರಹಿತ

ವಾಗಿದ್ದುದರಿಂದ ಸೀತಾಲಕ್ಷ್ಮಿ ಅದಕ್ಕೆ ಪ್ರತ್ಯುತ್ತರ ಕೊಡಲಿಲ್ಲ. ಇದ್ದಕ್ಕಿದ್ದಂತೆ ಕೃಷ್ಣ ಬೀದಿಯ ಬಾಗಿಲನ್ನು ಮುಂದೆ ಬಿಟ್ಟು ಒಳಕ್ಕೆ ಬಂದವನೇ ಸೀತಾಲಕ್ಷ್ಮಿಯನ್ನು ಆಲಿಂಗಿಸಿಕೊಳ್ಳುವುದಕ್ಕೇ ಮುಂದಾದನು. ಸೀತಾಲಕ್ಷ್ಮಿಯು "ಬೇಡಿ ಬೇಡಿ ನಿಮಗೆ ಒಳ್ಳೆಯದಲ್ಲ" ಎಂದು ಎದ್ದು ಮೂಲೆಗೆ ನಿಂತಳು. ಕೃಷ್ಣನು ಮತ್ತೆ ಎರಡು ಹೆಜ್ಜೆ ಮುಂದೆ ನುಗ್ಗಿ "ದಮ್ಮಯ್ಯ, ನಿನ್ನ ಕಾಲಿಗೆ ಬೀಳ್ತೇನೆ. ನೀನು ಏನು ಹೇಳಿದರೆ ಅದನ್ನ ಕೇಳ್ತೇನೆ. ಇನ್ನು ನನ್ನಿಂದ ತಡೆಯೋದಕ್ಕಾಗೋದಿಲ್ಲ" ಎಂದು ಕೈ ನೀಡಿದನು. ಬೇರೆ ದಾರಿ ಕಾಣದೆ ಸೀತಾಲಕ್ಷ್ಮಿ ನುಗ್ಗುತ್ತಿದ್ದ ಅವನ ಮುಖಕ್ಕೆ ಒಂದರಿಕೊಟ್ಟು ಬಲವಾಗಿ ತಳ್ಳಿಬಿಟ್ಟಳು. ಎರಡು ಹೆಜ್ಜೆ ಹಿಂದಕ್ಕೆ ಸರಿದ ಕೃಷ್ಣನ ಹಣೆ, ಕಂಬಕ್ಕೆ ಬಡಿದು ಗಾಯವಾಯಿತು. ಆ ವೇಳೆಗೆ ದೇವಸ್ಥಾನಕ್ಕೆ ಹೋಗಿದ್ದ ಹುಡುಗರು ಮನೆಗೆ ಹಿಂದಿರುಗಿಯೇಬಿಟ್ಟರು. ಕೃಷ್ಣ ಊದಿದ ಹಣೆಯೊಂದಿಗೆ ಮನೆ ಬಿಟ್ಟು ಹೋದವನು ಸಾಯಂಕಾಲದವರೆಗೆ ಹಿಂದಿರುಗಲಿಲ್ಲ. ಹಿಂದಿರುಗಿದ ನಂತರ, ಅವನು ಔಷಧಿ ಹಚ್ಚಿದ್ದ ಅವನ ಹಣೆಯ ಘಾಯದ ಕಾರಣ ಯಾರಿಗೂ ತಿಳಿಯಲಿಲ್ಲ. ಕೃಷ್ಣನ ಹೆಂಡತಿ ಮಾತ್ರ ಸೀತಾಲಕ್ಷ್ಮಿಗೆ ಕೇಳುವಂತೆಯೇ ಗಂಡನನ್ನು ಸಂದೇಹದಿಂದ ನಾನಾ ಘಾಟಿ ಸವಾಲಿಗೆ ಒಳಪಡಿಸಿದಳು. ಒಂದು ಸಲ "ತೋಟಕ್ಕೆ ನುಗ್ಗಿದ್ದ ಕತ್ತೆಯನ್ನು ಹಿಂದುಗಡೆ ನಿಂತು ಓಡಿಸುತ್ತಿರುವಾಗ ಅದು ಎರಡು ಕಾಲುಗಳನ್ನೂ ಎತ್ತಿ ಒದೆಯಿತು. ನಾನು ಹಿಂದಕ್ಕೆ ನೆಗೆಯುವಾಗ ಗಿಡದ ಕೊಂಬೆ ತಗುಲಿತು" ಎಂದನು. ಮತ್ತೊಂದು ಸಲ ಯಾವುದೋ ಜ್ಞಾನದಲ್ಲಿ ಮಾತನಾಡುತ್ತಾ "ನಮ್ಮ ಕೆಂಪು ಕಡಸು ಒದೆಯಿತು" ಎಂದನು. ಮಹಾಲಕ್ಷ್ಮಿಯು "ಇದೇನು? ಆಗ ಕತ್ತೆ ಒದೆಯಿತು ಎಂದಿರೆಲ್ಲ" ಎಂದಳು. ಕೃಷ್ಣನು ಒಂದೇ ಗಳಿಗೆ ಯೋಚಿಸಿ "ಅದು ಕತ್ತೆಯಲ್ಲದೆ ಇನ್ನೇನು? ಇಲ್ಲದಿದ್ದರೆ ನನ್ನನ್ನು ಯಾಕೆ ಒದೆಯುತ್ತಿತ್ತು?" ಎಂದನು. ಎಲ್ಲ ಮಾತುಗಳನ್ನೂ ಕೇಳುತ್ತಿದ್ದ ಸೀತಾಲಕ್ಷ್ಮಿಗೆ ನಗೆ ಬಂತು. ಶಾಮನ ಮಗ ನಾರಾಯಣನು "ಬಿಡು ಚಿಕ್ಕಪ್ಪ. ಅದರ ಹತ್ತಿರ ಒದಿಸ್ಕೊಂಡು ಸುಮ್ಮನೆ ಬಿಟ್ಟುಬಿಟ್ಯ. ಹಿಡಿದು ಕಟ್ಟಿಹಾಕಿಬಿಡಬೇಕಾಗಿತ್ತು" ಎಂದನು. ಕೃಷ್ಣನು "ಅದು ಬಲು ಜೋರಿನದಪ್ಪ. ಕಟ್ಟಿಹಾಕಲು ಸಿಕ್ಕಲಿಲ್ಲ" ಎಂದನು. ಮಹಾಲಕ್ಷ್ಮಿಯ ಹೊರತು ಉಳಿದವರಾರೂ ಆ ವಿಷಯವನ್ನು ಹೆಚ್ಚಾಗಿ ಹಚ್ಚಿ

ಕೊಳ್ಳಲಿಲ್ಲ. ಆದರೆ, ಓರಗಿತ್ತಿಯರಿಗೆ ಸ್ವಲ್ಪ ಅನುಮಾನವೂ ಮಹಾಲಕ್ಷ್ಮಿಗೆ ಪೂರ್ತಿ ಅನುಮಾನವೂ ಇರುವುದು ಸೀತಾಲಕ್ಷ್ಮಿಗೆ ಸ್ಪಷ್ಟವಾಯಿತು.

ಹಿಂದೆ ಹೇಳಿದ ಸಂಗತಿ ನಡೆದನಂತರ ಕೃಷ್ಣನ ಕ್ರೌರ್ಯವೂ ನೀಚ ಸ್ವಭಾವವೂ ಮೊದಲಿಗಿಂತ ನೂರುಮಡಿ ಹೆಚ್ಚಾದುದು ಸೀತಾಲಕ್ಷ್ಮಿಯ ಅನುಭವಕ್ಕೆ ಬಂದಿತು. ಕಲ್ಯಾಣಮ್ಮ ರಂಗಣ್ಣ ಇಬ್ಬರ ಹೊರತು ಉಳಿದವರೆಲ್ಲರೂ ಬಾಯಲ್ಲಿ ಉಚ್ಚರಿಸದಿದ್ದರೂ, ಸೀತಾಲಕ್ಷ್ಮಿಯನ್ನು ಮನೆಯಿಂದ ಹೊರಡಿಸುವ ಗುರಿಯಲ್ಲಿ ಒಮ್ಮುಖವಾಗಿದ್ದರು. ಸೀತಾಲಕ್ಷ್ಮಿಯ ಪ್ರೈಮಿನ ಆಸೆಯಿಂದ ಆವರೆಗೆ ಸಹನೆಯಿಂದಿದ್ದ ಕೃಷ್ಣ, ಆ ಆಸೆ ನೆರವೇರುವುದರಲ್ಲಿ ವಿಫಲನಾದುದರಿಂದ ಸೀತಾಲಕ್ಷ್ಮಿಯ ಜೀವನವನ್ನು ಮಣ್ಣುಗೂಡಿಸಲು ದೃಢಸಂಕಲ್ಪನಾದನು. ಶ್ರೀರಂಗಮ್ಮನು "ನೀನು ಹೊರಟೇಬಿಡು, ಬೇಕಾದರೆ ಸುಂದರರಾಜ ಬಂದನಂತರ ಮತ್ತೆ ಬರುವಿಯಂತೆ" ಎನ್ನ ತೊಡಗಿದಳು. ಹೀಗೆ ಸುತ್ತಲೂ ತನ್ನನ್ನು ಹೊಡೆಯಲು ನಿಂತಿರುವ ಬೇಟೆಗಾರರ ನಡುವಣ ಪ್ರಾಣಿಯಂತೆ, ಸೀತಾಲಕ್ಷ್ಮಿ ಯಾವಾಗ ಏಟು ಬೀಳುವುದೋ ಎಂದು ಹೆದರಿ ಹೆದರಿ ಆ ಮನೆಯಲ್ಲಿ ಎರಡು ವಾರಗಳನ್ನು ಕಳೆದಳು.

ಗುಂಡಣ್ಣ ಕಲ್ಯಾಣಮ್ಮ ಇವರಿಬ್ಬರೇ ಆಕೆಯ ವಿಷಯದಲ್ಲಿ, ಹೊರಗೆ ತೋರಿಸದಿದ್ದರೂ, ಸ್ವಲ್ಪವಾದರೂ ಸಹಾನುಭೂತಿಯುಳ್ಳವರಾಗಿದ್ದವರು. ಕಲ್ಯಾಣಮ್ಮನ ಮಾತು ಮನೆಯಲ್ಲಿ ಏನೂ ನಡೆಯುತ್ತಿರಲಿಲ್ಲವೆಂಬುದು ರಂಭಾಪುರಿಗೆ ಬಂದ ದಿನವೇ ಸೀತಾಲಕ್ಷ್ಮಿಗೆ ತಿಳಿಯಿತು. ಕಲ್ಯಾಣಮ್ಮನಿಗೆ ಪ್ರತಿಭಟಿಸುವ ಶಕ್ತಿ ಸಹ ಇರಲಿಲ್ಲ. ಅವಳೂ ತನ್ನಂತೆಯೇ ದೀನಳೆಂಬುದು ಸೀತಾಲಕ್ಷ್ಮಿಗೆ ತಿಳಿಯಿತು. ತನ್ನಹಾಗೆ ಪ್ರತಿಭಟಿಸುವ ಶಕ್ತಿ ಸಹ ಅವಳಿಗೆ ಇಲ್ಲವೆಲ್ಲ ಎಂದು ಸೀತಾಲಕ್ಷ್ಮಿಗೆ ಅತ್ತೆಯಲ್ಲಿ ಕನಿಕರವುಂಟಾಯಿತು. ಒಂದು ಕಡೆ ಮಡಿದ ಸವತಿಯ ಮಕ್ಕಳಾದ ಶಾಮು, ಕೃಷ್ಣ, ರಂಗಸ್ವಾಮಿ ಅವರ ಹೆಂಡತಿಯರು, ಶ್ರೀರಂಗಮ್ಮ, ಉದಾಸೀನನಾದ ವೃದ್ಧಪತಿ, ಮತ್ತೊಂದೆಡೆ, ತಾನು, ಹೀಗೆ ಒಬ್ಬಂಟಿಗಳಾದ ಕಲ್ಯಾಣಿ. ಉಳಿದವರಿಲ್ಲದೆ ಬರಿಯ ಅತ್ತೆ ಮಾವ ಮಾತ್ರ ಇದ್ದಿದ್ದರೆ, ಅವರಿಗೆ ತನ್ನ ಪಶ್ಚಾತ್ತಾಪದ ಅರಿವು ಮಾಡಿಕೊಟ್ಟು, ಅವರ ಕ್ಷಮೆಯನ್ನು ತಾನು ಸುಲಭವಾಗಿ ಹೊಂದಬಹುದಾಗಿದ್ದಿತೆಂಬ ನಂಬಿಕೆ ಸೀತಾಲಕ್ಷ್ಮಿಗೆ ಇತ್ತು.

ಸೀತಾಲಕ್ಷ್ಮಿ ಆ ಮನೆಯಲ್ಲಿ ಎರಡು ವಾರ ಕಳೆದುದೂ ಕಲ್ಯಾಣಮ್ಮನ ಮೌನ ಸಹಾನುಭೂತಿಯಿಂದಲೇ, ಆದರೆ ಆ ಸಹಾನುಭೂತಿ ತನ್ನನ್ನು ಕಾಯಲಾರದೆಂಬುದನ್ನು ಅರಿಯಲು ಅವಳಿಗೆ ಹೆಚ್ಚುಕಾಲ ಬೇಕಾಗಲಿಲ್ಲ.

## ೧೮

ಕೃಷ್ಣನನ್ನು ಎದುರಿಸಿದುದರಿಂದ ಎಂತಹ ಮೋಸಗಾರ, ನಾಗರಹಾವು ತನ್ನ ವಿರೋಧಿಯಾಯಿತೆಂಬ ಅನುಭವ ಸೀತಾಲಕ್ಷ್ಮಿಗೆ ಉಂಟಾಗಲು ಹೆಚ್ಚುಕಾಲ ಬೇಕಾಗಲಿಲ್ಲ. ತಾನು ರಂಭಾಪುರಿಗೆ ಬಂದು ಹದಿನೈದು ದಿನಗಳಾದರೂ, ಸುಂದರರಾಜ ಇನ್ನೂ ಊರಿಗೆ ಹಿಂದಿರುಗದುದರಿಂದ, ಸದ್ಯಕ್ಕೆ ಮಲ್ಲಿಗೆಹಳ್ಳಿಗೆ ಹೋಗುವುದರ ಹೊರತು ತನಗೆ ಬೇರೆ ಮಾರ್ಗವಿಲ್ಲವೆಂದು ಸೀತಾಲಕ್ಷ್ಮಿ ತೀರ್ಮಾನಿಸಿಕೊಂಡಳು. ಅವಳಿಗೆ ಸುಂದರರಾಜನ ವಿಳಾಸವೇ ತಿಳಿಯಲಿಲ್ಲ. ತಿಳಿದಿದ್ದರೆ, ಅವನಿದ್ದಲ್ಲಿಗಾದರೂ ತಾನು ಹೋಗಬಹುದೆಂಬ ಧೈರ್ಯ ಆಕೆಗೆ ಇತ್ತು. ಮನೆಯವರ ಮಾತುಕಥೆಗಳಿಂದ ಸುಂದರರಾಜ ಎಲ್ಲಿ ಬೇಕಾದರೂ ತಿರುಗುತ್ತಿರಬಹುದೆಂದೂ, ಒಂದು ವೇಳೆ ಬೆಂಗಳೂರಲ್ಲಿಯೇ ಇದ್ದರೂ ಇರಬಹುದೆಂದೂ ಆಕೆಗೆ ತಿಳಿಯಿತು. ಆದರೆ, ಬೆಂಗಳೂರಿನಲ್ಲಿ ಆತನನ್ನು ಹುಡುಕುವುದೆಲ್ಲಿ? ತನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವವರಾರು?

ಸೀತಾಲಕ್ಷ್ಮಿಯ ಯೋಚನಾತರಂಗಗಳು ಇದ್ದಕ್ಕಿದ್ದಂತೆ ನಿಂತು ಹೋದವು. ಒಳಗಡೆ ಮಹಾಲಕ್ಷ್ಮಿಯು "ಸ್ನಾನಮಾಡುವಾಗ ಈಗತಾನೆ ಬಿಚ್ಚಲು ಕಟ್ಟೆಯಮೇಲೆ ಇಟ್ಟೆ. ಇದನ್ನು ತೆಗೆದುಕೊಳ್ಳುವುದಕ್ಕೆ ಇನ್ನಾವ ಪಿಶಾಚಿ ಬರುತ್ತೆ? ಆಶ್ಚರ್ಯವಾಗಿದೆ" ಎಂದು ಹೇಳುತ್ತಿದ್ದಳು. ಅದು ಹೇಗೋ ಇದ್ದಕ್ಕಿದ್ದಂತೆ ಸೀತಾಲಕ್ಷ್ಮಿಗೆ, ಇದು ತನ್ನ ಕಡೆಗೆ ಎಸೆಯುವ ಕಲ್ಲು ಎಂದು ಸ್ಪಷ್ಟವಾಯಿತು. ಅವಳಿಗೆ, ವಿಷಯ ಏನಿರಬಹುದೆಂದು ತಿಳಿಯುವುದಕ್ಕೆ ಮುಂಚೆಯೇ, ಒಂದು ವಿಧವಾದ ಅಪಶಕುನದಂತೆ ಕೊನೆಯಲ್ಲಿ ಅದು ತನಗೇ ತಗುಲುವುದೆಂದು ಅರ್ಥವಾಯಿತು. ಹೋಗಿದ್ದ ಪದಾರ್ಥ ಸಾಮಾನ್ಯವಾದುದಲ್ಲ, ಬೆಲೆಯಾದುದೆ? ಮಹಾಲಕ್ಷ್ಮಮ್ಮನ ಕತ್ತಿನ ಅರ್ಧ ಸೇರಿನ ಚಿನ್ನದ ಲವಂಗದ ಸರ. ಒಂದೇ ನಿಮಿಷದಲ್ಲಿ ಮನೆಯಲ್ಲೆಲ್ಲ ಬೊಬ್ಬೆ ಎದ್ದು

ಹೋಯಿತು. ಪ್ರತಿಯೊಬ್ಬರೂ ಹೆಚ್ಚು ಮಾತುಗಳನ್ನೇ ಆಡದೆ ಸ್ವಾಭಾವಿಕ ವಾಗಿಯೇ ಸೀತಾಲಕ್ಷ್ಮಿಯ ಮೇಲೆ ದೂರು ಹಾಕಿದರು. ಅವರ ಮಾತುಗಳ ಧಾಟಿಯನ್ನು ಕೇಳಿ ಸೀತಾಲಕ್ಷ್ಮಿಯ ಎದೆ ಒಡೆಯಿತು. "ತನ್ನನ್ನು ಹೊರಡಿ ಸುವುದಕ್ಕೆ ಈ ಸುಳ್ಳು ಅಪವಾದವನ್ನು ನನ್ನಮೇಲೆ ಹೊರಿಸುವುದು ಬೇಕಾ ಯಿತೆ? ಎಂದು ಅವಳು ನಿಟ್ಟುಸಿರುಬಿಟ್ಟಳು. ಆಗಲಿ ನನ್ನ ಹಣೆಯಲ್ಲಿ ಇನ್ನೂ ಏನೇನನ್ನೂ ಅನುಭವಿಸುವುದು ಬರೆದಿದೆಯೋ" ಎಂದು ಅತ್ತಳು.

ಗುಂಡಣ್ಣನವರದು ಕೇವಲ ಬಡಸಂಸಾರ. ಆ ಮನೆಯ ಗಂಡಸರಿಗೆಲ್ಲ ಸಾಲ. ಹೆಂಗಸರ ಮೈಮೇಲೆ ಒಂದು ಕಾಸಿನ ಚಿನ್ನದ ಬಳೆ, ಒಡವೆಗಳೂ ಇರಲಿಲ್ಲ. ಮಹಾಲಕ್ಷ್ಮಿಯೊಬ್ಬಳ ಕತ್ತಿನಲ್ಲಿಯೇ ಆ ಒಂದು ಅರ್ಧ ಸೇರಿನ ಚಿನ್ನದ ಸರ ಇದ್ದದ್ದು. ಅದನ್ನೂ ಆಕೆಯ ತವರುಮನೆಯಲ್ಲಿ ಮಾಡಿಸಿ ಕೊಟ್ಟಿದ್ದು. ಶಾಮು, ರಂಗಸ್ವಾಮಿಯರ ಹೆಂಡತಿಯರಿಗೂ ತವರುಮನೆಗಳಲ್ಲಿ ಎರಡು ತೊಲ, ಮೂರು ತೊಲಗಳ ಚಿನ್ನ ಹಾಕಿದ್ದರು. ಇಲ್ಲವೆಂದಲ್ಲ. ಆದರೆ ಅವೆಲ್ಲವೂ ಗುಂಡಣ್ಣನವರ ಸಂಸಾರದ ಖರ್ಚಿಗೆ ಮಾಯವಾಗಿದ್ದುವು. ಗುಂಡಣ್ಣನವರ ದೊಡ್ಡ ಜೋಡಿ ಎತ್ತುಗಳ ಪೈಕಿ ಒಂದು ಕೊಂಕಿ ಸತ್ತಾಗ, ಶಾಮನ ಹೆಂಡತಿಯ ಚಿನ್ನದ ಬಳೆಯನ್ನು ಮಾರಿ, ಶಾಮನು ಜೋಡಿಗಾಗಿ ಮತ್ತೊಂದು ಎತ್ತನ್ನು ತಂದನು. ಗಂಡ ಒಡವೆಯನ್ನು—ಅದರಲ್ಲಿಯೂ ತವರುಮನೆಯವರು ಕೊಟ್ಟಿದ್ದ ಒಡವೆಯನ್ನು ತೆಗೆದುಕೊಂಡರೆ—ಯಾವ ಹೆಂಡತಿತಾನೆ ಸುಮ್ಮನಿರುತ್ತಾಳೆ? ಶಾಮನ ಹೆಂಡತಿಯೂ ಸುಮ್ಮನೆ ಇರಲಿಲ್ಲ. ಆದರೆ ಅವಳು ಸಾಧು ಪ್ರಾಣಿಯಾದುದರಿಂದ ಗಂಡನಮೇಲೆ ಹೆಚ್ಚಾಗಿ ಜೋರುಮಾಡದೆ ಒಳಗೊಳಗೇ ಅಳುತ್ತಿದ್ದಳು. ಬಡವರಿಗೆ ಯಾವಾಗಲೂ ಮರದೃಷ್ಟವೇ. ಸ್ವಲ್ಪ ದಿನಗಳೊಳಗಾಗಿ ತೋಟದ ಅಗತೆ ಬಂತು. ಜತೆಯಲ್ಲಿ ತೋಟದಲ್ಲಿ ಕಡಗು ತೆಗೆಯುವುದು. ಕೆಲವು ದಿಬ್ಬಗಳನ್ನು ಹೀಜಿಸಿ ನೆಲ ಸಮ ಮಾಡಿಸುವುದು ಮುಂತಾದುವುಗಳಿಗಾಗಿ ನೂರಾರು ರೂಪಾಯಿಗಳು ಬೇಕಾದವು. ರಂಗಸಾಮಿಯ ಕಣ್ಣು ಹೆಂಡತಿಯ ಕೈಯ್ಯಲಿದ್ದ ಮೂರು ತೊಲ ಬಳೆಯಮೇಲೆ ಹೋಯಿತು. ಆಕೆ ಬಹಳ ಬುದ್ಧಿವಂತೆ. ಬಳೆಯನ್ನು ಉಳಿಸಿ ಕೊಳ್ಳಬೇಕೆಂದು ಏನೇನೋ ಸಾಹಸಮಾಡಿದಳು. ಆದರೆ ಬಡತನದ ಮುಂದೆ ಅವಳ ಬುದ್ಧಿ ಏನೂ ಹಾಯಲಿಲ್ಲ. ಒಂದು ದಿನ ರಂಗಸಾಮಿ ಕೋಪಗೊಂಡು

ಸಾಯಂಕಾಲದವರೆಗೆ ಊಟಮಾಡದೆ ಕುಳಿತಿದ್ದು ಕೊನೆಗೆ ಬಳೆಯನ್ನು ಹಾರಿಸಿಕೊಂಡು ಹೋಗಿ ಮಾರಿಬಂದು, ಎರಡುವಾರ ಕಾಲ ಆಳುಗಳಿಗೆ ನಿತ್ಯಾ ಕೂಲಿ ಕೊಟ್ಟುಬಿಟ್ಟನು. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ. ರಂಗಸಾಮಿಯ ಹೆಂಡತಿ ನಾಲ್ಕಾರುದಿನ ಊಟ ಮಾಡಲಿಲ್ಲ. ಹೊಳೆಗೆ ಬೀಳು ತ್ತೇನೆ ಎಂದು ಮನೆಯಲ್ಲಿ ಹೆದರಿಸಿದಳು. ಆದರೆ ಯಾರೂ ಅವಳನ್ನು ತಡೆಯು ವುದಕ್ಕೆ ಹೋಗದುದರಿಂದ,ಅದರಿಂದ ಹೆಚ್ಚು ಪ್ರಯೋಜನವಾಗದೆಂದು ಸುಮ್ಮ ನಾದಳು. ಎಲ್ಲವೂ ಬೇಜಾರಾಗಿ ಮಳೆ ಛಳಿ ಎನ್ನದೆ ಒಂದು ತಿಂಗಳು ನದಿ ಯಲ್ಲಿ ಸ್ನಾನಮಾಡುತ್ತ ಒದ್ದೆ ಬಟ್ಟೆಯೊಂದಿಗೆ ಮನೆಗೆ ಬರುತ್ತಿದ್ದಳು. ಈ ವೈಪರೀತ್ಯಗಳಿಂದ ಆಕೆಗೆ ಜ್ವರ ಬಂತು. ಜ್ವರದಲ್ಲೆಲ್ಲ ಆಕೆ "ಬಳೆ. ಬಳೆ" ಎಂದು ಕೊರಗಿದಳು. ಅನಂತರ ಹದಿನೈದು ದಿನ ಆಕೆಗೆ ಸ್ವಲ್ಪ ಹುಚ್ಚು ಸಹ ಹತ್ತಿದಂತಾಗಿ, ಯಾವಾಗಲೂ ನಾರನ್ನು ಕೈಗೆ ಬಳೆಯಹಾಗೆ ಸುತ್ತಿ ಕೊಳ್ಳುತ್ತಿದ್ದಳು. ನೆಲದಮೇಲೆ ರಂಗೋಲೆಯಲ್ಲಾಗಲ್ಲೀ ಮಸಿಯಲ್ಲಾಗಲೀ ಬಳೆಯ ಆಕಾರವನ್ನೇ ಬರೆಯುತ್ತಿದ್ದಳು. ಎಲೆಗೆ ಅನ್ನವನ್ನು ಹಾಕಿದರೆ ಅದನ್ನು ಬಳೆಯಂತೆ ಮಾಡಿ ಊಟಮಾಡದೆ ಕೈಯಲ್ಲಿ ಸವರುತ್ತಾ ಕುಳಿತಿರು ತ್ತಿದ್ದಳು. ಊರವರು "ಈಕೆಗೆ ಹಿಡಿದಿರುವುದು ಬಳೆಯ ಹುಚ್ಚು. ಮಾಡಿಸಿ ಕೊಟ್ಟುಬಿಡಿ" ಎಂದು ಎಷ್ಟು ಹೇಳಿದರೂ ಮಾಡಿಸುವುದಕ್ಕೆ ಶಕ್ತಿ ಇಲ್ಲದುದ ರಿಂದ ರಂಗಸ್ವಾಮಿ ಸುಮ್ಮನಿದ್ದನು. ಗುಂಡಣ್ಣನವರು "ತೋಟದ ಕಾರ್ಯ ಈಗ ಯಾರಿಗೆ ಬೇಕಾಗಿತ್ತು?" ಎಂದು ರೇಗಾಡಿದರು. ಯಾರೂ ತನಗೆ ಯಾವ ಶಾಂತಿಯನ್ನೂ ಮಾಡದುದರಿಂದ, ಹುಚ್ಚು ತನ್ನ ಪಾಡಿಗೆ ತಾನೇ ಶಮನವಾಯಿತು. ಆದರೆ, ರಂಗಸಾಮಿಯ ಹೆಂಡತಿ ಅಲ್ಲಿಂದ ಈಚೆಗೆ ನಕ್ಕು ದ್ದನ್ನೇ ಯಾರೂ ಕಂಡಿಲ್ಲ. ಆದರೆ ಆಕೆಯ ಓರಗಿತ್ತಿಯರು ಮಾತ್ರ "ಅಬ್ಬ. ಬಳೆಗೆ ಎಷ್ಟು ವೇಷ ಹಾಕಿಬಿಟ್ಟಳು" ಎನ್ನುತ್ತಾರೆ.

ಓರಗಿತ್ತಿಯರು ಇನ್ನು ಮುಂದಲ ಸರದಿ ಯಾರದೋ ಎಂದು ಯೋಚಿಸು ತ್ತಿರುವಾಗ ಬಡಿತ ಬಂದು "ಕಿರಿಯ ಸೊಸೆ (ಶ್ರೀನಿವಾಸನ ಹೆಂಡತಿ) ಭಾಗೀರಥಿಗೆ ಬಡಿಯಿತು. ಅದೂ ಶ್ರೀನಿವಾಸ ಮಾಡಿಕೊಂಡ ಚೇಷ್ಟೆಯೇ. ಅದು ಸಂಭವಿಸಿದ್ದು ಹೀಗೆ. ಗುಂಡಣ್ಣನವರ ತೋಟದಿಂದ ಮೇಲುಗಡೆಗೆ ಅವರಿಗೆ ಸೇರಿದ ಒಂದು ಕಲ್ಲು ಹಾಳು ಹೊಲ ಇತ್ತು. ಅದು ಒಂದು ಮಂಟೆ.

ಅಲ್ಲೊಂದು ಯಾತದ ಭಾವಿ ತೆಗೆದು ಆ ನೀರಿನಿಂದ ಆ ಹಾಳನ್ನು ಸಾಗುವಳಿ ಮಾಡಬೇಕೆಂದು ಶ್ರೀನಿವಾಸ ಆರಂಭಿಸಿದನು. ಭಾವಿ ಪೂರ್ತಿಯಾದರೆ ಸರ್ಕಾರದಿಂದ ಅರ್ಧ ಹಣ ಬರುವ ಆಸೆಯೂ ಇತ್ತು. ಆದರೆ ಭಾವಿ ಎಷ್ಟು ಆಳ ತೆಗೆದರೂ ನೀರಿನ ಕಂಡು ಸಿಕ್ಕಲಿಲ್ಲ. ಹೆಜ್ಜೆಹೆಜ್ಜೆಗೂ ಕಲ್ಲಿನ ಭಂಡೆ ಗಳಿಗೆ ಡೈನಾಮಿಟ್ ಹಾಕಬೇಕಾಯಿತು. ಸುಮಾರು ಎಪ್ಪತ್ತು ಅಡಿ ಆಳ ಹೋದರೂ ನೀರು ಬರಲಿಲ್ಲ. ಶ್ರೀನಿವಾಸ ಆ ಸ್ಥಳ ಬಿಟ್ಟು ಬೇರೊಂದು ಕಡೆ ಭಾವಿ ಪ್ರಾರಂಭಿಸಿದನು. ಇವೆಲ್ಲ ಅವರವರ ತೆವಲುಗಳಾದುದರಿಂದ ಅವರವರೇ ಹಣ ಹೊಂದಿಸಿಕೊಳ್ಳಬೇಕಾಗಿತ್ತು. ಭಾಗೀರಥಿಯ ಕೈಯ್ಯಲ್ಲಿ ಇದ್ದುದೂ ಮೂರು ತೊಲದ ಚಿನ್ನವೇ. ಆ ದಿನ ಭಾಗೀರಥಿಯ ತಂದೆಯೂ ಮಗಳನ್ನು ನೋಡಿಕೊಂಡು ಹೋಗಲು ರಂಭಾಪುರಿಗೆ ಬಂದಿದ್ದರು. ಶ್ರೀನಿ ವಾಸ ಭಾಗೀರಥಿಯಿಂದ ಬಳೆ ತೆಗೆದುಕೊಳ್ಳಲು ಯತ್ನಿಸಿದನು. ಭಾಗೀರಥಿ ಒಪ್ಪಲಿಲ್ಲ. ಭಾಗೀರಥಿ ಯಾವಾಗಲೂ ವಿಧೇಯಳಾದ ಹೆಣ್ಣು. ಅಂದು ಅವಳ ಮೊಂಡತನ ಕಂಡು ಶ್ರೀನಿವಾಸನಿಗೆ ಕೋಪ ಬಂತು. ಅಪನಲ್ಲಿಯೇ ಅವನಿಗೆ ತಿರಸ್ಕಾರವೂ ಉಂಟಾಗಿತ್ತು, ತಂದೆ ಬಂದಿರುವುದರಿಂದ ಅವರ ಬಲದಿಂದ ಭಾಗೀರಥಿ ಹೀಗೆ ವಕ್ರವಾಗಿ ನಡೆಯುತ್ತಿರುವಳೆಂದು ಅವನು ಭಾವಿಸಿ ಭಾಗೀರಥಿಗೆ ಬಡಿದನು. ಆಕೆ ಏನಾದರೂ ಒಡವೆ ಕೊಡಲು ಒಪ್ಪಲಿಲ್ಲ. ಶ್ರೀನಿವಾಸ ಅವಳಿಗೆ ಇನ್ನೂ ನಾಲ್ಕು ಬಡಿದು ಒದ್ದನು. ನೋವನ್ನು ತಾಳಲಾರದೆ ಅವಳು ಕೂಗಿಕೊಂಡುಬಿಟ್ಟಳು. ಅದನ್ನು ಕೇಳಿ ಆಕೆಯ ತಂದೆ ಅಲ್ಲಿಗೆ ಬಂದರು. ಅವರಿಗೂ ಶ್ರೀನಿವಾಸನಿಗೂ ಮಾತು ಮಸೆ ಯಿತು. "ಹೆಣ್ಣನ್ನು ಹೊಡೆಯುವುದೆ? ಹೊಟ್ಟೆಯ ಸಂಕಟ ತಾಳಲಾರೆನೆಲ್ಲ. ಹೆಣ್ಣನ್ನು ಹೆತ್ತು ನಿಮಗೆ ಕೊಟ್ಟುದು ಇದಕ್ಕೇಯೆ. ಅಯ್ಯೊ!" ಎಂದು ಅವರು ಬಾಯಿ ಬಡಿದುಕೊಂಡು ತಮ್ಮ ಉಬ್ಬಿದ ಹೊಟ್ಟೆಯನ್ನು ಗುದ್ದಿಕೊಂಡು ಊರಿಗೆ ಹೊರಟೇಹೋದರು. ಆದರೆ, ಭಾಗೀರಥಿಗೆ ಬಳೆ ಉಳಿಯಲಿಲ್ಲ. ಊರವರಿಗೆಲ್ಲ ಈ ವಿಷಯಗಳೆಲ್ಲ ಗೊತ್ತಾಗುತ್ತಿದ್ದವು. ಅವರು "ಹೆಂಡತಿಯ ತವರುಮನೆಯ ಒಡವೆ ಗಂಡ ತೆಗೆದುಕೊಳ್ಳಬಾರದೆಂದು ಕೆಲವರೂ ಗಂಡನ ಪ್ರಾಣ ಹೋಗುತ್ತಿರಬೇಕಾದರೆ ಹೆಂಡತಿಗೆ ಆ ಒಡವೆಯಿಂದ ಏನು ಪ್ರಯೋ ಜನ?" ಎಂದು ಕೆಲವರೂ ಹೇಳಿಕೊಳ್ಳುತ್ತಿದ್ದರು. ಗುಂಡಣ್ಣನವರಿಗೆ

ಆಗದವರು "ಎಲ್ಲರೂ ಆಯಿತು. ಇನ್ನು ಮಹಾಲಕ್ಷ್ಮಿಯದು ಉಳಿದಿದೆ. ಅದಕ್ಕೆ ಗಡು ಯಾವತ್ತು ಬರುತ್ತದೋ?" ಎನ್ನುತ್ತಿದ್ದರು.

ಆದರೆ, ಮಹಾಲಕ್ಷ್ಮಿ ಅಷ್ಟು ಸುಲಭವಾಗಿ ಆ ಬಲೆಗೆ ಬೀಳುವವಳಾಗಿರಲಿಲ್ಲ. ಸೀತಾಲಕ್ಷ್ಮಿಗೆ ಮದುವೆಯಾಗುವುದಕ್ಕೆ ಎಷ್ಟೋ ವರುಷಗಳ ಮುಂಚೆಯೇ ಒಂದು ದಿನ ಆಕೆ ತನ್ನ ಬಂದಿ (ಆಗ ಅದು ಬಂದಿಯಾಗಿತ್ತು) ಕಳವಾಯಿತೆಂದು ಪ್ರಕಟಿಸಿಬಿಟ್ಟಳು. ಆಗ ಮನೆಯಲ್ಲಿದ್ದವರು ಶಾಮನ ಹೆಂಡತಿ ಮತ್ತು ಅತ್ತೆ ಕಲ್ಯಾಣಿ ಮತ್ತು ಶ್ರೀರಂಗಮ್ಮ ಮೂವರೇ ಹೆಂಗಸರು. ಮಹಾಲಕ್ಷಮ್ಮ ಕಲ್ಯಾಣಿಯಾಗಲೀ, ಶ್ರೀರಂಗಮ್ಮನಾಗಲೀ ಅದನ್ನು ತೆಗೆದುಕೊಂಡಿರಲಾರರೆಂದೂ, ತೆಗೆದುಕೊಂಡಿದ್ದರೆ ಶಾಮನ ಹೆಂಡತಿಯೇ ಇರಬೇಕು ಎಂಬಂತೆಯೂ ಸೂಚಿಸುವ ಮಾತುಗಳನ್ನಾಡಿದಳು. ಯಾವ ಗೊಂದಲ ಸಂಭವಿಸಿದರೂ ಅದರಲ್ಲಿ ಮುಖ್ಯ ಪಾತ್ರ ವಹಿಸುವ ಶ್ರೀರಂಗಮ್ಮನೂ ಅವಳ ಜತೆ ಸೇರಿಕೊಂಡಳು. ಶ್ರೀರಂಗಮ್ಮನಿಗೆ ಸೊಸೆಯರನ್ನು ಬಯ್ಯಲು ಸರಿಯೋ ತಪ್ಪೋ ಒಂದು ಕಾರಣ ಬೇಕಾಗಿತ್ತು. ಶಾಮನ ಹೆಂಡತಿಗೆ ಗೊತ್ತು. "ಮಹಾಲಕ್ಷ್ಮಿಯ ಬಂದಿ ಹೋಗಿಲ್ಲ. ಗಂಡ ಎಲ್ಲಿ ಸಂಸಾರದ ತಾಪತ್ರಯಗಳಿಗೆ ತೆಗೆದುಕೊಂಡುಬಿಡುತ್ತಾನೋ ಎಂಬ ಭಯದಿಂದ ಆಕೆ ವೇಷ ಹೂಡಿದ್ದಾಳೆ" ಎಂದು. ಮಹಾಲಕ್ಷ್ಮಿಯ ಭಯಕ್ಕೆ ಕಾರಣವೂ ಇತ್ತು. ಹಿಂದೆ ಕೃಷ್ಣನಿಗೆ ದುಡ್ಡಿನ ತಾಪತ್ರಯ ಬಂದಾಗ ಒಂದು ಸಲವೂ, ಬಂಧುಗಳ ಮನೆಯ ಮದುವೆ ಕಾಲದಲ್ಲಿ ಒಂದು ಸಲವೂ, ಕೃಷ್ಣ, ಮಹಾಲಕ್ಷ್ಮಿಯ ಬಂದಿಯಿಂದ ಒಂದೊಂದು ಚೂರು ಕತ್ತರಿಸಿಕೊಂಡು ಬಿಟ್ಟಿದ್ದನು. ಆ ಕಾರಣದಿಂದ ಮಹಾಲಕ್ಷ್ಮಿಯೇ ಬಂದಿಯನ್ನು ಮುಚ್ಚಿಟ್ಟುಕೊಂಡು ಹೀಗೆ ಆಟ ಹೂಡಿರುವಳೆಂಬುದು ಶಾಮನ ಹೆಂಡತಿಗೆ ಚೆನ್ನಾಗಿ ಗೊತ್ತಾಗಿತ್ತು. ಆದರೆ, ಮಹಾಲಕ್ಷ್ಮಿ ಹಗಲೂ ರಾತ್ರಿ ಮೂರು ದಿನ ಒಂದೇ ಉಸುರಿಗೆ ಬಡಿದುಕೊಂಡಳು. ಹೀಗೆ ಎಂಟು, ಹತ್ತು ತಿಂಗಳು ಕಳೆದಮೇಲೆ ಮಹಾಲಕ್ಷ್ಮಿ ಒಂದುಸಲ ತವರುಮನೆಗೆ ಹೋದಳು. ಹಿಂದಿರುಗುವಾಗ ಒಂದು ಚಿನ್ನದ ಸರಪಣಿಯನ್ನು (ಕತ್ತಿನಸರ) ಮಾಡಿಸಿಕೊಂಡು ಬಂದಿದ್ದಳು. ಆಕೆ ಆ ಸರ ತವರುಮನೆಯವರು ಮತ್ತೆ ಮಾಡಿಸಿದುದೆಂದು ಹೇಳಿಕೊಂಡರೂ ಆ ಮಾತನ್ನು ಮನೆಯವರಾರೂ ನಂಬಲಿಲ್ಲ ಓರಗಿತ್ತಿಯರೆಲ್ಲ ಮಹಾಲಕ್ಷ್ಮಿಗೆ

ಕೇಳುವಂತೆಯೇ "ಇವರ ತಂದೆಯ ಮನೆಯಲ್ಲಿ ಕೊಳ್ಳೆಹೋಗುವ ಐಶ್ವರ್ಯ ಅಷ್ಟರಲ್ಲಿಯೇ ಇದೆ. ಬಂದಿಯನ್ನು ಬದಲಾಯಿಸಿಕೊಂಡು ಬಂದಿದ್ದಾಳೆ" ಎನ್ನುತ್ತಿದ್ದರು. ಇದೆಲ್ಲ ಇತರರಿಗೆ ಗೊತ್ತಿದೆ ಎಂದು ತನಗೆ ತಿಳಿದಿದ್ದರೂ ಮಹಾಲಕ್ಷ್ಮಿ ಮತ್ತೆ ಮತ್ತೆ ಎಲ್ಲರೆದುರಿಗೂ "ಹಳೆ ಬಂದಿ ಹೋಯಿತು. ಇದು ತವರು ಮನೆಯವರು ಮಾಡಿಸಿ ಕೊಟ್ಟ ಹೊಸ ಸರ" ಎಂದೇ ಹೇಳುತ್ತಿದ್ದಳು. ಓರಗಿತ್ತಿಯರು ಮನಸ್ಸು ಪ್ರಸನ್ನವಾಗಿದ್ದಾಗ "ಹಾಗೆಯೇ?" ಎನ್ನುತ್ತಲೂ ಇಲ್ಲದಿದ್ದಲ್ಲಿ ಮೌನವಾಗಿಯೂ ಇರುತ್ತಿದ್ದರು.

ಅಲ್ಲಿಂದ ಈಚೆಗಂತೂ ಮಹಾಲಕ್ಷ್ಮಿ ಸರವನ್ನು ಒಂದು ಗಳಿಗೆಯೂ ಕತ್ತಿನಿಂದ ಹೊರಕ್ಕೆ ತೆಗೆಯುತ್ತಿರಲಿಲ್ಲ. ಅವಳಿಗೂ, ಹಗಲೂ, ರಾತ್ರಿಯೂ ಅದರ ಎಚ್ಚರಿಕೆಯೇ ಆಗಿತ್ತು. ಅದು ಹೋಗಿಬಿಡಬಹುದೆಂಬ ಭಯ ಅವಳಿಗೆ ಎಷ್ಟರಮಟ್ಟಿಗೆ ಇದ್ದಿತೆಂದರೆ ಇದ್ದಕ್ಕಿದ್ದಂತೆಯೇ ಅವಳು ಬೆಚ್ಚಿಬಿದ್ದ ತನ್ನ ಕೊರಳನ್ನು ಮುಟ್ಟಿನೋಡಿಕೊಳ್ಳುತ್ತಿದ್ದಳು. ಅವಳಿಗೆ ಆಗುತ್ತಿದ್ದ ಕನಸುಗಳಲ್ಲಿ ತನ್ನ ಸರದ ಕಳವಿನ ಕನಸುಗಳೇ. ಅವಳ ಕನಸಿನಲ್ಲಿ ಯಾರೋ ಅವಳ ಕತ್ತಿಗೆ ದಪ್ಪವಾದ ಮುಷ್ಟಿಯನ್ನು ಚಾಚಿ ಸರವನ್ನು ಹಾರಿಸಿಕೊಂಡು ಹೋದಂತೆ ಆಗಿ ಅವಳು ಕಿಟ್ಟೆಂದು ಚೀರಲು ಪ್ರಯತ್ನಿಸಿ ಆಗದೆ ಕನಸಿನಲ್ಲಿ ನರಳುತ್ತಿದ್ದಳು. ಎಷ್ಟೋ ದಿವಸ ಕೃಷ್ಣನಾಗಲಿ, ಇತರ ಯಾರಾದರೂ ಆಗಲಿ, ಆಗ ಆಕೆಯನ್ನು ತಟ್ಟಿ ಎಬ್ಬಿಸುತ್ತಿದ್ದರು. ಎಳಿಸದಿದ್ದರೆ ಆಕೆ ಎಷ್ಟು ಹೊತ್ತಾದರೂ ಹಾಗೆಯೇ ಕನಸಿನಲ್ಲಿ ನರಳುತ್ತಲೇ ಇರುತ್ತಿದ್ದಳು. ಎಚ್ಚರವಾದ ಮೇಲೂ ಸ್ವಲ್ಪ ಹೊತ್ತು ಅವಳ ಕಣ್ಣುಗಳಿಂದ ಭಯ ಹೋಗುತ್ತಿರಲಿಲ್ಲ. ಮುಖ ಬೆವತಿರುತ್ತಿತ್ತು. ಅವಳ ಕೈ ಪದೇ ಪದೇ ಕತ್ತಿನ ಸರವನ್ನು ಮುಟ್ಟಿ ನೋಡಿಕೊಳ್ಳುತ್ತಿದ್ದಿತು. ಎಲ್ಲವನ್ನೂ ಅರ್ಥಮಾಡಿಕೊಂಡ ಕೃಷ್ಣನು "ನಿನ್ನ ಸರವನ್ನು ಖಂಡಿತ ಮುಟ್ಟುವುದಿಲ್ಲ" ಎಂದು ಪದೇ ಪದೆ ಆಶ್ವಾಸನ ಕೊಡುತ್ತಿದ್ದನು.

ಆ ಸರ ಇಂದು ಇದ್ದಕ್ಕಿದ್ದಂತೆ ಒಂದೇ ಒಂದು ನಿಮಿಷದೊಳಗೆ ಮಾಯವಾಗಿತ್ತು. ಸೀತಾಲಕ್ಷ್ಮಿ ಅಲ್ಲಿ ಇಲ್ಲದೆ ಹೋಗಿದ್ದರೆ ಅಪವಾದ ಯಾರಮೇಲೆ ಹೋಗುತ್ತಿದ್ದಿತೋ ಗೊತ್ತಿಲ್ಲ. ಆದರೆ, ಅವಳು ಇದ್ದುದರಿಂದ ಎಲ್ಲರೂ ಏಕಮುಖವಾಗಿ ಅವಳಮೇಲೆಯೇ ಕಳುವನ್ನು ಹೊರಿಸಿದರು. ಇದರಲ್ಲಿಯೂ

ಕೃಷ್ಣನೇ ಇತರರಿಗಿಂತ ಹೆಚ್ಚಾಗಿ ಉತ್ಸಾಹ ತೋರಿಸಿದನು. ಅದು ಒಂದು ದೃಷ್ಟಿಯಿಂದ ಸ್ವಾಭಾವಿಕವೂ ಆಗಿತ್ತು. ಒಡವೆ ಆತನ ಹೆಂಡತಿಯದು. ಆದರೆ, ಸೀತಾಲಕ್ಷ್ಮಿ ಒಬ್ಬಳಿಗೆ ಗೊತ್ತು ಅದೊಂದೇ ಕಾರಣವಲ್ಲವೆಂದು. ಕೃಷ್ಣನು ಎಲ್ಲರ ಪೆಟ್ಟಿಗೆಗಳನ್ನೂ ಹುಡುಕುವ ನೆಪವಮಾಡಿ ಕೊನೆಗೆ ಸೀತಾ ಲಕ್ಷ್ಮಿಯ ಪೆಟ್ಟಿಗೆಯನ್ನೂ, ಹಾಸಿಗೆಯನ್ನೂ, ಹುಡುಕಿದನು. ಮನೆಯಲ್ಲಿ ಪ್ರತಿಯೊಬ್ಬಳೂ ಸೀತಾಲಕ್ಷ್ಮಿಯ ಮೇಲೆ ಕಳವು ನಿಜವಾಗಿ ರುಜುವಾತು ಆದುದಕ್ಕಿಂತ ಹೆಚ್ಚಾಗಿ ಒಂದು ಸಲ, ಎರಡು ಸಲ, ನಾಲ್ಕು ಸಲ, ಅವಳ ಹಾಸಿಗೆ, ಪೆಟ್ಟಿಗೆಗಳನ್ನು ಹುಡುಕಿದರು. ಪೆಟ್ಟಿಗೆಯಲ್ಲಿ ಸೀತಾಲಕ್ಷ್ಮಿಯ ಎರಡು ಒಳ್ಳೆಯ ಸೀರೆ, ಎರಡು ರವಿಕೆ ಇವುಗಳ ಹೊರತು ಮತ್ತೇನೂ ಇರಲಿಲ್ಲ. ಅವಳ ಹಾಸಿಗೆ ಸಹ ಬಹಳ ಮಿತವಾಗಿತ್ತು ಒಂದು ಜಮಖಾನ, ಒಂದು ರಗ್ಗು ಎರಡೇ. ತಲೆದಿಂಬಿಗೆ ಸೀತಾಲಕ್ಷ್ಮಿ ಒಂದು ಎತ್ತರವಾದ ಮಣೆಯನ್ನೇ ಇಟ್ಟುಕೊಳ್ಳುತ್ತಿದ್ದಳು. ಪೆಟ್ಟಿಗೆಯಲ್ಲಿದ್ದ ದೊಡ್ಡ ಕನ್ನಡಿ ಯನ್ನೂ, ಕುಂಕುಮದ ಭರಣಿಯನ್ನೂ ಆಕೆ ತೆಗೆದು ತಾನು ಮಲಗಿಕೊಳ್ಳು ತ್ತಿದ್ದ ಮೂಲೆಯಲ್ಲಿ ಇಟ್ಟಿದ್ದಳು. ಕನ್ನಡಿ ಚೆನ್ನಾಗಿ, ಅಗಲವಾಗಿ, ಲಕ್ಷಣ ವಾಗಿದ್ದುದರಿಂದ ಇತರ ಓರಗಿತ್ತಿಯರು ಅದನ್ನು ತೆಗೆದು ಒಳಕ್ಕೆ ತಮ್ಮ ಉಪಯೋಗಕ್ಕೆ ಇಟ್ಟುಕೊಂಡುಬಿಟ್ಟಿದ್ದರು. ಸೀತಾಲಕ್ಷ್ಮಿ ತಂದಿದ್ದ ಅಗಲ ವಾದ ದಂತದ ಬಾಚಣಿಗೆಯೂ ಒಳಕ್ಕೆ ಸೇರಿತ್ತು. ಸೀತಾಲಕ್ಷ್ಮಿಯ ಪೆಟ್ಟಿಗೆ ಯಲ್ಲಿದ್ದ ಒಂದು ಚಂದನದ ಲಕ್ಷ್ಮಿಯನ್ನು, ಅದನ್ನು ನೋಡಿದ ದಿನವೇ ಮಹಾಲಕ್ಷ್ಮಿ ಒಳಕ್ಕೆ ತೆಗೆದುಕೊಂಡು ಹೋಗಿ ತನ್ನ ಕೊಠಡಿಯಲ್ಲಿ ಇಟ್ಟು ಕೊಂಡಿದ್ದಳು. ಆ ವಿಗ್ರಹದ ಮುಖ ಅತಿ ಮುದ್ದಾಗಿತ್ತು. ಕೃಷ್ಣ ನಿತ್ಯ ಸಂಧ್ಯಾವಂದನೆ ಮಾಡಿದನಂತರ ಅದರ ಮುಂದೆ ಕುಳಿತು ಜಪಮಾಡು ತ್ತಿದ್ದನು. ಜಪದ ಮಧ್ಯೆ ಮಧ್ಯೆ ಅವನ ಮನಸ್ಸಿನಮೇಲೆ ಸೀತಾಲಕ್ಷ್ಮಿ ಸುಳಿದು ಹೋಗುತ್ತಿದ್ದುದು ಅವನಿಗೆ ಸಮಾಧಾನವೇ ಆಗಿತ್ತು. ಸೀತಾ ಲಕ್ಷ್ಮಿಯನ್ನು ಒಳಕ್ಕೆ ಸೇರಿಸುತ್ತಿರಲಿಲ್ಲವಾಗಿ, ಒಳಕ್ಕೆ ಸೇರಿದ ಅವಳ ಪದಾರ್ಥ ಗಳಾವುವೂ ಮತ್ತೆ ಅವಳ ಕಣ್ಣಿಗೆ ಬೀಳುತ್ತಲೇ ಇರಲಿಲ್ಲ. ಹೀಗೆ ಸೀತಾ ಲಕ್ಷ್ಮಿಯ ಹಾಸಿಗೆ ಪೆಟ್ಟಿಗೆಗಳು ಬರಿದು ಬರಿದಾಗಿದ್ದುದರಿಂದ, ಅಲ್ಲಿದ್ದ ಪ್ರತಿಯೊಂದು ವಸ್ತುವೂ ಮನೆಯವರಿಗೆಲ್ಲ ಚೆನ್ನಾಗಿ ಗೊತ್ತಾಗಿತ್ತು. ಓರ

ಗಿತ್ತಿಯರೂ ಶ್ರೀರಂಗಮ್ಮನೂ ಸೀತಾಲಕ್ಷ್ಮಿ ಎದುರಿಗೇ ಇದ್ದರೂ ಬಂದು ಬಂದು ಅವಳ ಹಾಸಿಗೆ ಪೆಟ್ಟಿಗೆಗಳನ್ನು ಮತ್ತೆ ಮತ್ತೆ ಬಿಚ್ಚಿ ನೋಡಿದರು. ಗುಂಡಣ್ಣನವರೂ ಕಲ್ಯಾಣಪ್ಪನವರೂ ಸಹ ಅವಳ ಹಾಸಿಗೆ ಪೆಟ್ಟಿಗೆಗಳನ್ನು ಹುಡುಕಿದರು. ಆದರೆ ಹೋದ ಸರದ ಸುಳಿವು ಯಾರಿಗೂ ಹತ್ತಲಿಲ್ಲ.

ಸೀತಾಲಕ್ಷ್ಮಿ ಸರವನ್ನು ಕದ್ದಿರುವಳೆಂಬುದು ಎಲ್ಲರ ಒಮ್ಮತದ ತೀರ್ಮಾನವಾಯಿತು. ಆದರೆ ಆಕೆ ಅದನ್ನು ಎಲ್ಲಿ ಇಟ್ಟಿದ್ದಿರಬಹುದು? ಯಾರಿಗೆ ಕೊಟ್ಟಿದ್ದಿರಬಹುದು ಎಂಬುವ ಸೂಚನೆ ಹೇಗೆ ಹೇಗೆ ನೋಡಿದರೂ ಯಾರಿಗೂ ತಿಳಿಯಲಿಲ್ಲ. ಸರ ಹೋದನಂತರ ಸೀತಾಲಕ್ಷ್ಮಿ ಮನೆಯ ಹೊರಗೆ ಹೋಗಿರಲಿಲ್ಲವೆಂದು ಮಹಾಲಕ್ಷ್ಮಿ ಮುಂದಟ್ಟುಮಾಡಿಕೊಂಡಳು. ಹಾಗಾದಮೇಲೆ ಸೀತಾಲಕ್ಷ್ಮಿ ಸರವನ್ನು ಮನೆಯಲ್ಲಿಯೇ ಎಲ್ಲಿಯೋ ಮುಚ್ಚಿಟ್ಟಿರಬೇಕು. ಎಂಬುದು ಎಲ್ಲರ ತೀರ್ಮಾನವಾಯಿತು. ಮನೆಯವರ ಮಡಿ ಮೈಲಿಗೆಗಳ ಕಾಟದಿಂದ ಸೀತಾಲಕ್ಷ್ಮಿ ಹೆಚ್ಚು ಹೊತ್ತನ್ನು ಹಿತ್ತಲಿನಲ್ಲಿ ಕಳೆಯುತ್ತಿದ್ದುದರಿಂದ ಪ್ರಾಯಶಃ ಸರವನ್ನು ಆಕೆ ಹಿತ್ತಲಿನ ಯಾವುದಾದರೂ ಗಿಡದ ಸಂದಿನಲ್ಲಿ ಮುಚ್ಚಿಟ್ಟಿರಬಹುದೆಂದು ಮಹಾಲಕ್ಷ್ಮಿ ಹಿತ್ತಲನ್ನೆಲ್ಲ ಹುಡುಕಿದಳು. ಮಣ್ಣನ್ನು ಸ್ವಲ್ಪ ಕಲಕಿದಂತೆ ಅಥವ ಕೆರೆದಿದ್ದಂತೆ ತೋರಿದರೆ, ಆಕೆ ಕೂಡಲೇ ಆ ಸ್ಥಳವನ್ನು ಗುದ್ದಲಿಯಿಂದ ಅಗೆಯುತ್ತಿದ್ದಳು. ಹೀಗೆ ಮಹಾಲಕ್ಷ್ಮಿ ಹುಚ್ಚಿಯಂತೆ ಧಾರೆ ಧಾರೆಯಾಗಿ ಕಣ್ಣೀರು ಸುರಿಸುತ್ತಾ ಹಿತ್ತಲಲ್ಲಿ ಅಲೆಯುತ್ತಿರುವುದನ್ನು ನೋಡಿ, ಸೀತಾಲಕ್ಷ್ಮಿಗೆ ಕನಿಕರವುಂಟಾಯಿತು ಒಂದು ವೇಳೆ ಕೆಟ್ಟ ಗಳಿಗೆಯಲ್ಲಿ ಅವಳೇನಾದರೂ ತೆಗೆದುಕೊಂಡಿದ್ದರೂ, ಹಿಂದಕ್ಕೆ ಕೊಟ್ಟುಬಿಡುವಷ್ಟು ದೈನ್ಯವಾಗಿತ್ತು ಮಹಾಲಕ್ಷ್ಮಿಯ ಅವಸ್ಥೆ. ಮಹಾಲಕ್ಷ್ಮಿ ಹೋಗಿ ಅಳುತ್ತಾ ಹಿತ್ತಲಿನಲ್ಲಿ ಕುಳಿತವಳು ಊಟ ಕಾಫಿ ಯಾವುದಕ್ಕಾಗಿಯೂ ಒಳಕ್ಕೆ ಬರಲಿಲ್ಲ. ಬಿಸಿಲಿನಿಂದ ಅವಳ ಮುಖ ಕೆಂಪಾಗಿ ತುಟಿಗಳು ನಡುಗುತ್ತಿದ್ದವು. ಆ ಮನೆಯಲ್ಲಿ ಯಾರನ್ನೂ ಯಾರೂ ಅಷ್ಟಾಗಿ ಗಮನಿಸುವವರಾಗಿರಲಿಲ್ಲ. ಆದುದರಿಂದ ಉಳಿದವರು ಒಂದು ಗಳಿಗೆಯ ನಂತರ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿಕೊಂಡರು. ಆದರೆ ಸೀತಾಲಕ್ಷ್ಮಿ ಮಾತ್ರ ಮಹಾಲಕ್ಷ್ಮಿಯ ಚಲನವಲನಗಳನ್ನೇ ನಿರೀಕ್ಷಿಸುತ್ತಿದ್ದಳು. ಮಹಾಲಕ್ಷ್ಮಿಗೆ ಹುಚ್ಚು ಹತ್ತಬಹುದೆಂಬ ಭಯ ಸೀತಾಲಕ್ಷ್ಮಿಗೆ

ಉಂಟಾಯಿತು. ಇಷ್ಟು ಮನೋದೌರ್ಬಲ್ಯವುಳ್ಳವಳ ಒಡವೆ ನಾಶವಾಗ ಬಾರದಿತ್ತು ಎಂದು ಅವಳು ಕೊರಗಿದಳು.

ಮಧ್ಯಾಹ್ನ ಎರಡು ಗಂಟೆಯ ಬಿಸಿಲು. ಮನೆಯಲ್ಲಿ ಎಲ್ಲರೂ ಊಟ ಮಾಡಿ ಒಳಗೆ ವಿಶ್ರಾಂತಿಪಡೆಯುತ್ತಿದ್ದರು. ಮಹಾಲಕ್ಷ್ಮಿ ಊಟ ಮಾಡಿರಲೇ ಇಲ್ಲ. ಅವಳಿಗೆ ಒಂದೆರಡು ಸಲ ಊಟ ಮಾಡುವಂತೆ ಹೇಳಿ ಮನೆಯವರೆಲ್ಲ ಸುಮ್ಮನಾಗಿದ್ದರು. ಸೀತಾಲಕ್ಷ್ಮಿಯೂ ಊಟ ಮಾಡಿರಲಿಲ್ಲ. ತಾನು ಹೇಳುವ ಯಾವ ಮಾತಿನಿಂದಲೂ ತನ್ನ ಪ್ರಮಾಣಿಕತನದಲ್ಲಿ ಮಹಾಲಕ್ಷ್ಮಿಗೆ ನಂಬಿಕೆ ಬರುವುದಿಲ್ಲವೆಂದು ಸೀತಾಲಕ್ಷ್ಮಿಗೆ ಗೊತ್ತಿದ್ದರೂ, ಮಹಾಲಕ್ಷ್ಮಿಯನ್ನು ಸಮಾಧಾನಪಡಿಸಲು ಅವಳ ಮನಸ್ಸು ಹಾತೊರೆಯುತ್ತಿತ್ತು. ಬಿಸಿಲಿನಲ್ಲಿ ಕುಳಿತಿದ್ದ ಮಹಾಲಕ್ಷ್ಮಿಯ ಎದುರಿಗೆ ಸೀತಾಲಕ್ಷ್ಮಿ ಹೋಗಿ ನಿಂತಳು. ಸೀತಾಲಕ್ಷ್ಮಿ ಹತ್ತಿರಕ್ಕೆ ಹೋಗುವವರೆಗೆ ಮಹಾಲಕ್ಷ್ಮಿ ಅವಳ ಕಡೆಗೆ ತಿರುಗಲೇ ಇಲ್ಲ. ಅವಳ ದೃಷ್ಟಿ ಎಲ್ಲಿಯೋ ದೂರದಲ್ಲಿಟ್ಟ ಶೂನ್ಯ ದೃಷ್ಟಿಯಾಗಿತ್ತು. ಸೀತಾಲಕ್ಷ್ಮಿ ಹತ್ತಿರಕ್ಕೆ ಹೋಗಿ ನಿಂತು ಅವಳ ನೀಳವಾದ ನೆಳಲು ನೆಲದಮೇಲೆ ಬಿದ್ದಾಗ ಮಹಾಲಕ್ಷ್ಮಿಯ ಕಣ್ಣು ಅದರಮೇಲೆ ಹೋಯಿತು. ಬಂದು ನಿಂತವರಾರೆಂದು ಆಕೆ ತಲೆ ಎತ್ತಿ ಸೀತಾಲಕ್ಷ್ಮಿಯನ್ನು ನೋಡಿದಳು. ಸೀತಾಲಕ್ಷ್ಮಿ ಮಾತನಾಡುವುದಕ್ಕೆ ಮುಂಚೆಯೇ, ಮಹಾಲಕ್ಷ್ಮಿ ಅವಳ ಕಾಲಿಗೆ ಬಿದ್ದು ಅವಳ ಎರಡು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡುಬಿಟ್ಟಳು. ಮಹಾಲಕ್ಷ್ಮಿ ಒಂದೇ ಉಸುರಿಗೆ "ನೀನು ಚಿಕ್ಕವಳಾಗಿದ್ದರೂ ಪರವಾಗಿಲ್ಲ. ಭ್ರಷ್ಟಳಾಗಿದ್ದರೂ ಚಿಂತೆಯಿಲ್ಲ. ದಮ್ಮಯ್ಯ ನಿನ್ನ ಕಾಲಿಗೆ ಬಿದ್ದೆ. ನಿನ್ನನ್ನು ನಾನು ಬಯ್ದದ್ದು ತಪ್ಪು. ಸಾವಿರ ಸಲಕ್ಕೂ ತಪ್ಪು. ನಿನಗೆ ಹೇಗೆ ಬೇಕೋ ಹಾಗೆ ಇರು. ಮನೆ ಒಳಗೇ ಬೇಕಾದರೂ ಇರು. ನನ್ನಮ್ಮ ನನ್ನ ತಾಯಿ, ನನ್ನತ್ರ ಅದಲ್ಲದೆ ಬೇರೆ ಒಡವೆ ಯಾವುದೂ ಇಲ್ಲ. ನನ್ನದು ಮಾತ್ರ ದಯವಿಟ್ಟು ಕೊಟ್ಟುಬಿಡು. ಬೇರೆ ಯಾರದು ಬೇಕಾದರೂ ತೆಗೆದುಕೋ" ಎಂದು ಹೇಳಿಕೊಂಡಳು. ಅವಳ ಕೈಯಿಂದ ಕಾಲುಗಳನ್ನು ಬಿಡಿಸಿಕೊಳ್ಳಲು ಸೀತಾಲಕ್ಷ್ಮಿ ಪ್ರಯತ್ನಿಸಿದ್ದು ವ್ಯರ್ಥವಾಯಿತು. ಕೊನೆಗೆ ಹೇಗೋ ಅವಳು ತನ್ನ ಕಾಲುಗಳನ್ನು ಅವಳ ಕೈಯಿಂದ ಬಿಡಿಸಿಕೊಂಡು ಹಿಂದೆ ಸರಿದಳು.

ಒಂದು ಸ್ವಾಭಾವಿಕ ಬುದ್ಧಿಯಿಂದ, ಕೃಷ್ಣನೇ ಸರವನ್ನು ಹಾರಿಸಿರಬೇಕೆಂಬುದು, ಅದು ಹೇಗೆಯೋ ಸೀತಾಲಕ್ಷ್ಮಿಗೆ ಹೊಳೆಯಿತು. ಅದಕ್ಕೆ ಮುಖ್ಯಕಾರಣ, ಕೃಷ್ಣನ ನೀಚಸ್ವಭಾವ ಸೀತಾಲಕ್ಷ್ಮಿಗೆ ಗೊತ್ತಾಗಿದ್ದುದೇ ಇರಬಹುದು. ಸೀತಾಲಕ್ಷ್ಮಿ ಈ ವಿಚಾರಗಳನ್ನೆಲ್ಲ ಮಹಾಲಕ್ಷ್ಮಿಗೆ ಹೇಳಬೇಕೆಂದೇ ಬಂದಿದ್ದಳು. ಆದರೆ, ಮಹಾಲಕ್ಷ್ಮಿಯ ಮನಸ್ಸು ಅದಾವುದನ್ನೂ ಸ್ವೀಕರಿಸುವ ಸ್ಥಿತಿಯಲ್ಲಿರಲಿಲ್ಲ ದುಃಖ ಮತ್ತು ಆಶೆಯ ಆವೇಗದಿಂದ, ಯಾವುದನ್ನೂ ಸಮಾಧಾನದಿಂದ ಯೋಚಿಸುವ ಶಕ್ತಿ ಅವಳಿಗೆ ಇಲ್ಲವಾಗಿತ್ತು. "ಅವಳ ಒಡವೆ ಅವಳಿಗೆ ಕೊಡಬೇಕು. ಇಲ್ಲವೇ ಬೇರೆ ಒಂದು ಒಡವೆ ಕೊಡಬೇಕು. ಇವೆರಡೇ ಅವಳ ಮನಸ್ಸಿನ ಸ್ವಾಸ್ಥ್ಯಕ್ಕೆ ದಾರಿ" ಎಂಬುದು ಸೀತಾಲಕ್ಷ್ಮಿಗೆ ಗೊತ್ತಾಯಿತು. ಅವಳು ಮಹಾಲಕ್ಷ್ಮಿಗೆ "ನಾನು ಒಡವೆ ತೆಗೆದುಕೊಂಡಿಲ್ಲ. ನನಗ್ಯಾಕೆ ಬೇಕು. ಯಾವ ಸೌಭಾಗ್ಯಕ್ಕಾಗಿ ನಾನು ಅಲಂಕಾರಮಾಡಿಕೊಳ್ಳಬೇಕು? ನನ್ನ ಹತ್ತಿರ ಒಡವೆ ಇಲ್ಲ. ನೀವು ಹೀಗೆ ಹುಚ್ಚರಂತೆ ಆಡಬಾರದು? ಇನ್ನೂ ಸ್ವಲ್ಪ ನಿಧಾನವಾಗಿ ಯೋಚಿಸಿ ನೋಡಿ. ನೀವು ಸ್ನಾನಮಾಡಿ ಬಂದಮೇಲೆ ಯಾರ್ಯಾದು ಕೊಟ್ಟಿಗೆಗೆ ಹೋಗಿದ್ದಿರಬಹುದು? ನಿಮ್ಮ ಒಡವೆ ತೆಗೆದುಕೊಳ್ಳಲು ಯಾರಿಗೆ ತಾನೆ ಧೈರ್ಯ? ನಾಲ್ಕಾರು ದಿವಸ ಸುಮ್ಮನಿದ್ದರೆ ವಿಷಯ ತಾನಾಗಿಯೇ ಹೊರಕ್ಕೆ ಬರುತ್ತೆ?" ಎಂದಳು. ಮಹಾಲಕ್ಷ್ಮಿಗೆ ಹೇಗೊ "ಸೀತಾಲಕ್ಷ್ಮಿಯೇ ಒಡವೆ ಕದ್ದಿದ್ದಾಳೆ" ಎಂಬ ನಂಬಿಕೆ ಉಂಟಾಗಿಬಿಟ್ಟಿತ್ತು. ಹೀಗೆ ತಾನು ತನ್ನ ಮಾನವನ್ನೂ ಕಳೆದುಕೊಂಡು ಅವಳ ಕಾಲಿಗೆ ಬಿದ್ದುದರಿಂದ ಅವಳ ಮನಸ್ಸು ಕರಗಬಹುದೆಂದು ಅವಳು ಭಾವಿಸಿದ್ದಳು. ಸೀತಾಲಕ್ಷ್ಮಿಯ ಮಾತು ಅವಳಿಗೆ ರುಚಿಸಲಿಲ್ಲ. ವಿನಯವೂ, ಸಾವೂ, ವ್ಯರ್ಥವಾದುದನ್ನು ನೋಡಿ ಅವಳು ಭೇದೋಪಾಯವನ್ನು ಯೋಚಿಸಿದಳು. "ಇಲ್ಲಿ ನೋಡಮ್ಮ ಸೀತಾಲಕ್ಷ್ಮಿ, ಕೊಟ್ಟಿಗೇಲಿ ಬಿಟ್ಟದ್ದು ನನ್ನದೇ ತಪ್ಪು. ಇಷ್ಟು ಧೋರಣೆ ಇರಬಾರದು. ನನಗೆ ಬುದ್ಧಿ ಕಲಿಸುವುದಕ್ಕೇ ನೀನು ಮಾಡಿದ್ದು. ಚೆನ್ನಾಗಿ ಬುದ್ಧಿ ಕಲಿಸಿದೆ. ಸಾಯುವವರೆಗೆ ಇನ್ನು ಮರೆಯುವುದಿಲ್ಲ. ಈ ಸಲಕ್ಕೆ ಕೊಟ್ಟುಬಿಡು. ಇನ್ನು ಹುಡುಗಾಟ ಸಾಕು. ನಾನು ಯಾರಿಗೂ ಹೇಳುವುದಿಲ್ಲ" ಎಂದು ಪುಸಲಾಯಿಸಿದಳು. ಆ ತಂತ್ರ ಸೀತಾಲಕ್ಷ್ಮಿಗೆ ತಿಳಿಯದೆ ಹೋಗಲಿಲ್ಲ. ತನ್ನ

ಪ್ರಮಾಣಿಕತೆಯಲ್ಲಿ ಇವಳಿಗೆ ನಂಬಿಕೆ ಬರಲಿಲ್ಲವಲ್ಲ ಎಂದು ಅವಳಿಗೆ ದುಃಖ ವುಂಟಾಯಿತು.

ಕೊನೆಗೂ ಇಲ್ಲವೆಂದು ಸೀತಾಲಕ್ಷ್ಮಿ ಸಾಧಿಸಲು, ಮಹಾಲಕ್ಷ್ಮಿಗೆ ಹೆಡೆಯನ್ನು ತುಳಿಸಿಕೊಂಡ ಹಾವಿನಷ್ಟು ಕೋಪ ಬಂತು. ನೀಚಳಾಗಿ ನೀತಿ ಗೆಟ್ಟ ಸೀತಾಲಕ್ಷ್ಮಿಗೆ ತಾನು ಅಡ್ಡಬಿದ್ದುದು ತನಗೆ ದೊಡ್ಡ ಅವಮಾನ ವಾಯಿತೆಂದು ಆಕೆ ಭಾವಿಸಿದಳು. ಅವಮಾನದ ಜ್ವಾಲೆಯಲ್ಲಿ ತಾನು ಬೆಂದ ವಳೆಂದು ಭಾವಿಸಿದ ಅವಳಿಗೆ ಸೀತಾಲಕ್ಷ್ಮಿಯ ಮೇಲೆ ಸೇಡು ಉಂಟಾಯಿತು. ಒಡವೆಯ ನಷ್ಟದಿಂದುಂಟಾಗಿದ್ದ ದುಃಖವೂ, ಶಂಕೆಯೂ, ಆ ಸೇಡಿನಿಂದ ಮರೆಯಾಗಿ ಆಕೆಯ ಬುದ್ಧಿ ಜಾಗ್ರತವಾಯಿತು. ಅವಳು "ಭ್ರಷ್ಟರಂಡೆ. ನೀನು ಒಳ್ಳೆಯ ಮಾತಿಗೆ ಬಗ್ಗುವವಳಲ್ಲ. ಸಾವಿರ ಮನೆ ಹಾಳುಮಾಡಿ ಇಲ್ಲಿಗೆ ಬಂದಿದ್ದೀಯೆ, ನಿನಗೆ ತಕ್ಕದ್ದು ಮಾಡಿಸುತ್ತೇನೆ. ನಿನ್ನನ್ನು ಜೈಲಿಗೆ ಹಾಕಿಸುತ್ತೇನೆ. ಆಗಲೀಗ ನಿನಗೆ ಬುದ್ಧಿ ಬರುತ್ತೆ" ಎಂದು ಕಿರಚಿದಳು. ಕೋಪದಿಂದ ವಿಕಾರವಾದ ಅವಳ ಮುಖವನ್ನು ಕಂಡು ಸೀತಾಲಕ್ಷ್ಮಿ "ಇದೊಂದು ಹೊಸ ಅಪಾಯ" ವೆಂದು ಗಡಗಡನೆ ನಡುಗಿದಳು. ಈ ಸೇಡಿನ ಭಾವನೆ, ಮಹಾಲಕ್ಷ್ಮಿಗೆ ಹೊಸ ಚಟುವಟಿಕೆಯನ್ನೇ ಕೊಟ್ಟಿತು. ಕಳೆದು ಹೋದ ಒಡವೆಗೆ ಏನೋ ಒಂದು ದಾರಿ ಕಂಡಂತೆ ಆಯಿತು ಅವಳಿಗೆ. "ನಾಲ್ಕು ದಿನ ಸುಮ್ಮನಿದ್ದರೆ ವಿಷಯ ಹೊರಕ್ಕೆ ಬರುತ್ತೆ" ಎಂದು ಸೀತಾಲಕ್ಷ್ಮಿ ಹೇಳಿದುದನ್ನು ಮಹಾಲಕ್ಷ್ಮಿ ತಪ್ಪಾಗಿ ತಿಳಿದುಕೊಂಡಳು. "ನಾಲ್ಕಾರು ದಿವಸ ನಾನು ಸುಮ್ಮನಿದ್ದರೆ ಅಷ್ಟರೊಳಗೆ ಇವಳು ಒಡವೆ ಬೇರೆಕಡೆ ಸಾಗಿಸುವ ಏರ್ಪಾಡು ಮಾಡಬಹುದು. ಅದಕ್ಕೇ ಅವಳು ನನಗೆ ಹಾಗೆ ಹೇಳಿದ್ದು. ನಾಲ್ಕಾರು ದಿನ ಇರಲಿ; ಒಂದು ಗಳಿಗೆಯೂ ಸುಮ್ಮನಿರುವುದಿಲ್ಲ" ಎಂದು ಕೊಂಡಳು ಅವಳು. ಮಹಾಲಕ್ಷ್ಮಿ ಒಳಗೆ ಹೋಗಿ ಸ್ನಾನಮಾಡಿದಳು. ಆ ಭ್ರಷ್ಟಳ ಕಾಲನ್ನು ಮುಟ್ಟಿದ್ದಕ್ಕೆ ಎಂದು ಇನ್ನೂ ಹತ್ತು ಚೊಂಬು ನೀರನ್ನು ತಲೆಯಮೇಲೆ ಹುಯ್ದುಕೊಂಡಳು. ತುಳಸೀ ಗಿಡಕ್ಕೆ ಅಡ್ಡಬಿದ್ದಳು. ಅನಂತರ ಊಟಮಾಡಿ, ಮೊದಲು ಜೋಯಿಸರ ಮನೆಗೆ ಹೋಗಿ ಶಾಸ್ತ್ರ ಕೇಳಲು ಸಿದ್ಧಳಾದಳು.

ಜೋಯಿಸ ಲಿಂಗಾಚಾರಿಯ ಮಹಿಮೆ ಮುಖ್ಯವಾಗಿ ಅವನ ಕೊಳಕು,

ಮತ್ತು ಮೀಸೆಗಳೇ ಆಗಿದ್ದವು. ಅವನು ಈಚೆಗೆ ಹೊಸದಾಗಿ ಜೋಯಿಸ ನಾದವನು. ಹಿಂದಲ ಸುಬ್ರಹ್ಮಣ್ಯ ಜೋಯಿಸರು ಸತ್ತನಂತರ ಮಲ್ಲಿಗೆಹಳ್ಳಿ ಯಲ್ಲಿ ಜ್ಯೋತಿಷ್ಯ ಹೇಳುವವರು ಯಾರೂ ಇರಲಿಲ್ಲ. ಅನೇಕ ತಲೆಮಾರು ಗಳಿಂದ ಜೋಯಿಸರಾಗಿದ್ದ ಅವರ ಮನೆಯ ಜ್ಯೋತಿಷ ಪುಸ್ತಕಗಳೆಲ್ಲ ಹಾಳೆ ಹರಿದು ಗಾಳಿಪಟಗಳಾಗಿ ಬೀದಿಯಲ್ಲಿ ಹಾರಾಡತೊಡಗಿದವು.

ಅವರ ಮಕ್ಕಳು ಅಧಿಕಾರಾರೂಢರಾಗಿ ಪಟ್ಟಣಗಳನ್ನು ಸೇರಿದರು. ಅವರ ಅನೇಕ ಒಕ್ಕಲುಗಳನ್ನು ನೋಡಿ ಮಲ್ಲಿಗೆಹಳ್ಳಿಯ ಕಮ್ಮಾರ ಲಿಂಗಾ ಚಾರಿಗೆ ತಾನು ಆಳಬೇಕಾದ ರಾಜ್ಯ ಇಲ್ಲಿ ಒಂದು ಇದೆಯೆಂದು ತೋರಿತು. ಅವನು ಸ್ವಲ್ಪ ಬುದ್ಧಿ ಉಪಯೋಗಿಸಿ ಶಾಸ್ತ್ರಗಳನ್ನು ಹೇಳತೊಡಗಿದನು. ಅವನು ಹೇಳಿದ್ದಂತೆ ತಪ್ಪಿಸಿಕೊಂಡು ಹೋಗಿದ್ದ ಕೆಲವು ದನಗಳು ಹಿಂದಿರುಗಿ ದುವು. ಉಚ್ಚುತ್ತಿದ್ದ ಕೆಲವು ದನಗಳಿಗೆ ಗುಣವಾಯಿತು. ಅಲ್ಲಿಂದ ಇದ್ದ ಕ್ಕಿದ್ದಂತೆ ಅವನ ಮಹಿಮೆ ಏರತೊಡಗಿತು. ಮನೆಯಲ್ಲಿ ಯಾರಿಗಾದರೂ ರೋಗ ಬಂದರೆ, ರೋಗಿಯನ್ನು ಅಲ್ಲೇ ಬಿಟ್ಟು ವೈದ್ಯರನ್ನೂ ಮರೆತು ಜನ ಲಿಂಗಾಚಾರಿಯ ಬಳಿಗೆ ಓಡುತ್ತಿದ್ದರು. ಮಹಿಮೆ ಹೆಚ್ಚಾಗತೊಡಗಿದಂತೆ ಆತನು ಮೀಸೆಯನ್ನು ಹೆಚ್ಚು ಹೆಚ್ಚಾಗಿ ಬಿಡತೊಡಗಿದನು. ತುಟಿಯಮೇಲೆ ಮೀಸೆಗಳು ಆಚೆ ಈಚೆ ಪೊದೆಯಂತೆ ನೇತುಬಿದ್ದು ಅದರ ಭಾರಕ್ಕೆ ತುಟಿಯೇ ಬಗ್ಗಿದಂತೆ ತೋರುತ್ತಿತ್ತು. ಆ ಮೀಸೆಯ ದೆಸೆಯಿಂದ ಲಿಂಗಾಚಾರಿ ಯಾವಾ ಗಲೂ ಒಂದು, ಸಹಿಸಲಸಾಧ್ಯವಾದ ಹೊರೆಯನ್ನು ತಲೆಯಮೇಲೆ ಹೊತ್ತಂತೆ ತೋರುತ್ತಿದ್ದನು. ಅವನ ಮೀಸೆ ಬಹು ವಿನೋದಕ್ಕೆ ಆಸ್ಪದವಾಗಿತ್ತು. ಒಂದು ಸಲ ದೇವಸ್ಥಾನದ ಅರ್ಚಕರು, ಬೀಗದ ಮೊಳೆಯನ್ನು ಸರಿಮಾಡಲು ಲಿಂಗಾಚಾರಿಯನ್ನು ಕರೆಯಿರಿ ಎಂದು ಒಂದು ಆಳಿಗೆ ಹೇಳಿದಾಗ ಶ್ಯಾನು ಭೋಗರು. “ಒಬ್ಬನು ಹೋದರೆ ಅವನನ್ನು ಕರೆತರುವುದಕ್ಕಾಗುವುದಿಲ್ಲ. ಇಬ್ಬರು ಹೋಗಿ ಒಂದೊಂದು ಕಡೆಯ ಮೀಸೆಯನ್ನು ಒಬ್ಬೊಬ್ಬರು ಹೊತ್ತು ಕೊಂಡು ಬರಬೇಕು” ಎಂದರು. ಮೀಸೆ ಬೆಳೆದಂತೆ ಆಚಾರಿಯ ಕೊಳಕೂ ಹೆಚ್ಚತೊಡಗಿತು. ತಾನು ಕೊಳಕನಾಗಿಯೇ ಇರಬೇಕೆಂದೂ ಹೆಚ್ಚಾಗಿ ಹಲ್ಲನ್ನು ಉಜ್ಜಕೂಡದೆಂದು ತಮ್ಮ ಗುರುಗಳು ಹೇಳಿರುವುದಾಗಿಯೂ ಆಚಾರಿಯು ಹೇಳುತ್ತಿದ್ದನು. ಅನೇಕರು ಅದನ್ನೂ ನಿಜವೆಂದು ನಂಬಿ,

ಆಚಾರಿಗೆ ಆವಾಹನೆಯಾಗಿರುವುದು ವೈಲಿಗೆ ದೇವತೆಯೆಂದು ಹೇಳ ತೊಡಗಿದ್ದರು.

ಮಹಾಲಕ್ಷ್ಮಿ ಲಿಂಗಾಚಾರಿಯ ಮನೆಗೆ ಹೋದಾಗ ಆಚಾರಿ ಊಟ ಮಾಡಿ ಒಂದು ಹರಕಲು ಗೋಣಿಚೀಲದಮೇಲೆ ಕುಳಿತುಕೊಂಡು ಎಲೆ ಅಡಿಕೆ ಹೊಗೆಸೊಪ್ಪು ಅಗಿಯುತ್ತಿದ್ದನು. ಹೊಗೆಸೊಪ್ಪಿನ ರಸ ಬಾಯಿನಲ್ಲಿ ತುಂಬಿ ಕೊಂಡುದರಿಂದ ಅವನು ಕೆಳತುಟಿಯನ್ನು ಮೇಲಕ್ಕೆ ಎತ್ತಿ "ಏನು ಬಂದಿರಿ ಕುಳಿತುಕೊಳ್ಳಿ" ಎಂದು ಹೇಳುವುದಕ್ಕೆಹೋಗಿ ಅಷ್ಟರಲ್ಲಿ ಹೊಗೆಸೊಪ್ಪಿನ ರಸ ಬಾಯಿನಿಂದ ಕೆಳಕ್ಕೆ ಬೀಳುವಂತೆ ಆದುದರಿಂದ ಪುನಃ ಇದ್ದಕ್ಕಿದ್ದಂತೆ ತಲೆ ಮೇಲೆತ್ತಿ, ಎಡಗೈಯಿನ ಎರಡು ಬೆರಳುಗಳನ್ನೂ ತನ್ನ ತುಟಿಗೆ ಇಟ್ಟು ಅದರ ನಡುವಿನಿಂದ ಪಿಚಕಾರಿ ಹೊಡೆದಂತೆ ಎಲೆ ಅಡಿಕೆ ರಸವನ್ನು ಕಿಟಕಿಯಿಂದ ಹೊರಕ್ಕೆ ಬಿಟ್ಟನು. ಆ ಕಾರ್ಯದಲ್ಲಿಯೂ ಅವನಿಗೆ ಒಳ್ಳೆಯ ಪ್ರಾವೀಣ್ಯತೆ ಇದ್ದಂತೆ ತೋರಿತು. ಬಾಯಿನಿಂದ ಹೊರಟ ಕೆನ್ನೀರಿನ ರಸ ಒಳ್ಳೆ ಬಾಣ ದಂತೆ ನೆಟ್ಟಗೆ ಕಿಟಕಿಯ ಆಚೆಗೆ ಹೋಗಿ ಬೀಳುತ್ತಿದ್ದಿತು. ಆಕಸ್ಮಿಕವಾಗಿ ಒಂದೊಂದು ಸಲ ಅದರ ಗುರಿ ಸ್ವಲ್ಪ ತಪ್ಪಿ, ಕಿಟಕಿಯ ಕಂಬಿಗಳ ಮೂಲಕ ಹಾಯ್ದುಹೋಗುವ ಬದಲು ರಸ ಆ ಕಂಬಿಗೆ ಬಡಿದು ಒಂದೆರಡು ಹನಿ ಹಿಂದಿರುಗಿ ಉಳಿದುವು ಅಲ್ಲಿಯೇ ಲಯವಾಗುತ್ತಿದ್ದವು. ಹೀಗೆ ದಾರಿ ತಪ್ಪಿದ ಎಲೆ ಅಡಿಕೆ ರಸದ ಕರೆ ಕಿಟಕಿಯ ಸುತ್ತಲೂ ಹರಡಿತ್ತು. ಲಿಂಗಾಚಾರಿಯ ಮುಂದಲ ಎರಡು ಹಲ್ಲುಗಳ ನಡುವಿನ ಸಂದಿ ಸ್ವಲ್ಪ ಅಗಲವಾಗಿದ್ದುದರಿಂದ ಎಲೆ ಅಡಿಕೆಯ ರಸ ಹಾಗೆ ಹೊರಗೆ ಹೊರಡಲು ಅನುಕೂಲವಾಗಿತ್ತು. ಆಚಾರಿ ರಸವನ್ನು ಉಗುಳಿ ತನ್ನ ಜೋಲು ಮೀಸೆಗೆ ಅಂಟಿಕೊಂಡಿದ್ದ ರಸದ ಭಾಗವನ್ನು ಎಡಗೈ ಅಂಗೈಯಿಂದ ಸವರಿಕೊಂಡು ಮೀಸೆ ಸರಿಮಾಡಿಕೊಂಡು ಮಹಾಲಕ್ಷ್ಮಮ್ಮನ ಕಡೆಗೆ ತಿರುಗಿದನು. ಕೈಯ್ಯಲ್ಲಿ ಹಿಡಿದಿದ್ದ ಎಲೆ ಅಡಿಕೆ ದಕ್ಷಿ ಣೆಯ ತಟ್ಟೆಯನ್ನು ಮಹಾಲಕ್ಷ್ಮಿ ನೆಲದಮೇಲೆ ಇಟ್ಟು ಒಂದು ಗೋಡೆ ಒರಗಿ ನಿಂತಳು. ಲಿಂಗಾಚಾರಿಯು "ಕುಳಿತುಕೊಳ್ಳಿ" ಎಂದನು. ಮಹಾಲಕ್ಷ್ಮಿಗೆ ಆ ಕೊಳಕಿನಲ್ಲಿ ಕುಳಿತುಕೊಳ್ಳಲು ಮನಸ್ಸು ಬರಲಿಲ್ಲ. ಧೂಳು, ಕೊಳಕು, ಎಂಜಲು, ಸಗಣಿ, ಮಹಾಲಕ್ಷ್ಮಿಗೆ ಹೇಗೋ ಒಂದು ಬಗೆಯ ತಿಪ್ಪೆಯ ಭಾವನೆ ಬಂದಿತು. ಆ ಕ್ಷಣದಲ್ಲಿ ಆಕೆಗೆ ಹಿಂದೆ ಮಲ್ಲಿಗೆಹಳ್ಳಿಯಲ್ಲಿದ್ದ ಶುದ್ಧ

ಸತ್ವ ಸಾತ್ವಿಕ ಪರಿಶುದ್ಧಮೂರ್ತಿ ಸುಬ್ರಹ್ಮಣ್ಯ ಜೋಯಿಸರ ಜ್ಞಾಪಕ ಬಂತು. ಜೋಯಿಸರ ಮಕ್ಕಳೆಲ್ಲ ಹಳ್ಳಿ ಬಿಟ್ಟು ಪಟ್ಟಣ ಸೇರಿ ಅಲ್ಲಿ ಹೋಟಲುಗಳಲ್ಲಿ ಎಂಜಲು ಕಾಫಿ ಕುಡಿಯುತ್ತಾ ಕಾಲ ಕಳೆಯುತ್ತಿರುವುದನ್ನು ಜ್ಞಾಪಿಸಿಕೊಂಡು ಅವಳಿಗೆ ತುಂಬ ಜಿಗುಪ್ಸೆಯಾಯಿತು. ಶಾಸ್ತ್ರವನ್ನು ಹೇಳುವುದಕ್ಕೆ ಬರುವ ಲಿಂಗಾಚಾರಿ, ಹೊಗೆಸೊಪ್ಪನ್ನು ಉಗಿದು ಬಾಯಿ ಮುಕ್ಕಳಿಸಿಕೊಂಡು ಕೈ ಕಾಲು ತೊಳೆದುಕೊಂಡು ಪರಿಶುದ್ಧನಾಗಿ ಬರುವನೆಂದು ಆಕೆ ನಿರೀಕ್ಷಿಸಿದಳು. ಆದರೆ ಆಚಾರಿಗೆ ಕೊಳಕು ದೇವತೆಯೇ ಕುಲದೈವವಾಗಿದ್ದುದರಿಂದ ಅವನು ಮತ್ತೆ ಕಿಟಕಿಯಲ್ಲಿಯೇ ಹೊಗೆಸೊಪ್ಪು ಎಲೆ ಅಡಿಕೆಗಳನ್ನು ಉಗಿದು ಮೀಸೆಯನ್ನು ಎಡಗೈ ಹಿಂಭಾಗದಿಂದ ಆಚೆ ಈಚೆ ಸವರಿಕೊಂಡು ಕುಳಿತನು. ಅವನ ಮಗ್ಗುಲಲ್ಲಿ ಒಂದು ಬೆತ್ತದ ಪೆಟ್ಟಿಗೆಯಲ್ಲಿದ್ದ ಕವಡೆಗಳನ್ನು ಹೊರಕ್ಕೆ ಸುರಿದುಕೊಂಡನು.

ಲಿಂಗಾಚಾರಿಯದು ಕವಡೆ ಶಾಸ್ತ್ರ, ಜ್ಯೋತಿಷ್ಯವನ್ನು ಕೇಳ ಬಂದವರ ಎರಡು ಕೈ ಸೇರಿದ ಬೊಗಸೆಗೆ ಆಚಾರಿ ಕವಡೆಗಳನ್ನು ತುಂಬಿ ಕೆಳಕ್ಕೆ ಬಿಡುವಂತೆ ಹೇಳುತ್ತಿದ್ದನು. ಆ ಬಿದ್ದ ಕವಡೆಗಳಲ್ಲಿ ಬೆನ್ನು ಮೇಲಾಗಿ ಎಷ್ಟು ಬೀಳುತ್ತವೆ. ಹೊಟ್ಟೆ ಮೇಲಾಗಿ ಎಷ್ಟು ಬೀಳುತ್ತವೆ ಎಂಬುದನ್ನು ನೋಡಿಕೊಂಡು ಆಚಾರಿ ಬಾಯಿನಲ್ಲಿಯೇ ಫಲ ಹೇಳುತ್ತಿದ್ದನು. ಆದರೆ, ಕವಡೆಗಳನ್ನು ಬಂದವರ ಕೈಗೆ ಹಾಕಿದನಂತರ ಆಚಾರಿ ಒಂದು ರೀತಿಯ ಆವೇಶ ಬಂದಂತೆ ನಾಟಕೀಯವಾಗಿ ನಟಿಸುತ್ತಿದ್ದನು. ಕವಡೆಯನ್ನು, ಪ್ರಶ್ನೆ ಕೇಳುವವನು ಬೊಗಸೆಯಲ್ಲಿ ಹಿಡಿದುಕೊಂಡಿದ್ದು ಆಚಾರಿ ಹೂ ಎಂದಾಗ ಕೆಳಕ್ಕೆ ಬಿಡಬೇಕಾಗಿತ್ತು. ಕೆಳಕ್ಕೆ ಬಿದ್ದ ಕೂಡಲೆ ಆಚಾರಿ ಒಂದು ವಿಧವಾದ ಭಯಂಕರವಾದ ತೀಕ್ಷ್ಣವಾದ ಕಣ್ಣುಗಳಿಂದ ಆ ಕವಡೆಗಳನ್ನು ನೋಡುತ್ತಿದ್ದನು. ಬಿದ್ದ ಆ ಕವಡೆಗಳನ್ನೂ, ನೆಲವನ್ನೂ ಸಹ ಕಣ್ಣಿನ ನೋಟಗಳಿಂದ ಕೊರೆಯುವನೋ, ಕರಗಿಸುವನೋ ಎನ್ನುವಷ್ಟು ಕ್ರೂರವಾಗಿರುತ್ತಿದ್ದಿತು ಆ ನೋಟ. ಅವನ ಕಣ್ಣಿನ ಕೆಳಗೆ ನಿರ್ಜೀವವಾದ ಕವಡೆಗಳೂ ಸಹ ಬೆಂಕಿಯ ಕಾವಿಗೆ ಸಿಕ್ಕಿ ಮುಲುಕಾಡುವ ಹುಳುಗಳಂತೆ ದೀನವಾಗಿ ತೋರುತ್ತಿದ್ದವು. ಕವಡೆ ನೆಲಕ್ಕೆ ಬಿದ್ದಮೇಲೆ ಅವನು ಲೋಕದಲ್ಲಿ ಮತ್ತಾವುದೂ ಇದೆಯೆಂಬುದನ್ನೇ ಮರೆತು ಅವನ್ನೇ ದುರದುರನೆ ನೋಡುತ್ತಿದ್ದನು ಕವಡೆ

ಗಳು ಸರಿಯಾಗಿ ನಡೆಯುತ್ತಿಲ್ಲವೆಂದು ಅವನಿಗೆ ತೋರಿದಾಗ ಆ ತಪ್ಪು ಆ ಕವಡೆ ಬಿಡುವವರದು ಸಹ ಎಂಬಂತೆ ಕ್ರೂರದೃಷ್ಟಿಯಿಂದ ಅವರನ್ನೂ ನೋಡುತ್ತಿದ್ದನು. ಆಗ ಅವರಿಗೆ ಸಿನಿಮಾ ಅಥವ ನಾಟಕಗಳಲ್ಲಿಯ ರಾಕ್ಷಸರ ಕಣ್ಣಿನ ಜ್ಞಾಪಕವಾಗಿ ಭಯವಾಗುತ್ತಿದ್ದಿತು. ಕವಡೆಗಳ ಮೇಲೆ ಪರಿಣಾಮವಾಗಲೀ ಬಿಡಲಿ, ಬಂದಿದ್ದವರ ಮೇಲೆ ಆ ಪರಿಣಾಮವುಂಟಾದುದರಿಂದ ಆಚಾರಿಗೆ ತೃಪ್ತಿಯಾಗುತ್ತಿದ್ದಿತು. ಆಚಾರಿ, ಕವಡೆ ಬಿಡಿಸುವುದರಲ್ಲಿ ಇನ್ನೂ ಒಂದು ಉಪಾಯ ಮಾಡುತ್ತಿದ್ದನು. ಮೊದಲು ಒಂದು ಸಲ, ಎರಡು ಸಲ ತಾನೇ, ಬಂದವರ ಬೊಗಸೆಗೆ ಕವಡೆಯನ್ನು ತುಂಬುತ್ತಿದ್ದನು. ಅನಂತರ ಕವಡೆ ಸರಿಯಾಗಿ ಬೀಳಲಿಲ್ಲವೋ ಎಂಬಂತೆ ಕೋಪದಿಂದ ಕವಡೆಗಳನ್ನೂ ಅವನ್ನು ಹಿಡಿದಿದ್ದವರನ್ನೂ ದುರದುರನೆ ನೋಡಿ ಮತ್ತೆ ಕವಡೆಗಳನ್ನು ಕೈಗೆ ತುಂಬಿಬಿಡಿಸುತ್ತಿದ್ದನು. ಅನಂತರ ಇನ್ನೂ ನಾಲ್ಕಾರು ಸಲ ಬಿಟ್ಟಮೇಲೆ, ಇನ್ನೆಲ್ಲ ಸರಿಯಾಯಿತು ಎಂಬಂತೆ ಅವರೇ ಬೊಗಸೆಯಲ್ಲಿ ಬಾಚಿಕೊಂಡು ಕೆಳಕ್ಕೆ ಬಿಡುವಂತೆ ಸನ್ನೆಮಾಡುತ್ತಿದ್ದನು. "ನಾನು ಹೇಳಿದಂತೆ ಕವಡೆ ಕೇಳಿ ಆಯಿತು. ಇನ್ನು ಎಷ್ಟು ಸಲ ಬೇಕಾದರೂ ನಿಮಗೆ ಇಷ್ಟಬಂದಂತೆ ಬಿಡಿ" ಎಂಬುದು ತನ್ನ ಭಾವನೆ ಎಂಬುದನ್ನು ಅವನು ತೋರಿಸುತ್ತಿದ್ದನು. ಅದಾವುದೋ ಒಂದು ಮಂಕಿನಿಂದ, ಬಂದಿದ್ದವರಿಗೆ "ಮೊದಲು ಕವಡೆ ಇವನ ಮಾತನ್ನು ಸರಿಯಾಗಿ ಕೇಳುತ್ತಿರಲಿಲ್ಲ. ಅನಂತರ ಅದನ್ನು ಹೆದರಿಸಿದ. ಆಮೇಲೆ ಇವನು ಹೇಳಿದಂತೆ ಕವಡೆ ಕೇಳಿತು. ಅವನು ಕಣ್ಣು ಬಿಟ್ಟರೆ ಕವಡೆ ಗಡಗಡನೆ ನಡುಗುತ್ತದೆ" ಎಂಬ ಭಾವ ಉಂಟಾಗುತ್ತಿದ್ದಿತು. ಹೀಗೆ ಕವಡೆಯನ್ನು ಬಿಡಿಸಿದಮೇಲೆ ಆಚಾರಿ ಕೈ ಬೆರಳುಗಳಮೇಲೆ ಲೆಕ್ಕಾಚಾರ ಹಾಕಿ ಬಂದಿದ್ದವರ ಪ್ರಶ್ನೆಗಳಿಗೆ ಉತ್ತರ ಹೇಳುತ್ತಿದ್ದನು

ಮಹಾಲಕ್ಷ್ಮಮ್ಮನು ಕವಡೆಗಳನ್ನು ಬಿಟ್ಟ ನಂತರ ಆಚಾರಿಯು ಅವಳ ಮುಖವನ್ನೇ ನೋಡುತ್ತಾ "ಒಂದು ಪದಾರ್ಥ ಹೋಗಿರುವುದನ್ನು ವಿಚಾರಿಸಲು ಬಂದಿದ್ದೀರಿ" ಎಂದನು. ಆಚಾರಿಯ ಜೋತಿಷ್ಯವೆಲ್ಲ ಅವನ ಆ ಬುದ್ಧಿಯಲ್ಲಿಯೇ ಇತ್ತು. ಮತ್ತು ಅವನು ಪ್ರಶ್ನೆ ಕೇಳುವಾಗಲೂ ಸಂಧಿಗವಾಗಿ ಪ್ರಶ್ನೆ ಹಾಕಿ, ಆ ಬರುವ ಉತ್ತರದಿಂದ ತನ್ನ ಮುಂದಲ ಪ್ರಶ್ನೆಗೆ

ಮಹಾಲಕ್ಷ್ಮಿ ಹೇಗೆ ತೋಟದಲ್ಲಿ ಒಂದು ಗಂಟೆ ಕಳೆದಳೊ? ಹಿಂದಿರುಗುವಾಗ ಎಲ್ಲರಿಗಿಂತ ಅವಳದೇ ಹೆಚ್ಚು ಉತ್ಸಾಹವಾಗಿತ್ತು. ಎಷ್ಟು ವೇಗವಾಗಿ ನಡೆದರೂ ಆ ವೇಗ ಅವಳಿಗೆ ಸಾಕಾಗಲಿಲ್ಲ. ಉಳಿದವರಿಗಿಂತ ಅವಳು ಹತ್ತು ಮಾರು ಮುಂದೆ ಮುಂದೆ ಧಾವಿಸುತ್ತಿದ್ದಳು. ಒಡವೆ ಮನೆಯಲ್ಲಿ ಬಂದು ಬಿದ್ದಿದ್ದರೂ ಬಿದ್ದಿರಬಹುದೆಂಬುದು ಇತರರ ಆಸೆಯೂ ಆಗಿತ್ತು. ಗುಂಡಣ್ಣನವರು "ಸದ್ಯ ಸಿಕ್ಕಿಬಿಟ್ಟರೆ ಸಾಕೆಲ್ಲ ಇದೊಂದು ಸಲಕ್ಕೆ" ಎಂದು ಯೋಚಿಸುತ್ತಿದ್ದರು ಆದರೆ, ಆ ಗುಂಪಿನಲ್ಲಿ ಕೃಷ್ಣನೊಬ್ಬನೇ ಉದಾಸೀನನಾಗಿ ಹಿಂದೆ ಬರುತ್ತಿದ್ದನು. ಅವನನ್ನು ಕುರಿತು ನೋಡುವವರಿಗೆ ಒಡವೆ ಸಿಕ್ಕುವುದಿಲ್ಲವೆಂದು ಅವನು ಮೊದಲೇ ತೀರ್ಮಾನಿಸಿರುವನೋ ಎಂಬಂತೆ ತೋರುತ್ತಿದ್ದಿತು. ಎಲ್ಲರಿಗಿಂತ ಮುಂಚೆಯೇ ಮಹಾಲಕ್ಷ್ಮಿ ಮನೆಯನ್ನು ಪ್ರವೇಶಿಸಿ ಮತ್ತೆ ಮೊದಲಿನಂತೆ ಎಲ್ಲೆಡೆಯೂ ಹುಡುಕತೊಡಗಿದಳು. ಒಂದೊಂದು ಸ್ಥಳದಲ್ಲಿಯೂ ಹುಡುಕಿ ಹುಡುಕಿ ವಿಫಲಳಾದಂತೆ ಸೀತಾಲಕ್ಷ್ಮಿಯ ಮೇಲೆ ಆಕೆಯ ಕೋಪವೂ ಹೆಚ್ಚುತ್ತಲೇ ಹೋಯಿತು. ಕೊನೆಗೆ ಎಲ್ಲಿಯೂ ಸಿಕ್ಕದಿರಲು ದುಃಖದ ಆವೇಶದ ಭರದಲ್ಲಿ ಅವಳು ಗಟ್ಟಿಯಾಗಿ ಗೋಳೊ ಎಂದು ಅತ್ತು ಸೀತಾಲಕ್ಷ್ಮಿಯನ್ನು ಬಾಯಿಗೆ ಬಂದಂತೆ ಬಯ್ದು ಹೊಳೆಗೆ ಬೀಳುತ್ತೇನೆಂದು ಒಂದೇ ಉಸುರಿಗೆ ಓಡತೊಡಗಿದಳು ಗುಂಡಣ್ಣನವರು ಕೃಷ್ಣನಿಗೆ "ಹೋಗಿ ನೋಡು, ಇದೊಂದು ಗ್ರಹಚಾರ ಬಂದಾತು" ಎಂದು ಹೇಳಿದರು. ಕೃಷ್ಣ ಹೊಳೆಯ ಕಡೆಗೆ ಹುಚ್ಚಿಯಂತೆ ಓಡುತ್ತಿದ್ದ ಮಹಾಲಕ್ಷ್ಮಿಯನ್ನು ಸಮಾಧಾನಪಡಿಸಿ ಮನೆಗೆ ಕರತಂದನು. ಗುಂಡಣ್ಣನವರು ಮಹಾಲಕ್ಷ್ಮಿಗೆ "ಅಮ್ಮ ನನ್ನ ಆಸ್ತಿ ದೊಡ್ಡದಲ್ಲ. ಎಲ್ಲರಿಗೂ ಜೀವನವಾಗುವುದೇ ಕಷ್ಟ. ಆದರೂ ಇದರಿಂದಲೇ ಒಂದು ಚೂರನ್ನು ಮಾರಿ ನಿನ್ನ ಹೋದ ಒಡವೆ ಮಾಡಿಸುತ್ತೇನೆ. ಸಮಾಧಾನದಿಂದ ಇರು" ಎಂದು ಸಾಂತ್ವ ವಚನಗಳನ್ನಾಡಿದರು. ಮಹಾಲಕ್ಷ್ಮಿ ಮತ್ತೆ ಹೊಳೆಗೆ ಬೀಳಲು ಓಡಿ ಹೋಗಲಿಲ್ಲವಾದರೂ ಅಳುವನ್ನು ಮಾತ್ರ ನಿಲ್ಲಿಸಲಿಲ್ಲ.

ಅದೇ ಸಂಧ್ಯಾಕಾಲ ಶಾಮನ ಹೆಂಡತಿಯು ಸೀತಾಲಕ್ಷ್ಮಿಯೊಂದಿಗೆ ಕಳೆದುಹೋದ ಒಡವೆಯನ್ನು ಕುರಿತು ಮಾತನಾಡುತ್ತಿದ್ದಳು. ತನ್ನಮೇಲೆ ಅಪವಾದ ಬಂದಿರುವುದು ಸೀತಾಲಕ್ಷ್ಮಿಗೆ ಗೊತ್ತಿದ್ದರೂ ಅವಳು ಆ ವಿಷಯ

ದಿಂದ ಮನಸ್ಸನ್ನು ಕಲುಷಿತ ಮಾಡಿಕೊಳ್ಳದೆ ಸ್ವಾಭಾವಿಕವಾಗಿಯೇ, ಒಡವೆ ಹೋದ ವಿಷಯವನ್ನು ಪತ್ತೆದಾರಿ ದೃಷ್ಟಿಯಿಂದ ಕಂಡುಹಿಡಿಯಲು ಪ್ರಯತ್ನಿಸುತ್ತ ಮಾತನಾಡುತ್ತಿದ್ದಳು. ಅವಳ ಮತ್ತು ಶಾಮನ ಹೆಂಡತಿಯು ವಾದಸರಣಿಯಲ್ಲಿ, ಸೀತಾಲಕ್ಷ್ಮಿಗೆ, ಕೃಷ್ಣನೇ ಒಡವೆಯನ್ನು ಕದ್ದಿರಬೇಕೆಂದು ತೋರಿತು. ಮನಸ್ಸಿಗೆ ತೋರಿದುದನ್ನು ಸ್ಪಷ್ಟವಾಗಿ ಬಾಯಲ್ಲಿ ಹೇಳುವ ಸ್ವಭಾವವುಳ್ಳವಳಾದುದರಿಂದ ಅವಳು "ಜ್ಯೋತಿಷ್ಯದಲ್ಲಿ ಹೊರಟದ್ದು ಸುಳ್ಳಲ್ಲ. ಒಡವೆಯನ್ನು ಮನೆಯವರೇ ಕದ್ದಿದ್ದಾರೆಂದು ಅವನು ಹೇಳಿದುದು ನಿಜ. ಒಡವೆ ಕಳೆದುಕೊಂಡವರು ತಮ್ಮ ಯಜಮಾನರನ್ನೇ ಇನ್ನೂ ಹೆಚ್ಚಾಗಿ ಪರೀಕ್ಷೆ ಮಾಡುವುದು ಉತ್ತಮ" ಎಂದುಬಿಟ್ಟಳು. ಮಗ್ಗಲು ಕೊಠಡಿಯಲ್ಲಿ ಅಳುತ್ತಾ ಕುಳಿತಿದ್ದ ಮಹಾಲಕ್ಷ್ಮಿಯ ಕಿವಿಗೆ ಆ ಮಾತು ಕೇಳಿಸಿದ ಕೂಡಲೇ ಆಕೆ ಹದಿನಾರು ಹೆಜ್ಜೆಯ ಹುಲಿಯಂತೆ ಹೊರಕ್ಕೆ ಹಾಯ್ದು ಬಂದಳು."ಏನಂದೆ ಮೂಳಿ, ಕದ್ದದ್ದೂ ಅಲ್ಲದೆ ಈಗ ಅವರ ಮೇಲೆ ಅದನ್ನ ಹಾಕಿ ತಪ್ಪಿಸಿಕೊಳೋಕೆ ನೋಡ್ತೀಯ? ಮನೆಹಾಳಿ ನನ್ನ ಒಡವೆ ಅವರ್‍ಯಾಕೆ ಕದೀತಾರೆ. ಹೇಳೋರ ಬಾಯಲ್ಲಿ ಹುಳು ಬೀಳುತ್ತೆ ಆಗಲಿ. ಈಗ ಯಾರು ಕದ್ದಿದಾರೋ ತೀರ್ಮಾನವಾಗಿ ಬಿಡಲಿ. ಪೋಲೀಸಿಗೆ ಅರ್ಜಿ ಕೊಡೋಣ. ಅವರೇ ಬಂದು ಮನೇನೆಲ್ಲ ಹುಡುಕಲಿ" ಎಂದು ಗರ್ಜಿಸಿದಳು. ಕೃಷ್ಣನೂ ಈ ಗದ್ದಲ ಕೇಳಿ ಒಳಕ್ಕೆ ಬಂದನು. ಮಹಾಲಕ್ಷ್ಮಿಯು "ನೀವೇ ಕದ್ದವರೆಂದು ಈ ಮನೆಹಾಳಿ ಹೇಳುತ್ತಾಳೆ. ಪೋಲೀಸಿಗಾದರೂ ದೂರು ಕೊಡಿ. ಅವರೇ ಬಂದು ಚೆನ್ನಾಗಿ ಬುದ್ಧಿ ಕಲಿಸಿ ಪತ್ತೆಮಾಡಲಿ" ಎಂದಳು. ತನ್ನನ್ನೇ ಕಳ್ಳನೆಂದುದರಿಂದ ಒಂದು ಗಳಿಗೆ ಕೃಷ್ಣನ ಮುಖ ಪೆಚ್ಚಾಯಿತು. ಅನಂತರ ಅವನು ಕ್ರೌರ್ಯ ದೃಷ್ಟಿಯಿಂದ "ಆಗಲಿ, ಈಗ ಹೀಗೆ ಹೋಟೆಳೋ? ಮಾಡುತ್ತೇನೆ" ಎಂದು ಹೇಳಿ ಮನೆಯಿಂದ ಹೊರಕ್ಕೆ ಹೋದನು. ಅವನ ಪೈಶಾಚಿಕ ದೃಷ್ಟಿಯನ್ನು ನೋಡಿ ಸೀತಾಲಕ್ಷ್ಮಿಗೆ ಮತ್ತಷ್ಟು ಹೆದರಿಕೆಯುಂಟಾಯಿತು. ಅನಾಥೆಯಾದ ತಾನು 'ಮನಸ್ಸಿನಲ್ಲಿದ್ದುದನ್ನು ಬಾಯಲ್ಲಿ ಹೇಳಿದುದು ತಪ್ಪು, ಅಯ್ಯೋ ದೇವರೇ ನಿಜವಾಗಿ ಪೋಲೀಸಿನವರು ಬಂದು ನನ್ನನ್ನು ಹಿಡಿದುಕೊಂಡು ಹೋದರೆ ಗತಿ ಏನು?" ಎಂದು ಆಕೆ ಹೆದರಿದಳು. ಪೋಲೀಸು ಎಂಬ ಮಾತನ್ನು

ಕೇಳಿಯೇ ಆಕೆಯ ಮೈ ಗಡಗಡನೆ ನಡುಗಿತು. ಪರಿಸ್ಥಿತಿ ಈ ಬಗೆಗೆ ತಿರುಗುವುದೆಂದು ಆಕೆ ಭಾವಿಸಿರಲಿಲ್ಲ. ಅವಳ ಹತ್ತಿರ ಅವಳ ಅತ್ತೆ ವಿಧವೆ ಸಾಯುವಾಗ ಮಾಡಿಸಿಕೊಟ್ಟಿದ್ದ ಒಂದುವರೆ ಸಾವಿರ ರೂಪಾಯಿನ ಬಂದಿ ಇತ್ತು. ಆದರೆ ಅದನ್ನು ಅವಳು ಬರುವಾಗ ಶ್ರೀನಿವಾಸನ ಮನೆಯಲ್ಲಿ ಬಿಟ್ಟು ಬಂದಿದ್ದಳು. ಪರಿಸ್ಥಿತಿ ಅನುಕೂಲವಾದನಂತರ ತರಿಸಿಕೊಳ್ಳೋಣ. ಬಾಳಿನ ನೌಕೆಯೇ ಬಿರುಗಾಳಿಯಂತೆ ಅಲೆದಾಡುತ್ತಿರುವಾಗ ಈ ಒಡವೆಯಿಂದ ಏನು ಪ್ರಯೋಜನ ಎಂದು ಅವಳು ಅದನ್ನು ತೌರು ಮನೆಯಿಂದ ತಂದಿರಲಿಲ್ಲ. ಸೀತಾಲಕ್ಷ್ಮಿ "ಈಗ ಅದಾದರೂ ಇದ್ದಿದ್ದರೆ ನಾನು ಮಹಾಲಕ್ಷ್ಮಿಗೆ ಕೊಟ್ಟು ಬಿಡಬಹುದಾಗಿತ್ತಲ್ಲ?" ಎಂದು ಕೊರಗಿದಳು. ಪೋಲೀಸ್ ಎಂಬ ಹೆಸ ರನ್ನು ಕೇಳಿದೊಡನೆಯೇ ಅವಳಿಗೆ ಅರ್ಧ ಹುಚ್ಚು ಹತ್ತಿತು. ಅವಳು ಅಳುತ್ತಾ ಓಡಿಹೋಗಿ ಮಹಾಲಕ್ಷ್ಮಿಯ ಕಾಲಿಗೆ ಬಿದ್ದು "ಅಮ್ಮ ನಾನು ಹೇಳಿದ್ದು ತಪ್ಪಾಯ್ತು. ನನಗೆ ನೀವೇ ಯಾವ ಶಿಕ್ಷೆ ಬೇಕಾದರೂ ಕೊಡಿ. ಬೇಕಾದರೆ ಕೊಂದುಹಾಕಿ. ಬೇಡವೆನ್ನುವುದಿಲ್ಲ. ಆದರೆ ಪೋಲಿಸಿಗೆ ಮಾತ್ರ ಕೊಡಬೇಡಿ ದಮ್ಮಯ್ಯ" ಎಂದು ಬೇಡಿಕೊಂಡಳು. ಆ ಬಡ ಪ್ರಾಣಿಯ ಕನಿಕರ ಸ್ಥಿತಿಯಿಂದ ಸಾಮಾನ್ಯವಾಗಿ ಯಾವ ಪರಿಣಾಮ ಇತರರ ಮೇಲೆ ಉಂಟಾಗುತ್ತಿದ್ದಿತೋ, ಮಹಾಲಕ್ಷ್ಮಿಯ ಮನಸ್ಸಿನ ಮೇಲೆ ಅದಕ್ಕಿಂತ ವಿಪರೀತ ಪರಿಣಾಮವುಂಟಾಯಿತು. ಅವಳು "ನಮ್ಮ ತಂತ್ರ ಫಲಿಸುತ್ತಿದೆ" ಎಂದುಕೊಂಡು "ಹಾಗಾದರೆ ಸರ ತಂದುಕೊಡು" ಎಂದಳು. ಸೀತಾಲಕ್ಷ್ಮಿಯು "ನನ್ನಾಣೆ ಮಾಂಗಲ್ಯದಾಣೆ ನಾನು ತೆಗೆದುಕೊಂಡಿಲ್ಲ. ನಿಮಗೆ ಒಡವೆ ಮೇಲೆ ಅಷ್ಟು ಆಸೆ ಇದ್ದರೆ ಊರಿನಲ್ಲಿ ನನ್ನ ಬಂದಿ ಇದೆ. ತಂದು ಕೊಡು ತ್ತೇನೆ. ನೀವೇ ಇಟ್ಟುಕೊಳ್ಳಿ, ನನಗ್ಯಾಕೆ ಅದು. ಈಗ ನನ್ನ ಪೋಲೀ ಸನ್ನು ತಪ್ಪಿಸಿ" ಎಂದು ಬೇಡಿದಳು. ಮಹಾಲಕ್ಷ್ಮಿಯು ಕೋಪದಿಂದ "ಹಾಗೋ ಪೋಲೀಸರು ಬಂದಲ್ಲದೆ ನೀನು ಕೊಡುವುದಿಲ್ಲ, ಮಾಂಗಲ್ಯದ ಆಣೆಯೋ? ಅಬ್ಬ! ಎಂತಹ ಪತಿವ್ರತೆ! ಸರ ತಂದುಕೊಟ್ಟರೆ ಸರಿ. ಇಲ್ಲದಿದ್ದರೆ ನಿನಗೇನು ಗತಿ ಮಾಡ್ತೇನೆ ನೋಡು'' ಎಂದು ಕೂಗಿದಳು. ಸೀತಾಲಕ್ಷ್ಮಿ ಅಳುತ್ತಾ ತನ್ನ ಜಾಗಕ್ಕೆ ಹೋದಳು.

ರಂಭಾಪುರಿಯ ಕಾನಸ್ಟೇಬಲ್ ಕಾಳಯ್ಯ ಅಂದು ಊರಿಗೆ ಬಂದಿದ್ದ.

ಅವನು ಬರಿಯ ಕಾನಸ್ಟೇಬಲ್‌ನೇ ಆದರೂ ರಂಭಾಪುರಿಯ ಅಜ್ಞರಿಗೆ, ಪೋಲೀಸು ಇಲಾಖೆಯೆಲ್ಲ ಅವನೇ ಎಂಬ ಭಾವನೆ ಇತ್ತು. ಕಾಳಯ್ಯ ನಾದರೂ ಹಾಗೆಯೇ "ನಮ್ಮ ಇಲಾಖೆ ನಮ್ಮ ಇಲಾಖೆ" ಎಂದು ಹೇಳಿ ಕೊಳ್ಳುತ್ತಿದ್ದ. ಕಾಳಯ್ಯ ವಿದ್ಯೆದಲ್ಲಿ ಅಂತಹ ಬೃಹಸ್ಪತಿಯಾಗಿರಲಿಲ್ಲ. ಅವನು ಕಲಿತಿದ್ದುದು ಕನ್ನಡ ಮೂರನೆಯ ತರಗತಿಯವರೆಗೆ. ಆದರೆ ಅಭ್ಯಾಸಬಲದಿಂದ ಅವನು ಪೋಲೀಸ್ ಇಲಾಖೆಗೆ ಅರ್ಜಿಗಳನ್ನು ಬರೆಯುವುದರಲ್ಲಿ ನಿಸ್ಸೀಮ ನಾಗಿದ್ದನು. ಹೇಗೆ ಬರೆದರೆ ಗುಮಾನಿ ಇರುವವರನ್ನು ಪೋಲೀಸಿನವರು ಹಿಡಿದುಕೊಂಡು ಹೋಗಿ ಒಂದೆರಡು ದಿನ ಲಾಕಪ್‌ನಲ್ಲಿ ಇಟ್ಟು "ಪರೀಕ್ಷಿ" ಸಲು ಅವಕಾಶವಾಗಬೇಕೊ ಹಾಗೆ ಬರೆಯುವುದರಲ್ಲಿ ಅವನು ನಿಪುಣ ನಾಗಿದ್ದನು. ಕಾಳಯ್ಯ ಊರಿಗೆ ಬಂದುದು ತಿಳಿದಿದ್ದುದರಿಂದ ಕೃಷ್ಣ ಅವನಲ್ಲಿ ಹೋದನು. ಕಾಳಯ್ಯನನ್ನು ನೋಡಿ "ಏನಯ್ಯ ದಫೆದಾರ ಯಾವಾಗ ಸವಾರಿ?" ಎಂದನು. ಕಾಳಯ್ಯನಿಗೆ ತಾನು ದಫೇದಾರನಲ್ಲವೆಂಬುದೂ, ತಾನು ದಫೆದಾರನಲ್ಲವೆಂಬುದು ಕೃಷ್ಣನಿಗೂ ತಿಳಿದಿರುವುದೂ ಗೊತ್ತು. ಆದರೂ ಕೃಷ್ಣ ಹೆಚ್ಚು ಗೌರವವನ್ನು ತೋರಿಸುವುದಕ್ಕಾಗಿ ಕಾನಿಸ್ಟಬಲ್‌ನನ್ನು ದಫೆದಾರರೆಂದು ಸಂಭೋದಿಸಿದನು. ಇದೆಲ್ಲ ಗೊತ್ತಿದ್ದರೂ ದಫೆದಾರನೆಂದು ತನ್ನನ್ನು ಸಂಭೋದಿಸಿದುದರಿಂದ ಕಾಳಯ್ಯನಿಗೆ "ಅತಿಶಯವಾದ ಆನಂದ ವಾಯಿತು. ಅವನು ಕೃಷ್ಣನನ್ನು ಆದರದಿಂದ ಬರಮಾಡಿಕೊಂಡನು. ಕೃಷ್ಣನು, ಮನೆಯಲ್ಲಿ ಒಡವೆ ಕಳವಾದ ಸಂಗತಿಯನ್ನು ವಿವರಿಸಿ ಪೋಲೀಸಿಗೆ ಒಂದು ಅರ್ಜಿ ಕೊಡಬೇಕೆಂದೂ, ಆ ಅರ್ಜಿಯನ್ನು ಬರೆಯುವ ಕ್ರಮವನ್ನೂ ಹೇಳಿಕೊಡಬೇಕೆಂದೂ ಕೇಳಿಕೊಂಡನು. ಕಾಳಯ್ಯನಿಗೆ ಇದ್ದಕ್ಕಿದ್ದಂತೆ ತಾನು ಬರಿಯ ಕಾನಿಸ್ಟಬಲ್ ಎಂಬ ಭಾವ ಮರೆಯಾಗಿ ತಾನು ಪೋಲೀಸ್ ಸೂಪ ರ್ರಿಟೆಂಡೆಂಟ್ ಎಂಬ ನಂಬಿಕೆ ಬಂದಿತು. ಅವನಿಗೆ ಮೇಲಧಿಕಾರಿಗಳು ಯಾವಾಗಲೂ ತಿರಸ್ಕಾರದಿಂದ ಅಪ್ಪಣೆ ಮಾಡುತ್ತಿದ್ದರೇ ಹೊರತು ಇದುವರೆಗೆ ಯಾರೂ ಅವನನ್ನು ಸಲಹೆ ಕೇಳಿರಲಿಲ್ಲ. ಅವನು ಗಂಭೀರವಾದ ಮುಖ ಮುದ್ರೆಯಿಂದ "ಯಾರ ಮೇಲೆಯಾದರೂ ನಿಮಗೆ ಗುಮಾನಿ ಇದೆಯೆ?" ಎಂದು ಕೇಳಿದನು. ಕೃಷ್ಣನು ಒಂದು ಗಳಿಗೆ ಯೋಚಿಸಿ "ಹೌದು ನನ್ನ ಹೆಂಡತಿ, ನಮ್ಮ ಮನೆಗೆ ಹೊಸದಾಗಿ ಬಂದಿರುವ ಸೀತಾಲಕ್ಷ್ಮಿಯ ಮೇಲೆ

ಗುಮಾನಿ ಹೇಳುತ್ತಾಳೆ" ಎಂದನು. ಕಾಳಯ್ಯನು ಅರ್ಜಿಯನ್ನು ಹೀಗೆ ಬರೆಸಿದನು.

"ಘನ ಹೊಂದಿದ ಹೋಬಳಿ ಪೋಲೀಸ್ ಸ್ಟೇಷನ್ ಜಮೇದಾರ್ ಇನ್‌ಛಾರ್ಜ್ ಸಬ್ ಇನ್ಸ್‌ಪೆಕ್ಟರ್ ಸಾಹೇಬರ ಹುಜೂರ್ ಜಮಾಬಂದಿಗೆ. ರಂಭಾಪುರಿಯ ನಿರಪರಾಧಿ ಪಿಳ್ಳೆ ಕೃಷ್ಣನ ಅಹವಾಲು ಅರ್ಜಿ. ನೆನ್ನೆ ದಿನ ಬೆಳಿಗ್ಗೆ ನನಗೆ ಅಗ್ನಿಸಾಕ್ಷಿಯಿಂದ ವಿವಾಹಿತಳಾದ ನನ್ನ ಹೆಂಡತಿ (ಹೆಸರನ್ನು ಬರೆಯಲು ಕೃಷ್ಣ ಹಿಂದೆಗೆದುದರಿಂದ ಕಾಳಯ್ಯ ಹೆಸರನ್ನು ತಾನೇ ಹೇಳಿ ಬರೆಸಿದನು) ಮಹಾಲಕ್ಷ್ಮಿ ಸ್ನಾನಮಾಡಿ ಬಚ್ಚಲು ಮನೆಯಲ್ಲಿ ಚಿನ್ನದ ಸರವನ್ನು ಇಟ್ಟು ಬಂದಳು. (ಆ ಸ್ಥಳದಲ್ಲಿ ಕಾಳಯ್ಯನು "ಸ್ನಾನದ ಮನೆಯಲ್ಲಿದ್ದುದನ್ನು ಕಂಡವರು ಯಾರು ಯಾರು? ನೀವು ಸ್ನಾನದ ಮನೆಗೆ ಹೋಗಿದ್ದಿರಾ?" ಎಂದನು. ಕೃಷ್ಣ ಮೊದಲು ಹೂ ಎಂದುಬಿಟ್ಟನು. ಕೂಡಲೇ ಚೇತರಿಸಿಕೊಂಡು "ನಾನು ಅಲ್ಲಿಗೆ ಹೋಗುವ ವೇಳೆಗೇ ಸರ ಕಳವಾಗಿತ್ತು" ಎಂದನು. ಕಾಳಯ್ಯನು "ಆಗಲಿ ಆಗಲಿ ಮುಂದೆ ಬರೆಯಿರಿ" ಎಂದನು. ಕೃಷ್ಣನು ಮುಂದಕ್ಕೆ ಬರೆದನು.) ಸ್ವಲ್ಪ ಹೊತ್ತಿನ ನಂತರ ಹೋಗಿ ನೋಡುವಲ್ಲಿ ಅಲ್ಲಿ ಸರ ಇರಲಿಲ್ಲ. ಜೋಯಿಸರನ್ನು ವಿಚಾರಿಸಿದುವರಲ್ಲಿ ಒಡವೆ ಮನೆಯಲ್ಲಿಯೇ ಇದೆಯೆಂದೂ ಮನೆಯವರೇ ಕಳವು ಮಾಡಿರುವರೆಂದೂ ಹೇಳುತ್ತಾರೆ. (ನಮ್ಮ ಮನೆಯಲ್ಲಿ ಮನೆಯವರಲ್ಲದೆ ಹೊಸದಾಗಿ ಸೀತಾಲಕ್ಷ್ಮಿ ಎಂಬ ಹುಡುಗಿ ಬಂದಿದ್ದಾಳೆ.) ಸೀತಾಲಕ್ಷ್ಮಿ ಒಂದು ಪೆಟ್ಟಿಗೆಯನ್ನೂ ಸಹ ಇಟ್ಟುಕೊಂಡಿದ್ದಾಳೆ. ಖಾವಂದಿರು ಖುದ್ದು ಬಂದೂಕದ ಸಿಪಾಯಿಗಳೊಂದಿಗೆ ದಯಮಾಡಿಸಿ ಒಡವೆಯನ್ನು ಪತ್ತೆ ಹಚ್ಚಿಕೊಡಬೇಕಾಗಿ ಅರಿಕೆ. ಸರದ ತೂಕ 15 ತೊಲ ಇತ್ತು. (ಇಲ್ಲಿ ಕೃಷ್ಣನು "15 ಇಲ್ಲ ನನ್ನ ಹೆಂಡತಿ 12 ತೊಲ ಎಂದು ಹೇಳುತ್ತಿದ್ದಾಳೆ" ಎಂದನು. ಆದರೆ, ಕಾಳಯ್ಯನು "ಮೂರು ತೊಲ ಹೆಚ್ಚಾಗಿ ಹೇಳಿ, ತೊಂದರೆ ಇಲ್ಲ. ಕಮ್ಮಿ ಹೇಳಿದರೆ ತೊಂದರೆ" ಎಂದನು.

. ಕೃಷ್ಣನು ಅರ್ಜಿಯನ್ನು ಆಳಿನ ಸಂಗಡ ಹೋಬಳಿ ಪೋಲೀಸ್ ಸ್ಟೇಷನ್ನಿನ ದಫೇದಾರ್ ಇನ್‌ಛಾರ್ಜು ಸಬ್ ಇನ್ಸ್‌ಪೆಕ್ಟರಿಗೆ ಕಳುಹಿಸಿಕೊಟ್ಟು ಮನೆಗೆ ಬಂದು "ಪೋಲೀಸಿಗೆ ಅರ್ಜಿ ಕೊಟ್ಟಿದ್ದೇನೆ, ಬೆಳಗಾಗುವುದರೊಳಗೆ

ಬಂದು ಕಳ್ಳರನ್ನು ಹಿಡಿದುಕೊಂಡು ಹೋಗುತ್ತಾರೆ" ಎಂದನು. ಕಳ್ಳನು ಸೀತಾಲಕ್ಷ್ಮಿಯೇ ಎಂದು ಮನೆಯವರೆಲ್ಲ ತೀರ್ಮಾನಿಸಿದ್ದರಿಂದ ಸೀತಾಲಕ್ಷ್ಮಿಯನ್ನೇ ಹಿಡಿದುಕೊಂಡು ಹೋಗುತ್ತಾರೆಂದು ಎಲ್ಲರೂ ಹೇಳತೊಡಗಿದರು. ತನ್ನನ್ನು ನಂಬುವವರು ಯಾರೂ ಇಲ್ಲವೆಂದು ಸೀತಾಲಕ್ಷ್ಮಿಗೆ ಗೊತ್ತಾಯಿತು. ಆ ಬೆಳಗಿನಿಂದ ಅವಳಿಗೆ ಹಿಂದಲ ದುಃಖಗಳೆಲ್ಲ ಮತ್ತೆ ಮತ್ತೆ ಪುನರಾವರ್ತನೆಯಾಗಿ ಮನಸ್ಸು ಪೂರ್ಣ ದುರ್ಬಲವಾಗಿ ಬುದ್ಧಿಯೇ ವಿಕಲ್ಪವಾಗುವ ಸ್ಥಿತಿಯುಂಟಾಗಿತ್ತು. ಹೇಗೆ ಹೇಗೆ ಯೋಚಿಸಿದರೂ ಅವಳ ಬಾಳು ದುಃಖ ಸೋಪಾನವಾಗಿಯೇ ಕಂಡಿತು. ದುಃಖಕ್ಕೆ ಅಂತ್ಯವಾಗಲಿ ಪರಿಹಾರವಾಗಲಿ ಅವಳಿಗೆ ತೋರಲಿಲ್ಲ. ಸುಂದರರಾಜನು ಬೇಗ ಹಿಂದಿರುಗುವ ಸೂಚನೆಯಂತೂ ಕಾಣಲಿಲ್ಲ. ಇನ್ನೇನು ಊರಿಗೇ ಹೊರಟು ಹೋಗಿಬಿಡೋಣ ಎಂದು ಅವಳು ಯೋಚಿಸುತ್ತಿರುವಾಗ, ಈ ಕಳವಿನ ಬಡಿಗಲ್ಲು ಅವಳ ಕತ್ತಿಗೆ ನೇತುಬಿದ್ದಿತು. ಜತೆಗೆ ಪೋಲೀಸರು. ಸೀತಾಲಕ್ಷ್ಮಿಗೆ ಮತ್ತೇನೂ ತೋರಲಿಲ್ಲ. ಎಲ್ಲಿಂದ ಎಲ್ಲಿಯವರೆಗೂ ಅಂಧಕಾರವೇ. ಅವಳು ಆತ್ಮಹತ್ಯದಿಂದ ಈ ಗೋಳಿನ ಕತೆಯನ್ನು ಮುಗಿಸಿಬಿಡಬೇಕೆಂದು ನಿಶ್ಚಯಿಸಿಕೊಂಡಳು.

ಆ ರಾತ್ರಿ ಸುಮಾರು ಹನ್ನೆರಡು ಗಂಟೆಗಳವರೆಗೆ ಅವಳಿಗೆ ನಿದ್ರೆ ಬರಲಿಲ್ಲ. ಒಂದು ಬಗೆಯ ಕಳವಳವಂತೆ ಆಗಿ ಒಂದು ನಿಮಿಷ ಎರಡು ನಿಮಿಷ ಕಣ್ಣು ಮುಚ್ಚಿ ಮತ್ತೆ ಪೋಲೀಸಿನವರನ್ನು ಕಂಡ ದುಃಸ್ವಪ್ನವಾಗಿ ಅವಳು ಬೆಚ್ಚಿ ಬಿದ್ದು ಮೈ ಬೆವತು ಎಚ್ಚರಗೊಳ್ಳುತ್ತಿದ್ದಳು. ಆ ಬಾಳು ಅವಳಿಗೆ ಮರಣಕ್ಕಿಂತಲೂ ಹೆಚ್ಚು ಯಾತನೀಯವಾಗಿ ತೋರಿತು. ಹಗಲಿನಲ್ಲಿ ಸಾಯುವುದಕ್ಕಿಂತ ಆ ರಾತ್ರಿ ಸಾಯುವುದು ಅವಳಿಗೆ ಹೆಚ್ಚು ಸುಲಭವಾಗಿ ಕಂಡಿತು. ಎಲ್ಲೆಡೆಯೂ ನಿಶ್ಶಬ್ದವಾಗಿತ್ತು. ಸೀತಾಲಕ್ಷ್ಮಿ ಹಾಸಿಗೆಯಿಂದ ಎದ್ದಳು. ಕೊಟ್ಟಿಗೆಯಲ್ಲಿ ದನಗಳು ಜೋಳದ ಕಡ್ಡಿಯನ್ನು ಮೇಯುತ್ತಿರುವ ಮತ್ತು ಅವು ಗಟ್ಟಿಯಾಗಿ ಉಸಿರು ಬಿಡುತ್ತಿದ್ದ ಸದ್ದು ಅವಳಿಗೆ ಕೇಳಿಸಿತು. ಅವಳು ಎದ್ದು ಅಲ್ಲಿಯೇ ಇದ್ದ ಕಾಲುಮಣೆಯನ್ನು ತೊಲೆಯ ಕೆಳಗೆ ಹಾಕಿಕೊಂಡಳು. ಮೊದಲ ರಾತ್ರಿಯೇ ಸುತ್ತಿ ಇಟ್ಟುಕೊಂಡಿದ್ದ ಹಗ್ಗವನ್ನು ಬಿಚ್ಚಿ ಒಂದು ತುದಿಯನ್ನು ತೊಲೆಗೆ ಕಟ್ಟಿ ಮತ್ತೊಂದು ತುದಿಯನ್ನು ತನ್ನ ಕುತ್ತಿಗೆಗೆ ನೇಣುಹಾಕಿಕೊಂಡು ತಾನು ನಿಂತಿದ್ದ ಕಾಲು

ಮಣಿಯನ್ನು ಒದ್ದುಬಿಟ್ಟಳು. ಕುಣಿಕೆ ಕತ್ತಿಗೆ ಬೀರಿಕೊಂಡ ಅನುಭವ ಅವಳಿಗೆ ಉಂಟಾಯಿತು. ಕೊನೆಯ ಗಳಿಗೆಯಲ್ಲಿ ಅವಳಿಗೆ ಮತ್ತೊಂದು ಸಲ ಸುಂದರರಾಜನ ನೆನಪಾಗಿ ಅನಂತರ ಎಲ್ಲವೂ ಅಂಧಕಾರವಾಯಿತು.

ದನದ ಕೊಟ್ಟಿಗೆಯಲ್ಲಿ ಹಸುಗಳು ಕಿತ್ತುಕೊಂಡು ಒಂದಕ್ಕೊಂದು ಹಾರಾಡಿದ ಶಬ್ದವಾದುದರಿಂದ, ಯಾವಾಗಲೂ ನಾಯಿನಿದ್ರೆ ಮಾಡುತ್ತಿದ್ದ ಗುಂಡಣ್ಣನವರು ಎದ್ದು, ಸಣ್ಣಗಿದ್ದ ಲಾಂದ್ರವನ್ನು ದಪ್ಪಮಾಡಿಕೊಂಡು ಕೊಟ್ಟಿಗೆಯ ಕಡೆಗೆ ಹೊರಟರು. ಅಂಗಳದ ಬಾಗಿಲನ್ನು ದಾಟಿ ಹೋದರೆ ಕೊಟ್ಟಿಗೆಯ ಒಪ್ಪಾರು. ಗುಂಡಣ್ಣನವರ ಕಣ್ಣು ಸ್ವಲ್ಪ ಮಧ್ಯಸ್ಥವಾದುವರಿಂದ ಬಿದ್ದಿದ್ದ ಕಾಲುಮಣೆಯ ಹತ್ತಿರಕ್ಕೆ ಬರುವವರೆಗೆ ಅವರಿಗೆ ಅದು ಕಾಣಲಿಲ್ಲ. "ಈ ದಾರಿಯಲ್ಲಿ ಯಾಕೆ ಇಟ್ಟುಬಿಟ್ಟಿದ್ದಾಳೆ. ಕತ್ತಲೆಯಲ್ಲಿ ಯಾರಾದರೂ ಎಡವಿದರೋ" ಎಂದುಕೊಂಡು ಅವರು ಕಾಲುಮಣೆಯನ್ನು ಎತ್ತಿ ಇಡಲು ಒಂದು ಹೆಜ್ಜೆ ಮುಂದುವರಿಯುವುದರೊಳಗೆ ಅವರಿಗೆ ಹಗ್ಗದಲ್ಲಿ ನೇತುಬಿದ್ದು ಕೊಂಡಿದ್ದ ಸೀತಾಲಕ್ಷ್ಮಿ ಕಣ್ಣಿಗೆ ಬಿದ್ದಳು. ಮೊದಲನೆಯ ನಿಮಿಷವೇ ಅವರಿಗೆ ಕೈಕಾಲು ನಡುಗಿದರೂ ಅವರು ತತ್‌ಕ್ಷಣ ಅದೇ ಕಾಲುಮಣೆಯನ್ನು ಮುಂದಕ್ಕೆ ಸರಿಸಿ ಸೀತಾಲಕ್ಷ್ಮಿಯನ್ನು ಅದರ ಮೇಲೆ ನಿಲ್ಲಿಸಿ ಹಗ್ಗವನ್ನು ಬಿಚ್ಚಿ ಅವಳನ್ನು ಕೆಳಕ್ಕೆ ಇಳಿಸಿದರು. "ಹೀಗೆಲ್ಲ ಮಾಡಬಾರದು ಆತ್ಮಹತ್ಯೆ ಶುದ್ಧ ಪಾಪ" ಎಂದು ಹೇಳಿ ಸಮಾಧಾನ ಮಾಡಿದರು. ಕೊಟ್ಟಿಗೆಗೆ ಹೋದ ಗುಂಡಣ್ಣನವರು ಬಹಳ ಹೊತ್ತಾದರೂ ಬಾರದುದರಿಂದ ಕಲ್ಯಾಣಿಯೂ ಅವರನ್ನು ನೋಡಲು ಹಿಂದೆ ಬಂದಳು. ನಡೆದ ಸಂಗತಿಗಳು ಆಕೆಗೂ ಗೊತ್ತಾದವು.

ಮರುದಿವಸ ಬೆಳಿಗ್ಗೆ ಕೃಷ್ಣನೂ ಮಹಾಲಕ್ಷ್ಮಿಯೂ ಪೋಲೀಸಿನವರು ಬರುವ ಸುದ್ದಿಯನ್ನೇ ಯೋಚಿಸುತ್ತಿದ್ದರು. ಗುಂಡಣ್ಣಣ್ಣನವರು ಕೃಷ್ಣನನ್ನು ಕರೆದು "ಇಲ್ಲಿ ನೋಡು. ನಾನು ಬದುಕಿರುವವರೆಗೆ ಈ ಮನೆಯ ಯಜಮಾನಿಕೆ ನನ್ನದು. ನನ್ನ ಮಾತಿಲ್ಲದೆ ಈ ಮನೆಯೊಳಕ್ಕೆ ಯಾರೂ ಬರಕೂಡದು. ಯಾವ ಪೋಲೀಸಿನವನು ಇಲ್ಲಿ ಬರುತ್ತಾನೋ ನೋಡೋಣ. ಹೋದ ಒಡವೆಗೆ ಪ್ರತಿಯಾಗಿ ನಿನಗೆ ಒಂದು ಬೇರೆ ಆಸ್ತಿಯನ್ನೇ ಕೊಡುವುದಾಗಿ ನಾನು ಹೇಳಿದೆ. ಆದರೂ ಆ ಹುಡುಗಿಯನ್ನು ಪೋಲೀಸಿನವರ ಕೈಯಲ್ಲಿ

ಹೊಡೆಸಿದ ಹೊರತು ನಿನಗೆ ಸಮಾಧಾನವಾಗುವಂತೆ ಕಾಣುವುದಿಲ್ಲ. ನಿನಗೆ ಇಷ್ಟು ದುರಾಸೆ ಇರಬಾರದು. ನಿನ್ನ ತಾರತಮ್ಯಜ್ಞಾನ ಪೂರ್ತಿ ಮಾಯ ವಾದಂತೆ ಕಾಣುತ್ತೆ ಅವಳು ಎಷ್ಟಾದರೂ ನಿನ್ನ ತಮ್ಮನ ಹೆಂಡತಿ ಅನಾಥ ಹುಡುಗಿ. ಪೋಲೀಸಿಗೆ ದೂರು ಕೊಡುವಷ್ಟು ನೀಚ ನೀನೆಂದು ನಾನು ಭಾವಿಸಿರಲಿಲ್ಲ. ಗಂಡಸಾಗಿ ಒಂದು ಒಡವೆಯನ್ನು ಮತ್ತೆ ಸಂಪಾದಿಸುವ ಧೈರ್ಯ ನಿನಗೆ ಇಲ್ಲದೆ ಹೋಯಿತೆಲ್ಲ ?" ಎಂದರು. ಕೃಷ್ಣನಿಗೆ ನಾಚಿಕೆಯಾ ದರೂ ಅವನು ಅದನ್ನು ಹೊರಕ್ಕೆ ತೋರಿಸಿಕೊಳ್ಳದೆ "ಅವಳು ನಾನೇ ಕದ್ದೆ ಎಂದು ಹೇಳಿದಳಂತೆ. ನನ್ನ ಹೆಂಡತಿಯೇ ಮುಚ್ಚಿಟ್ಟುಕೊಂಡು ಸುಳ್ಳು ಹೇಳುತ್ತಿರುವಳೆಂದು ಹೇಳಿದಳಂತೆ. ಯಾರಲ್ಲಿದ್ದರೂ ಪೋಲೀಸಿನವರೇ ಬಂದು ಹಿಡಿದುಕೊಡಲಿ ಎಂದು ಮಾಡಿದೆ" ಎಂದನು. ಗುಂಡಣ್ಣನವರು "ಬಡವನಾದರೂ ಮಾನವಾಗಿ ಬಾಳಿದ ನನ್ನ ಮನೆಗೆ ಒಳ್ಳೆಯ ಕೀರ್ತಿ ತಂದೆ. ನಮ್ಮ ಮನೆಯ ಒಂದು ಹೆಣ್ಣನ್ನು ಕಳವಿಗಾಗಿ ಪೋಲೀಸಿನವರ ವಶಪಡಿಸುವುದೆ ? ನೀನು ಇಷ್ಟು ಅವಿವೇಕಿ ಎಂದು ನಾನು ಭಾವಿಸಿರಲಿಲ್ಲ. ಹೆಂಡತಿಯ ಮಾತು ಕೇಳಿ ಹೀಗೆ ಕುಣಿಯಬಾರದು ಸ್ವಲ್ಪ ಉದಾಸೀನ ಭಾವನೆ ಯಾವುದರಲ್ಲಿಯೂ ಇರಬೇಕು" ಎಂದು ಹೇಳಿದರು.

ಗುಂಡಣ್ಣನವರದು ಯಾವಾಗಲೂ ಶಾಂತ ಸ್ವಭಾವ. ಅವರು ಯಾವಾಗಲೂ ಖಂಡಿತವಾಗಿಯೂ ಕಠಿಣವಾಗಿಯೂ ಮಾತನಾಡುವವರಲ್ಲ. ಮನೆಯಲ್ಲಿಯಂತೂ ಆದಹಾಗೆ ಆಗಲಿ ಎಂದು ಯಾವುದರಲ್ಲಿಯೂ ಅವರಿಗೆ ಔದಾಸೀನ್ಯವೇ. ಸೀತಾಲಕ್ಷ್ಮಿಯಮೇಲೆ ಅವರಿಗೂ ಸಂಶಯವಿದ್ದಿದ್ದರೂ ಇರಬಹುದು. ಆದರೂ ಪೋಲೀಸಿನವರನ್ನು ಮನೆಗೆ ಕರೆಸುವುದು ಅವರಿಗೆ ಬಹಳ ನೀಚತನವಾಗಿ ತೋರಿತು. ಕೃಷ್ಣನಿಗಾಗಿ ಅವರಿಗೇ ನಾಚಿಕೆಯಾ ಯಿತು. ಇದು "ಸಂಸಾರವಂತರ ನಡತೆಯಲ್ಲ" ಎಂದು ಅವರು ಪದೇ ಪದೇ ಹೇಳಿದರು.

ಕೃಷ್ಣನು ಹೋಬಳಿ ಪೋಲೀಸ್ ಸ್ಟೇಶನ್‌ಗೆ ಹೋಗಿ ಬಂದನು. ಅಲ್ಲಿ ಅವನು ಏನು ಹೇಳಿದನೋ ? ಅಂತೂ ಪೋಲೀಸ್ ಜಮೇದಾರ್ ಇನ್-ಛಾರ್ಜು ಸಬ್ ಇನಿಸ್ಪೆಕ್ಟರು ಬರಲಿಲ್ಲ. ಕಾನಿಸ್ಟೇಬಲ್ ಕಾಳಯ್ಯ ಮಾತ್ರ "ನಾವು ಹೋಗಿದ್ದರೆ ಹುಡುಗಿಯನ್ನು ಒದ್ದು ಸರ ಕಕ್ಕಿಸುತ್ತಿದ್ದೆ. ಕೃಷ್ಣನೇ

ಬೇಡವೆಂದ. ಜಮೆದಾರ್ ಇನ್‌ಛಾರ್ಜು ಸಬ್ ಇನಿಸ್ಪೆಕ್ಟರು ಸುಳ್ಳು ಕಂಪ್ಲೆಂಟ್ ಯಾಕೆ ಕೊಟ್ಟೆ ಎಂದು ಅವನಿಂದಲೇ ಇಪ್ಪತ್ತೈದು ಹಿರಿದರು'' ಎಂದನು.

❖ ❖ ❖

ಗುಂಡಣ್ಣನವರ ಖಂಡಿತವಾದ ಮಾತುಗಳಿಂದ ಸೀತಾಲಕ್ಷ್ಮಿಯ ಭಯ ಕಡಿಮೆಯಾಗಿ ಪೋಲೀಸಿನವರ ಪ್ರವೇಶವೇನೋ ಮನೆಗೆ ತಪ್ಪಿತು. ಗುಂಡಣ್ಣನವರು ಶಾಮನಿಗೆ ''ನಾಳೆ ನಾಡಿದ್ದು ಗಾಡಿ ಹೂಡಿಸಿ ಹುಡುಗಿಯನ್ನು ಕರೆದುಕೊಂಡು ಹೋಗಿ ಮಲ್ಲಿಗೆಹಳ್ಳಿಗೆ ಬಿಟ್ಟು ಬಾ. ಅವಳ ಅಣ್ಣನ ಮನೆಯಲ್ಲಿ ಇರಲಿ. ಇಲ್ಲಿದ್ದರೆ ಅವಳು ಏನಾದರೂ ಅನಾಹುತ ಮಾಡಿಕೊಳ್ಳುತ್ತಾಳೆ. ಈ ರಾದ್ಧಾಂತ ಯಾಕೆ ಬೇಕು ? ಇದುವರೆಗೆ ಸುಂದರರಾಜ ಬರಲಿ ಅಂತ ನಿರೀಕ್ಷಿಸಿದೆ. ಅವನಂತೂ ಬರಲಿಲ್ಲ" ಎಂದರು. ಶಾಮನು ''ಹಾಗೆಯೇ ಆಗಲಿ, ಆದರೆ ನನಗೆ ಹೋಗುವುದಕ್ಕೆ ಹೊತ್ತಿಲ್ಲ. ಇವತ್ತು ಮಲ್ಲಿಗೆಹಳ್ಳಿಗೆ ಒಂದು ಆಳನ್ನು ಕಳುಹಿಸಿ ಶ್ರೀನಿವಾಸನನ್ನು ಕರೆಸುತ್ತೇನೆ. ಅವನೇ ಗಾಡಿ ಹೊಡೆದುಕೊಂಡು ಬರುತ್ತಾನೆ" ಎಂದನು. ಗುಂಡಣ್ಣನವರು ಒಪ್ಪಿ ಸುಮ್ಮನಾದರು.

ಸೀತಾಲಕ್ಷ್ಮಿ ಹೊರಡುವಳೆಂಬುದರಿಂದ ಎಲ್ಲರಿಗೂ ಸಮಾಧಾನವಾಯಿತು. ಸಮಾಧಾನವಾಗದುದು ಕೃಷ್ಣನೊಬ್ಬನಿಗೆ ಮಾತ್ರ. ಅವನಿಗೆ ಒಂದು ವಿಧವಾದ ಸೇಡಿನ ಭಾವನೆಯುಂಟಾಗಿತ್ತು. ಅದು ಸೇಡೋ ಕೋಪವೋ ಆಸೆಯೋ ಅದನ್ನು ನಿಶ್ಚಯಿಸುವುದು ಕೃಷ್ಣನಿಗೇ ಕಷ್ಟವಾಯಿತು. ಅವನು ಮತ್ತೂ ಒಂದು ಸಲ ಸೀತಾಲಕ್ಷ್ಮಿಯನ್ನು ಕೆಣಕಿ ನೋಡಿದನು. ಸರದ ವಿಷಯದಲ್ಲಿ ಅವಳಮೇಲೆ ಅಪವಾದವಿಲ್ಲವೆಂದೂ ನಿಜವಾದ ಕಳ್ಳ ಯಾರೆಂಬುದು ತನಗೆ ಗೊತ್ತಿರುವುದೆಂದೂ ಅವನು ಅವಳಿಗೆ ಹೇಳಿದನು. ಆದರೆ ಸೀತಾಲಕ್ಷ್ಮಿಗೆ ಯಾವುದರಲ್ಲಿಯೂ ಆಸಕ್ತಿಯೇ ಇರಲಿಲ್ಲ. ಕೃಷ್ಣನು ಒಂದು ಸಲ ''ನರಸಿಂಹನಲ್ಲಿ ನೀನು ಏನು ಕಂಡೆ" ಎಂಬ ಅರ್ಥ ಬರುವ ಮಾತನ್ನಾಡಿದನು. ಏನನ್ನು ಹೇಳಬೇಕು, ಏನನ್ನು ಹೇಳಬಾರದು ಎಂಬುದು ಸೀತಾಲಕ್ಷ್ಮಿಯ ಎದುರಿಗೆ ಕೃಷ್ಣನಿಗೆ ಹೊಳೆಯುತ್ತಿರಲಿಲ್ಲ. "ಕಾಮಾತುರಾಣಾಂ" ನ ಭಯಂ ನ ಲಜ್ಜ ಎನ್ನುವದು ಇಂತಹವರನ್ನು ಕುರಿತೇ ಹೇಳಿದ್ದು.

ಮರುದಿನ ಬೆಳಿಗ್ಗೆ ಸೀತಾಲಕ್ಷ್ಮಿ ಮಲ್ಲಿಗೆಹಳ್ಳಿಗೆ ಹೊರಡುವುದು ಗೊತ್ತಾಗಿತ್ತು. ಶ್ರೀನಿವಾಸ ಬರುವುದಾಗಿ ಹೇಳಿಕಳುಹಿಸಿದ್ದನು. ಸುಂದರ ರಾಜ ಬೆಂಗಳೂರಿಗೆ ಹೋಗಿದ್ದವನು ಇನ್ನೂ ಹಿಂದಿರುಗದುದರಿಂದಲೂ ರಂಭಾ ಪುರಿಯಲ್ಲಿ ತನಗೆ ಉಂಟಾಗಿದ್ದ ಅನುಭವಗಳಿಂದಲೂ ಸೀತಾಲಕ್ಷ್ಮಿ ನೊಂದು ಏನು ಮಾಡುವುದಕ್ಕೂ ತೋರದೆ ಕೆನ್ನೆಯಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಳು. ಅವಳಿಗೆ ಇದು ಎರಡನೆಯ ಸಲ, ತನ್ನ ಜೀವಮಾನದ ಕೊನೆಯಾಗಿ ತೋರಿತು. ಎಷ್ಟೇ ನಿರುತ್ಸಾಹದಿಂದ ಮಲ್ಲಿಗೆಹಳ್ಳಿಯಿಂದ ಹೊರಟಿದ್ದರೂ ಈ ಪ್ರಯಾಣದ ಕೊನೆ ಹೀಗೆ ಆಗುವುದೆಂದು ಅವಳು ಆಗ ನಿರೀಕ್ಷಿಸಿರಲಿಲ್ಲ. ಸುಂದರರಾಜ ತನ್ನನ್ನು ಒಂದು ಸಲ ನೋಡಿದರೆ ಅವನ ಕೃಪೆಯನ್ನು ತಾನು ಹೊಂದಲು ಪ್ರಯತ್ನಿಸಬಹುದೆಂದು ಅವಳು ಭಾವಿಸಿದ್ದಳು. ಆದರೆ ಸುಂದರ ರಾಜ ಊರನ್ನೇ ಬಿಟ್ಟು ತಿರುಗುತ್ತಿದ್ದನು. “ ಹೇಗಾದರೂ ಆಗಲಿ ಅವನು ಬರುವವರೆಗೆ ರಂಭಾಪುರಿಯಲ್ಲಿ ಇರೋಣವೆಂದರೆ ” ಅದು ಸಾಧ್ಯವಾಗಿರ ಲಿಲ್ಲ. ಸೀತಾಲಕ್ಷ್ಮಿಯು ಸುಂದರರಾಜನನ್ನು ನಾನು ಮತ್ತೆ ಕಂಡು ಅವ ನನ್ನು ಸೇರುವುದು ನಿಜವೇ ? ಈ ಬಾಳಿನಲ್ಲಿ ಇನ್ನು ಇಲ್ಲ ಎನ್ನುತ್ತಿತ್ತು ಅವಳ ಒಳ ಧ್ವನಿ. ಪುಣ್ಯಕ್ಷೇತ್ರಕ್ಕೆ ಬಂದವನು ಕ್ಷೇತ್ರದ ಮಹಿಮೆಯನ್ನೂ ಪಾವಿತ್ರ್ಯತೆಯನ್ನೂ ಮನಸ್ಸಿನಲ್ಲಿ ಆಳವಡಿಸಿಕೊಳ್ಳದೆ ಕ್ಷೇತ್ರ ಪ್ರಯಾಣದ ಬಳಲಿಕೆ, ಕೊಳಕು ನಿರುತ್ಸಾಹ ಧೂಳು ಜನಜಂಗುಳಿಯಿಂದ ಕಲುಷಿತವಾಗು ವಂತೆ ಸೀತಾಲಕ್ಷ್ಮಿ ತನ್ನ ದೇವರನ್ನು ಕಾಣದೆ ಬರಿಯ ಜಾತ್ರೆಯ ಮೈಲಿಗೆ ಯಿಂದ ಮಲಿನಳಾದವಳಂತೆ ಭಾವಿಸಿದಳು. ರಂಭಾಪುರಿಯಲ್ಲಿ ಅವಳ ಅನುಭವ ಬಹಳ ಕಹಿಯಾಗಿತ್ತು. ತಾನು ಅಲ್ಲಿದ್ದ ಎರಡು ವಾರಗಳನ್ನು ಅವಳು ದನದ ಕೊಟ್ಟಿಗೆಯಲ್ಲಿಯೇ ಅಸ್ಪೃಶ್ಯಳಾಗಿ ಕಳೆದಿದ್ದಳು. ಯಾವ ಮನೆಯಲ್ಲಿ ತಾನು ಒಡತಿಯಾಗಿ ರಾಣಿಯಾಗಿರಬೇಕಾಗಿತ್ತೋ ಆ ಮನೆಯಲ್ಲಿ ತನ್ನದು ನಾಯಿಯ ಬಾಳಾಗಿತ್ತು.

ಸೀತಾಲಕ್ಷ್ಮಿ ಮರುದಿನದ ಪ್ರಯಾಣಕ್ಕಾಗಿ ತನ್ನ ಬಟ್ಟೆಗಳನ್ನೆಲ್ಲ ಒಗೆದುಕೊಂಡು ಬರುವ ಉದ್ದೇಶದಿಂದಲೂ, ಉಂಟಾಗಿದ್ದ ಬೇಸರಿಕೆ ದುಗುಡ ವನ್ನು ಕಳೆದುಕೊಳ್ಳುವುದಕ್ಕಾಗಿಯೂ, ನದಿಗೆ ಹೋದಳು. ನದಿಯಿಂದ ಅವಳು ನಿಧಾನವಾಗಿ ಹಿಂದಿರುಗಿದಳು. ರಾತ್ರಿ ಒಂಬತ್ತು ಗಂಟೆಯಾದರೂ

ಗುಂಡಣ್ಣನವರಾಗಲಿ ಶಾಮನಾಗಲಿ ಇನ್ನೂ ಮನೆಗೆ ಬಂದಿರಲಿಲ್ಲ. ನಿತ್ಯ ಅವರಿಬ್ಬರೂ, ಮಲಗುವ ಹೊತ್ತು ಆಗುವವರೆಗೆ ಕಬ್ಬಿನ ಗದ್ದೆಯನ್ನು ಕಾಯುತ್ತ ಇರುತ್ತಿದ್ದರು. ಶ್ರೀರಂಗಮ್ಮ ಅಡಿಗೆ ಕೆಲಸಮಾಡಿ ಮುಗಿಸಿದ್ದಳು. ಅಂಗಳದಲ್ಲಿ ಸೀಮೆಎಣ್ಣೆಯ ಬುಡ್ಡಿ ಉರಿಯುತ್ತಿದ್ದಿತು. ಶ್ರೀರಂಗಮ್ಮ ಮಕ್ಕಳಿಗೆಲ್ಲ ಒಂದು ಸಲ ಬಡಿಸಿ ಗುಂಡಣ್ಣ ಶಾಮ ಬರುವುದನ್ನು ಕಾಯುತ್ತ ಕುಳಿತಿದ್ದಳು. ಹುಡುಗರು ಮಕ್ಕಳು ತಮ್ಮ ತಮ್ಮ ಹಾಸಿಗೆಗಳನ್ನು ಎಳೆದುಕೊಂಡೂ, ಕೆಲವು ಬರಿಯ ಚಾಪೆ, ಜಮಖಾನದ ಮೇಲೂ ಬಿದ್ದಿದ್ದವು. ಅಂಗಳದ ಒಂದು ಅರಗಿನಲ್ಲಿ ಕಲ್ಯಾಣಿಯೂ ಕೃಷ್ಣನೂ, ಮತ್ತೊಂದೆಡೆ ಮಹಾಲಕ್ಷ್ಮಿಯೂ ಕುಳಿತಿದ್ದರು. ಸೀತಾಲಕ್ಷ್ಮಿ ದನದ ಕೊಟ್ಟಗೆಯಲ್ಲಿ ದನಗಳಿಗೆ ನೀರು ಕುಡಿಸುತ್ತಿದ್ದಳು. ಇವರು ಆಡುವ ಮಾತುಗಳು ಅವಳಿಗೆ ಕೇಳಿಸುತ್ತಲೂ ಇರಲಿಲ್ಲ. ಶ್ರೀರಂಗಮ್ಮನು ಮಹಾಲಕ್ಷ್ಮಿಯನ್ನು ನೋಡುತ್ತಾ "ನಾಳೆ ಹಕ್ಕಿ ಹಾರಿಹೋಗುತ್ತೆ. ಜತೆಯಲ್ಲಿ ಒಡವೆಯೂ ಹಾರಿಹೋಗುತ್ತೆ. ಜೋಯಿಸ ಇಲ್ಲೆ ಮನೆಯಲ್ಲಿಯೇ ಇದೆ ಎಂದಿದ್ದ. ಹೊರಡುವುದಕ್ಕೆ ಮುಂಚೆ ಒಂದು ಸಲ ಹಾಸಿಗೆ ಪೆಟ್ಟಿಗೆ ನೋಡಿ" ಎಂದಳು. ಮಹಾಲಕ್ಷ್ಮಿಯು "ನಿಮಗೆ ಹುಚ್ಚು. ಹಾಸಿಗೆ ಪೆಟ್ಟಗೆಯಲ್ಲಿ ಇಟ್ಟಿರುತ್ತಾಳೆಯೇ ? ಯಾರಿಗೆ ಕೊಟ್ಟು ಇಟ್ಟುಕೊಂಡಿದ್ದಾಳೆಯೋ" ಎಂದಳು. ಶ್ರೀರಂಗಮ್ಮನು "ಹೇಗಾದರೂ ಆಗಲಿ ಅನುಮಾನ ಪರಿಹಾರಕ್ಕಾಗಿ ಇನ್ನೊಂದು ಸಲ ಹುಡುಕಿ ಬಿಡಿ" ಎಂದಳು. ಮಹಾಲಕ್ಷ್ಮಿಯು "ಈಗ ಮುಟ್ಟಿದರೆ ಮೈಲಿಗೆಯಾಗುತ್ತೆಲ್ಲ" ಎಂದಳು. ಶ್ರೀರಂಗಮ್ಮನು ಶಾಮನ ಮಗ ಮೂರ್ತಿಯನ್ನು ಕರೆದು "ನಿನಗೆ ಮಡಿಯೇನು ಮೈಲಿಗೆಯೇನು? ಅವಳ ಹಾಸಿಗೇನೂ ಪೆಟ್ಟಿಗೇನೂ ಇಲ್ಲಿಗೆ ತೆಗೆದುಕೊಂಡು ಬಾ" ಎಂದಳು. ಮೂರ್ತಿಯು ಪೆಟ್ಟಿಗೆಯನ್ನು ಅದರ ಮೇಲಿದ್ದ ಹಾಸಿಗೆಯೊಂದಿಗೆ ಒಂದೇ ಸಲಕ್ಕೆ ತಂದನು. ಎರಡೂ ಸೇರಿಯೂ ಒಂದು ಆಳು ಹೊರೆಗಿಂತ ಕಡಿಮೆ ಭಾರವಾಗಿತ್ತು.

ಮೂರ್ತಿ ಪೆಟ್ಟಿಗೆಯ ಬಾಗಿಲನ್ನು ತೆರೆದನು. ಶ್ರೀರಂಗಮ್ಮ ಕುಳಿತಲ್ಲಿಂದಲೇ ನಾಲ್ಕು ಹೆಜ್ಜೆ ಮುಂದಕ್ಕೆ ತೆರಳಿದಳು. ಮಹಾಲಕ್ಷ್ಮಿ ಪೆಟ್ಟಿಗೆಯ ಮುಂದೆ ಬಂದು ಕುಳಿತಳು. ಕಲ್ಯಾಣಿ ಕುಳಿತಲ್ಲಿಯೇ ಕುಳಿತಿದ್ದಳು. ಮೂರ್ತಿ ಪೆಟ್ಟಿಗೆಯಿಂದ ಸಾಮಾನುಗಳನ್ನು ಒಂದೊಂದಾಗಿ ಕೆಳಕ್ಕೆ ಇಟ್ಟನು. ಎರಡು ಸೀರೆ

ರವಿಕೆಗಳು, ಒಂದು ಮರದ ಕುಂಕುಮದ ಭರಣಿ, ಒಂದು ಮರದ ಬಾಚ ಣಿಗೆ, ಸಿಕ್ಕಟಿಕೆ ಒಂದು ಸಣ್ಣ ಸೀಸೆಯಲ್ಲಿ ಗಟ್ಟಿ ಕೊಬ್ಬರಿಎಣ್ಣೆ, ನಡುವೆ ಸೀಳಿದ್ದ ಒಂದು ಕನ್ನಡಿ, ಕೆಲವು ಸೇಫ್ಟಿ ಪಿನ್‌ಗಳು. ಎಲ್ಲ ಸಾಮಾನುಗಳೂ ಎಲ್ಲರಿಗೂ ಚಿರಪರಿಚಿತವಾದುವೆ? ಒಡವೆ ಕಳೆದುಹೋಗುವುದಕ್ಕೆ ಮುಂಚೆಯೂ ಮನೆಯವರು ಆ ಪೆಟ್ಟಿಗೆಯನ್ನು ಅನೇಕ ಸಲ ತೆರೆದು ನೋಡಿ ದ್ದರು. ಮಹಾಲಕ್ಷ್ಮಿ ಅದರಿಂದ ಇನ್ನಾವ ಒಳ್ಳೆಯ ವಸ್ತುವನ್ನು ತೆಗೆದು ಕೊಳ್ಳಬಹುದೆಂದು ಆಗಾಗ್ಗೆ ಯೋಚಿಸುತ್ತಲೇ ಇದ್ದಳು. ಅವಳದು ಅಂತಹ ದುರಾಸೆ ಎಂದಲ್ಲ. ಆದರೆ ತಮ್ಮ ಮನೆಯಲ್ಲಿ ಬಂದು ಬಹಿಷ್ಕೃತಳಾಗಿ ತಿರ ಸ್ಕೃತಳಾಗಿ ಅಸ್ಪೃಶ್ಯಳಾಗಿ ಒಂದು ಮೂಲೆಯಲ್ಲಿ ಬಿದ್ದಿರುವ ಸೀತಾಲಕ್ಷ್ಮಿಗೆ ಒಳ್ಳೆಯ ಪದಾರ್ಥಗಳು ಯಾಕೆ? ಎಂದಿದ್ದರೂ ಆ ವಸ್ತುಗಳನ್ನು ಅವಳು ಉಪಯೋಗಿಸುವುದಿಲ್ಲ. ನಿರುಪಯೋಗದಿಂದ ಅವು ಅನ್ಯಾಯವಾಗಿ ಕೆಟ್ಟು ಹೋಗುತ್ತವೆ. ಆದುದರಿಂದ ಸುಮ್ಮನೆ ಅದನ್ನು ಪೆಟ್ಟಿಗೆಯಲ್ಲಿ ಕೆಡವಿರು ವುದರ ಬದಲು ನಾವಾದರೂ ಉಪಯೋಗಿಸಿಕೊಳ್ಳೋಣ ಎಂಬುದು ಅವಳ ಆಸೆಯಾಗಿತ್ತು. ಅವಳ ಮಾತೇ ನಿಜವಾಗಿ ನಡೆಯುವುದಾಗಿದ್ದರೆ ಅವಳು ಸೀತಾಲಕ್ಷ್ಮಿಯ ಆ ನವಿಲು ಮತ್ತು ವಾಚಿ ಬಣ್ಣದ ಸೀರೆಗಳನ್ನೂ ಗುಲಾಬಿ ರಂಗಿನ ರವಿಕೆಯನ್ನೂ ತೆಗೆದುಕೊಂಡುಬಿಡುತ್ತಿದ್ದಳು. ಅದನ್ನು ನೆನಸಿ ಕೊಂಡಾಗಲೆಲ್ಲ ಈ ಆಸೆ ಅವಳನ್ನು ಕಾಡುತ್ತಿತ್ತು.

ಪೆಟ್ಟಿಗೆಯನ್ನು ಮುಚ್ಚಿ ಮೂರ್ತಿ ಹಾಸಿಗೆ ಬಿಚ್ಚಿದನು. ಆದರಲ್ಲಿಯೂ ಮನೆಯವರಿಗೆ ಅಪರಿಚಿತವಾದ ಯಾವ ವಸ್ತುವೂ ಇರಲಿಲ್ಲ. ಒಂದು ಜಮ ಖಾನ ಒಂದು ಕಂಬಳಿ. ಹರಿದ ಸೀರೆ ಚೌಕ ಮುಂತಾದ ಹಳೆ ಬಟ್ಟೆಗಳ ಒಂದು ಗಂಟು ತಲೆದಿಂಬಿಗೆ. ಮಹಾಲಕ್ಷ್ಮಿ "ಆ ಗಂಟಿನಲ್ಲಿ ಏನೂ ಇಲ್ಲ. ಬರಿಯ ಹಳೆಯ ಬಟ್ಟೆ. ನೋಡಿಯಾಗಿದೆ. ಸುತ್ತಿ ಇಡು, ಹಾಸಿಗೆಯಲ್ಲಿ ಇಡುವುದಕ್ಕೆ ಅವಳೇನು ಹೆಡ್ಡಳೆ?" ಎಂದಳು. ಶ್ರೀರಂಗಮ್ಮ "ಇರಲಿ ಬಿಚ್ಚು ನೋಡಿಯೇಬಿಡೋಣ" ಎಂದಳು. ಮೂರ್ತಿ ತಲೆದಿಂಬಿನ ಗಂಟನ್ನೂ ಬಿಚ್ಚಿದನು. ಅದರಲ್ಲಿ ನಿತ್ಯದ ಹಳೆಯ ಬಟ್ಟೆಗಳ ಜತೆಗೆ ಮೊದಲು ಇಲ್ಲದೆ ಇದ್ದ ಇನ್ನೊಂದು ಸಣ್ಣ ಗಂಟು ಇತ್ತು. ಆ ಗಂಟನ್ನು ಮಹಾಲಕ್ಷ್ಮಿ ನೋಡಿರಲಿಲ್ಲ. ಈಗ ಅದನ್ನು ನೋಡಿ ಅವಳಿಗೂ ಆಶ್ಚರ್ಯವೂ ಕುತೂಹಲವೂ

ಉಂಟಾಯಿತು. ಗಂಟಿನೊಳಗೆ ಗಂಟು ಇದ್ದುದನ್ನು ಅವರು ನೋಡಿದುದು ಆದೇ ಮೊದಲು. ಮಹಾಲಕ್ಷ್ಮಿಯ ಪ್ರಾರಂಭದ ಭಾವನೆ ತನ್ನ ಕಳೆದು ಹೋದ ಒಡವೆ ಸಿಕ್ಕಿತೆಂಬುದೇ ಆಯಿತು ಅವಳಿಗೆ ಗಂಟನ್ನು ಬಿಚ್ಚಿ ಪರೀಕ್ಷಿಸುವುದಕ್ಕೆ ಮುಂಚೆಯೇ ಅತಿಶಯವಾದ ಆನಂದವೇ ಆಯಿತು. ಮೂರ್ತಿ ಗಂಟನ್ನು ಬಿಚ್ಚಿದನು. ಅದರಲ್ಲಿ ಕಳುವಾದ ಸರ ಇರಲಿಲ್ಲ. ಆದರೆ ನಾಲ್ಕು ಮೈಗೆ ಹಾಕುವ ಬೇರೆ ಬೇರೆ ಜಾತಿಯ ಉತ್ತಮ ದರ್ಜೆಯ ಪರದೇಶಿ ಇಂಗ್ಲೀಷ್ ಅಮೆರಿಕ ಸಾಬೂನುಗಳು, ಒಂದು ಸುಗಂಧದ ಕೇಶ ತೈಲ, ಈವನಿಂಗ್ ಇನ್ ಪ್ಯಾರಿಸ್ ಎಂಬ ಸೆಂಟ್ ಬಾಟಲ್, ಎರಡು ಮಹಿಳೆಯರು ಉಪಯೋಗಿಸುವ ಬೆಲೆಯಾದ ಕರವಸ್ತ್ರಗಳು. ಆರು ದಂತದ ಬಾಚಣಿಗೆ ಸಿಕ್ಕಟಿಗೆ, ಸುಮಾರು ಅಗಲವಾದ ಗೋಳಾಕಾರವಾದ ಕನ್ನಡಿ [ಆ ಕನ್ನಡಿಯ ಹಿಂದೆ ಯುವಕ ಯುವತಿಯರು ತುಟಿಗೆ ತುಟಿ ಮುಟ್ಟಿಸುವ ಸ್ವಲ್ಪ ಅಶ್ಲೀಲ ವಾದ ಒಂದು ಪಟವನ್ನು ಅಂಟಿಸಿತ್ತು] ಪದಾರ್ಥಗಳೆಲ್ಲ ಇನ್ನೂ ಆಗ ತಾನೇ ಅಂಗಡಿಯಿಂದ ತಂದವು ಹೊಸಹೊಸವಾಗಿದ್ದವು. ಪದಾರ್ಥಗಳನ್ನು ನೋಡಿದ ಕೂಡಲೇ ಅವು ಅತ್ಯಂತ ಆಧುನಿಕವಾದ ನಾಗರಿಕ ಚಲನಚಿತ್ರ ತಾರೆಯ ಅಲಂಕಾರ ವಸ್ತುಗಳಾಗಿ ತೋರುತ್ತಿದ್ದುವು. ಆ ಯಾವ ಸಾಮಾನು ಗಳೂ ರಂಭಾಪುರಿಯ ಅಥವ ಅದರ ಸುತ್ತಮುತ್ತಲ ಹಳ್ಳಿಯ ಅಂಗಡಿಗಳಲ್ಲಿ ದೊರೆಯುವ ಪದಾರ್ಥವಾಗಿರಲಿಲ್ಲ. ಪಟ್ಟಣಗಳ ದೊಡ್ಡ ಅಲಂಕಾರೋಪ ಕರಣಗಳ ಅಂಗಡಿಯಿಂದ ಬಂದವು ಅವು.

ಕಣ್ಣು ಕೋರೈಸುವಂತಿದ್ದ ಆ ವಸ್ತುಗಳನ್ನೆಲ್ಲ ಒಂದೊಂದಾಗಿ ತೆಗೆದು ಮೂರ್ತಿ ಕೆಳಕ್ಕೆ ಇಟ್ಟನು. ಅವುಗಳ ಮನೋಹರವಾದ ಇಂಪು, ಸುಗಂಧ ಆ ಮನೆಯನ್ನೆಲ್ಲ ಸುತ್ತಿಕೊಂಡಿತು. ಆಶ್ಚರ್ಯದ ಮೊದಲನೆಯ ಗಳಿಗೆ ಮಾಯವಾದ ಕೂಡಲೇ ಶ್ರೀರಂಗಮ್ಮನು "ಇದೇನೆ ಕೇಡು, ಯಾರೇ ಈ ಮೂಳಿಗೆ ಇದನ್ನೆಲ್ಲ ತಂದುಕೊಟ್ಟವರು?" ಎಂದಳು. ದೂರದಲ್ಲಿ ಕುಳಿತಿದ್ದ ಕಲ್ಯಾಣಿಗೆ ಆ ಮಾತನ್ನು ಕೇಳಿ ಗಾಬರಿಯಾಯಿತು. ಆ ಮಾತಿನ ಹಿಂದಲ ಮನೋಭಾವ ಮುಂದಲ ಪರಿಣಾಮಗಳನ್ನು ಊಹಿಸಿಕೊಂಡು "ಇನ್ನೇನು ರಾದ್ಧಾಂತವೋ" ಎಂದುಕೊಂಡಳು ಅವಳು. ಮಹಾಲಕ್ಷ್ಮಿಗೆ ತನ್ನ ಒಡವೆ ಅಲ್ಲಿ ಸಿಕ್ಕದುದರಿಂದ ಅದು ಮತ್ತೆ ಎರಡನೆಯ ಸಲ ಕಳವಾದ

ಭಾವನೆ ಬಂತು. ಅವಳಿಗೆ ಸೀತಾಲಕ್ಷ್ಮಿಯಲ್ಲಿ ಹೊಸದಾಗಿ ದ್ವೇಷ ಉಲ್ಬಣವಾಯಿತು. ಅವಳು "ನೆನ್ನೆ ಮೊನ್ನೆ ಇವು ಇಲ್ಲಿ ಇರಲಿಲ್ಲ ಇವತ್ತು ಬಂದಿದೆ" ಎಂದಳು. ಶ್ರೀರಂಗಮ್ಮನು "ಇವಳ ಬಾಳಿಗೆ ಬೆಂಕಿ ಹಾಕಿತು. ಈ ಮನೆ ಹಾಳುಮಾಡುವುದಕ್ಕೇ ಇವಳು ಬಂದು ಇಲ್ಲಿ ಸೇರಿರುವುದು. ಯಾವ ಮನೆಹಾಳನನ್ನು ಜತೆ ಮಾಡಿಕೊಂಡಿದ್ದಾಳೆಯೊ? ಬೆಂಗಳೂರಿಂದಲೋ, ಮೈಸೂರಿಂದಲೋ ತಂದು ಕೊಟ್ಟಿದ್ದಾನೆ. ಇನ್ನು ಇದನ್ನು ಸುಮ್ಮನೆ ಬಿಡುವುದಕ್ಕೆ ಆಗುವುದಿಲ್ಲ. ಈಗಲೇ ಇದರ ತೀರ್ಮಾನವಾಗಿ ಹೋಗಲಿ. ಆಚೆ ಬೀದಿ ಸಿಂಗಾರಮ್ಮನನ್ನು ಕರೆದುಕೊಂಡು ಬಂದು ಛೀಮಾರಿ ಮಾಡಿಸುತ್ತೇನೆ" ಎಂದು ಹೇಳುತ್ತಾ ಹೊರಟೇಬಿಟ್ಟಳು

ತನಗಾಗಿ ಒಡ್ಡಿರುವ ಬಡಿಗಲ್ಲು ಇಂತಹುದೆಂಬುದರ ಅರಿವಿಲ್ಲದೆ ಕಣ್ಣು ಮುಚ್ಚಿಕೊಂಡು ಓಡುತ್ತಿರುವ ಮೊಲದಂತೆ, ಸೀತಾಲಕ್ಷ್ಮಿ ತನ್ನ, ದನದ ಕೊಟ್ಟಿಗೆಯ ಕಾರ್ಯಗಳನ್ನೆಲ್ಲ ಮಾಡಿಕೊಂಡು ಅಂಗಳಕ್ಕೆ ಬಂದಳು. ಶ್ರೀರಂಗಮ್ಮ ಆಚೆ ಬೀದಿಗೆ ಹೊರಟಿದ್ದವಳು ಅವಳನ್ನು ಕಂಡು "ಏನೇ ಚಿನ್ನಾಲಿ. ಇಲ್ಲಿ ಯಾರನ್ನು ಜತೆಮಾಡಿಕೊಂಡಿದ್ದೀಯೆ. ಈ ಸೂಳೆ ಮೋಜಿನ ಸಾಮಾನುಗಳನ್ನೆಲ್ಲ ನಿನಗೆ ತಂದುಕೊಟ್ಟವರು ಯಾರೆ? ಯಾರಿಗಾಗಿ ತಾಫೆ ಕಟ್ಟುತ್ತೀ. ತಡಿ ನಿನಗೆ ತಕ್ಕ ಶಾಸ್ತಿ ಮಾಡಿಸುತ್ತೇನೆ" ಎಂದು ಗುಡಗುಡನೆ ಮುಂದುವರಿದಳು. ತನ್ನ ಹಾಸಿಗೆಯ ಬಳಿ ಇದ್ದ ಆ ಅಲಂಕಾರ ಸಾಮಗ್ರಿಗಳನ್ನು ನೋಡಿ ಸೀತಾಲಕ್ಷ್ಮಿಗೆ ಆಟದ ಸಾಮಾನುಗಳನ್ನು ನೋಡುವ ಮಗುವಿಗೆ ಆನಂದವಾಗುವಂತೆ ಆಸೆಯುಂಟಾಯಿತು. ಮುಂದಲ ಕ್ಷಣದಲ್ಲಿಯೇ ಶ್ರೀರಂಗಮ್ಮನ ಮಾತಿನ ಪೂರ್ಣ ಅರ್ಥವಾಗಿ ಅವಳು ದಿಗ್ಭ್ರಾಂತಳಾದಳು. ಕಲ್ಯಾಣಿಯು "ಆ ಸಾಬೂನು ಸೆಂಟು ಬಾಚಣಿಗೆ ಕನ್ನಡಿ ನೆನ್ನೆ ಇಲ್ಲದ್ದು ಇವತ್ತು ನಿನ್ನ ಹಾಸಿಗೇಲಿ ಹೇಗೆ ಬಂತು?" ಎಂದು ಕೇಳಿದಳು. ಸೀತಾಲಕ್ಷ್ಮಿಯು "ದೇವರಿಗೆ ಗೊತ್ತು. ನಾನೂ ಅದನ್ನು ಈಗಲೇ ನೋಡಿದ್ದು" ಎಂದಳು. ಮಹಾಲಕ್ಷ್ಮಿಯು ಹಾಸ್ಯದಿಂದ "ದೇವರಿಗೇ ಗೊತ್ತು. ಪಾಪ. ಸಾಧುಪ್ರಾಣಿ ನಿನಗೆ ಏನಾದರೂ ತಿಳಿದಿದೆಯೇ?" ಎಂದಳು. ಸೀತಾಲಕ್ಷ್ಮಿ ಬೆದರಿದ ಹುಲ್ಲೆಯಂತೆ ನಾಲ್ಕೂ ಕಡೆ ನೋಡಿದಳು. ಕಲ್ಯಾಣಿಯ ಮುಖದಲ್ಲಾಗಲಿ ಶಾಮನ ಹೆಂಡತಿಯ ನೋಟದಲ್ಲಿ

ಯಾಗಲಿ ಅವಳಿಗೆ ಸಹಾನುಭೂತಿ ತೋರಲಿಲ್ಲ. ಈ ಪ್ರಸಂಗದ ಪರಿಣಾಮ ವೇನಾಗುವುದೆಂಬುದು ಅವಳಿಗೆ ಮಬ್ಬು ಮಬ್ಬಾಗಿ ಅರ್ಥವಾಗಿ ಅವಳು ಗಡಗಡನೆ ನಡುಗಿದಳು. “ಸಾಯಿಸುವುದಕ್ಕೆ ಮುಂಚೆ ಇಷ್ಟೊಂದು ಚಿತ್ರ ಹಿಂಸೆ ಯಾಕೆ ಕೊಡುತ್ತಾರೆ? ಸುಮ್ಮನೆ ಕೊಲ್ಲಬಾರದೆ?'' ಎಂದು ಕೊಂಡಳು.

ಆಚೆ ಬೀದಿಯ ಸಿಂಗಾರಮ್ಮನ ಹೆಸರನ್ನು ಕೇಳಿದರೇ ಎಲ್ಲರಿಗೂ ನಡುಕ ಬರುತ್ತಿತ್ತು. ರಂಭಾಪುರಿಗೆ ಬರುವುದಕ್ಕೆ ಮುಂಚೆಯೇ ಸೀತಾಲಕ್ಷ್ಮಿ ಸಿಂಗಾರಮ್ಮನ ಹೆಸರನ್ನು ಕೇಳಿದ್ದಳು. ಸಿಂಗಾರಮ್ಮನ ಪೂರ್ವ ಕಥೆ ಪರಿ ಶುದ್ಧವಾಗಿರಲಿಲ್ಲ. ವಯಸ್ಸಾದವರಿಗೆಲ್ಲ ಅದು ಗೊತ್ತು. ಸಿಂಗಾರಮ್ಮನಿಗೆ ಮದುವೆಯಾದ ನಾಲ್ಕು ಐದು ವರುಷಗಳೊಳಗಾಗಿ ಆಕೆಯ ಪತಿ ಸ್ವರ್ಗ ಸ್ಥನಾದನು. ಗಂಡನ ಆಸ್ತಿ ಯಾವುದೂ ಇರಲಿಲ್ಲ. ಒಂದು ಗಂಡು ಮಗು ಮಾತ್ರ ಇತ್ತು. ಅಣ್ಣ ತಮ್ಮಂದಿರ ಹಿಸ್ಸೆಯಲ್ಲಿ ಬಂದಿದ್ದ ಒಂದು ಮುರುಕಲು ಮನೆ. ಸಿಂಗಾರಮ್ಮ ಪುಷ್ಟಳಾಗಿ ದೃಢಕಾಯಳಾಗಿದ್ದಳು. ವೈದಿಕ ಸಂಪ್ರ ದಾಯದ ಮನೆಯಾದುದರಿಂದ ಅವಳು ಬೇಡವೆಂದರೂ ಕೇಳದೆ ಗಂಡನ ಬಂಧುಗಳು ಅವಳ ತಲೆಯನ್ನು ಬೋಳಿಸಿದ್ದರು. ಆದರೂ ಯವ್ವನದ ಕೊಬ್ಬು ಇನ್ನೂ ಅವಳಿಗೆ ಇದ್ದುದರಿಂದ ಅವಳ ಮುಖ ತುಂಬ ಕುರೂಪವಾಗಿರಲಿಲ್ಲ. ಸಿಂಗಾರಮ್ಮ ಸುಂದರಿಯಾಗಿರಲಿಲ್ಲ. ಕಣ್ಣು ಮೂಗು ಕೈ ಕಾಲುಗಳು ನೆಟ್ಟಗಿದ್ದವು. ಗಂಡ ಸತ್ತ ಮೂರು ನಾಲ್ಕು ವರುಷಗಳು ಅವಳು ರಂಭಾ ಪುರಿಯಲ್ಲಿ ಇತರರ ಮನೆಯಲ್ಲಿ ಪಾತ್ರೆ ಬೆಳಗುವುದು, ಅಕ್ಕಿ ಬೀಸುವುದು ಮೆಣಸಿನಕಾಯಿ ಪುಡಿ ಮಾಡುವುದು ಅವಲಕ್ಕಿ ಇಡಿಯುವುದು, ಮುಂತಾದ ಕೂಲಿ ಕೆಲಸಗಳಿಂದ ತನ್ನನ್ನೂ ತನ್ನ ಮಗನನ್ನೂ ಕಾಪಾಡಿಕೊಂಡಳು. ಅವಳಲ್ಲಿ ಎಲ್ಲರಿಗೂ ಕನಿಕರವುಂಟಾಗಿತ್ತು.

ಇದ್ದಕ್ಕಿದ್ದಂತೆ ಸಿಂಗಾರಮ್ಮ ರಂಭಾಪುರಿಯ ಮುತ್ತಣ್ಣನವರ ಮನೆಗೆ ಹೆಚ್ಚು ಹೆಚ್ಚಾಗಿ ಹೋಗಲು ಪ್ರಾರಂಭಿಸಿದಳು. ಮುತ್ತಣ್ಣನವರಿಗೆ ವಯಸ್ಸು ಅರವತ್ತು ಆಗಿತ್ತು. ಅವರಿಗೆ ಅವರ ವಯಸ್ಸಿಗೆ ಅನುಗುಣಳಾದ ಐವತ್ತೈದು ವಯಸ್ಸಿನ ಹೆಂಡತಿಯೇ ಇದ್ದರು. ಮುತ್ತಣ್ಣನವರಿಗೆ ಮಕ್ಕಳು ಇರಲಿಲ್ಲ. ಮಕ್ಕಳಾಗುವ ಆಸೆ ಇಲ್ಲದಿದ್ದುದರಿಂದ ಅವರು ಬಂಧುಗಳ ಮಗನೊಬ್ಬನನ್ನು

ದತ್ತು ಸಹ ತೆಗೆದುಕೊಂಡಿದ್ದರು. ಅವರಿಗೆ ತುಂಬ ಆಸ್ತಿ, ಕೈಯಲ್ಲಿ ಹಣ ಕಾಸು, ಮನೆಯಲ್ಲಿ ಒಡವೆ ವಸ್ತು ಸಹ ಇದ್ದವು. ಅವರು ಯವ್ವನಕಾಲದಲ್ಲಿ ಬಹಳ ರಸಿಕರಾಗಿದ್ದರೆಂದೂ ತಮ್ಮ ಮನಸ್ಸಿನ ಆಸೆಯಂತೆ ನಡೆಯಲು ಬಹಳ ಸಾಹಸ ಮಾಡುತ್ತಿದ್ದರೆಂದೂ ರಂಭಾಪುರಿಯ ಹಿರಿಯರು ಹೇಳುತ್ತಿದ್ದರು. ಮುತ್ತಣ್ಣನವರು ಹಿಂದಲ ಸಂಪ್ರದಾಯಕ್ಕೆ ಸೇರಿದವರು. ಕೆಲವು ವಿಷಯ ಗಳಲ್ಲಿ ಆಗಿನವರ ಭಾವನೆಗಳು ಇಂದಿನವರ ಭಾವನೆಗಳಿಗಿಂತ ಬೇರೆ ಯಾಗಿದ್ದವು. ಮದುವೆಯಾದ ಮೇಲೆಯೂ ಮುತ್ತಣ್ಣವರು ರಂಭಾಪುರಿಗೆ ಹದಿನಾರು ಮೈಲಿ ಆಚೆಯ ಪಟ್ಟಣದಲ್ಲಿ "ಬೆಳಗಿ" ಎಂಬ ಸ್ತ್ರೀಯ ಸಂಪರ್ಕವಿಟ್ಟುಕೊಂಡಿದ್ದರು. ಆಕೆ ಬೆಳ್ಳಗೆ ಇದ್ದುದರಿಂದ ಆ ಪ್ರಾಂತ್ಯ ದವರೆಲ್ಲ ಅವಳನ್ನು ಬೆಳಗಿ ಎಂದೇ ಕರೆಯುತ್ತಿದ್ದರು. ಬರಬರುತ್ತಾ ಪುಟ್ಟಿ ಎಂಬ ಹುಟ್ಟು ಹೆಸರೇ ಅವಳಿಗೆ ಮರೆಯಾಗಿ ಬೆಳಗಿ ಎಂಬುದೇ ವಾಡಿಕೆಯ ಹೆಸರಾಯಿತು. ಬೆಳಗಿ ತಾಫೆ ಕಟ್ಟುವುದರಲ್ಲಿ ಹೆಸರಾಂತವಳಾದಳು. ವಿದ್ಯೆ ಕಲಿಯದ ಹಳ್ಳಿಯ ಹೆಣ್ಣಾದರೂ, ಅಷ್ಟಪದಿ ಕೃಷ್ಣಕರ್ಣಾಮೃತ ಇವುಗಳ ಶ್ಲೋಕಗಳಿಗೆ ಅಭಿನಯವನ್ನು ಹಿಡಿಯುವುದರಲ್ಲಿ ನಿಸ್ಸೀಮಳಾಗಿದ್ದಳು. ಸಂಸ್ಕೃತ ಪಂಡಿತರಾದ ಅನೇಕ ವೈದೀಕ ವಿದ್ವಾಂಸರೂ ಸಹ ಅವಳ ಅಷ್ಟ ಪದಿಯ ಅಭಿನಯಕ್ಕೆ ಮರುಳಾಗಿ ಅವಳನ್ನೇ ರಾಧೆಯೆಂದು ಭಾವಿಸುತ್ತಾ ತಮಗೆ ಕೃಷ್ಣತ್ವವನ್ನು ಆರೋಪಿಸಿಕೊಂಡು, ಅವಳು ಕಾಸಿಕೊಟ್ಟ ಹಾಲನ್ನು ಕುಡಿದು, ಎಲೆ ಅಡಿಕೆ ಜಗಿಯುತ್ತಾ ಮನೆಗೆ ಹೋಗುತ್ತಿದ್ದರು. ಅದು ಕೇವಲ ಕಲಾಭಿಮಾನಿಗಳ ಸರಸ ಸಲ್ಲಾಪವಾಗಿತ್ತೇ ಹೊರತು ಅದರಲ್ಲಿ ದೇಹಗಳ ಆಕರ್ಷಣೆ, ಕಾಮದ ವಾಸನೆ ಇರಲಿಲ್ಲ. ಅಂದಿನ ಸಂಸ್ಕೃತ ಪಂಡಿತರ ಯೋಗ್ಯತೆಯೂ ಅಂತಹ ಉಚ್ಚಮಟ್ಟದ್ದೇ ಆಗಿತ್ತು. ಒಂದು ಸಲ ತಾಫೆ ಬೆಳಗಿಯ ಅಭಿನಯವನ್ನು ನೋಡಲು ಹೊನ್ನವಳ್ಳಿಯ ಶಿಖಾಮಣಿ ಪಂಡಿತರು ಬಂದರು. ಶಿಖಾಮಣಿ ಪಂಡಿತರು ಹಳ್ಳಿಯಲ್ಲಿ ಹುಟ್ಟಿ ಬೆಳೆದು ವ್ಯವಸಾಯದಲ್ಲಿ ತೊಡಗಿ ಹಳ್ಳಿಯಲ್ಲೇ ಇದ್ದವರಾದರೂ ಒಳ್ಳೆಯ ಸಂಸ್ಕೃತ ವಿದ್ವಾಂಸರು. ಅಲಂಕಾರ ಶಾಸ್ತ್ರವನ್ನು ಚೆನ್ನಾಗಿ ಬಲ್ಲವರು. ಅಭಿನಯವನ್ನೂ ಅರಿತವರು. ಆಗಿನ ವಿದ್ವಾಂಸರ ಸ್ವಭಾವವೇ ಹಾಗೆ. ಬೆಳಗಿ ಅವಿದ್ಯಾವಂತ ಳಾದರೂ ಅಷ್ಟಪದಿಯನ್ನು ತಾಫೆ ಹಿಡಿಯುವುದನ್ನು ನೋಡಲು ಅವರು ಬಂದಿದ್ದರು. ಬೆಳಗಿ

ತ್ವಾಂ ಚಿತ್ತೇನ ಚಿರಂ ವಹನ್ನಯ ಮತಿ ಶಾಂತೋ ಭೃಶಂ ತಾಪಿತಃ
ಕಂದರ್ಪೇಣತು ಪಾತು ಮಿಚ್ಛತಿ ಸುಧಾ ಸಂಬೋಧ ಬಿಂಬಾಧರಂ
ಅಸ್ಯಾಂಕಂ ಸಮಲಂಕುರು ಕ್ಷಣಮಿಹ ಭ್ರೂಕ್ಷೇಪ ಲಕ್ಷ್ಮೀಲವ
ಕ್ರೀತೇ ದಾಸಜನೋಪ ಸೇವಿತ ಪದಾಂಭೋಜೇ ಕುತಃ ಸಂಭ್ರಮಃ

[ಹೇ ರಾಧೆ, ಕೃಷ್ಣನು ಬಹುಕಾಲದಿಂದ ನಿನ್ನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಕಂದರ್ಪ ಬಾಧೆಯಿಂದ ಬಳಲಿ, ನಿನ್ನ ಅಧರಾಮೃತ ಪಾನವನ್ನು ಬಯಸುತ್ತಿರುವನು. ಆ ಕೃಷ್ಣನ ಅಂಕವನ್ನು ಕ್ಷಣಕಾಲ ಅಲಂಕರಿಸು. ನಿನ್ನ ಭ್ರೂ ವಿಲಾಸದಿಂದ ಅವನು ಕ್ರೀತನಾಗಿ ನಿನ್ನ ಚರಣಾರವಿಂದದ ಸೇವೆ ಮಾಡುತ್ತಾನೆ. ಈ ಕೃಷ್ಣನಲ್ಲಿ ಯಾಕೆ ಭಯ ಸಂಭ್ರಮ?]

ತಾಫೆ ಬೆಳಗಿ ಮೇಲಿನ ಶ್ಲೋಕಕ್ಕೆ ಶಿಖಾಮಣಿ ಪಂಡಿತರ ಎದುರಿಗೆ ಅಭಿನಯ ಹಿಡಿದಳು. ಆಕೆಯ ಅಭಿನಯ ಅತ್ಯಂತ ನಯನ ಮೋಹಕ ವಾಗಿತ್ತು. ಆದರೆ, ಅವಳಿಗೆ ಸರಿಯಾದ ಶಿಕ್ಷಕರಿಂದ ಪಾಠವಾಗಿಲ್ಲದಿದ್ದುದ ರಿಂದ ಒಂದು ಕಡೆ ಅವಳು ತಪ್ಪು ಮುದ್ರೆ ಅಭಿನಯಿಸಿದಳು. ಶಿಖಾಮಣಿ ಪಂಡಿತರೆಂದರೆ ಸಾಮಾನ್ಯರಲ್ಲ. ಇತರರು ಬೆಳಗಿಯ ವಿಲಾಸವನ್ನು ನೋಡಿ ಕೊನೆಯ ಪಾದವನ್ನು ಚಪ್ಪರಿಸುತ್ತಿರುವಾಗ, ಶಿಖಾಮಣಿ ಪಂಡಿತರು ಎದ್ದುನಿಂತು ಸೊಂಟಕ್ಕೆ ತಮ್ಮ ಜರೀ ವಸ್ತ್ರವನ್ನು ಸುತ್ತಿಕೊಂಡು ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ಆ ಶ್ಲೋಕವನ್ನು ಅಭಿನಯಿಸಿದರು. ಗಂಭೀರವಾದ ಆಜಾನುಬಾಹುವಾದ ಅವರು ಆ ಭಂಗಿಯಲ್ಲಿ ಈಶ್ವರನ ತಾಂಡವ ಮೂರ್ತಿ ಯಂತೆಯೇ ಕಂಡರು. ಅವರು ಯಾಕೆ ಅಭಿನಯಿಸುತ್ತಾರೆ ಎಂಬುದು ಅಲ್ಲಿದ್ದ ಉಳಿದವರಿಗೆ ಅರ್ಥವಾಗಲಿಲ್ಲ. ಆದರೆ ಬೆಳಗಿಗೆ ತಾನು ತಪ್ಪಿದ್ದ ಸ್ಥಳ ಗೊತ್ತಾಯಿತು. ಇತರ ಗುರುಗಳಂತೆ ಸುಮ್ಮನೆ ಬಾಯಲ್ಲಿ ಹೇಳದೆ ನಿಜವಾಗಿ ಅಭಿನಯದಿಂದಲೇ ತನ್ನ ತಪ್ಪನ್ನು ತಿದ್ದಿದ ಶಿಖಾಮಣಿ ಪಂಡಿತ ರಿಗೆ ಬೆಳಗಿ ನಮಸ್ಕರಿಸಿ ಸತ್ಕರಿಸಿ ಅವರನ್ನೇ ತನ್ನ ಗುರುವಾಗಿ ಪರಿಗಣಿಸಿದಳು.

ಅದು ಬೆಳಗಿಯ ಯವ್ವನದ ಕಾಲ. ರಂಭಾಪುರಿಯ ಮುತ್ತಣ್ಣ ನವರಿಗೆ ಆಗ ಅವಳ ಪರಿಚಯವಿರಲಿಲ್ಲ. ಮುತ್ತಣ್ಣನವರಿಗೆ ಅವಳ ಪರಿಚಯವಾಗುವ ವೇಳೆಗೆ ಅವಳ ವೈಭವವೆಲ್ಲ ಹಳೆಯ ಕತೆಯಾಗಿತ್ತು. ಶಿಖಾಮಣಿ ಪಂಡಿತರನ್ನು ಕುಣಿಸಿದ ವಿಲಾಸ, ರುಚಿ, ಅಪಾಂಗ ನೋಟ

ಗಳು ಅವಳಲ್ಲಿ ಇರಲಿಲ್ಲ. ಶಿಖಾಮಣಿ ಪಂಡಿತರು ಕಾಲವಾಗಿಯೇ ಇಪ್ಪತ್ತು ವರುಷಗಳಿಗೆ ಮೇಲೆ ಆಗಿತ್ತು. ಅಭಿನಯವನ್ನು ಬಿಟ್ಟೇ ಅವಳು ಹತ್ತಾರುವರುಷಗಳಾಗಿದ್ದುವು. ಈಚಿಗೆ ಅವಳು ಸ್ಥೂಲಕಾಯಳಾಗಿ ಬಿಳಿಯ ಬಣ್ಣದ ಹೊರತು ಉಳಿದ ಎಲ್ಲ ಅಂಶಗಳಲ್ಲಿಯೂ ಕುರೂಪಿಯೇ ಆಗಿದ್ದಳು ರಾಧೆಯಂತೆ ಅಭಿನಯಿಸಿದ್ದ ಅವಳನ್ನು ಕಂಡಿದ್ದವರು ಯಾರೂ ಅವಳೇ ಇವಳೆಂದು ಭಾವಿಸುತ್ತಿರಲಿಲ್ಲ. ಯವ್ವನದ ಮಿಂಚಿನ ಹೊಳವು ಮುಚ್ಚಿದ್ದ ಅವಳ ಅಸಭ್ಯತನಗಳೆಲ್ಲ, ಯವ್ವನ ಮರೆಯಾದ ಮೇಲೆ ಇನ್ನೂ ಹೆಚ್ಚು ಮರ್ಯಾದೆ ಹೀನವಾಗಿ ಕಾಣತೊಡಗಿದವು. ಅಲ್ಲಿಂದ ಈಚಿಗೆ ಅವಳು ಅನೇಕರನ್ನು ಆಶ್ರಯಿಸಿ ಕೊನೆಗೆ ರಂಭಾಪುರಿಯ ಮುತ್ತಣ್ಣನವರಿಗೆ ಗಂಟು ಬಿದ್ದಿದ್ದಳು. ಮುತ್ತಣ್ಣನವರಿಗೆ ಬೆಳಗಿಯ ಸಹವಾಸ ಪ್ರಾರಂಭವಾದಾಗ, ಅವರಿಗೆ ಪ್ರತಿಸ್ಪರ್ಧಿಗಳೇ ಇರಲಿಲ್ಲ. ಆ ರಾಜ್ಯಕ್ಕೆ ಅವರೇ ಪೂರ್ಣ ಒಡೆಯ ರಾಗಿದ್ದರು.

ಆದರೆ ಮುತ್ತಣ್ಣನವರದು ಒಳ್ಳೆಯ ಸಾಹಸ. ರಂಭಾಪುರಿಯಿಂದ ಬೆಳಗಿ ಇದ್ದ ನಗರ ಹದಿನಾರು ಮೈಲಿ ದೂರವಿತ್ತು. ಮುತ್ತಣ್ಣನವರು ರಾತ್ರಿ ಒಂಭತ್ತು ಗಂಟೆಯಾದ ನಂತರ ಕುದುರೆಯ ಮೇಲೆ ಹೊರಟು ಬೆಳಗಿಯ ಮನೆಯನ್ನು ಸೇರಿ, ಮತ್ತೆ ಬೆಳಗಾಗುವುದರೊಳಗೆ ರಂಭಾಪುರಿಗೆ ಹಿಂದಿರುಗುತ್ತಿದ್ದರು. ಹೀಗೆ ಅವರು ಒಂದು ಸಲ ಹೊರಟಾಗ ಸಂಧ್ಯಾ ಕಾಲದ ಅತಿಯಾದ ಮಳೆಯಿಂದ ನದಿಯಲ್ಲಿ ಪ್ರವಾಹ ಬಂದಿತ್ತು. ಆದರೂ ಅವರು ಹೆದರದೆ ಕುದರೆಯ ಮೇಲೆ ಕುಳಿತು ಅದನ್ನು ನೀರಿನಲ್ಲಿ ಈಜುಬಿಟ್ಟು ಬೆಳಗಿಯ ಮನೆಯನ್ನು ಸೇರಿ ಬೆಳಗಾಗುವುದರೊಳಗೆ ಹಿಂದಿರುಗಿದರು. ಬೆಳಗಿಯ ಪರಿಚಯ ತಮಗೆ ಆಗುವ ವೇಳೆಗೆ ಅವರಿಗೆ ಮದುವೆಯಾಗಿ ಅವರ ಹೆಂಡತಿ ಅವರೊಡನೆ ಆಗಲೇ ಸುಮಾರು ಇಪ್ಪತ್ತು ವರುಷ ಸಂಸಾರ ಮಾಡಿದ್ದರು. ಅನಂತರ ಬೆಳಗಿ ಆಸ್ಪತ್ರೆಯಲ್ಲಿ ಕಾಲವಾದಳು. ಮುತ್ತಣ್ಣ ತಾವು ಬದುಕಿರುವವರೆಗೆ ಬೆಳಗಿ ಸತ್ತ ದಿನವನ್ನು ಜ್ಞಾಪಿಸಿಕೊಂಡು, ಒಂದೆ ರಡು ಗಳಿಗೆ ಕೊರಗುತ್ತಿದ್ದರು.

ಹೀಗೆ ಬೆಳಗಿಯ ಅನಂತರ, ಮುತ್ತಣ್ಣನಿಗೆ ತನ್ನ ಮನೆಗೆ ಮೆಣಸಿನ ಪುಡಿ ಮಾಡಿಕೊಡಲು ಬರುತ್ತಿದ್ದ ಸಿಂಗಾರಮ್ಮನ ಮೇಲೆ ಕಣ್ಣು ಬಿತ್ತು.

ಇದ್ದಕ್ಕಿದ್ದಂತೆ ಸಿಂಗಾರಮ್ಮ ಕೂಲಿಗೆ ಇತರರ ಮನೆಗಳಿಗೆ ಹೋಗುವುದು ನಿಂತುಹೋಯಿತು. ಮುತ್ತಣ್ಣನ ಹೆಂಡತಿ ಮನೆಯಲ್ಲಿಯೇ ಇದ್ದರೂ ಸಿಂಗಾರಮ್ಮ ತನ್ನ ಕಾಲದ ಹೆಚ್ಚು ಭಾಗವನ್ನು ಅಲ್ಲಿಯೇ ಕಳೆಯ ತೊಡಗಿದ್ದಳು. ಮುತ್ತಣ್ಣನ ಹೆಂಡತಿಗೆ ಇದರಿಂದ ಅಸಮಾಧಾನವಾಗಿ ಅವಳು ಮುಚ್ಚಿಕೊಳ್ಳಲು ಪ್ರಯತ್ನಿಸಿದರೂ ಅದು ಪ್ರಕಟವಾದಾಗ, ಮುತ್ತಣ್ಣನೇ ಸಿಂಗಾರಮ್ಮನ ಮನೆಯಲ್ಲಿ ಹೆಚ್ಚುಕಾಲ ಇರತೊಡಗಿದನು. ಒಂದು ರಾತ್ರಿ ಮುತ್ತಣ್ಣ ತನ್ನ ಮನೆಗೇ ಕನ್ನ ಹಾಕಿ ಹೆಂಡತಿಯ ವಡವೆ ಸೀರೆಗಳು ಬೆಳ್ಳಿಯ ಪಾತ್ರೆಗಳು, ಎಲ್ಲವನ್ನೂ ಕದ್ದುಬಿಟ್ಟನು. ಅವನು ಹಾಗೆ ಮಾಡಿದುದು ಹೆಂಡತಿಯ ಭಯಕ್ಕಾಗಿ ಅಲ್ಲ. ಅವಳಿಗೆ ಕಾಣುವಂತೆ ತೆಗೆದುಕೊಂಡು ಹೋದರೆ ರಾದ್ಧಾಂತವಾಗಿ ಹೆಂಡತಿ ಬಾಯಿ ಬಡಿದುಕೊಂಡು ಊರವರೆಲ್ಲ ಬಂದು ಸೇರಿಬಿಡುತ್ತಾರೆಲ್ಲ ಎಂಬುದಕ್ಕಾಗಿ. ಮುತ್ತಣ್ಣ ಕನ್ನ ಹಾಕಿ ತನ್ನ ಮನೆಯಲ್ಲಿಯೇ ಕದಿಯುತ್ತಿರುವಾಗ ಹೆಂಡತಿಗೆ ಕಳ್ಳರು ಬಿದ್ದಿರುವುದು ಗೊತ್ತಾಯಿತು. ಅವಳು ಗಟ್ಟಿಯಾಗಿ ಕಿರಚಿಕೊಂಡಳು. ಮುತ್ತಣ್ಣನು ಕದ್ದಿದ್ದ ಎಲ್ಲ ಪದಾರ್ಥಗಳನ್ನೂ ಅಲ್ಲೇ ಇದ್ದ ಕಣಜಕ್ಕೆ ಎಸೆದು ಬೀಗ ಹಾಕಿಬಿಟ್ಟನು. ಬೆಳಗಾದಮೇಲೆ ಮುತ್ತಣ್ಣನ ಹೆಂಡತಿ ರಾತ್ರಿ ಕಳ್ಳರು ಬಿದ್ದು ಎಲ್ಲವನ್ನು ಹೊಡೆದುಕೊಂಡು ಹೋದರೆಂದು ಹೇಳಿಕೊಂಡಳು. ಮುತ್ತಣ್ಣ ಆ ವಿಷಯದಲ್ಲಿ ಹೆಚ್ಚು ಶ್ರದ್ಧೆ ತೋರಿಸಲಿಲ್ಲ. ಪೋಲೀಸರಿಗೂ ದೂರು ಕೊಡಲಿಲ್ಲ. ಆತನ ಹೆಂಡತಿಗೆ ಸ್ವಲ್ಪ ಅನುಮಾನ ಬಂದು "ಕಣಜಕ್ಕೆ ಯಾರು ಬೀಗ ಹಾಕಿದರು?" ಎಂದು ಕೇಳಿದಳು. ಮುತ್ತಣ್ಣನು "ಅದೆಲ್ಲ ನಿನಗ್ಯಾಕೆ?" ಎಂದುಬಿಟ್ಟನು. ಅನಂತರ ನಿಧಾನವಾಗಿ ಮುತ್ತಣ್ಣನ ಹೆಂಡತಿಯ ಕಳವಾದ ಪದಾರ್ಥಗಳೆಲ್ಲ ಸಿಂಗಾರಮ್ಮನ ಮನೆಯಲ್ಲಿ ಕಾಣತೊಡಗಿದವು. ಅವು ಮನೆ ಬಿಟ್ಟು ಹೋಗುವಾಗ ರಂಪವಾಗಕೂಡದೆಂದು ಬಯಸಿದ್ದ ಮುತ್ತಣ್ಣನ ಆಸೆ ನೆರವೇರಿತು. ಮುತ್ತಣ್ಣನೂ ತನ್ನ ಮನೆಯನ್ನು ಬಿಟ್ಟು ಸಿಂಗಾರಮ್ಮನ ಮನೆಯಲ್ಲಿಯೇ ಇರತೊಡಗಿದನು.

ಅದು ಇನ್ನೂ ಕೆಲವು ಹಳಬರು ಊರಲ್ಲಿದ್ದ ಕಾಲ. ಗಂಡಸು, ಹೆಂಡತಿಯನ್ನು ಬಿಟ್ಟು ಬಹಿರಂಗವಾಗಿ ಮತ್ತೊಬ್ಬ ವಿಧವೆಯೊಡನೆ ಇರುವುದು ಹಿರಿಯರಿಗೆ ಒಪ್ಪಿಗೆಯಾಗಲಿಲ್ಲ. ಅವರು ಮುತ್ತಣ್ಣನನ್ನೂ ಸಿಂಗಾರ

ಮ್ಮನನ್ನೂ ಕುಲದಿಂದ ಹೊರಕ್ಕೆ ಹಾಕಿದರು ಮುತ್ತಣ್ಣ ಸುಮಾರು ಪ್ಪತ್ತು ವರುಷ ಸಿಂಗಾರಮ್ಮನೊಂದಿಗೆ ಅವಳ ಮನೆಯಲ್ಲಿಯೇ ಸಂಸಾರ ಮಾಡಿಕೊಂಡಿದ್ದನು. ಸಿಂಗಾರಮ್ಮ ಮುತ್ತಣ್ಣನಿಗೆ ಲಕ್ಷ್ಮಿಯಾಗಿದ್ದಳೋ ಲ್ಲವೋ ತಿಳಿಯದು. ಆದರೆ ಮುತ್ತಣ್ಣ ಮಾತ್ರ ಸಿಂಗಾರಮ್ಮನ ಾಲಿಗೆ ಲಕ್ಷ್ಮಿಯಾದನು. ಆ ಇಪ್ಪತ್ತು ವರುಷಗಳಲ್ಲಿ ಸಿಂಗಾರಮ್ಮನ ಳೆಯ ಮನೆ ಹೊಸಮನೆಯಾಯಿತು. ಅವಳ ಹೆಸರಿಗೆ, ಅನೇಕ ಮೀನುಗಳು ಕ್ರಯವಾದುವು ಅವಳ ಮಗನು ಬೆಳೆದು ದೊಡ್ಡವ ಾದನು. ಮನೆಯಲ್ಲಿ ಚಿನ್ನ ಬೆಳ್ಳಿ ಸಂಗ್ರಹವಾಯಿತು. ಸಿಂಗಾರಮ್ಮ ಂದೆ ಕೂಲಿ ಮಾಡುತ್ತಿದ್ದ ಹೆಣ್ಣು ಎಂಬುದೇ ಜನರಿಗೆ ಮರೆತುಹೋಯಿತು. ನಂತರ ಮುತ್ತಣ್ಣ ಕಾಲವಾದನು. ಆತನಿಗಿಂತ ಮುಂಚೆಯೇ ಅವನ ಂಡತಿಯು ಕಾಲವಾಗಿದ್ದುದರಿಂದಲೂ, ಸಿಂಗಾರಮ್ಮ ಮೊದಲೇ ವಿಧವೆ ಾಗಿದ್ದುದರಿಂದಲೂ, ಮುತ್ತಣ್ಣನ ಮರಣದಿಂದ ಯಾವ ವಿಧವೆಯೂ ಹಿಂದೆ ಳಿಯಲಿಲ್ಲ.

ಮುತ್ತಣ್ಣನ ಮರಣಾನಂತರ ನಾಲ್ಕಾರು ವರುಷಗಳಲ್ಲಿ ಜನ ುತ್ತಣ್ಣನನ್ನೂ ಮರೆತರು. ಸಿಂಗಾರಮ್ಮನನ್ನು ಅವಳ ಗಂಡ (ಶ್ರೀನಿ ಾಸ)ನ ವಿಧವೆ ಎಂದೇ ಕರೆದರು. ಸಿಂಗಾರಮ್ಮ ಧನವಂತಳಾಗಿದ್ದುದೇ ದಕ್ಕೆಲ್ಲ ಕಾರಣ. ಧನವಂತರ ತಪ್ಪುಗಳನ್ನು ಜನ ಸಾಮಾನ್ಯವಾಗಿ ಮರೆತು ಡುತ್ತಾರೆ. ಯಾಕೆಂದರೆ ಜನ ಯಾವಾಗಲೂ ಧನದದಾಸರು. ಸಿಂಗಾರ ್ಮನ ಮೇಲಿದ್ದ ಬಹಿಷ್ಕಾರ ಸ್ವಾಭಾವಿಕವಾಗಿಯೇ ಮರೆಯಾಯಿತು. ಊರಿ ವರು ಅವಳ ಮನೆಗೆ ಬಂದು ಹೋಗತೊಡಗಿದರು. ಮುತ್ತಣ್ಣ ಇದ್ದಾಗ ಹಿಷ್ಕಾರ ಹಾಕಲು ಅತ್ಯಂತ ಮುಖಂಡರಾದ ವೈದೀಕರೊಬ್ಬರೇ ಸಿಂಗಾರ ್ಮನ ಕಾಲಿಗೆ ಬಿದ್ದು ಹಿಂದೆ ನಡೆದುದನ್ನೆಲ್ಲ ಮನ್ನಿಸಿ, ತನ್ನ ಮಗಳನ್ನು ೊಸೆಯಾಗಿ ತಂದುಕೊಳ್ಳಬೇಕೆಂದು ಬೇಡಿದರು. ಬೆಳ್ಳಿಯ ತಟ್ಟೆಯಲ್ಲಿ ಂಗಾರಮ್ಮನ ಮಗನ ಕಾಲುಗಳನ್ನು ತೊಳೆದರು.

ಅನಂತರ ಪ್ರಾರಂಭವಾಯಿತು, ಸಿಂಗಾರಮ್ಮನ ನಿಜವಾದ ರಾಜ್ಯಭಾರ. ವಳಿಗೆ ವಯಸ್ಸು ಐವತ್ತಕ್ಕೆ ಮೀರಿತ್ತು. ಅವಳಿಗೆ ಯಾವ ಗಂಡಸನ್ನು ಂಡರೂ ಗೌರವವಿರಲಿಲ್ಲ. ಯಾವ ಹೆಂಗಸಿನಲ್ಲಿಯೂ ಭಯವಿರಲಿಲ್ಲ. ಮನೆ

ಯಲ್ಲಿ ನೆಮ್ಮದಿಯಾಗಿದ್ದುದರಿಂದ ಅವಳು ಯಾವಾಗಲೂ ಬಾಗಿಲಿನಲ್ಲಿಯೇ ಕುಳಿತು ತನ್ನ ಆಸ್ಥಾನವನ್ನುಸ್ಥಾಪಿಸಿದ್ದಳು. ಊರಿನಲ್ಲಿ ಹೆಣ್ಣು, ಗಂಡು ಎಲ್ಲರೂ ಹೋಗಿ ಅವಳೊಂದಿಗೆ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಿದ್ದರು. ಅವಳು ಯಾರಿಗೂ ಒಂದು ಹುಲ್ಲುಕಡ್ಡಿ ಸಹ ಕೊಡುತ್ತಿರಲಿಲ್ಲ. ಆದರೆ, ಎಲ್ಲರೊಂದಿಗೂ ಅವರವರಿಗೆ ಸರಿಯಾಗಿ ಹಿತವಾಗಿಯೇ ಮಾತನಾಡುತ್ತಿದ್ದಳು. ಗೃಹಕಲಹಗಳನ್ನು ಹುಟ್ಟಿಸುವುದರಲ್ಲಿಯೂ ಆಕೆ ನಿಸ್ಸೀಮಳಾಗಿದ್ದಳು. ಅವಳ ಬಾಗಿಲಿನಲ್ಲಿ ಯಾವಾಗಲೂ ಹೆಂಗಸರು ಗಂಡಸರ ಸಂತೆ ನೆರೆದಿರುತ್ತಿದ್ದಿತು. ಅವಳು ಇಬ್ಬರೊಂದಿಗೂ ಸಮಾನವಾಗಿ ನಿಸ್ಸಂಕೋಚದಿಂದ ವರ್ತಿಸುತ್ತಿದ್ದಳು. ರಂಭಾಪುರಿಯಲ್ಲಿ ಅವಳ ಮುಂದೆ ಹೋಗಿ ತಮ್ಮ ದೂರನ್ನು ಹೇಳಿಕೊಂಡಹೊರತು ಯಾರಿಗೂ ಸಮಾಧಾನವಾಗುತ್ತಿರಲಿಲ್ಲ. ಅವಳು ಎಲ್ಲರಿಗೂ ಹಿತವಾಗಿ ಹೇಳುತ್ತಿದ್ದಳು. ಅಣ್ಣತಮ್ಮಂದಿರು ಒಟ್ಟಿಗಿರುವ ಮನೆಯಲ್ಲಿ ಅಣ್ಣನಾಗಲೀ ತಮ್ಮನಾಗಲೀ ಒಂದು ದಿನ ಸಿಂಗಾರಮ್ಮನ ಜಗಲಿಯ ಮೇಲೆ ಕುಳಿತಿದ್ದನೆಂದರೆ ತೀರಿತು. ಎಲ್ಲರಿಗೂ ಗೊತ್ತು. ಮರುದಿವಸ ಆ ಮನೆಯಲ್ಲಿ ವಿಭಾಗವಾಗಿಬಿಡುತ್ತಿತ್ತು. ಒಂದು ಮನೆಯ ಸೊಸೆ ಸಿಂಗಾರಮ್ಮನೊಂದಿಗೆ ಒಂದು ಗಳಿಗೆ ಮಾತನಾಡಿದರೆ ಮರುದಿವಸ ಅವಳ ಗಂಡ, ತಾಯಿಯೊಂದಿಗೆ "ನಾವು ಬೇರೆ ಇರುತ್ತೇವೆ" ಎಂದು ಹೇಳುತ್ತಿದ್ದ.

ಈಚೆಗೆ ಸಿಂಗಾರಮ್ಮ ಊರಿಗೆ ಆಧುನಿಕ ಮನುಷ್ಯಳಾದಳು. ಯಾವ ನ್ಯಾಯವೂ ಅವಳ ಮುಂದೆಯೇ ತೀರ್ಮಾನವಾಗಬೇಕಾಗಿತ್ತು. ಅವಳು ಗ್ರಾಮಕ್ಕೆ ತಾನೇ ನೀತಿಬೋಧಕಳಾದಳು. "ವೃದ್ಧನಾರೀ ಪತಿವ್ರತಾ" ಎಂಬಂತೆ ಸ್ತ್ರೀ ಪುರುಷರ ನೀತಿಯನ್ನು ಅವಳು ಬಹಳ ಕಟುವಾಗಿ ಟೀಕಿಸುತ್ತಿದ್ದಳು. ಗಂಡ ಹೆಂಡಿರು ಸಲಿಗೆಯಿಂದ ಬೀದಿಯಲ್ಲಿ ನಡೆದುಕೊಂಡು ಹೋದರೂ ಅದನ್ನು ಅವಳು ಒಪ್ಪುತ್ತಿರಲಿಲ್ಲ. "ಸದ್ಯ ಯಾರೂ ಹೆಂಡತೀನೆ ಕಂಡಿಲ್ಲ. ಇದ್ಯಾಕೆ ಈ ಒಯ್ಯಾರ?" ಎನ್ನುತ್ತಿದ್ದಳು. ಒಂದು ಹೆಣ್ಣು ಸ್ವಾಭಾವಿಕವಾಗಿ ಆಚೆ ಈಚೆ ನೋಡುತ್ತಾ ಬೀದಿಯಲ್ಲಿ ನಡೆದರೆ "ತಲೆ ತಗ್ಗಿಸಿಕೊಂಡು ಯಾಕೆ ಹೋಗಬಾರದು ಅಂತಹ ಕೆಟ್ಟ ಚಾಳಿ?" ಎನ್ನುತ್ತಿದ್ದಳು. ಅತ್ಯಲ್ಪವಾದ ತಪ್ಪಿಗೂ ಅವಳದು ಕ್ರೂರವಾದ ದಂಡನೆಯೇ. ಅವಳಿಗೆ ದಯೆ ಎಂಬುದು ಲೇಶವೂ ಇರಲಿಲ್ಲ. ಮನುಷ್ಯ ಸ್ವಭಾವದ ಅರಿವೂ

ವಳಿಗೆ ಇದ್ದಂತೆ ತೋರಲಿಲ್ಲ. ತಾನು ದಾರಿ ತಪ್ಪಿದಾಗ ಜನ ತನ್ನನ್ನು ತಿರ ಸ್ಕರಿಸಿದುದಕ್ಕೆ ಈಗ ಅವಳು ಸೇಡು ತೀರಿಸಿಕೊಳ್ಳುತ್ತಿರುವಂತೆ ತೋರಿತು. ಂಗಾರಮ್ಮನ ಈ ನೀತಿಬೋಧೆಯ ಚಟದಿಂದ ಅನೇಕ ಸಂಸಾರಗಳು ಾಳಾಗಿದ್ದವು. ಅತ್ಯಂತ ಮೃದುಹೃದಯದ ಸಾಧುಪ್ರಾಣಿ ಕಮಲೆಯ ೀವನವನ್ನು ಸಿಂಗಾರಮ್ಮ ಮಣ್ಣುಗೂಡಿಸಿದುದನ್ನು ರಂಭಾಪುರಿಯವರು ಾರೂ ಮರೆತಿಲ್ಲ. ಅದೊಂದು ಕರುಣಾಜನಕವಾದ ಕತೆ.

ರಂಭಾಪುರಿಯ ಗರುಡಾಚಾರಿಯ ಹೆಂಡತಿ ಕಮಲೆ. ಗರುಡಾಚಾರಿಯ ುನೆ ಇದ್ದುದು ಸಿಂಗಾರಮ್ಮನ ಮನೆಯ ಮಗ್ಗುಲಲ್ಲಿಯೇ. ಗರುಡಾಚಾರಿಗೆ ಂದೆ ಇರಲಿಲ್ಲ ಮನೆಯಲ್ಲಿ ತಾಯಿ ಒಬ್ಬಳೇ. ತಾಯಿಗೆ ಮಗನಲ್ಲಿ ತುಂಬ ್ರೀತಿ. ಮಗನೂ ತಾಯಿಯ ಮಾತನ್ನು ಮೀರುತ್ತಿರಲಿಲ್ಲ. ಗರುಡಾ ಚಾರಿಯ ಹೆಂಡತಿ ಕಮಲೆ, ಗಂಡನ ಮನೆಗೆ ಬಂದು ಇನ್ನೂ ಮೂರು ತಿಂಗ ಾಗಿತ್ತು. ಆಕೆ ಲಕ್ಷಣವಾದ ಹುಡುಗಿ, ಸ್ವಭಾವದಿಂದ ಅಲಂಕಾರಪ್ರಿಯೆ. ಾಗರೀಕವಾದ ನಡೆನುಡಿಗಳು, ಕೆಲಸಗಳೆಲ್ಲ ತುಂಬ ಅಚ್ಚುಕಟ್ಟು, ಸೊಗ ಾದ ಅಡಿಗೆಯ ಕೈ. ರಂಭಾಪುರಿಗೇ ಅವಳೊಂದು ಬೆಳಕಾದಳು. ಆದರೆ, ಕೆಯ ಅತ್ತೆಗೆ ಅವೊಂದೂ ದೃಷ್ಟಿಗೇ ಬಿದ್ದಂತೆ ತೋರಲಿಲ್ಲ. ಅವಳಿಗೆ ತೋರುತ್ತಿದ್ದುದು ಈ ಹಳ್ಳಿಯ ಹುಡುಗಿಗೆ ಇಷ್ಟು ಥಳಕು ವೈಯ್ಯಾರ ಯಾಕೆ ಎಂದು ಮಾತ್ರ. ಕಮಲೆಯ ಅತ್ತೆ ತನ್ನ ಅಸಮಾಧಾನವನ್ನು ಯಾವಾಗಲೂ ಸಿಂಗಾರಮ್ಮನ ಮುಂದೆ ಹೇಳಿಕೊಳ್ಳುತ್ತಿದ್ದಳು. ಗಂಟೆಗಟ್ಟಲೆ ಸಿಂಗಾರಮ್ಮನೂ, ಕಮಲೆಯ ಅತ್ತೆಯೂ ತಮ್ಮ ತಮ್ಮ ಸೊಸೆಯರನ್ನು ಹಿತ್ತಲಿನಲ್ಲಿ ನಿಂತು ಕೊಂಡು ಗಟ್ಟಿಯಾಗಿಯೇ ಬಯ್ಯುತ್ತಾ ಸಂಭಾಷಿಸುತ್ತಿದ್ದರು. ಮಧ್ಯೆ ಮಧ್ಯೆ ಸಿಂಗಾರಮ್ಮ, ಕಮಲಮ್ಮನನ್ನೂ, ಕಮಲಮ್ಮನ ಅತ್ತೆ ಸಿಂಗಾರಮ್ಮನ ಸೊಸೆಯನ್ನೂ ಸಹ ಬಯ್ಯುತ್ತಿದ್ದರು. ಅವರ ಮಾತು ಸೊಸೆಯರಿಗೆ ಮಾತ್ರವೇ ಅಲ್ಲ. ಇತರ ಸುತ್ತಮುತ್ತಲ ನಾಲ್ಕಾರು ಜನಕ್ಕೆ ಕೇಳಿಸಿದರೂ ಅವರಿಗೆ ನಾಚಿಕೆಯಾಗಲಿ, ಭಯವಾಗಲೀ ಇರಲಿಲ್ಲ. ವಯಸ್ಸಾದಮೇಲೆ ನಾಚಿಕೆಯೂ ಮರೆಯಾಗಿಬಿಡುವುದೇನೋ ?

ಗರುಡಾಚಾರಿಗೆ ತಾಯಿಯಲ್ಲಿ ಪೂರ್ಣಭಕ್ತಿಯಿದ್ದುದರಿಂದ ಅವನ ಮನಸ್ಸಿಗೆ ಎಲ್ಲಿ ನೋವಾಗುವುದೋ ಎಂದು ಕಮಲೆ, ಅತ್ತೆಯ ಅಬ್ಬರ

ವನ್ನೆಲ್ಲ ತುಟಿ ಎರಡು ಮಾಡದೆ ಸಹಿಸಿಕೊಂಡಿದ್ದಳು. ದಿನದಿನಕ್ಕೆ "ಇವಳಲ್ಲಿ ಯಾವ ತಪ್ಪನ್ನು ಕಂಡುಹಿಡಿಯಲಿ?" ಎಂದು ಅವಳ ಅತ್ತೆಗೆ ಯೋಚನೆ ಬರುವಷ್ಟು ಸಮರ್ಪಕವಾಗಿತ್ತು ಕಮಲೆಯ ಕೆಲಸ. ಆದರೆ ಅವಳ ಗಂಡ, ಪ್ರಾಣಿಗೆ ಇದೊಂದೂ ಅರ್ಥವಾದಂತೆಯೇ ಕಾಣಲಿಲ್ಲ. ನಮ್ಮ ತಾಯಿಯನ್ನು ತೃಪ್ತಿಪಡಿಸಲು ಎಷ್ಟು ಕಷ್ಟಪಡುತ್ತಿದ್ದೀಯೆ? ಎಂಬ ಮೆಚ್ಚುಕೆ ಅವನ ಭಾವದಲ್ಲಿ ಒಂದು ಸಲವೂ ವ್ಯಕ್ತವಾಗಲಿಲ್ಲ. ಅದು ಅವನಿಗೆ ಅರ್ಥವಾಗಿಯೇ ಇಲ್ಲ ವೇನೋ ಎಂದೂ ಒಂದೊಂದು ಸಲ ಕಮಲೆ ಯೋಚಿಸುವಳು. ಗಂಡನಿಗಾಗಿ ತಾನು—ಅತ್ತೆ ಕೋಪಿಸಿಕೊಂಡರೂ ಸಹ--ಮಾಡಿಕೊಳ್ಳುತ್ತಿದ್ದ ಅಲಂಕಾರ ಅಚ್ಚುಕಟ್ಟುತನವನ್ನು ಗಂಡ ಮೆಚ್ಚಬೇಕೆಂದು ಅವಳು ಬಯಸುವಳು. ಆದರೆ ಅವಳ ಗಂಡ, ಜಡಪ್ರಾಣಿಗೆ ಕಣ್ಣೇ ಇದ್ದಂತೆ ತೋರಲಿಲ್ಲ.

ಕಮಲೆ ಅಷ್ಟು ಎಚ್ಚರಿಕೆಯಿಂದಿದ್ದರೂ ಒಂದು ದಿನ ಒಂದು ಸಣ್ಣ ಅಚಾತುರ್ಯ ನಡೆಯಿತು. ಅತ್ಯಲ್ಪವಾದುವೆಂದು ತೋರುವ ಸಂದರ್ಭಗಳಿಂದ ಜೀವನದ ಮೇಲೆ ಎಂತಹ ಪರಿಣಾಮವಾಗುವುದೆಂಬುದಕ್ಕೆ ಅದೇ ಒಂದು ಉದಾಹರಣೆಯಾಯಿತು. ಕಮಲೆಯ ಅತ್ತೆ, ತಾನು ಪಾತ್ರೆಗಳನ್ನು ದಡಲ್ ಬಡಲ್ ಎಂದು ಎತ್ತಿಹಾಕುತ್ತಿದ್ದರೂ, ಕಮಲೆ ಅದನ್ನು ಸ್ವಲ್ಪ ಗಟ್ಟಿಯಾಗಿ ಇಟ್ಟರೂ ''ಹೋ'' ಎಂದು ರಾದ್ಧಾಂತ ಮಾಡುತ್ತಿದ್ದಳು. ಹೊಳೆಗೆ ಹೋಗಿ ಕಮಲೆ ಬೆಳಗಿಕೊಂಡು ಬಂದ ಪಾತ್ರೆಗಳು, ಕಲ್ಲುಗಳಿಗೆ ತಗುಲಿ ಅಥವಾ ಬಿದ್ದು ಒಡೆದು ಕಂತ ಬಗ್ಗಿ ಏನಾದರೂ ಆಗಿವೆಯೆ? ಪಾತ್ರೆಗಳ ತಳಗಳನ್ನು ಸಣ್ಣ ಮರಳಿನಲ್ಲಿ ಉಜ್ಜುವ ಬದಲು ಬೇಗ ಕೊಳೆ ಹೋಗಿ ಬೆಳ್ಳಗಾಗಲೆಂದು ಕಲ್ಲಿನ ಮೇಲೆ ಉಜ್ಜಿದ್ದಾಳೆಯೆ? ಎಂದೆಲ್ಲ ಆಕೆ ಕಮಲೆ ಹೊಳೆಯಿಂದ ಬಂದ ಕೂಡಲೇ ಪರೀಕ್ಷಿಸುತ್ತಿದ್ದಳು. ಕಮಲೆ ಎಷ್ಟೇ ಎಚ್ಚರಿಕೆಯಿಂದಿದ್ದರೂ, ಅವಳು ಆ ಮನೆಗೆ ಬರುವುದಕ್ಕೆ ಮುಂಚೆ ತಗ್ಗಿದ್ದ ಪಾತ್ರೆಗಳಿಗಾಗಿಯೂ ಅವಳ ಅತ್ತೆ ಅವಳನ್ನೇ ಬಯ್ಯುತ್ತಿದ್ದಳು. ಸ್ವಾಭಾವಿಕ ಉಪಯೋಗದಿಂದ ತೂತು ಬಿದ್ದ ಪಾತ್ರೆಗಳೂ ಸಹ, ಕಮಲೆ ಕಲ್ಲುಗಳಿಂದ ಉಜ್ಜಿ ತೂತು ಕೆಡಹಿದ ಪಾತ್ರೆಗಳಾಗುತ್ತಿದ್ದವು.

ರಂಭಾಪುರಿಯ ನಾಲೆಯಲ್ಲಿ ವರುಷದಲ್ಲಿ ಆರು ತಿಂಗಳು ನೀರು ಇರು ತ್ತಿತ್ತು. ಆಗ ಸ್ತ್ರೀಯರೆಲ್ಲ ಪಾತ್ರೆ ಬೆಳಗಲು ಬಟ್ಟೆಗಳನ್ನು ಒಗೆದುಕೊಳ್ಳಲು

ನಾಲೆಗೇ ಹೋಗುತ್ತಿದ್ದರು ಒಂದು ದಿನ ಕಮಲೆ ನಾಲೆಗೆ ಹೋಗಿದ್ದಾಗ, ತೋಸೆಯನ್ನು ಮಗಚುವ ಕಬ್ಬಿಣದ ಕೈಯನ್ನು ನೀರಿನಲ್ಲಿ ಮರೆತು ಬಂದಳು. ಅದು ಬಹಳ ತೆಳುವಾದ ಕೈ ಆಗಿದ್ದುದರಿಂದ ಮೆತ್ತಗೆ ನೀರಿನ ಒಳಗೆ ನೀರಿನ ಸೆಳತಕ್ಕೆ ಸಿಕ್ಕಿ ನಾಲೆಯ ದಡದಿಂದ ಸ್ವಲ್ಪ ಒಳಗಡೆಗೆ ಹೋಗಿಬಿಟ್ಟಿದ್ದಿರಬೇಕು ನಾಲೆಯಲ್ಲಿದ್ದಾಗ ಅದು ಹೋದುದು ಕಮಲೆಗೆ ತಿಳಿಯಲಿಲ್ಲ. ಸ್ವಲ್ಪ ಅನುಮಾನಕ್ಕೆ ಬಂದಿತ್ತು. ಅಥವ ಮನೆಯಲ್ಲಿಯೇ ಬಿಟ್ಟು ಬಂದಿದ್ದೇನೇನೋ? ಹೋಗಿ ಖಾತರಿ ಮಾಡಿಕೊಳ್ಳೋಣ ಎಂದು ಅವಳು ಮನೆಗೆ ಬಂದು ನೋಡಿದಳು. ಮನೆಯಲ್ಲಿಯೂ ಇರಲಿಲ್ಲ. ಪಾತ್ರೆಗಳೊಂದಿಗೆ ಕುಕ್ಕೆಯನ್ನು ನೀರಿನಲ್ಲಿ ಅದ್ದಿದಾಗ ಎಲ್ಲಿಯೋ ಮಗುಚಿಕೊಂಡು ಕೈ ಹೋಗಿರಬೇಕೆಂದು ಅವಳಿಗೆ ಗೊತ್ತಾಯಿತು. ಅವಳು ನಾಲೆಯಿಂದ ಬರುವ ವೇಳೆಗೆ ಅವಳ ಅತ್ತೆ ಮಧ್ಯಾಹ್ನದ ಊಟಮಾಡಿ ಮಲಗಿದ್ದರು. ಇನ್ನೊಂದು ಗಳಿಗೆಗೆಲ್ಲ ಅವರೇ ಎದ್ದು ದೋಸೆ ಉಯ್ಯಲು ಮಗುಚುವ ಕೈ ಹುಡುಕುವವರಾಗಿದ್ದರು. ಮಗುಚುವ ಕೈನಲ್ಲಿ ಎರಡು ತರಹ. ತುದಿಗೆ ಒಂದು ಕಬ್ಬಿಣದ ತಗಡನ್ನು ಹಾಕಿ ಹಿಡಿ ಬೇರೆ ಹಾಕಿ ಬೆಸೆದಿರುವುದು; ಎಲ್ಲವೂ ಉದ್ದಕ್ಕೂ ಒಂದೇ ಕಬ್ಬಿಣದ ಕಂಬಿಯಾಗಿದ್ದು ತುದಿಯನ್ನು ತಟ್ಟಿರುವುದು. ಈಚೆಗೆ ಎಲ್ಲ ಒಂದೇ ಆಗಿರುವುದು, ಬರುವುದು ಕಡಿಮೆಯಾಗಿತ್ತು. ಅಗ್ಗವಾಗಿ ಎರಡು ಚೂರುಗಳನ್ನೂ ಬೆಸೆದವೇ ಬರುತ್ತಿದ್ದವು. ಕಮಲಮ್ಮನ ಅತ್ತೆಗೆ ತನ್ನ ಆ ಹಳೆಯ ಮಗುಚುವ ಕೈಯಿನ ಹೆಮ್ಮೆ ವಿಶೇಷವಾಗಿತ್ತು. "ಮಗುಚುವ ಕೈ ಒಂದೇ ಕಂಬಿಯದಾಗಿರಬೇಕು. ಈಗಿನದು ದೋಸೆ ಎತ್ತಿದರೆ ಸಹ ಬಾಗುತ್ತೆ. ನನಗೆ ಅದನ್ನು ಉಪಯೋಗಿಸೋಕೇ ಬೇಜಾರು. ಗತಿ ಇಲ್ಲದ್ದಕ್ಕೆ ಉಪಯೋಗಿಸಬೇಕು. "ಥೂ ಅದ್ಯಾವ ದರಿದ್ರ" ಎಂದು ಅವಳು ನಿತ್ಯ ಸಿಂಗಾರಮ್ಮನೊಂದಿಗೆ ಹೇಳುತ್ತಿದ್ದಳು. ಸಿಂಗಾರಮ್ಮನ ಮನೆಯಲ್ಲಿ ಈಚಿನ ಬೆಸೆದ ಮಗುಚುವ ಕೈ ಇತ್ತು. ಮುಸುರೆಯ ಪಾತ್ರೆಗೆ ಮಗುಚುವ ಕೈಯನ್ನು ಹಾಕಿದ ದಿನಗಳಲ್ಲೆಲ್ಲ ಕಮಲೆಯ ಅತ್ತೆ ಕಮಲೆಗೆ "ಮಗುಚುವ ಕೈ ಹಾಕಿದ್ದೇನೆ. ಜೋಪಾನ, ಎಲ್ಲಿಯಾದರೂ ನೀಗಿ ಬಂದೀಯೆ. ನಾನು ಈ ಮನೆಗೆ ಬಂದ ದಿನದಿಂದ ಅದನ್ನ ಇಟ್ಟಿದ್ದೇನೆ" ಎನ್ನುತ್ತಿದ್ದಳು. ಆದುದರಿಂದ ಮಗುಚುವ ಕೈ ಕುಕ್ಕೆಯಲ್ಲಿ ಕಾಣದಿರಲು ಕಮಲೆಗೆ ಕೈ ಕಾಲು ನಡುಗಲು ಪ್ರಾರಂಭವಾಯಿತು. ಇನ್ನೊಂದು ಸಲ

ವಾದರೂ ಹೋಗಿ ನಾಲೆಯಲ್ಲಿ ಹುಡುಕಿಬರೋಣ ಎಂದರೆ, ಆಕೆಯ ಅತ್ತೆ ನಿದ್ರೆಯಲ್ಲಿದ್ದಂತೆ ಶಾಲುವನ್ನು ಮುಸುಕಿಹಾಕಿ ಮಲಗಿದ್ದರೂ ಎಚ್ಚರವಾಗಿರು ವಳೆಂಬುದು ಆಕೆಗೆ ಗೊತ್ತಿತ್ತು. ನಾಲೆಯಲ್ಲಿ ನೀರು ಆಳವಾಗಿದ್ದುದರಿಂದ ಮತ್ತೆ ತಾನು ಹೋದರೂ ಏನನ್ನೂ ಮಾಡುವುದಕ್ಕಾಗುವುದಿಲ್ಲವೆಂದೂ ಅವಳಿಗೆ ಗೊತ್ತಿತ್ತು.

ಗಡಿಯಾರ ಮೂರು ಗಂಟೆ ತೋರಿಸುತ್ತಿದ್ದುದರಿಂದ ಕಮಲೆಯ ಅತ್ತೆ ಎದ್ದು ದೋಸೆ ಹುಯ್ಯಲು ಪ್ರಾರಂಭಿಸುವವಳಾಗಿದ್ದಳು ಕಮಲೆ ಏನು ಮಾಡುವುದಕ್ಕೂ ತೋಚದೆ ಹಿತ್ತಲಿಗೂ ಮನೆಗೂ, ಬೆಂಕಿಮೇಲೆ ಕುಳಿತ ಬೆಕ್ಕಿನಂತೆ ಓಡಾಡಿದಳು. ಅವಳ ಹಿತ್ತಲಿನ ಗೋಡೆಯಾಚೆ ಒಂದು ಹನ್ನೆ ರಡು ಹದಿಮೂರು ವಯಸ್ಸಿನ ಹುಡುಗ ಆಡುಗಳನ್ನು ಮೇಯಿಸುತ್ತಾ ನಿಂತಿತ್ತು. ಅದು ಕೋಟೇ ಲಕ್ಕೇಗೌಡನ ಮಗನೆಂಬುದು ಕಮಲೆಗೆ ಗೊತ್ತು. ತಾಯಿಯ ಜತೆಯಲ್ಲಿ ಆ ಹುಡುಗ ಅನೇಕ ದಿನಗಳು ಕಮಲೆಯ ಮನೆಗೆ ಬೆರಣಿ ತಂದು ಮಾರಿದ್ದನು. ಹುಡುಗ ಸ್ಕೂಲಿಗೆ ಹೋಗುತ್ತಿದ್ದುದೂ ಕಮ ಲೆಗೆ ಗೊತ್ತಿತ್ತು. “ ಮಗುಚುವ ಕೈಯನ್ನು ಹುಡುಕಿಕೊಂಡು ಬಾ. ನಿನಗೆ ಒಂದು ಆಣೆ ಕೊಡುತ್ತೇನೆಂದು ” ಆ ಹುಡುಗನಿಗೆ ಹೇಳಬೇಕೆಂಬ ಉದ್ದೇಶ ದಿಂದ ಕಮಲೆ ಹಿತ್ತಲ ಗೋಡೆಯ ಬಳಿಗೆ ಬಂದಳು ಆದರೆ ಸಿಂಗಾರಮ್ಮ ಹಿತ್ತಲಲ್ಲಿದ್ದುದರಿಂದ ಅವಳಿಗೆ ಭಯವಾಯಿತು. ಅವಳು ಒಳಕ್ಕೆ ಹೋಗಿ “ ನಾಲೆಯಲ್ಲಿ ಹೆಂಗಸರು ಇಳಿಯುಕೊಳ್ಳುವ ಕಡೆ ನಾನು ಬಿಟ್ಟು ಬಂದಿರುವ ಮಗುಚುವ ಕೈ ತತ್ತಾ. ಸ್ವಲ್ಪ ಆಳಕ್ಕೆ ಹೋಗಿ ಹುಡುಕು. ನಿನಗೆ ಒಂದು ಆಣೆ ಕೊಡುತ್ತೇನೆ ” ಎಂದು ದಪ್ಪ ದಪ್ಪ ಅಕ್ಷರದಲ್ಲಿ ಕಾಗದ ಬರೆದು ಕೈಯಲ್ಲಿ ಮಡಿಸಿ ಹಿಡಿದುಕೊಂಡು ಹಿತ್ತಿಲ ಗೋಡೆಯ ಬಳಿ ಬಂದಳು. ಸಿಂಗಾರಮ್ಮ ಹಿತ್ತಲಲ್ಲಿ ಇರಲಿಲ್ಲ. ಕಮಲೆ ಹುಡುಗನ ದೃಷ್ಟಿಯನ್ನು ತನ್ನೆಡೆಗೆ ಎಳೆದು ಕಾಗದವನ್ನು ಗೋಡೆಯ ಆಚೆಗೆ ಎಸೆದಳು. ಅಷ್ಟೇ. ಆದರೆ ಅದನ್ನು ಎಲ್ಲಿ ಹದ್ದಿನ ಕಣ್ಣಿನಿಂದ ಆ ಸಿಂಗಾರಮ್ಮ ನೋಡುತ್ತಿದ್ದಳೋ. ರಾಕ್ಷಸಿಯಂತೆ ಹಿತ್ತಲಿಗೆ ಬಂದುಬಿಟ್ಟಳು. “ ಏನೇ ಇದು ? ಕಾಗದ ಹೋಗಿ ಬರೋವಕ್ಕೆ ಶುರುವಾಗಿ ಬಿಟ್ಟಿತೋ, ಸಾಕು ಸಾಕು. ಮಾನವಾಗಿ ಬಾಳ್ತಿರೋ ಮನೆಗೆ ಈ ಅಪಖ್ಯಾತಿ ಬೇಡ ” ಎಂದು ಗಟ್ಟಿಯಾಗಿ ಕಿರಿಚಿಕೊಂಡೇ ತನ್ನ ಕಡೆ

ಹಿತ್ತಿಲಿನಲ್ಲಿ ಗೋಡೆ ನೇರಕ್ಕೆ ಬಂದಳು. ಸಿಂಗಾರಮ್ಮನ ಕಣ್ಣುಗಳಿಗೆ ಬಿದ್ದುದರಿಂದ ತಾನು ಮಾಡಿದುದು ಏನಾಗಬಹುದೆಂದು ಊಹಿಸಿ ಕಮಲೆಗೆ ಸಿಡಿಲು ಬಂದಂತೆ ಆಯಿತು. ಅವಳು "ಇಲ್ಲ ಇಲ್ಲ. ಸಿಂಗಾರಮ್ಮನವರೇ... ....ಎಂದು ಪ್ರಾರಂಭಿಸುವುದರೊಳಗೆ ಒಳಗಿನಿಂದ ಎರಡನೆಯ ರಾಕ್ಷಸಿಯಾಗಿ ಕಮಲೆಯ ಅತ್ತೆಯೂ ಹಿತ್ತಲಿಗೆ ಬಂದುಬಿಟ್ಟಳು. ಸಿಂಗಾರಮ್ಮ "ನಿಮ್ಮ ಸೊಸೆಯ ಸುಗುಣ ನೋಡಿ. ಯಾರಿಗೋ ಚೀಟಿ ಕೊಟ್ಟು ಕಳುಹಿಸುತ್ತಿದ್ದಾಳೆ. ಇದು ಎಷ್ಟು ದಿನದಿಂದ ನಡೀತಿದೆಯೋ ? ಒಳ್ಳೆ ನೆರೆ ಆಯಿತು" ಎಂದುಬಿಟ್ಟಳು. ತನ್ನನ್ನು ಹಿಂದೆ ಮನಸ್ಸಿಗೆ ಬಂದಂತೆ ಬಯ್ದವರನ್ನು ಹೀನೈಸಲು ಒಂದು ಅವಕಾಶ ಸಿಕ್ಕಿತಲ್ಲ ಎಂಬುದೇ ಸಿಂಗಾರಮ್ಮನ ಆನಂದ. ಕಮಲೆಯ ಅತ್ತೆ ಸಿಂಗಾರಮ್ಮನ ಮೇಲಿನ ಕೋಪವನ್ನೆಲ್ಲ ಕಮಲೆಯ ಮೇಲೆಯೇ ತೆಗೆದುಬಿಟ್ಟಳು. ಸಿಂಗಾರಮ್ಮನ ಮಾತನ್ನೇ ಮುಂದುವರಿಸುತ್ತಾ "ಸಾಕು, ಸಾಕು. ಈ ಮನೆಯಲ್ಲಿ ಈ ದುರಾಚಾರ ಬೇಡ. ನಿಮ್ಮ ತವರು ಮನೆಯಲ್ಲಿ ಹೇಗೆ ಬೇಕಾದರೂ ಮೆರೆದಾಡು. ಅಲ್ಲಿ ಹಾಗಿದ್ದೆ ಅಂತ ಇಲ್ಲಿ ಮಾನಬಿಟ್ಟು ಇರಬೇಕಾದ್ದಿಲ್ಲ. ನಿನ್ನ ಇಷ್ಟದಂತೆ ಕುಣಿಯೋಕೆ ನಿನ್ನ ಮನೆಗೇ ಹೋಗಿಬಿಡು."

ಕಮಲೆ ನಡುಗುತ್ತಾ ನೀರು ತುಂಬಿದ ಕಣ್ಣುಗಳಿಂದ ಗದ್ಗದ ಸ್ವರದಲ್ಲಿ "ಇಲ್ಲ ಅಮ್ಮಾ ಇಲ್ಲ ಅಮ್ಮಾ ಮಗುಚುವ ಕೈ ನೀರಿನಲ್ಲಿ ಹೋಯಿತು........ ಎಂದಳು.

"ಎಲ್ಲಾ ಆಯ್ತು ಬಿನ್ನಾಣಗಿತ್ತಿ. ಇನ್ನು ನಿನ್ನ ಮುಖ ನೋಡಿದರೆ ಪಾಪ, ಅವನು ಹಳ್ಳಿಯಿಂದ ಬರಲಿ. ಮೊದಲು ನಿನ್ನನ್ನು ಗಾಡಿ ಹತ್ತಿಸಿ ನಿಮ್ಮ ಅಪ್ಪನ ಮನೆಗೆ ಬಿಟ್ಟುಬರುವಂತೆ ಹೇಳುತ್ತೇನೆ. ನಿನ್ನ ಬಿನ್ನಾಣವೆಲ್ಲ ಅವನಿಗೆ ಚೆನ್ನಾಗಿ ಕಂಡರೆ, ನೀವಿಬ್ಬರೇ ಬೇರೆ ಇರಿ."

ಕಮಲೆಯು "ಇಲ್ಲ ಅಮ್ಮ ಇಲ್ಲ ಅಮ್ಮ ಇಲ್ಲ ಅಮ್ಮ" ಎಂದು ಕೊರಗಿದಳು. ಅತ್ತೆ ಅದನ್ನು ಕಿವಿಯಮೇಲೆ ಹಾಕಿಕೊಳ್ಳಲೇ ಇಲ್ಲ.

ಆ ದಿನ ಹಳ್ಳಿಯಿಂದ ಬಂದನಂತರ ಕಮಲೆಯ ಗಂಡ, ಕಮಲೆಯನ್ನು ಗಾಡಿಮೇಲೆ ಏರಿಸಿ ತವರು ಮನೆಗೆ ಕಳುಹಿಸಿಬಿಟ್ಟನು. ತಾಯಿಯ ಮಾತನ್ನು ಅವನು ಎಂದೂ ಮೀರಿದವನೇ ಅಲ್ಲ. ಕಮಲೆ ತವರುಮನೆಗೆ ಬಂದು "ಅಮ್ಮಾ" ಎಂದು ಅಳುತ್ತಾ ತಾಯಿಯ ಮಡಿಲಲ್ಲಿ ಕುಸಿದುಬಿದ್ದಳು.

ಕಮಲೆಯ ಗಂಡನಿಗೂ ಅತ್ತೆಗೂ ನಿಜವಾದ ಸಂಗತಿ ತಿಳಿಯಬೇಕಾದರೆ ಎರಡು ವರುಷ ಹಿಡಿಯಿತು. ಎಲ್ಲಿ ಇತರರಿಗೆ ತಿಳಿದುಬಿಡುತ್ತೋ ಎಂದು ಅವರು ವಿಷಯವೇನೆಂಬುದನ್ನೇ ನಿಧಾನವಾಗಿ ಆಲೋಚಿಸಲಿಲ್ಲ. ತಾಯಿ ಮಗ ಇಬ್ಬರೂ ಮಾತನಾಡಿಕ್ಕೊಂಡೇಯೋ ಎಂಬಂತೆ ಕಮಲೆಯ ವಿಷಯವನ್ನು ಸಂಭಾಷಣೆಯಲ್ಲಿ ಸಹ ಬಹಿಷ್ಕರಿಸಿದ್ದರು. ಆದರೆ, ಸಿಂಗಾರಮ್ಮ ಮಾತ್ರ ಅಪಪ್ರಚಾರದ ಗಾಳಿ ಬೀಸಿ ಕಮಲೆಯ ದುಃಖದ ಬೇಗೆ ಮಾಯದಂತೆ ಇಟ್ಟಿದ್ದಳು. ಎರಡು ವರುಷಗಳ ನಂತರ ಕಮಲೆಯ ಊರಿನಿಂದ ಬಂದವರು ಯಾರೋ "ಕಮಲೆಯ ಗಂಡನಂತಹ ಮಡ್ಡಿ ಮತ್ತೊಬ್ಬರಿಲ್ಲ, ಅವಳ ಅತ್ತೆ ಒಂದು ಕತ್ತೆ. ಸೊಸೆಯನ್ನು ಬಾಳಿಸಬೇಕಾದರೂ ಘನತೆ, ಗಾಂಭೀರ್ಯ ಇರಬೇಕು. ಹೀಗೆ ಒಂಟಿ ಮರಗಳಾಗಿ ನಿಂತಿರುವುದೇ ಇವರ ಹಣೆಯ ಬರಹ" ಎಂದು ಊರಲ್ಲೆಲ್ಲ ಪ್ರಚಾರಮಾಡಿಕೊಂಡು ಹೋದರು. ಕಮಲೆಯ ಅತ್ತೆಗೆ ತಾನು ಮಾಡಿದುದು ತಪ್ಪು ಎಂದು ಗೊತ್ತಾಗಿತ್ತು. ಅವಳು ಮಗನಿಗೆ "ಹೋಗು ಕಮಲೆಯನ್ನು ಕರೆದುಕೊಂಡು ಬಾ. ಕೆಟ್ಟಗಳಿಗೆ ಬಂದು ನಡೆದು ಹೋಯಿತೆಂದು ಹೇಳು ನಿನ್ನದೇ ತಪ್ಪು, ನನ್ನದೇ ತಪ್ಪು" ಎಂದು ಹೇಳು ಎಂದು ಕಳುಹಿಸಿದಳು. ಕಮಲೆ ಬಂದು ಗಂಡನ ಮನೆಯಲ್ಲಿ ಸುಖವಾಗಿ ಸಂಸಾರ ಮಾಡಿಕೊಂಡಿದ್ದಳು.

ಹೀಗೆ ಸಿಂಗಾರಮ್ಮ ಕಮಲೆಯ ಬಾಳನ್ನು ಮಣ್ಣುಗೂಡಿಸಿದ್ದು ರಂಭಾಪುರಿಗೆಲ್ಲ ಗೊತ್ತಿತ್ತು. ಶ್ರೀರಂಗಮ್ಮ ನ್ಯಾಯಮೂರ್ತಿಯಾಗಿ ಕರೆತರಲು ಹೋದವಳು ಇಂತಹವಳು. ಸಿಂಗಾರಮ್ಮ ಊಟಮಾಡುತ್ತ ಕುಳಿತಿದ್ದವಳು ಶ್ರೀರಂಗಮ್ಮನ ಮಾತುಗಳನ್ನು ಕೇಳಿ ಅವಸರ ಅವಸರದಲ್ಲಿ ಊಟ ಮುಗಿಸಿ ಗುಂಡಣ್ಣನವರ ಮನೆಗೆ ಬಂದಳು. ಇನ್ನೂ ಗುಂಡಣ್ಣ, ಶಾಮು, ಯಾರೂ ಮನೆಗೇ ಬಂದಿರಲಿಲ್ಲ. ಮಹಾಲಕ್ಷ್ಮಿ, ಸೀತಾಲಕ್ಷ್ಮಿಯ ಪದಾರ್ಥಗಳ ಮುಂದೆ ಕುಳಿತಿದ್ದಳು. ಸೀತಾಲಕ್ಷ್ಮಿ ಸ್ವಲ್ಪ ದೂರದಲ್ಲಿ ತನ್ನ ಚಾಪೆಯಮೇಲೆ ಕುಳಿತಿದ್ದಳು. ಶ್ರೀರಂಗಮ್ಮ ಸಿಂಗಾರಮ್ಮ ಇಬ್ಬರೂ ಬಂದು ಕುಳಿತರು. "ಮುಂದೆ ಬಂದು ಕುಕ್ಕರಬಡಿಯೆ ಮೂಳಿ" ಎಂದು ಸೀತಾಲಕ್ಷ್ಮಿಯನ್ನು ಶ್ರೀರಂಗಮ್ಮ ಕರೆದಳು. ಸೀತಾಲಕ್ಷ್ಮಿ ಮುಂದಕ್ಕೆ ಬಂದು ಕುಳಿತಳು. ಶ್ರೀರಂಗಮ್ಮನು "ಇದನ್ನೆಲ್ಲ ಯಾರು ಕೊಟ್ಟರು? ಒಳ್ಳೆಮಾತಿನಲ್ಲಿ ಹೇಳಿಬಿಡು.

ಹೂ" ಎಂದಳು ಅವಳ ಧ್ವನಿ ಭಯಂಕರವಾಗಿತ್ತು. ಸೀತಾಲಕ್ಷ್ಮಿ "ಅಯ್ಯೋ ನಾನು ಅದು ಹೇಗೆ ಬಂತೊ ಕಾಣೆ?" ಎಂದಳು. ಶ್ರೀರಂಗಮ್ಮನು "ಹಲ್ಲು ಕಡಿಯುತ್ತಾ ಇಲ್ಲಿಯೂ ಪ್ರಾರಂಭಿಸಿಬಿಟ್ಟಳು ದುಶ್ಚಾಳಿ ಹೊಳೆಯಲ್ಲೋ ತೋಟದಲ್ಲೊ ಎಲ್ಲೆಲ್ಲಿ ಯಾರ್ಯಾರು ಇವಳಿಗೆ ಗಂಟುಬೀಳ್ತಾರೋ ಯಾರಿಗೆ ಗೊತ್ತು" ಎಂದಳು.

ಸಿಂಗಾರಮ್ಮ ಸೀತಾಲಕ್ಷ್ಮಿಯ ಸಾಬೂನು, ಎಣ್ಣೆ ಪೊಟ್ಟಣದಿಂದಲೇ ಸೀತಾಲಕ್ಷ್ಮಿಯ ತಲೆಗೆ ಚೆನ್ನಾಗಿ ಗುದ್ದಿದಳು. ಅವಳ ತಲೆಯಿಂದ ಒಂದು ಹಿಡಿ ಕೂದಲನ್ನೇ ಕೀಳಲು ಪ್ರಯತ್ನಿಸಿ ವಿಫಲಳಾಗಿ ನಾಲ್ಕಾರು ಕೂದಲುಗಳನ್ನು ಕಿತ್ತುಹಾಕಿದಳು. ಸೀತಾಲಕ್ಷ್ಮಿಗೆ ಪ್ರಾಣ ಹೋಗುವಂತಹ ನೋವುಂಟಾಯಿತು. ಅವಳ ಕಣ್ಣುಗಳಲ್ಲಿ ನೀರು ಧಾರೆಧಾರೆಯಾಗಿ ಸುರಿಯಿತು. ಸಿಂಗಾರಮ್ಮ ಒಂದೇ ಉಸುರಿಗೆ ಅವಳನ್ನು ಬಯ್ದಳು ಗುದ್ದಿದಳು ಕಲ್ಯಾಣಿಯು "ಹೋಗಲಿ ಬಿಡಿ ಯಾಕೆ ಆ ಪ್ರಾಣಿನ ಹಿಂಸಿಸ್ತೀರಿ. ನಾಳೆ ಬೆಳಿಗ್ಗೆ ಮಲ್ಲಿಗೆಹಳ್ಳಿಗೆ ಹೋಗಿ ಬಿಡ್ತಾಳೆಲ್ಲ" ಎಂದಳು. "ಹೋಗದೆ ಏನ್ಮಾಡ್ತಾಳೆ. ಹೋಗಿ ಅಲ್ಲಿ ಚೆಲ್ಲಾಟ ಪ್ರಾರಂಭಿಸ್ತಾಳೆ. ಯಾಕೆ ಹೋಗಬೇಕು. ಕತ್ತರಿಸಿ ನುಚ್ಚುನುರಿ ಮಾಡಿ ಭಾವಿಗೋ, ಹೊಳೆಗೊ ಹಾಕಿ ಮುಗಿಸಿಬಿಡಿ" ಎಂದಳು. ಸೀತಾಲಕ್ಷ್ಮಿಯ ಸ್ಥಿತಿ ನೋಡಿ ಮಹಾಲಕ್ಷ್ಮಿಗೆ ಸಹ ಕನಿಕರವುಂಟಾಯಿತು. ಅವಳಿಗೆ ಹೀಗಾಗಬೇಕೆಂದು ಮಹಾಲಕ್ಷ್ಮಿ ಎಂದೂ ಬಯಸಲಿಲ್ಲ.

ಆ ವೇಳೆಗೆ ಗುಂಡಣ್ಣ ಶಾಮ ಬಂದರು. ಸಿಂಗಾರಮ್ಮನನ್ನು ಕಂಡ ಕೂಡಲೇ ಗುಂಡಣ್ಣನವರಿಗೆ ಮೈ ಉರಿಯಿತು. ಸಿಂಗಾರಮ್ಮನ ಪೂರ್ವಾಶ್ರಮವೆಲ್ಲ ಚೆನ್ನಾಗಿ ಗೊತ್ತಿದ್ದವರ ಪೈಕಿ ಗುಂಡಣ್ಣನವರೂ ಒಬ್ಬರು. ಗುಂಡಣ್ಣನವರು ತಮ್ಮ ಅಸಮಾಧಾನವನ್ನು ಮುಚ್ಚಿಕೊಳ್ಳದೆ "ಇವಳ್ಯಾಕೆ ಇಲ್ಲಿ ಬಂದಳು. ಇಬ್ಬರ ಮಧ್ಯೆ ಇವಳು ಬಂದರೆ ಹಸಿಯ ಹುಲ್ಲು ಉರಿಯುತ್ತೆ" ಎಂದರು. ಸಿಂಗಾರಮ್ಮ "ಗುಲಗಂಜಿಗೆ ತನ್ನ ಕಪ್ಪು ತಿಳಿಯುವುದಿಲ್ಲ" ಎಂದುಕೊಂಡು ಹೊರಟುಹೋದಳು.

ಗುಂಡಣ್ಣನವರು ತಾವು ಯಾವಾಗಲೂ ಶ್ರೀರಂಗಮ್ಮನ ಮೇಲೆ ಸಿಟ್ಟು ಮಾಡಿಕೊಳ್ಳದಿದ್ದವರು ಅಂದು ಮಾಡಿಕೊಂಡರು. "ಆ ಪಿಶಾಚಿಯನ್ನು ಯಾಕೆ ಕರೆದುಕೊಂಡು ಬಂದೆ. ನಿನಗೆ ಬೇಕಾಗಿದ್ದರೆ ನೀನೇ ಸೀತಾಲಕ್ಷ್ಮಿಯ ತಲೆ

ಒಡೆಯಬಹುದಾಗಿತ್ತು. ಅನ್ಯಾಯವಾಗಿ ಊರಿಗೆಲ್ಲ ರಂಪವಮಾಡಿಬಿಟ್ಟೆ. ನಿನಗೆ ಇಂತಹ ರಂಪವೇ ಬೇಕಾಗಿರುವುದು?" ಎಂದುಬಿಟ್ಟರು.

ಎಲ್ಲದಕ್ಕಿಂತ ಹೆಚ್ಚಾಗಿ ಶಾಮನ ಮಗ ವಾಸುವಿಗೆ ಆ ದೃಶ್ಯ, ನಾಟಕದ ಭಯಂಕರ ದೃಶ್ಯವಾಗಿ ಕಂಡಿತು. ಹದಿನೈದು ವರುಷದ ಉತ್ಸಾಹಿ ತರುಣ ವಿದ್ಯಾರ್ಥಿ, ಸ್ವಭಾವದಿಂದ ಸರಳನಾದ ಸೌಂದರ್ಯಪ್ರೇಮಿ, ವಯಸ್ಸಿಗನು ಗುಣವಾದ ಮೃದುಹೃದಯ. ಸೀತಾಲಕ್ಷ್ಮಿ ಆತನಿಗೆ ಒಂದು ಅದ್ಭುತ ರಮ್ಯ ಆಕೃತಿಯ ಸಿನಿಮಾ ತಾರೆಯಾಗಿ ತೋರುತ್ತಿದ್ದಳು. ಆ ರಾತ್ರಿಯಲ್ಲಿ ಆ ಒಂದು ಹೆಣ್ಣಿನ ಮೇಲೆ ಶ್ರೀರಂಗಮ್ಮ, ಸಿಂಗಾರಮ್ಮ ನಡೆಸಿದುದು ಅವನಿಗೆ ದೊಡ್ಡ ಅತ್ಯಾಚಾರವಾಗಿ ತೋರಿತು. ಮಾರಿಯಮುಂದೆ ಭಯಂಕರವಾದ ತಮಟೆಯನ್ನು ಬಡಿದುಕೊಂಡು ಶ್ರೀರಂಗಮ್ಮ, ಸಿಂಗಾರಮ್ಮ, ಪೂಜಾರಿಗಳು, ಸೀತಾಲಕ್ಷ್ಮಿ ಎಂಬ ಕುರಿಯನ್ನು ಬಲಿಗೊಡುತ್ತಿರುವಂತೆ ಅವನಿಗೆ ತೋರಿತು. ಎಲ್ಲದಕ್ಕಿಂತ ಹೆಚ್ಚಾಗಿ ತಮ್ಮ ಮನೆಯ ವ್ಯವಹಾರಕ್ಕೆ ಶ್ರೀರಂಗಮ್ಮ ಹೋಗಿ, ಆ ರಾಕ್ಷಸಿ ಸಿಂಗಾರಮ್ಮನನ್ನು ಕರೆತಂದುದು, ಅವನಿಗೆ ಘಾತುಕತನವಾಗಿ ತೋರಿತು., ಅನಂತರ ಬಹುಕಾಲದವರೆಗೆ ಅವನಿಗೆ ಆ ರಾತ್ರಿ ಮರೆಯಲಿಲ್ಲ. ಅದು ಜ್ಞಾಪಕ ಬಂದಾಗಲೆಲ್ಲ ಅವನ ಮನಸ್ಸು ಸೀತಾಲಕ್ಷ್ಮಿಯಲ್ಲಿ ಮೃದು ವಾಗುತ್ತಿತ್ತು.

❖ ❖ ❖

ಮರುದಿನ ಬೆಳಿಗ್ಗೆ ಶ್ರೀನಿವಾಸ ಗಾಡಿಯೊಂದಿಗೆ ಬಂದನು. ಎರಡು ವಾರ ಹೋರಾಟ ಆರ್ಭಟದಲ್ಲಿ ಕಳೆದಿದ್ದ ಆ ಮನೆಯನ್ನು ಸೀತಾಲಕ್ಷ್ಮಿ ಸುಂದರರಾಜನೆಂಬ ಮಿಂಚಿನ ದರ್ಶನವಿಲ್ಲದೆ ಬಿಟ್ಟುಹೋದಳು. ರಂಭಾ ಪುರಿಗೆ ಬರುವಾಗ ಇದ್ದುದಕ್ಕಿಂತ ಅವಳ ಮನಸ್ಸು, ಅಲ್ಲಿಂದ ಹೋಗುವಾಗ ಹೆಚ್ಚು ಭಾರವಾಗಿತ್ತು.

## ೧೯

ಸೀತಾಲಕ್ಷ್ಮಿ ರಂಭಾಪುರಿಯಿಂದ ಹೊರಟುಹೋದ ಎಂಟು ದಿವಸ ರಂಭಾಪುರಿಯಲ್ಲಿ ಅವಳ ಮಾತೇ ಆಗಿತ್ತು. ಆ ಮಾತುಗಳೆಲ್ಲ, ಒಡವೆ ಹೋದುದು. ಅವಳ ಹಾಸಿಗೆಯಲ್ಲಿ ಸಾಬೂನು ಸೆಂಟು ಫೇಸ್ ಪೌಡರ್

ಸಿಕ್ಕಿದುದು ಈ ರಾದ್ಧಾಂತವೇ. ಸುಮಾರು ಇಪ್ಪತ್ತು ದಿನಗಳನಂತರ ಸುಂದರರಾಜನು ಬೆಂಗಳೂರಿನಿಂದ ಊರಿಗೆ ಹಿಂದಿರುಗಿದನು. ರಂಭಾ ಪುರಿಯಲ್ಲಿ ಬೇಸರಿಕೆಯಿಂದ ಅವನು ಬೆಂಗಳೂರಿಗೆ ಹೋಗಿದ್ದರೂ ಅಲ್ಲಿಂದ ಬಂದಮೇಲೆಯೂ ಅವನ ಮುಖವಾಗಲೀ ಮನಸ್ಸಾಗಲೀ ಉತ್ಸಾಹದಲ್ಲಿರ ಲಿಲ್ಲ. ಬೆಂಗಳೂರಿನಿಂದ ಬಂದ ದಿನವೇ ಅವನಿಗೆ ಸೀತಾಲಕ್ಷ್ಮಿ ರಂಭಾ ಪುರಿಗೆ ಬಂದಿದ್ದುದು ಗೊತ್ತಾಯಿತು. ಆ ಸಂಗತಿಯನ್ನು ಮೊದಲ ಸಲ ಕೇಳಿದಾಗ ಅವನ ಕಣ್ಣುಗಳಲ್ಲಿ ವಿಚಿತ್ರವಾದ ಹೊಳಪು ಉಂಟಾಯಿತು. ಸುದ್ದಿಯನ್ನು ಅವನಿಗೆ ತಿಳಿಸಿದವಳು ಅವನ ತಾಯಿ ಕಲ್ಯಾಣಿಯೇ. ಕಲ್ಯಾಣಿ ಬುದ್ಧಿವಂತಳಾದ ಹೆಂಗಸು. ಸೀತಾಲಕ್ಷ್ಮಿ ರಂಭಾಪುರಿಗೆ ಬರುವುದಕ್ಕೆ ಮುಂಚೆಯೇ ಸುಂದರರಾಜನ ಮದುವೆಯಕಾಲದಿಂದಲೇ ಸುಂದರರಾಜ ಸೀತಾಲಕ್ಷ್ಮಿಗಾಗಿ ಹುಚ್ಚನಾಗಿರುವನೆಂಬುದು ಆಕೆಗೆ ಗೊತ್ತಿತ್ತು. ಆದುದ ರಿಂದಲೇ ಸೀತಾಲಕ್ಷ್ಮಿ ರಂಭಾಪುರಿಗೆ ಬಂದ ಕಾಲದಲ್ಲಿ, ಸುಂದರರಾಜ ಇದ್ದಿದ್ದರೆ ಚೆನ್ನಾಗಿದ್ದಿತೆಂದು ಆಕೆ ಭಾವಿಸಿದಳು ಹೇಗಾದರೂ ಸುಂದರ ರಾಜ ಹಿಂದಿರುಗುವವರೆಗೆ ಆದರೂ ಸೀತಾಲಕ್ಷ್ಮಿ ತನ್ನ ಮನೆಯಲ್ಲಿದ್ದರೆ ಅವನು ಬಂದು ತನಗೆ ಇಷ್ಟಬಂದಂತೆ ಮಾಡಿಕೊಳ್ಳಬಹುದೆಂದು ಅವಳು ಯೋಚಿಸಿದ್ದಳು. ಆದರೆ ಒಡವೆಯ ಕಳವಿನ ಸಂಗತಿಯಿಂದ ಅದೂ ಸಾಧ್ಯ ವಾಗಿರಲಿಲ್ಲ. ಸುಂದರರಾಜ ಹಿಂದಿರುಗಿದನಂತರ ಸೀತಾಲಕ್ಷ್ಮಿ ಬಂದಿದ್ದ ಸುದ್ದಿಯನ್ನು ಮೊದಲು ಹೇಳಿದವಳೇ ಕಲ್ಯಾಣಿ. ಹೇಳುತ್ತಿರುವಾಗ ಕಲ್ಯಾಣಿ ಸುಂದರರಾಜನ ಮುಖವನ್ನು ದೃಷ್ಟಿಸಿ ನೋಡುತ್ತಲೇ ಇದ್ದಳು. ಸೀತಾ ಲಕ್ಷ್ಮಿಯ ಹೆಸರನ್ನು ಕೇಳಿದೊಡನೆಯೇ ಅವನ ಮೈ ರೋಮಾಂಚವಾದುದು ಅವಳಿಗೆ ತಿಳಿಯಿತು. ತಾಯಿ ಮಗ ಇಬ್ಬರಿಗೂ ಒಬ್ಬರ ಮನಸ್ಸು ಒಬ್ಬರಿಗೆ ಅರ್ಥವಾಯಿತು. ಕಲ್ಯಾಣಿ, ಸೀತಾಲಕ್ಷ್ಮಿ ಬಂದು ಹದಿನೈದು ದಿನಗಳು ಸುಂದರರಾಜನಿಗಾಗಿ ಕಾದಿದ್ದುದನ್ನು ಹೇಳಿದಳೇ ಹೊರತು ಒಡವೆಯ ವಿಷಯ ವನ್ನಾಗಲೀ ಅವಳ ಹಾಸಿಗೆಯಲ್ಲಿ ಸಿಕ್ಕಿದ್ದ ವಸ್ತುಗಳ ವಿಷಯವನ್ನಾಗಲೀ ಹೇಳಲಿಲ್ಲ. ಅದಕ್ಕೆ ಕಾರಣ ಆ ಸಂಗತಿಗಳು ಪೂರ್ಣವಾಗಿ ನಿಜವೆಂದು ಆಕೆ ನಂಬದಿದ್ದುದಾಗಿರಬಹುದು. ಅಥವ ತಾನಾಗಿ ಮಗನಿಗೆ ಅವನ್ನು ಯಾಕೆ ಹೇಳಿ ಅವನ ಮನಸ್ಸಿಗೆ ಹೆಚ್ಚು ಬೇಸರಿಕೆ ಉಂಟುಮಾಡಲಿ ? ಎಂದು

ಇದ್ದಿರಬಹುದು. ಅಂತೂ ಆ ಸಂಗತಿಗಳನ್ನು ಸುಂದರರಾಜ ಚೂರುಚೂರಾಗಿ ಮನೆಯಲ್ಲಿದ್ದವರಿಂದ ತಿಳಿದುಕೊಂಡನು. ಎಷ್ಟಾದರೂ ಅವನಿಗೆ ಪೂರ್ಣ ವಿವರಗಳು ಗೊತ್ತಾಗಲಿಲ್ಲ.

ಸುಂದರಾಜನಿಗೆ ಆ ಮನೆಯೇ ಅಸಹ್ಯವಾಗಿ ತೋರಿತು. ಒಂದು ಕಡೆ ಶ್ರೀರಂಗಮ್ಮ. ಅವಳ ಮಾತಿಗೆ ತಾಳ ಹಾಕುತ್ತಿದ್ದ ಬಿನ್ನೋದರರಾದ (ಮಲ ಅಣ್ಣ) ಶಾಮು, ಕೃಷ್ಣ, ರಂಗಸ್ವಾಮಿ ಅವರ ಹೆಂಡತಿಯರು. ಆ ಮನೆಯಲ್ಲಿ ಅವರದೆ ಪ್ರಾಬಲ್ಯವಾಗಿತ್ತು. ಗುಂಡಣ್ಣನವರು ಕಲ್ಯಾಣಿಯನ್ನು ಮದುವೆಯಾಗಿದ್ದುದೇ ಅವರಿಗೆ ಮೊದಲನೆಯ ಅಸಮಾಧಾನವಾಗಿತ್ತು. ಸುಂದರ ರಾಜನ ಜನನದಿಂದ ಆ ಅಸಮಾಧಾನ ಹೆಚ್ಚಿತೇ ಹೊರತು ಕಡಿಮೆಯಾಗ ಲಿಲ್ಲ ಈಚೆಗೆ ಗುಂಡಣ್ಣನವರ ಹಣಕಾಸಿನ ಸ್ಥಿತಿ ಪೂರ್ಣವಾಗಿ ಕೆಟ್ಟುದ ರಿಂದ ಸುಂದರರಾಜನ ಹೊರತು ಮನೆಯವರಿಗೆಲ್ಲ ಅವರಲ್ಲಿ ಅಸಮಾಧಾನ ವಾಗಿತ್ತು. ಗುಂಡಣ್ಣನವರು ಎರಡನೆಯ ಮದುವೆ ಮಾಡಿಕೊಳ್ಳದಿದ್ದರೆ ಅವರ ಸಂಸಾರ ಅಷ್ಟು ಕಷ್ಟದಲ್ಲಿರುತ್ತಿರಲಿಲ್ಲವೆಂದು ಅವರು ಭಾವಿಸಿದರು. ಶ್ರೀರಂಗಮ್ಮನಿಗೆ ಯಾವಾಗಲೂ ಕಲ್ಯಾಣಿಯಲ್ಲಿ ಅಸಮಾಧಾನವಿದ್ದುದರಿಂದ ಬಲ ಮಕ್ಕಳಲ್ಲಿ ಆ ಅಸಮಾಧಾನದ ಬೆಂಕಿಯನ್ನು ಗಾಳಿ ಬೀಸಿ ಅವಳು ಉರಿ ಸುತ್ತಲೇ ಇರುತ್ತಿದ್ದಳು. ಇವಾವುವೂ ಗುಂಡಣ್ಣನವರಿಗೂ ಕಲ್ಯಾಣಿಗೂ ಸುಂದರರಾಜನಿಗೂ ತಿಳಿಯದಿರಲಿಲ್ಲ. ಕಲ್ಯಾಣಿಯನ್ನು ಮದುವೆಯಾದಾಗ ಗುಂಡಣ್ಣನವರ ಭಾವನೆ ಹೇಗೆ ಇದ್ದಿದ್ದರೂ, ಈಚೆಗಂತೂ ಮದುವೆಯಾದುದೇ ಒಳ್ಳೆಯದಾಯಿತೆಂದೂ, ಇಲ್ಲದಿದ್ದಿದ್ದರೆ ತಮ್ಮ ವೃದ್ಧಾಪ್ಯ ಬಹಳ ಕಷ್ಟವಾಗು ತ್ತಿದ್ದಿತೆಂದೂ ಅವರು ಭಾವಿಸಿದ್ದರು.

ಇದಕ್ಕಿದ್ದಂತೆ ಕೃಷ್ಣ, ಶಾಮು, ಶ್ರೀರಂಗಮ್ಮ ಎಲ್ಲರೂ ಒಂದೇ ಉಸುರಿಗೆ ಸುಂದರರಾಜ ಬೇರೆ ಮದುವೆ ಮಾಡಿಕೊಳ್ಳಬೇಕೆಂದು ಹೇಳತೊಡಗಿದರು. ಆ ಅಭಿಪ್ರಾಯ ಒಂದು ವರುಷದಿಂದ ಅವರ ಮನಸ್ಸಿನಲ್ಲಿ ಇತ್ತು. ಅದನ್ನು ಸ್ವಲ್ಪ ಸ್ವಲ್ಪ ಆಡಿ ತೋರಿಸುತ್ತಲೂ ಇದ್ದರು. ಆದರೆ ಅದು ಈಗಿನಷ್ಟು ಖಂಡಿತವಾದ ರೂಪವನ್ನು ಹಿಂದೆ ಹೊಂದಿರಲಿಲ್ಲ. ಶಾಮುನು " ಹೆಂಡತಿ ಯನ್ನು ಬಿಟ್ಟು ಹೀಗೆ ಒಂಟಿಯಾಗಿ ತಿರುಗುತ್ತಿದ್ದರೆ ನಮ್ಮ ಸಂಸಾರಕ್ಕೆ ಮಾನ ಬರುವುದಿಲ್ಲ. ನಾಳೆ ನಮಗೂ ಒಬ್ಬರು ಹೆಣ್ಣು ಕೊಡಬೇಕು.

ಾವೂ ಹೆಣ್ಣು ಕೊಡಬೇಕು. ಇದು ಎಷ್ಟು ಬೇಗ ಮುಗಿತರೆ ಅಷ್ಟು ವಾಸಿ. ಾದುದರಿಂದ ಈ ಲಗ್ನಕಾಲದಲ್ಲಿಯೇ ಸುಂದರನಿಗೆ ಬೇರೆ ಹೆಣ್ಣು ತಂದು ಮಾಡಿಬಿಡೋಣ'' ಎಂದನು. ಕೃಷ್ಣನ ವಾದ ಬೇರೆ ತೆರನಾಗಿತ್ತು. ಂಸಾರದಲ್ಲಿ ಹಣಕಾಸಿನ ಸ್ಥಿತಿ ಹೀನವಾಗಿದ್ದುದರಿಂದ ಸುಂದರರಾಜನು ಅನೇಕ ಕಡೆ ಸಣ್ಣ ಸಣ್ಣ ಮತ್ತು ದೊಡ್ಡ ಸಾಲ ಸಹ ಮಾಡಿದ್ದನು. ಅವರ ್ಪೈಕಿ ಇಬ್ಬರು ಸಾಲಗಾರರು ದಾವಾ ಹಾಕಿ ಒಟ್ಟು ಸಂಸಾರದ ಆಸ್ತಿಯನ್ನೇ ರರಾಜು ಮಾಡಿಸುತ್ತೇವೆಂದು ಹೆದರಿಸುತ್ತಿದ್ದರು. ಕೃಷ್ಣನಿಗೆ ಹೆಣ್ಣುಗಳು ಹೆಚ್ಚಾಗಿದ್ದುದರಿಂದ, ಇರುವ ಆ ಆಸ್ತಿಯ ಚೂರೂ ಹೋದರೆ ಆ ಹೆಣ್ಣು ಗಳಿಗೆ ಮದುವೆ ಮಾಡುವುದು ಹೇಗೆಂಬ ಯೋಚನೆ ಅವನಿಗೆ ಹೆಚ್ಚಾಗಿತ್ತು. ಾದುದರಿಂದ ಸುಂದರರಾಜನ ಸಾಲ ಹೇಗಾದರೂ—ಅದರಲ್ಲಿಯೂ ಅವನು ಾಗದಪತ್ರ ಸರಿಯಾಗಿ ಮಾಡಿಕೊಟ್ಟಿರುವ ಸಾಲ—ತೀರ್ಮಾನವಾದರೆ ಾಕೆಂದು ಅವನು ಹಂಬಲಿಸುತ್ತಿದ್ದನು. ಅವನ ಹೆಂಡತಿ ಮಹಾಲಕ್ಷ್ಮಿಯದೂ ಅದೇ ಆಸೆಯಾಗಿತ್ತು.

ಸುಂದರರಾಜ ಮದುವೆಯಾಗಿ ಮಾವನಿಂದ ಸ್ವಲ್ಪ ಹಣ ಹೊಡೆಯು ದು ಅದಕ್ಕೆ ದಾರಿ ಆಗಿತ್ತು. ಗಂಡುಮಕ್ಕಳಿಲ್ಲದ ಒಂದು ಹೆಣ್ಣನ್ನು, ಮಹಾಲಕ್ಷ್ಮಿಯ ದೂರದ ಸಂಬಂಧದ ಹೆಣ್ಣನ್ನು—ಸುಂದರರಾಜನಿಗೆ ಗಂಟು ಹಾಕಲು ಕೃಷ್ಣ ಹವಣಿಸುತ್ತಿದ್ದನು. ಹೆಣ್ಣಿನ ತಂದೆಗೆ ಸುಮಾರು ಸಾವಿರ ರೂಪಾಯಿನ ಆಸ್ತಿಯಿತ್ತು. ಮದುವೆಯಾದ ಕೂಡಲೇ ಆಸ್ತಿಯನ್ನು ಮಾರಿ ಸುಂದರರಾಜನ ಸಾಲ ತೀರಿಸಿ ಒಟ್ಟು ಸಂಸಾರದ ಮೇಲೆ ಕುಳಿತಿದ್ದ ಹೊರೆ ಯನ್ನು ಬಿಡುಗಡೆ ಮಾಡುವುದು ಕೃಷ್ಣನ ಮತ್ತು ಮಹಾಲಕ್ಷ್ಮಿಯ ಪಿತೂರಿ ಯಾಗಿತ್ತು. ಅವರು ಬಹಳ ಸಾಹಸದಿಂದ ಹೆಣ್ಣಿನ ತಂದೆಯನ್ನು ಒಪ್ಪಿ ಸಿದ್ದರು. ಯಾವುದರಲ್ಲಿಯೂ ಸುಂದರರಾಜ ಗುಂಡಣ್ಣ ಕಲ್ಯಾಣಿಯರ ಎದುರುಪಕ್ಷವನ್ನು ಹಿಡಿಯುತ್ತಿದ್ದ ಶ್ರೀರಂಗಮ್ಮನೂ, ಕೃಷ್ಣನ ಮಾತನ್ನೇ ಒಪ್ಪಿದಳು. ಗುಂಡಣ್ಣ ಕಲ್ಯಾಣಿಯರಿಗೆ ಸುಂದರರಾಜ ಅಶಾಂತನಾಗಿ ಒಂದು ಬಗೆಯ ಭ್ರಾಂತಿಯಿಂದ ತಿರುಗುತ್ತಿರುವುದೂ, ಸಾಲಮಾಡುತ್ತಿರುವುದೂ, ಇದ್ದಕ್ಕಿದ್ದಂತೆ ಮನೆ ಬಿಟ್ಟು ಓಡುತ್ತಿದ್ದುದೂ ಎಲ್ಲದಕ್ಕೂ ಹೆಚ್ಚಾಗಿ ಅವನ ವೈವಾಹಿಕಜೀವನ ಈ ಬಾಲ್ಯವಯಸ್ಸಿನಲ್ಲಿ ಮರುಭೂಮಿಯಾದುದೂ, ತುಂಬ

ದುಃಖದಾಯಕವಾಗಿತ್ತು. ಇವೆಲ್ಲವೂ ಆಶಾಭಂಗದಿಂದಲೇ ಆಗಿದ್ದುದರಿಂದ ಮತ್ತೊಂದು ಮದುವೆಯಾದರೂ ಆಗಿ, ಅವನೂ ಎಲ್ಲರಂತೆ ಬಾಳತೊಡಗಿದರೆ ಅವನ ಜೀವನದಲ್ಲಿ ಹೊಸ ಉತ್ಸಾಹ ಮೂಡಬಹುದೆಂಬ ಆಸೆಯಿಂದ, ಅವರೂ ಸುಂದರರಾಜನಿಗೆ ಎರಡನೆಯ ವಿವಾಹಕ್ಕೆ ಒಪ್ಪಿದರು. ಆದರೆ ಯಾರೂ ಸುಂದರರಾಜನನ್ನು ಅವನ ಅಭಿಪ್ರಾಯ ಕೇಳಲೇ ಇಲ್ಲ. ಅವನನ್ನು ಕೇಳ ಬೇಕಾದುದೇ ಏನೂ ಇಲ್ಲವೆಂದು ಸಹ ತೀರ್ಮಾನಿಸಿದಂತೆ ತೋರಿತು.

ವಿಷಯ ಸುಂದರರಾಜನಿಗೆ ತಿಳಿದಾಗ ಅವನು "ಛೆ! ಛೆ! ಇದು ಎಂದಿಗೂ ಸಾಧ್ಯವಿಲ್ಲ" ಎಂದುಕೊಂಡನು. ಹೊರಗಡೆ ಮಾತ್ರ "ಹೆಣ್ಣು ಅನ್ನುವುದೇನು ನನವೇ, ಕತ್ತೆಯೇ? ಹೆಣ್ಣಿನ ಮೇಲೆ ಹೆಣ್ಣು ಕೊಡೋರು ಯಾರು? ಇದು ನಡೆಯುವ ಮಾತೆ? ಹೇಳೋರು ಹೆಡ್ಡರಾದರೆ ಕೇಳೋರು ಕಿವುಡರೇ" ಎಂದುಬಿಟ್ಟನು. ಕೃಷ್ಣನು ಹೆಣ್ಣಿನ ಮಾತು ನನಗಿರಲಿ, ಎಂದು ಹೇಳಿ ಊರು ಬಿಟ್ಟು ಹೋದವನು, ನಾಲ್ಕು ದಿನಗಳ ನಂತರ ಅರ್ಜುನ ಹಳ್ಳಿಯ ಗೋಪಾಲನೊಡನೆ ರಂಭಾಪುರಿಗೆ ಹಿಂದಿರುಗಿದನು. ಗೋಪಾಲನಿಗೆ ಇದ್ದವಳು ಒಬ್ಬಳೇ ಹೆಣ್ಣು. ಅವಳು ಬಹಳ ಕುರೂಪಿಯಾಗಿದ್ದಳು ವಯಸ್ಸು ಇಪ್ಪತ್ತಕ್ಕೆ ಮೇಲೆ ಆಗಿತ್ತು. ಗೋಪಾಲನಿಗೆ ಹೆಂಡತಿ ಇರಲಿಲ್ಲ. ತೀರಿ ಹೋಗಿ ಹತ್ತು ವರುಷಗಳಿಗೆ ಮೇಲೆ ಆಗಿತ್ತು. ಮಗಳಿಗೆ ಹದಿನೈದು ವರುಷ ಗಳಾದಂದಿನಿಂದ ಗೋಪಾಲ ಅವಳ ಮದುವೆಗಾಗಿ ಪ್ರಯತ್ನಪಡುತ್ತಲೇ ಇದ್ದನು. ಆದರೆ, ಅವನ ಬಳಿ ವರಗಳಿಗೆ ಅಂತಹ ಆಕರ್ಷಣೆ ಏನೂ ಇರಲಿಲ್ಲ. ಇದ್ದ ಆಸ್ತಿ ಸುಮಾರು ಒಂದು ಎಕರೆ ಗದ್ದೆ ತೋಟ ಹೋಗಲಿ, ಹುಡುಗಿಯ ರೂಪಕ್ಕಾಗಿಯಾದರೂ ಬರುವ ವರಗಳಿವೆ ಎಂದರೆ, ತಿರುಮಲೆ ಹೆಸರಿಗೆ ತಕ್ಕಂತೆ ಕಪ್ಪಗೆ ಗಂಡುಬೀರಿಯಾಗಿದ್ದಳು. ಹೀಗೆ ಹುಡುಕಿ ಹುಡುಗಿ ಬೇಸರ ಗೊಂಡು ಗೋಪಾಲ ಸುಮ್ಮನಾಗಿಬಿಟ್ಟಿದ್ದನು. "ತನಗೂ ಹೆಂಡತಿ ಇಲ್ಲ. ಮನೆಯಲ್ಲಿ ಅಡಿಗೆಮಾಡಿ ಹಾಕುವವರೂ ಇಲ್ಲ. ಮಗಳನ್ನೂ ಮದುವೆ ಯಾಗುವ ವರ ಬರಲಿಲ್ಲ. ಒಬ್ಬರಿಗೊಬ್ಬರು ನಾವೇ ಸಹಾನುಭೂತಿ ತೋರಿಸುತ್ತಾ ನಮ್ಮ ಆಯಸ್ಸನ್ನು ಕಳೆದುಬಿಡೋಣ" ಎಂದು ಅವನು ನಿಶ್ಚಯಿಸಿಕೊಂಡು ಶಾಂತನಾಗಿಯೇ ಇದ್ದನು.

ಪ್ರಾಯಶಃ ಗೋಪಾಲ ತನ್ನ ಆಯಸ್ಸನ್ನು ಹಾಗೆಯೇ ಕಳೆದಿರುತ್ತಿದ್ದ

ನೆಂದು ತೋರುತ್ತದೆ. ಆದರೆ ಆಗ ಬಹಳ ದಿನಗಳಿಂದ ಅವನನ್ನು ಉದಾಸೀನಮಾಡಿದ್ದ ಅವನ ದೂರದ ನೆಂಟ ಕೃಷ್ಣನ ಸವಾರಿ ಅಲ್ಲಿಗೆ ದಯಮಾಡಿಸಿತು. ಬಂದವನೇ ಕೃಷ್ಣ, ಸುಂದರರಾಜನಿಗೆ ತಿರುಮಲೆಯನ್ನು ಕೊಡಬೇಕೆಂದು ಸೂಚಿಸಿದನು. ಮೊದಲು ಮೊದಲು ಗೋಪಾಲ ಅದಕ್ಕೆ ಒಪ್ಪಲಿಲ್ಲ. ಸುಂದರರಾಜನ ಹೆಂಡತಿ ಸೀತಾಲಕ್ಷ್ಮಿ, ಒಳ್ಳೆಯ ಸುಂದರಿ ನಾಗರಿಕಳು, ಪಿಟೀಲು ಪ್ರವೀಣೆ ಎಂಬುದೆಲ್ಲ ಅವನಿಗೆ ಗೊತ್ತಿತ್ತು. ಈಚೆಗೆ ಅವಳಮೇಲೆ ಸ್ವಲ್ಪ ಅಸಮಾಧಾನ ಅಪವಾದ ಉಂಟಾಗಿ, ಅವಳು ಗಂಡನ ಮನೆಗೆ ಬಂದಿರಲಿಲ್ಲವೆಂಬುದು ಅವನಿಗೆ ಗೊತ್ತಿತ್ತು. ಆದರೆ ಈಗ ಹದಿನೈದು ದಿನಗಳ ಕೆಳಗೆ ಅವಳು ಮತ್ತೆ ರಂಭಾಪುರಿಗೆ ಬಂದು ಗುಂಡಣ್ಣನವರ ಮನೆಯಲ್ಲಿರುವುದು ತಿಳಿದಾಗ ಗೋಪಾಲನು "ನಾನು ಹೇಳಲಿಲ್ಲವೆ?" ಬೆಳ್ಳಗೆ ಥಳಕಾಗಿರುವ ಹುಡುಗಿ ವೈಯ್ಯಾರದಿಂದ ಬಂದು ಎದುರಿಗೆ ನಿಂತಾಗ, ಗಂಡನ ಕೋಪ ಸೂರ್ಯಕಿರಣದ ಎದುರಿನ ಮಂಜಿನಂತೆ ಮರೆಯಾಗುವುದೆಂದು? ಇದಕ್ಕೆ ಆ ಹುಡುಗಿಯನ್ನು ಒಂದು ವರುಷ ಯಾಕೆ ನರಳಿಸಬೇಕಾಗಿತ್ತು" ಎಂದಿದ್ದನು. ಆದರೆ ಕೃಷ್ಣ ಈಗ ಬಂದು "ಮತ್ತೆ ಅವಳನ್ನು ಸೇರಿಸಿಕೊಳ್ಳುವ ಪ್ರಶ್ನೆಯೇ ಇಲ್ಲ. ಸುಂದರರಾಜ ಅವಳು ಅಲ್ಲಿರುವಾಗ ಬರಲೇ ಇಲ್ಲ. ಅವಳ ಮುಖ ನೋಡಲು ಸಹ ಅವನಿಗೆ ಬೇಕಿಲ್ಲ. ನಿಮ್ಮ ತಿರುಮಲೆಯನ್ನು ಮದುವೆಮಾಡಿ ಕೊಟ್ಟುಬಿಡು. ನಿನಗೆ ತಾನೇ ಇನ್ನಾರು? ಇರುವ ಒಂದು ಎಕ್ರೆ ಜಮೀನನ್ನು ನಿನ್ನ ಮಗಳಿಗೆ ಬರೆದುಬಿಡು. ನೀನೂ ಬಂದು ನಮ್ಮ ಜತೆಯಲ್ಲಿಯೇ ಇದ್ದುಬಿಡು. ಈ ಹಳ್ಳಿಯಲ್ಲಿ ಯಾಕೆ ಒಬ್ಬನೇ ಒದ್ದಾಡುತ್ತೀಯೆ?'' ಎಂದನು. ಹೆಣ್ಣಿನಮೇಲೆ ಹೆಣ್ಣು ಕೊಡಬಾರದೆಂದು ಗೋಪಾಲ ಎಷ್ಟು ಹೇಳಿದರೂ ಕೃಷ್ಣ ಒಪ್ಪದೆ "ಇದು ಹೆಣ್ಣಿನಮೇಲೆ ಹೆಣ್ಣಲ್ಲ. ಹೆಣ್ಣು ಸತ್ತಮೇಲೆ ಹೆಣ್ಣು. ಈಗ ಸುಂದರರಾಜ ವಿಧುರ" ಎಂದುಬಿಟ್ಟನು. ಕೃಷ್ಣನ ಜೋರು, ಗಟ್ಟಿಮಾತು ವಾದ ಸರಣಿ ಕೋಪ ಬೆದರಿಕೆ ಇವುಗಳ ಮುಂದೆ ಗೋಪಾಲ ಒಂದು ಗಳಿಗೆಯೂ ನಿಲ್ಲಲಾರದವನಾದನು. ತತ್‌ಕ್ಷಣ ವೆಚ್ಚಕ್ಕೆ ಬೇಕಾದ ನೂರಾರು ರೂಪಾಯಿಗಳನ್ನು ಕೃಷ್ಣನೇ ಕೊಡಲು ಒಪ್ಪಿದನು. ಗೋಪಾಲ ಏನು ಮಾಡುವುದಕ್ಕೂ ತೋರದೆ ಕೇವಲ ಉದಾಸೀನದಿಂದಲೇ ಒಪ್ಪಿದನು. ಕೃಷ್ಣ ಅವನನ್ನು ಕರೆದುಕೊಂಡು ರಂಭಾಪುರಿಗೆ ಬಂದನು.

ಗುಂಡಣ್ಣನವರ ಮನೆಯಲ್ಲಿ ಹೆಚ್ಚು ಮಾತುಗಳು ನಡೆಯಲ್ಲಿಲ್ಲ. ಸುಂದರರಾಜ ಒಂದೆರಡು ಸಲ "ಇದು ಬೇಡ, ಇದು ಬೇಡ" ಎಂದು ಪ್ರತಿಭಟಿಸಿದನು. ಅವನಿಗೆ ಪ್ರತಿಭಟಿಸುವುದಕ್ಕೆ ಸಹ ಶಕ್ತಿ ಇರಲಿಲ್ಲ. "ಇದು ನಡೆಯುವುದಿಲ್ಲ" ಎಂಬಂತೆಯೋ ಅಥವ "ಇಲ್ಲಿ ಏನು ಬೇಕಾದರೂ ನಡೆಯಬಹುದು" ಎಂಬಂತೆಯೇ ಅವನು ಸಂಭ್ರಾಂತನಾಗಿ ಸುಮ್ಮನೆಯೇ ಕುಳಿತಿದ್ದನು. ಮಾತುಗಳು ಅವನ ಎದುರಿಗೇ ನಡೆದರೂ ಅವನಿಗೆ ಅವೊಂದೂ ಅರ್ಥವಾಗಲಿಲ್ಲ. ಎಲ್ಲ ಕನಸಿನಲ್ಲಿ ಸಂಭವಿಸಿದಂತೆ ಸಂಭವಿಸಿದವು. ಒಂದೇ ವಾರದೊಳಗೆ ಇದ್ದದ್ದರಲ್ಲಿಯೇ ಸರಿಯಾದ ಒಂದು ಲಗ್ನವನ್ನು ನೋಡಿ ಅವರು ರಂಭಾಪುರಿಗೆ ಎಳು ಮೈಲಿ ದೂರದಲ್ಲಿದ್ದ ಗರುಡನಗಿರಿಯಲ್ಲಿ ವಿವಾಹವನ್ನು ನಿಶ್ಚಯಿಸಿಬಿಟ್ಟರು. ಗೋಪಾಲನು ಮದುವೆಗೆ ಮೊದಲದಿನ ಗರುಡನಗಿರಿಗೆ ಬರುವುದಾಗಿ ಹೇಳಿ ಹೊರಟುಹೋದನು.

ಮದುವೆಗೆ ಗೊತ್ತಾಗಿದ್ದ ದಿನ ಸಮೀಪಿಸಿತು. ಗಂಡಿನ ಕಡೆಯ ಸಿದ್ಧತೆ ನಡೆಯತಕ್ಕದು ಏನೂ ಇರಲಿಲ್ಲ. "ಸದ್ಯ ಮದುವೆಯ ದಿನ ಒಂದು, ಕಳೆದುಹೋದರೆ ಸಾಕೆಂದು" ಗುಂಡಣ್ಣನವರೂ ಕಲ್ಯಾಣಿಯೂ ಕಾತರರಾಗಿದ್ದರು. ಸುಂದರರಾಜ ಮದುವೆ ಬೇಡ ಎಂದು ಸಹ ಹೇಳದೆ ಒಂದು ಬಗೆಯ ಮಂಕಿನಲ್ಲಿದ್ದುದೂ ಸಹ ಅವರಿಗೆ, ಮುಂದೆ ಯಾವ ಅಪಾಯವಿದೆಯೋ ಎಂಬ ಭಯವನ್ನುಂಟುಮಾಡಿತು. ಅವನು ಪ್ರತಿಭಟಿಸಿದ್ದರೆ ಅದು ಅವರಿಗೆ ಸ್ವಾಭಾವಿಕವಾಗಿ ತೋರುತ್ತಿದ್ದಿತು. ಸುಂದರರಾಜನಿಗೆ ಇನ್ನೂ ಸೀತಾಲಕ್ಷ್ಮಿಯ ಆಸೆ ಮಾಯವಾಗಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಾಗಿತ್ತು.

ಮದುವೆಯ ಮೊದಲು ಸಾಯಂಕಾಲ ಗುಂಡಣ್ಣನವರ ಮನೆಯವರೆಲ್ಲ ಗರುಡನಗಿರಿಯನ್ನು ಸೇರಿದರು. ಅದೇ ಸಂಧ್ಯಾಕಾಲ ಗೋಪಾಲನೂ ಮಗಳನ್ನು ಕರೆದುಕೊಂಡು ಬಂದನು. ಎರಡು ಕಡೆಯಿಂದಲೂ ನೆಂಟರು ಯಾರೂ ಬರಲಿಲ್ಲ. ಪುರೋಹಿತರು ಒಬ್ಬರು ಮಾತ್ರ ಬಂದಿದ್ದರು "ಮೊದಲ ರಾತ್ರಿಯೇ ವರಪೂಜೆಯ ಶಾಸ್ತ್ರ ಮಾಡೋಣವೆ?" ಎಂದು ಗೋಪಾಲ ಕೇಳಿದುದಕ್ಕೆ ಸುಂದರರಾಜ "ಎಲ್ಲ ನಾಳೆ ಬೆಳಿಗ್ಗೆಯೇ ಆಗಲಿ" ಎಂದುಬಿಟ್ಟನು. ಅವನ ಮನಸ್ಸು ಇದ್ದಕ್ಕಿದ್ದಂತೆ ಎರಡು ವರುಷಗಳ ಹಿಂದೆ ಸರಿದು ಅಂದಿನ ವರಪೂಜೆಯ ನೆನಪನ್ನು ತಂದಿತು. ಅವನಿಗೆ ಏಕಕಾಲದಲ್ಲಿ

ರೋಮಾಂಚವೂ ಕಣ್ಣೀರೂ ಉಂಟಾಯಿತು. ಅವನು ಜನರ ಕಣ್ಣಿನಿಂದ ಮರೆಯಾಗಿ ಗೋಳೋ ಎಂದು ಅತ್ತೇಬಿಟ್ಟನು.

ಮರುದಿನ ಬೆಳಗಾದಕೂಡಲೇ, ಯಾವುದೋ ಭಯಂಕರ ಕನಸಿನಲ್ಲಿ ರಾತ್ರಿಯನ್ನು ಕಳೆದು ಆಗತಾನೆ ಸ್ವಲ್ಪ ಜೊಂಪು ಹತ್ತಿದ್ದ ಅವನನ್ನು ಪುರೋಹಿತರು ಎಬ್ಬಿಸಿ "ಏಳಿ ಏಳಿ, ಬೇಗ ಲಗ್ನ ಸಾಧಿಸಬೇಕು. ಹತ್ತುವರೆ ಗಂಟೆಗೆ ಮುಹೂರ್ತ" ಎಂದರು. ಸುಂದರರಾಜ ಕಣ್ಣುಬಿಟ್ಟು ನೋಡುವ ವೇಳೆಗೆ ಆಗಲೇ ಹಸೆಮಣೆ ಹಾಕಿ ಎಲ್ಲ ಸಿದ್ಧವಾಗಿತ್ತು. ಅರ್ಧ ರಾತ್ರಿಯಿಂದಲೇ ಉಳಿದವರೆಲ್ಲ ಎಚ್ಚರವಾಗಿದ್ದಂತೆ ತೋರಿತು. ಸುಂದರರಾಜ ಎದ್ದು ಸ್ನಾನಮಾಡಿ ತಿಲಕವಿಟ್ಟುಕೊಂಡು ಹಸೆಯಮಣೆಯ ಮೇಲಕ್ಕೆ ಬಂದನು. ಪುರೋಹಿತರು "ಓಂನಮಃ ಸದಸೇ" ಎಂದು ಪ್ರಾರಂಭಿಸಿದರು. ಇದು ಎರಡನೆಯ ಮದುವೆಯಾದುದರಿಂದ ಪುರೋಹಿತರಿಗೂ ಸಹ ಔದಾಸೀನ್ಯವಿದ್ದಂತೆ ತೋರಿತು. "ಧಾರಾ ಮುಹೂರ್ತ ಆಯಿತು ಎನ್ನಿಸಿದರೆ ಸಾಕೆಂಬುದು" ಎಲ್ಲರ ಆಸೆಯಾಗಿತ್ತು.

ಸುಂದರರಾಜ ಕನಸಿನಲ್ಲಿಯೋ ಎಂಬಂತೆ ಪುರೋಹಿತರು ಹೇಳಿದ ಕಾರ್ಯಗಳನ್ನು ಯಂತ್ರದಂತೆ ಮಾಡಿದನು. ಮದುವೆಯ ಮಂಟಪದ ಬೇರೆ ಭಾಗದಲ್ಲಿ ಹಸೆಮಣೆಯಮೇಲೆ ಕುಳಿತಿದ್ದ ವಧುವಿನ ಎದುರಿಗಿದ್ದ ಹಸೆಮಣೆಗೆ ಸುಂದರರಾಜನನ್ನು ಕರೆದುಕೊಂಡು ಹೋದರು. ಗೋಪಾಲನಿಗೆ ಹೆಂಡತಿಯಿಲ್ಲದಿದ್ದುದರಿಂದ ಕೃಷ್ಣ ಮತ್ತು ಮಹಾಲಕ್ಷ್ಮಿಯರೇ ವಧುವಿನ ತಂದೆ ತಾಯಿಗಳಾಗಿ ಧಾರೆ ಎರೆಯಲು ಸಿದ್ಧರಾಗಿದ್ದರು. ಪುರೋಹಿತರು ಎರಡು ಕಡೆಯವರ ಗೋತ್ರಗಳನ್ನು ಹೇಳಿ ವಧೂವರರ ಕೈಯನ್ನು ಸೇರಿಸಿ ಓಲಗದವನಿಗೆ ಗಂಟೆಸದ್ದು ಮುಗಿಯುವವರೆಗೆ ಓಲಗ ನಿಲ್ಲಿಸಕೂಡದೆಂದು ಅಪ್ಪಣೆ ಮಾಡಿ, ಮಹಾಲಕ್ಷಮ್ಮನಿಗೆ ನಿಧಾನವಾಗಿ ಧಾರೆನೀರು ಬಿಡಿ ಎಂದು ಹೇಳಿ, ಗೋಪಾಲನ ಕೈಲಿ ಒಂದು ಮಗುಟವನ್ನು ಕೊಟ್ಟು ಅದರಿಂದ ವಧೂವರರನ್ನು ಸುತ್ತವರಿದಂತೆಮಾಡಿ ಧಾರೆಯ ಮಂತ್ರವನ್ನು ಹೇಳುವುದರಲ್ಲಿದ್ದರು. ಗೋಪಾಲನ ಕೈ ಮಗುಟವನ್ನು ಹಿಡಿದಿದ್ದರೂ ಅವನ ಮನಸ್ಸು ಎಂಟು ವರ್ಷಗಳ ಹಿಂದೆ ಕಾಲವಾದ ತನ್ನ ಹೆಂಡತಿಯನ್ನು ಜ್ಞಾಪಿಸಿಕೊಂಡು ದುಃಖಗೊಂಡಿತ್ತು. "ಹೇಗಾದರೂ ಆಗಲಿ. ಸದ್ಯ ಹೆಣ್ಣಿನ ಸೆರೆ ಬಿಡಿಸಿದೆನಲ್ಲ"

ಎಂದು ಅವನಿಗೆ ಮನೋನೆಮ್ಮದಿಯುಂಟಾಗಿತ್ತು. ಒಂದಾಗಿ ಸೇರಿದ್ದ ವಧೂ ವರರ ಕೈಮೇಲೆ ಇನ್ನೇನು ಮಹಾಲಕ್ಷ್ಮಿ ಧಾರೆಯ ನೀರನ್ನು ಬಿಡಬೇಕು. ಆಗ ಇದ್ದಕ್ಕಿದ್ದಂತೆ ಸುಂದರರಾಜನಿಗೆ ಯಾವ ಪಿಶಾಚಿ ಹಿಡಿದುಕೊಂಡಿತೋ! ಅವನು ತನ್ನ ಕೈಯಲ್ಲಿದ್ದ ವಧುವಿನ ಕೈಯನ್ನು ತಳ್ಳಿ ಎದ್ದು ನಿಂತನು. ಗೋಪಾಲ ಹಿಡಿದಿದ್ದ ಮಗುಟ ಅವನ ತಲೆಯಮೇಲೆ ಕವಿದುಕೊಂಡಿತು. ಶತ್ರುವನ್ನು ತಳ್ಳುವಂತೆ ಸುಂದರರಾಜ ಆ ಮಗುಟವನ್ನು ಆಚೆಗೆ ಒಗೆದು ಹಸೆಮಣೆಯಿಂದ ಎದ್ದು ದೇವಸ್ಥಾನದಿಂದ ಹೊರಬಿದ್ದನು. ಈ ಅವಾಂತರದಲ್ಲಿ ಪುರೋಹಿತರ ಕೈಯಲ್ಲಿದ್ದ ಗಂಟ ಕೆಳಕ್ಕೆ ಬಿತ್ತು. ಮಹಾಲಕ್ಷ್ಮಮ್ಮ ಬೆಳ್ಳಿ ಚೊಂಬನ್ನು ಎತ್ತಿಹಾಕಿಬಿಟ್ಟಳು. ಸುಂದರರಾಜನನ್ನು — ಹಸೆಮಣೆಯಲ್ಲಿರ ಬೇಕಾದವನನ್ನು—ಬಾಗಿಲಿನಲ್ಲಿ ನೋಡಿ ಓಲಗದವರು ಓಲಗ ನಿಲ್ಲಿಸಿಬಿಟ್ಟರು. ಏನು ಏಕೆ ಎಂದು ಕೇಳುವುದಕ್ಕೆ ಮುಂಚೆಯೇ ಸುಂದರರಾಜ ಬೀಳುವು ದನ್ನೂ ಕಾಣದೆ ಗರುಡನಗಿರಿಯನ್ನು ದಡದಡನೆ ಇಳಿದನು. ದೇವಸ್ಥಾನದ ಮೆಟ್ಟಲುಗಳವರೆಗೆ ಅವನ ಹಿಂದೆ ಬಂದ ಗುಂಡಣ್ಣನವರು ಕಡಿದಾಗಿರುವ ಈ ಬೆಟ್ಟದ ಮೆಟ್ಟಲುಗಳನ್ನು ಇಳಿಯುವಾಗ ಎಲ್ಲಿ ಈ ಅವಸರದಲ್ಲಿ ಮುಗ್ಗರಿ ಸುತ್ತಾನೋ" ಎಂದು ಹೆದರಿದರು. ಸುಂದರರಾಜ "ಬಾ ಬಾ" ಎಂದು ಕರೆಯುತ್ತಿದ್ದ ಕಲ್ಯಾಣಿಯ ಮಾತು ಕಿವಿಗೆ ಬಿದ್ದರೂ ಗಮನಿಸದೆ ಹೊರಟು ಹೋದನು. ಅನಂತರ ಒಂದು ಗಂಟೆಯೊಳಗೆ ಗುಂಡಣ್ಣ ಕಲ್ಯಾಣಿ ಗೋಪಾಲ ಎಲ್ಲರೂ ಗರುಡನಗಿರಿಯ ದೇವಸ್ಥಾನದಿಂದ ಕೆಳಗಿಳಿದರು. ಮಾಡಿದ್ದ ಅಡಿಗೆ, ಕಾಗೆ ನಾಯಿಗಳ ಪಾಲು ಆಯಿತು. ತಿರುಮಲೆ ಕನ್ಯೆ ಯಾಗಿಯೇ ಉಳಿದಳು.

ಗುಂಡಣ್ಣನವರೂ ಕಲ್ಯಾಣಿ ಮತ್ತು ಮನೆಯವರೆಲ್ಲ ಬೆಟ್ಟದಿಂದ ಇಳಿದು ಸುಧಾರಿಸಿಕೊಂಡು ಗಾಡಿಗಳಲ್ಲಿ ಕುಳಿತು ರಂಭಾಪುರಿ ಸೇರುವ ವೇಳೆಗೆ ರಾತ್ರಿ ಬಹಳ ಹೊತ್ತಾಯಿತು. ಗೋಪಾಲ ತನ್ನ ಊರಿಗೆ ಮಗಳೊಡನೆ ಹೊರಟು ಹೋದನು. ಯಾರೊಬ್ಬರೂ ದಾರಿಯಲ್ಲಿ ಮಾತನಾಡಲಿಲ್ಲ. ಗುಂಡಣ್ಣ ನವರು ಮಾತ್ರ ಒಂದು ಸಲ "ಇದು ಹೀಗೆ ಏನೋ ಆಗುತ್ತೆ ಅಂತ ನನಗೆ ಗೊತ್ತಿತ್ತು" ಎಂದು ನಿಟ್ಟುಸಿರು ಬಿಟ್ಟರು. ಕಲ್ಯಾಣಿ "ಹೇಗಾದರೂ ಆಗಲಿ. ಸದ್ಯ ಅವನು ಆರೋಗ್ಯವಾಗಿ ಮನೆ ತಲುಪಿದ್ದರೆ ಸಾಕಲ್ಲ"

ಎಂದಳು. ಕೃಷ್ಣನು "ಮನೆ ತಲಪದೆ ಅವನಿಗೇನು ಧಾಡಿ ? ಆದರೆ ಈಗ ಮನೇಲಿ ಇರ್ತಾನೆ ಅಂತ ನಿರೀಕ್ಷಿಸಬೇಡಿ. ಸಿಕ್ಕಿದ ದುಡ್ಡು ಹೊಡ್ಕೊಂಡು ವಃತ್ತೆ ಮೈಸೂರಿಗೋ ಬೆಂಗಳೂರಿಗೋ ಕಂಬಿ ನೀಡ್ತಾನೆ'' ಎಂದನು. ಗುಂಡಣ್ಣನವರು "ಎಲ್ಲಿದೆ ದುಡ್ಡು ? ನನ್ನನ್ನು ಚೆಚ್ಚಿ ಬಡಿದರೂ ಮೂರು ಕಾಸು ಇಲ್ಲ. ಇನ್ನ್ಯಾರು ಕೊಡೋರು ?'' ಎಂದರು. ಕೃಷ್ಣನು ಕೋಪದಿಂದ "ಇಲ್ವೆ ಸಾಹುಕಾರ್ರು, ಇರೋ ಒಂದು ಚೂರು ತೋಟ ಹೊಡ್ಕೊಳ್ಳೋಕೆ ಕಾಯ್ಕೊಂಡಿದಾರೆಲ್ಲ. ಈಗಾಗಲೇ ಎಷ್ಟೋ ತೆಗೆದುಕೊಂಡಾಗಿದೆ'' ಎಂದು ಗರ್ಜಿಸಿದನು. ಸೀತಾಲಕ್ಷ್ಮಿಯ ಮೇಲಿನ ಅವನ ಕೋಪ ಸಹ ಈಗ ಸುಂದರನ ಮೇಲೆಯೇ ಹೋಯಿತು. ಗುಂಡಣ್ಣನವರಿಗೆ ಕೃಷ್ಣ ಹೇಳಿದುದು ನಿಜವಾಗಿ ತೋರಿದುದರಿಂದ ಅವರು ಮಾತನಾಡದೆ ಸುಮ್ಮನಾದರು.

  

ಕೃಷ್ಣನ ಊಹನೆ ನಿಜವಾಗಿತ್ತು. ಅವರು ರಾತ್ರಿ ರಂಭಾಪುರಿಯನ್ನು ಸೇರಿದಾಗ ಸುಂದರರಾಜ ಮನೆಯಲ್ಲಿರಲಿಲ್ಲ. ಅವನು ಗರುಡನಗಿರಿಯಿಂದ ರಂಭಾಪುರಿಗೆ ಬಂದು, ಸಾಹುಕಾರರಿಂದ ನೂರು ರೂಪಾಯಿ ತೆಗೆದುಕೊಂಡು ಬೆಂಗಳೂರಿಗೆ ಹೋದನೆಂದು ಗೊತ್ತಾಯಿತು.

## ೨೦

ಗುಂಡಣ್ಣನವರ ಸಂಸಾರದಲ್ಲಿ ದಿನದಿನಕ್ಕೆ ವಿರಸ ಹೆಚ್ಚುತ್ತ ನಡೆಯಿತು. ಮನೆಯಲ್ಲಿ ಒಬ್ಬೊಬ್ಬರ ಮುಖ ಒಂದೊಂದು ಕಡೆ ಆಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಸಂಸಾರದ ಉತ್ಪತ್ತಿ ಕಡಿಮೆಯಾಗಿದ್ದುದರಿಂದ ಒಬ್ಬರ ಮೇಲೆ ಒಬ್ಬರಿಗೆ ಅಸಮಾಧಾನವಾಗಿತ್ತು ಗುಂಡಣ್ಣನವರು ಇನ್ನಷ್ಟು ಬಿಗಿಯಾಗಿದ್ದು, ಸುಂದರರಾಜನನ್ನು ಬಲಾತ್ಕಾರದಿಂದಲಾದರೂ ಸರಿಯೆ ವಿವಾಹಕ್ಕೆ ಒಪ್ಪಿಸಿದ್ದಿದ್ದರೆ ಸಂಸಾರದ ಆರ್ಥಿಕ ಸ್ಥಿತಿ ಸ್ವಲ್ಪ ಉತ್ತಮವಾಗುತ್ತಿದ್ದಿತೆಂದು ಶಾಮ ಕೃಷ್ಣ ಭಾವಿಸಿದರು. ಹೀಗೆ ಸಂಸಾರದಲ್ಲಿ ಒಬ್ಬರ ಮೇಲೆ ಒಬ್ಬರಿಗೆ ಅಸಮಾಧಾನವುಂಟಾದುದರ ಲಾಭವನ್ನು ಹೊರಗಿನವರು ಹೊಂದತೊಡಗಿದರು. ಅವರಲ್ಲಿ ಮುಖ್ಯರಾದವರು ಸಾಹುಕಾರ್ ಅಪ್ಪಾಜಿಯವರು.

ಸಾಹುಕಾರ್ ಅಪ್ಪಾಜಿಯವರಿಗೆ ಹಿಂದಿನಿಂದಲೂ ಗುಂಡಣ್ಣನವರ

ತೋಟದ ಮೇಲೆ ಆಸೆ ಇತ್ತು. ಹಣದ ಅಭಾವದಿಂದ ಗುಂಡಣ್ಣನವರು ತೋಟವನ್ನು ಚೆನ್ನಾಗಿ ಮಾಡಿಸಿರಲಿಲ್ಲ. ಇಂತಹ ಆಸ್ತಿಯನ್ನು ಎಷ್ಟು ಸೊಗಸಾಗಿ ಮಾಡಿಸಬಹುದೆಂದು ಸಾಹುಕಾರರು ಬಾಯಿನೀರು ಕರೆಯುತ್ತಿದ್ದರು. "ಹೇಗಾದರೂ ಆಗಲಿ ನೋಡೋಣ, ಬೆರಳು ಹಿಡಿದುಕೊಂಡರೆ ಕೈ ತಾನೇ ಬರುತ್ತೆ" ಎಂದುಕೊಂಡು ಸುಂದರರಾಜನಿಗೆ ಸಾಲ ಕೊಡತೊಡಗಿದರು. ಸಾಹುಕಾರರದು ಯಾವಾಗಲೂ ಬಹಳ ದೂರಾಲೋಚನೆ ಮತ್ತು ದುರಾಲೋಚನೆ. "ಸುಂದರರಾಜನ ಸಾಲದ ಮೂಲಕ ಆ ಜಮೀನಿನ ಮೇಲೆ ಒಂದು ಹಿಡಿತ ಇಟ್ಟುಕೊಳ್ಳೋಣ. ಬೇಕಾದರೆ ಜಮೀನನ್ನೆಲ್ಲ ತೆಗೆದುಕೊಳ್ಳೋಣ. ಉಳಿದವರ ಭಾಗದ ಹಣವನ್ನು ಸಹ ಕೊಡೋಣ. ಹೇಗಾದರೂ ಇದರಮೇಲೆ ಒಂದು ಹಕ್ಕು ಸ್ಥಾಪಿಸೋಣ" ಎಂದು ಅವರು ಸುಂದರರಾಜನಿಗೆ ಬರಿಯ ಪ್ರಾಮಿಸರಿ ನೋಟಿನಮೇಲೆಯೇ ಹಣ ಕೊಟ್ಟರು. ಮೂರು ನಾಲ್ಕು ಸಲ ಹೀಗೆ ಹಣ ಕೊಟ್ಟು, ಅನಂತರ ಸುಂದರರಾಜನಿಗೆ ಮತ್ತೆ ಹಣ ಬೇಕಾದಾಗ "ತೋಟವನ್ನು ಆಧಾರಮಾಡಿಕೊಡು" ಎಂದು ಕೇಳಿದರು. ಸಾಹುಕಾರರ ಬಳಿ ವ್ಯವಹರಿಸುವುದರಲ್ಲಿ ಸುಂದರರಾಜನಿಗೆ ಅಂತಹ ಬುದ್ಧಿವಂತಿಕೆ ಇರಲಿಲ್ಲ. ಆದರೂ, ಅವನು ಆಧಾರಪತ್ರ ಬರೆಯಲು ಹಿಂದೆಗೆದನು. ಮದುವೆಯನ್ನು ತಿರಸ್ಕರಿಸಿ ಸುಂದರರಾಜ ಗರುಡನಗಿರಿಯಿಂದ ರಂಭಾಪುರಿಗೆ ಬಂದು ಸಾಹುಕಾರರಲ್ಲಿ ನೂರು ರೂಪಾಯಿ ಸಾಲಮಾಡಿದಾಗ ಸಾಹುಕಾರರು ಅವನಿಗೆ ಮತ್ತೆ ತೋಟವನ್ನು ಆಧಾರಮಾಡಿಕೊಡು ಎಂದು ಕೇಳಿದರು. ಸುಂದರರಾಜ "ಬೆಂಗಳೂರಿನಿಂದ ಬಂದು ಮಾಡಿಕೊಡುತ್ತೇನೆ" ಎಂದು ಹೇಳಿ ಹೊರಟುಹೋದನು. ಆ ವೇಳೆಗೆ ಅವನ ಸಾಲ ಆರು ನೂರು ರೂಪಾಯಿಗಳಾಗಿದ್ದವು. ಸಾಹುಕಾರರು ಮತ್ತಾರೂ ಆ ಆಸ್ತಿಯನ್ನು ಆಧಾರ, ಭೋಗ್ಯ ಬರೆಸಿಕೊಳ್ಳದಿರಲೆಂದು "ಸುಂದರನ ಪಾಲಿನ ತೋಟ ನನಗೆ ಆಗಿದೆ" ಎಂದೇ ಊರಿನಲ್ಲೆಲ್ಲ ಪ್ರಕಟಿಸಿದರು. ಕೆಲವರ ಹತ್ತಿರ "ಸುಂದರ ತೋಟ [illegible] ನನ್ನ ಹೆಸರಿಗೆ ಬರೆದಿದ್ದಾನೆ. ಒಟ್ಟು ಸಂಸಾರದ ಉಪಯೋಗಕ್ಕಾಗಿ [illegible]ದಿದ್ದಾನೆ. ಉಳಿದವರು ತಮ್ಮ ಪಾಲನ್ನು ಹೇಗೆ ದಕ್ಕಿಸಿಕೊಳ್ಳುತ್ತಾ[illegible] ನೋಡೋಣ ದಕ್ಕಿಸಿಕೊಂಡರೂ ಸುಂದರನ ಪಾಲು ನನಗೆ ಸೇರಲು ಅಡಿ ಇಲ್ಲ" ಎಂದು ಹೇಳತೊಡಗಿದರು. ಸುಂದರರಾಜನು ಅಪ್ಪಾಜಯ್ಯ

ನವರಲ್ಲಿ ಸಾಲಮಾಡಿದ್ದಂತೆಯೇ ಗುಂಡಣ್ಣ, ಶಾಮು, ಕೃಷ್ಣ ಇವರು ಊರಿನ ಇತರರಲ್ಲಿಯೂ ಸಾಲಮಾಡಿದ್ದರು. ಎಲ್ಲರೂ ಸಾಲ ಕೊಟ್ಟಿದ್ದುದು ತೋಟದ ಮೇಲೆಯೇ. ಈಗ ಅಪ್ಪಾಜಿಯೊಬ್ಬರೇ ತೋಟ ಹೊಡೆದುಬಿಡುವುದನ್ನು ಅರಿತ ಉಳಿದ ಚಿಲ್ಲರೆ ಸಾಹುಕಾರರು ಅಪ್ಪಾಜಿಗಿಂತ ಮುಂಚೆಯೇ ತಾವು ದಾವಾ ಹಾಕಬೇಕೆಂದು ಯೋಚಿಸುತ್ತಿದ್ದರು. ಆದರೆ, ಅವರಾರೂ ಯಾವ ಕಾರ್ಯಕ್ರಮವನ್ನೂ ಇನ್ನೂ ಕೈಕೊಂಡಿರಲಿಲ್ಲ. ಅವರೆಲ್ಲ ದಾವಾ ಹಾಕುವುದಕ್ಕೆ ಮುಂಚೆಯೇ ಅಪ್ಪಾಜಿ, ಸುಂದರರಾಜನ ಮೇಲೆ ಸಾವಿರ ರೂಪಾಯಿಗೆ ದಾವಾ ಹಾಕಿದ್ದರು ಸುಂದರರಾಜ ತೆಗೆದುಕೊಂಡಿದ್ದುದು ಆರು ನೂರು ರೂಪಾಯಿಗಳು ಮಾತ್ರವೇ ಆದರೂ, ಅದು ಹೇಗೆ ಹೇಗೋ ಸಾಹುಕಾರರಿಗೆ ಮಾತ್ರ ಗೊತ್ತಿರುವ ಕ್ರಮದಲ್ಲಿ, ಕೋರ್ಟನ್ನು ತಲಪುವ ವೇಳೆಗೆ ಸಾವಿರ ರೂಪಾಯಿ ಆಗಿತ್ತು

ಕೋರ್ಟು ಎಂಬುದು ಉಸಬು ಇದ್ದಂತೆ. ಅದು ಪ್ರವೇಶಿಸಿದವನನ್ನು ಕೆಳಕ್ಕೇ ಎಳೆಯುತ್ತದೆ. ಅದರಲ್ಲಿ ಸಿಕ್ಕಿಕೊಂಡವನು ಸಾಧಾರಣವಾಗಿ ಸಾಯುತ್ತಾನೆ. ಆದುದರಿಂದಲೇ ಸೋತವನು ಸತ್ತಂತೆ, ಗೆದ್ದವನು ಸೋತಂತೆ ಎಂಬ ಗಾದೆ ಹುಟ್ಟಿದ್ದು. ಕೋರ್ಟಿನಲ್ಲಿ ಹಣಗಾರರಿಗೆ ಮಾತ್ರವೇ "ನ್ಯಾಯ" ದೊರೆಯುವುದರಿಂದ ಕೋರ್ಟಿಗೆ ಹೋದ ದರಿದ್ರರು ನಿರ್ನಾಮವಾಗುವುದು ನಿಜ. ಸಾಹುಕಾರರು ದಾವ ಹಾಕಿದ ಸುದ್ದಿ ಕೇಳಿ ಉಳಿದ ಸಾಲಗಾರರು "ನೋಡೋಣ ಹೇಗಾಗುತ್ತದೋ. ನಮ್ಮ ಹಣಗಳನ್ನೆಲ್ಲ ಸಾಹುಕಾರರೇ ಕೊಟ್ಟು ಆಸ್ತಿ ವಹಿಸಿಕೊಳ್ಳಬಹುದೆಂದು" ನಿರೀಕ್ಷಿಸುತ್ತಾ ಸುಮ್ಮನಾದರು. ಸಾಹುಕಾರರು ಪೂರ್ತಿ ಆಸ್ತಿಯನ್ನೇ ಹರಾಜುಹಾಕಿಸಬೇಕೆಂದು ಪಿತೂರಿ ಹೂಡಿದ್ದುದರಿಂದ, ಅವರ ಹತ್ತಿರ ಸುಂದರರಾಜನೊಬ್ಬನು ಬರೆದುಕೊಟ್ಟ ಪ್ರಾಮಿಸರಿ ನೋಟುಗಳು ಇದ್ದರೂ, ಅವರು ಗುಂಡಣ್ಣ ಶಾಮು ಕೃಷ್ಣ ಎಲ್ಲರನ್ನೂ ಪ್ರತಿವಾದಿ ಸ್ಥಾನದಲ್ಲಿ ಸೇರಿಸಿ ದಾವಾ ಹಾಕಿದರು. ಅದರಿಂದ ಮುಂದೆ ತೊಂದರೆ ತಪ್ಪುವುದೆಂದು ಕೋರ್ಟುಗಳ ಅನುಭವವುಳ್ಳ ಅವರಿಗೆ ಗೊತ್ತು. ಪ್ರತಿವಾದಿ ಸ್ಥಾನದಲ್ಲಿ ಎಲ್ಲರನ್ನೂ ಸೇರಿಸಿದ್ದರೂ ಪ್ರತಿವಾದಿಗಳಿಗೆ ಸಮನ್ ಕೊಡಿಸುವಾಗ ಉಪಾಯವಾಗಿ ಏಕ ಪಕ್ಷೀಯ ಡಿಕ್ರಿ ಹೊಡೆಯಬೇಕೆಂಬುದು ಸಾಹುಕಾರರ ಆಸೆಯಾಗಿತ್ತು. ಆದರೆ ಇತರ ಸಾಲ

ಗಾರರೂ ಇದ್ದುದರಿಂದ ಹಾಗೆ ರಹಸ್ಯವಾಗಿ ಕೆಲಸಮಾಡಲು ಅಪ್ಪಾಜಿಗೆ ಸಾಧ್ಯವಾಗಲಿಲ್ಲ.

ಕೋರ್ಟಿನಲ್ಲಿ ದಾವಾ ಬಿದ್ದ ಕೂಡಲೇ ಶಾಮು ಕೃಷ್ಣ ಇವರು ' ಸಾಲ ಮಾಡಿದ್ದರೆ ಅದು ಸುಂದರರಾಜನ ಜವಾಬ್ದಾರಿ ಮಾತ್ರವೆಂದೂ ತಾವೆಲ್ಲ ಪ್ರತಿವಾದಿಗಳಾಗಿ ಸೇರಬೇಕಾದುದಿಲ್ಲವೆಂದೂ '' ವಾದಿಸಿದರು. ಗುಂಡಣ್ಣ ನವರು ಏನು ಮಾಡುವುದಕ್ಕೂ ತೋರದೆ ಶಾಮು, ಕೃಷ್ಣರ ಬಲಾತ್ಕಾರಕ್ಕೆ ಒಳಗಾಗಿ ತಾವೂ ಆ ಹೇಳಿಕೆಗೆ ಸಹಿ ಹಾಕಿದರು. ಕೋರ್ಟಿನಲ್ಲಿ ಆ ಹೇಳಿಕೆ ಗಳು ಅಂಗೀಕೃತವಾಗಿ ಅಪ್ಪಾಜಿಯವರು ಉಳಿದವರನ್ನು ಪ್ರತಿವಾದಿಗಳಾಗಿ ಸೇರಿಸಿದುದು ತಪ್ಪೆಂದೂ ಅವರ ಪರವಾದ ಖರ್ಚನ್ನು ಸಾಹುಕಾರರೇ ಕೊಡ ಬೇಕೆಂದೂ ತೀರ್ಮಾನವಾಯಿತು. ನ್ಯಾಯಾಧಿಪತಿ ಅಪ್ಪಾಜಿಯವರ ಪರ ವಾಗಿ ಸುಂದರರಾಜನ ಮೇಲೆ ಮಾತ್ರ ಡಿಕ್ರಿ ಕೊಟ್ಟರು.

ಸಾಧಾರಣವಾಗಿ ಕೋರ್ಟಿನ ಖದೀಮರಿಗೆ, ತಾವು ಪ್ರತಿವಾದಿಗಳ ಕೋರ್ಟುಖರ್ಚು ಕೊಡಬೇಕೆಂದರೆ ಬಹಳ ಅವಮಾನ. ಸಾಹುಕಾರ್ ಅಪ್ಪಾಜಿಯವರಿಗೆ ಪ್ರತಿವಾದಿಗಳ ಮೇಲೆಲ್ಲ ಬಹಳ ಆಕ್ರೋಶ ಬಂತು. ಸಾಲದುದಕ್ಕೆ ಕೋರ್ಟಿನವರು ಸುಂದರರಾಜನ ಸ್ವಂತ ಜವಾಬ್ದಾರಿಯ ಮೇಲೆ ಡಿಕ್ರಿ ಕೊಟ್ಟರು. ಆಸ್ತಿ ಇನ್ನೂ ವಿಭಾಗವಾಗಿರಲಿಲ್ಲವಾಗಿ ಸುಂದರರಾಜ ತೆಗೆದುಕೊಂಡಿದ್ದ ಸಾಲವನ್ನು ಕೋರ್ಟಿನವರು ಆಸ್ತಿಯಮೇಲೆ ಕೂರಿಸ ಲಿಲ್ಲ. ಅದು ನ್ಯಾಯಕ್ಕೆ ಅನುಸಾರವಾಗಿತ್ತು. ಆದರೆ ಸಾಹುಕಾರರಾಗಿರು ವವರು ಕೋರ್ಟುಗಳಿಗೆ ಹೋಗುವುದು ಬರಿಯ ನ್ಯಾಯಕ್ಕಾಗಿ ಅಲ್ಲ. ಎದು ರಾಳಿ ಸೋಲುವವರೆಗೆ, ಕೋರ್ಟಿನ ಮೇಲಿನ ಕೋರ್ಟಿಗೆ ಹೋಗಿ ಹಾಗೂ ಅವನನ್ನು ಹಣ್ಣುಮಾಡುವುದೇ ಅವರ ಗುರಿ. ಕೋರ್ಟು ಹೀಗೆ ತನಗೆ ವಿರೋಧವಾಗಿ ತೀರ್ಪು ಕೊಟ್ಟುದರಿಂದ, ಅಪ್ಪಾಜಿಯವರ ಕೋಪವೆಲ್ಲ ಸುಂದರರಾಜನಮೇಲೆ ತಿರುಗಿತು. " ಇರಲಿ. ಈಗ ಹೇಗೆ ಮಾಡುತ್ತಾರೋ ನೋಡುತ್ತೇನೆ '' ಎಂದು ಅವರು ಸುಂದರರಾಜನಮೇಲೆ ವಾರಂಟು ತೆಗೆದರು.

ಸಾಧಾರಣವಾಗಿ ಪ್ರತಿವಾದಿಗಳನ್ನು ವಾರಂಟಿನಲ್ಲಿ ಹಿಡಿಸುವುದು ಕಷ್ಟ. ಚತುರರಾದ ಪ್ರತಿವಾದಿಗಳು ವಾರಂಟನ್ನು ತಂದ ಅಮೀನರಿಗೆ ಲಂಚಕೊಟ್ಟು

ಸಿಕ್ಕಲಿಲ್ಲವೆಂದು ಬರೆಸಿಹಾಕಿ ತಪ್ಪಿಸಿಕೊಳ್ಳುತ್ತಾರೆ. ಆದರೆ ಅಪ್ಪಾಜಿಯವ ರಂತಹ ಕೋರ್ಟು ಖದೀಮರಿಗೆ ತಮ್ಮ ಕೆಲಸಗಳನ್ನು ಸಾಧಿಸಿಕೊಳ್ಳುವ ತಂತ್ರಗಳೆಲ್ಲ ಚನ್ನಾಗಿ ಗೊತ್ತು. ಅವರು ಉಪಾಯವಾಗಿ ಬೆಂಗಳೂರಿಗೇ ಅಮೀನನನ್ನು ಕರೆದುಕೊಂಡು ಹೋಗಿಬಿಟ್ಟರು. ಅವರು ಹೋದಾಗ ಸುಂದರರಾಜ ಉಡುಪಿ ಹೋಟಲಿನ ಮಹಡಿಯ ಕೊಠಡಿಯಲ್ಲಿ ಮಲಗಿದ್ದ. ಅಪ್ಪಾಜಿಯವರು ಅವನ ಕಣ್ಣಿಗೆ ಮೊದಲು ಅಮೀನನನ್ನು ಬೀಳಿಸಲಿಲ್ಲ. ಅನಂತರ ಸುಂದರರಾಜ ಕೊಠಡಿಯಲ್ಲಿದ್ದಾಗ ಪ್ರತ್ಯೇಕವಾಗಿ ಅಮೀನ ಬಂದು ವಿಚಾರ ತಿಳಿಸಿದ. ಒಂದು ತಿಂಗಳಿನೊಳಗಾಗಿ ಕೋರ್ಟಿನಲ್ಲಿ ಅಷ್ಟೊಂದು ವ್ಯವಹಾರ ನಡೆದುಹೋಗಿದ್ದುದನ್ನು ಅರಿತು ಸುಂದರರಾಜನಿಗೆ ಆಶ್ಚರ್ಯ ವಾಯಿತು. ಅವನಿಗೆ ಒಂದು ಸಲವಾದರೂ ಕೋರ್ಟಿನಿಂದ ಸಮನ್ಸ್ ಬಂದಿರ ಲಿಲ್ಲ. ಈ ವಿಚಾರ ಅವನು ಅಮೀನನಿಗೆ ಹೇಳಿದಾಗ ಅಮೀನರು "ನೀವು ಸಮನ್ಸ್ ತಿರಸ್ಕರಿಸಿದುದರಿಂದ ನಿಮಗೆ ವಿರೋಧವಾಗಿ ಏಕಪಕ್ಷವಾಗಿ ಡಿಕ್ರಿ ಆಗಿದೆ" ಎಂದರು. ಆ ಮಾತನ್ನು ಅವರಿಗೆ ಸಾಹುಕಾರ್ ಅಪ್ಪಾಜಿಯವರು ಹೇಳಿದ್ದರು. ಸುಂದರರಾಜನು "ಇಲ್ಲ. ನಾನು ಸಮನ್ಸ್ ತಿರಸ್ಕರಿಸಲಿಲ್ಲ" ಎಂದನು. ಅಮೀನರು "ಹೇಗಾದರೇನು, ನೀವಂತೂ ಹಣ ಇಲ್ಲ ಎನ್ನು ತ್ತಿರಲಿಲ್ಲ. ಕೋರ್ಟಿನಲ್ಲಿ ಆಗುವುದು ಹೀಗೆಯೇ. ನಿಮ್ಮ ಪ್ರೋನೋಟಿನ ಮೇಲೆಯೇ ಡಿಕ್ರಿ ಕೊಟ್ಟರು" ಎಂದನು. ಸುಂದರರಾಜನು "ಹಣ ಎಷ್ಟು" ಎಂದು ಕೇಳಿದಾಗ ಅವನಿಗೆ ಎದೆಯೊಡೆಯಿತು. ಕೋರ್ಟು ವೆಚ್ಚವೆಲ್ಲ ಸೇರಿ ಸಾವಿರದ ನೂರು ರೂಪಾಯಿಗಳ ಮೇಲಾಗಿತ್ತು. ಸುಂದರರಾಜನು "ಇದು ಶುದ್ಧ ಅನ್ಯಾಯ. ಒಂದಕ್ಕೆರಡಾಗಿ ದಾವಾ ಹಾಕಿದ್ದಾರೆ. ಎಲ್ಲಿ ಸಾಹು ಕಾರರು? ಅವರಿಗೆ ಹೇಳಬೇಕು ಎಂದು ಗರ್ಜಿಸಿದನು. ಅಮೀನನು "ಅದೆಲ್ಲ ಕೋರ್ಟಿನಲ್ಲಿ ಬಂತು. ನಿಮ್ಮ ತಂದೆ ಅಣ್ಣಂದಿರು ಎಲ್ಲರೂ ಪ್ರತಿಭಟಿಸಿ ಕೊನೆಗೆ ಒಪ್ಪಿದರು. ಕೋರ್ಟಿನಲ್ಲಿ ಆಗುವುದೇ ಹೀಗೆ. ಒಂದು ರೂಪಾಯಿ ಕೊಡಬೇಕಾಗಿದ್ದರೆ ನಾವು ಕೊಡುವ ವೇಳೆಗೆ ಮೂರು ರೂಪಾಯಿ ಆಗುತ್ತೆ. ನೀವು ಹೇಳಬೇಕಾದುದು ಏನಾದರೂ ಇದ್ದರೆ ಈಗಲೂ ಅರ್ಜಿ ಕೊಡಿ" ಎಂದನು.

ಯಾವುದರಲ್ಲಿಯೂ ಉತ್ಸಾಹವಿರದಿದ್ದ ಸುಂದರರಾಜನಿಗೆ ತನ್ನ ತಂದೆ

ಅಣ್ಣಂದಿರು ತನ್ನ ಸಾಲವನ್ನು ಕೋರ್ಟಿನಲ್ಲಿ ಒಪ್ಪಿರುವರೆಂದು ಕೇಳಿ ಬಹಳ ಬೇಸರಿಕೆಯಾಯಿತು. "ನಾನು ಆರು ನೂರು ರೂಪಾಯಿಗಳನ್ನು ತೆಗೆದು ಕೊಂಡಿರುವಾಗ ಇವರು ಸಾವಿರದ ನೂರನ್ನು ಒಪ್ಪುವುದೆಂದರೇನು? ನಾನು ಅಷ್ಟನ್ನೂ ತೆಗೆದುಕೊಂಡನೆಂದೇ ಅವರು ಭಾವಿಸಿರಬಹುದೆ? ನನ್ನ ವಿಷಯ ದಲ್ಲಿ ಅವರು ಏನುಬೇಕಾದರೂ ಭಾವಿಸುತ್ತಾರೆಂದು ತೋರುತ್ತೆ. ಹಾಳಾಗಲೀ ಅವರಾದರೂ ನನ್ನನ್ನು ಒಂದು ಮಾತು ಕೇಳಬಹುದಾಗಿತ್ತು" ಎಂದು ಕೊಂಡನು. ಖೇದ ಬೇಸರಿಕೆಗಳ ಭರದಲ್ಲಿ ಅಮೀನನೊಂದಿಗೆ "ಯಾವುದು ಎಲ್ಲಾದರೂ ಹಾಳಾಗಲಿ. ಇನ್ನು ಆ ಊರನ್ನು ಕಟ್ಟಿಕೊಂಡು ನನಗೆ ಆಗ ಬೇಕಾದುದೇನು?" ಎಂದನು. ಸಮಯವನ್ನು ಕಾಯುತ್ತಿದ್ದ ಅಮೀನ ಅವನ ಮೇಲೆ ವಾರಂಟು ಇರುವುದನ್ನು ಹೇಳಿದನು. ಕೇಳಿದ ಒಂದೇ ಕ್ಷಣದಲ್ಲಿ ಸುಂದರರಾಜನಿಗೆ ತಾನು ಹಾವನ್ನು ಮೆಟ್ಟಿದ ನಡುಕವುಂಟಾಯಿತು. ಮುಂದಲ ಕ್ಷಣದಲ್ಲಿಯೇ ಸಾಹುಕಾರ್ ಅಪ್ಪಾಜಿ ಒಳಕ್ಕೆ ಬಂದರು. ಅವರು ಬಂದುದು ಸುಂದರರಾಜನಿಗೆ ಗೊತ್ತಾಗಲೇ ಇಲ್ಲ. ಅವನ ಮೈ ಮನಸ್ಸು ಗಳೆರಡೂ ಅರ್ಧಜೀವದಿಂದಿದ್ದುವು. ಸುಂದರರಾಜ ಸಾಹುಕಾರರನ್ನು ಗಮನಿಸಿ ಕೋಪ ವಿಷಾದದ ಮೊದಲ ಉರುಬಿನಲ್ಲಿ ಅವರನ್ನು ಚೆನ್ನಾಗಿ ಬೈದ. "ನಿಮ್ಮದು ಅನ್ಯಾಯ, ನಿತ್ಯಾ ಒಂದು ಮನೆ ಮುರಿಯುತ್ತೀರಿ. ನೀವು ಶುದ್ಧ ಮೋಸಗಾರರು. ನೀವು ಪ್ರೋನೋಟಿನಲ್ಲಿ ಸುಮ್ಮನೆ ರುಜು ಹಾಕು. ಮೇಲಿನದನ್ನೆಲ್ಲ ನಾನು ಬರೆದುಕೊಳ್ಳುತ್ತೇನೆ" ಎಂದು ಹೇಳಿದುದರಿಂದ ನಂಬಿ ನಾನು ರುಜು ಹಾಕಿದೆ. ಮೊದಲು ಇದ್ದದ್ದು ಐದು ನೂರು ಸಾಲ ಅಲ್ಲವೆ? ಈಚಿನದು ನೂರು. ಆರು ನೂರು, ಹೇಗೆ ಸಾವಿರವಾಯಿತು. ಒಂದು ಕಡೆ ಯಿಂದ ಬೆಂಕಿ ಹತ್ತಿಸಿ ಲೂಟಿಮಾಡುತ್ತಿದ್ದೀರಿ" ಎಂದನು. ಸಾಹುಕಾರರಿಗೆ ಇದೆಲ್ಲ ಅನುಭವವಾಗಿತ್ತು. ಅವರು ಯಾರ ಬೈಗಳವನ್ನೂ ಲಕ್ಷ್ಯದಲ್ಲಿ ತರುವವರಾಗಿರಲಿಲ್ಲ. ಎದುರಾಳಿ ಬಯ್ಯುವುದು ಅವರಿಗೆ, ಹೊಡೆಸಿಕೊಂಡ ಹುಡುಗ ಬಯ್ದಂತೆ ತೋರುತ್ತಿದ್ದಿತು. ಅವರ ಹೃದಯವನ್ನು ಕನಿಕರ ಮುಟ್ಟುತ್ತಿರಲಿಲ್ಲ. ಹಿಂದೆ ಒಂದು ಸಲ ಅವರು ನಿಜವಾಗಿಯೂ ಒಂದು ಮನೆಯನ್ನು ಮುರಿಸಿ ಹಂಚುಗಳು, ಇಟ್ಟಿಗೆಗಳನ್ನೆಲ್ಲ ಹೇರಿಸಿಕೊಂಡು ಬಂದರು. ಮನೆಯ ಯಜಮಾನನೂ, ಹೆಂಡತಿಯೂ, ನಾಲ್ಕಾರು ಮಕ್ಕಳೂ

ಗೊಳೊ ಎಂದು ನಡುಬೀದಿಯಲ್ಲಿ ರೋದಿಸಿದರು. ಊರವರೆಲ್ಲ ಬಂದು ಸಾಹುಕಾರರಿಗೆ ಹೇಳಿದರು. "ಮನೆಯನ್ನು ಕೀಳುವುದರಿಂದ ಆ ಬಡ ಪಾಯಿಗಳು ಬೀದಿಯ ಪಾಲಾಗುವುದಲ್ಲದೆ ಸಾವಿರಾರು ರೂಪಾಯಿ ಬಾಳುವ ಮನೆ ಹಂಚುಗಳು ತೆಗೆದ ಮೇಲೆ ಅನ್ಯಾಯವಾಗಿ ಬಿದ್ದು ಹಾಳಾಗುವುದೆಂದು" ಎಷ್ಟೋ ಹೇಳಿಕೊಂಡರು. ಸಾಹುಕಾರರು ಯಾವುದೂ ಕಿವಿಗೇ ಬೀಳದವರಂತೆ ತಮ್ಮ ಕೆಲಸದಲ್ಲಿ ತೊಡಗಿದ್ದರು. ಸುಂದರರಾಜನ ಬೈಗಳದಿಂದ ಅವರಿಗೆ ಇರುವೆ ಕುಟುಕಿದಂತೆ ಸಹ ಆಗಲಿಲ್ಲ. ಅವರು "ನೀನು ಬರೆದು ಕೊಟ್ಟಿದ್ದು ಐದು ನೂರು ರೂಪಾಯಿಗಳ ಎರಡು ಪ್ರೋನೋಟು. ನಿನ್ನದೇನಾದರೂ ಆಕ್ಷೇಪಣೆ ಇದ್ದನೆ ನಡಿ. ಕೋರ್ಟಿನಲ್ಲಿ ಹೇಳು ವಕೀಲರು ನನಗೊಬ್ಬನಿಗೆ ಮಾತ್ರವೇ ಅಲ್ಲ. ನಿನಗೂ ವಾದಿಸುತ್ತಾರೆ" ಎಂದರು. ಸುಂದರರಾಜ ಏನು ಮಾಡುವುದಕ್ಕೂ ತೋರದೆ ಅವರ ಜತೆ ಹೊರಟು ರೈಲಿನಲ್ಲಿ ಬೆಳಗಿನ ವೇಳೆಗೆ ಜಿಲ್ಲೆಯ ಮುಖ್ಯ ನಗರವಾದ ಮುನಸೀಫ್ ಕೋರ್ಟು ಇದ್ದಲ್ಲಿಗೆ ಬಂದನು, ಅಲ್ಲಿ ಹನ್ನೊಂದು ಗಂಟೆಗೆ ಕೋರ್ಟಿನಲ್ಲಿ ಆಮೀನ ವಾರಂಟು ಆಸಾಮಿಯನ್ನು ಮುನಸೀಫ್‌ರ ಮುಂದೆ ಹಾಜರ್‍ಮಾಡಬೇಕಾಗಿತ್ತು.

ಜಿಲ್ಲೆಯ ಮುಖ್ಯ ಪಟ್ಟಣಕ್ಕೆ ರೈಲು ಬಂದಾಗ ಇನ್ನೂ ಬೆಳಗಿನ ಜಾವ ಮಬ್ಬುಗತ್ತಲೆ. ವಿದ್ಯುತ್ ದೀಪಗಳು ಸ್ಟೇಶನ್ ಹತ್ತಿರದಲ್ಲಿ ಮಂಕಾಗಿ ಉರಿಯುತ್ತಿದ್ದರೂ ಅವುಗಳ ಪ್ರಕಾಶ ಹೆಚ್ಚಾಗಿ ಸುತ್ತ ಬೀಳುತ್ತಿರಲಿಲ್ಲ. ಜಿಲ್ಲೆಯ ಮುಖ್ಯ ಪಟ್ಟಣದ ಆ ಸ್ಟೇಶನ್‌ನಲ್ಲಿ, ಬೆಂಗಳೂರಿಗೆ ಯಾವುದೋ ಸ್ವಂತ ಕಾರ್ಯಕ್ಕಾಗಿ ಹೋಗಿದ್ದ ಮಲ್ಲಿಗೆಹಳ್ಳಿ ಕಮಲಮ್ಮ (ಶಾಲೆಯ ಉಪಾಧ್ಯಾಯಿನಿ) ಸಹ ಬಂದು ಇಳಿದಳು. ಬೆಂಗಳೂರಿನಲ್ಲಿ ರಾತ್ರಿ ಪ್ರಯಾಣಕ್ಕಾಗಿ ಆಕೆ ಸ್ವಲ್ಪ ಮುಂಚೆ ಬಂದು ರೈಲಿನಲ್ಲಿ ಸ್ತ್ರೀಯರ ಗಾಡಿಯಲ್ಲಿ ಕುಳಿತುದರಿಂದ ಅವಳಿಗೆ ಅಲ್ಲಿ ಸುಂದರರಾಜನ ದರ್ಶನವಾಗಿರಲಿಲ್ಲ. ಬೆಂಗಳೂರಿನಲ್ಲಿ ಅವಳು ಇದ್ದುದು ಕೆಲವು ಗಂಟೆಗಳು ಮಾತ್ರವಾದರೂ ಅವಳಿಗೂ ಸೀತಾಲಕ್ಷ್ಮಿಗೂ ಇದ್ದ ಬಾಂಧವ್ಯ ಸ್ನೇಹವಾತ್ಸಲ್ಯಗಳಿಂದ ಅವಳಿಗೆ ಸುಂದರರಾಜನ ಯೋಚನೆ ಅಲ್ಲಿಯೂ ಬಂದು "ಬೆಂಗಳೂರಿನಲ್ಲಿದ್ದಾನೆ ಎಂದರು. ಎಲ್ಲಿದ್ದಾನೋ ಗೊತ್ತಿದ್ದರೆ ಒಂದು ಸಲ ನೋಡಬಹುದಾಗಿತ್ತು" ಎಂಬ

ಯೋಚನೆ ಬಂದಿತ್ತು. ಕಮಲಮ್ಮನಿಗೆ ಸೀತಾಲಕ್ಷ್ಮಿಯಲ್ಲಿ ಹೇಗೆ ಮಗಳನ್ನು ಕಂಡಂತೆ ವಾತ್ಸಲ್ಯವೋ ಹಾಗೇಯೇ ಸುಂದರರಾಜನಲ್ಲಿಯೂ ಮಗನನ್ನು ಕಂಡಂತೆ ಪ್ರೀತಿ. ಆದರೆ ಮದುವೆಯಾದ ಈಚೆಗೆ ಆಕೆ ಸುಂದರರಾಜನನ್ನು ನೋಡಿರಲಿಲ್ಲ. ಆಗ ಸುಂದರರಾಜ ಅವಳ ಮನೆಗೆ ಬಂದು, ಅವಳ ಎದುರಿಗೆ ಸೀತಾಲಕ್ಷ್ಮಿಯಿಂದ ಪಿಟೀಲು ಬಾರಿಸಿಸಿ ಮಹದಾನಂದವನ್ನು ಹೊಂದಿ "ಇದಕ್ಕೆಲ್ಲ ನೀವೇ ಕಾರಣ. ನಿಮ್ಮಂತೆ ನಿಸ್ವಾರ್ಥ ಸೇವೆಯ ಬಾಳನ್ನು ನಡೆಸಿದವರು ಇಲ್ಲಿ ಇಲ್ಲ. ನಿಮ್ಮ ಆಶೀರ್ವಾದ ಬಲದಿಂದ ನಾವು ಧನ್ಯರು" ಎಂದು ಹೇಳಿ ತೆಂಗಿನಕಾಯಿ ಎಲೆ-ಅಡಿಕೆ ಹೂವು ಗಂಧ ಅರಸಿನ ಕುಂಕುಮ ಎಲ್ಲವನ್ನೂ ಸುಮಂಗಲಿಯರಿಗೆ ಕೊಡುವಂತೆ ಹೆಂಡತಿ ಸಹಿತ ತಂದು ಕೊಟ್ಟು ನಮಸ್ಕರಿಸಿದ್ದನು. ಕಮಲಮ್ಮನಿಗೆ ಆ ಎಳೆ ದಂಪತಿಗಳ ಪ್ರೇಮದಲ್ಲಿ ಜಗತ್ತೂ ಹೊಸದಾಗಿ ಆನಂದವಾಗಿ ತೋರಿತು. ಮದುವೆಯಾದ ಕೂಡಲೇ, ಗಂಡ ಸತ್ತ ಈಚೆಗೆ ಅವಳಿಗೆ ಯಾರೂ ಇಷ್ಟೊಂದು ಸ್ವಾಭಾವಿಕವಾಗಿ ಹೂವು, ಎಲೆ, ಅಡಿಕೆ, ಅರಿಸಿನ, ಕುಂಕುಮ, ಗಂಧ ಇವನ್ನು ಕೊಟ್ಟಿರಲಿಲ್ಲ. ಮದುವೆಯ ಮನೆಯಲ್ಲಿ, ಅವಳ ಅಕ್ಕನೇ ಅವಳ ಕೈಯಿಂದ ತನ್ನ ಮಗಳ ಧಾರೆಯಸೀರೆ ಮಾಂಗಲ್ಯಗಳನ್ನು ಮುಟ್ಟಿಸಿರಲಿಲ್ಲ. ಕಮಲಮ್ಮ ತನ್ನ ಅಕ್ಕನ ಮಗಳ ಮದುವೆಯಲ್ಲಿ ಸೀರೆಯನ್ನು ಮುಟ್ಟಿ ನೋಡಿದಾಗ ಅವಳ ಅಕ್ಕ ಒಳಕ್ಕೆ ಬಂದು ಕೋಪದಿಂದ "ಇದೇನೆ ಚೆನ್ನಾಗಿದೆ! ಎಲ್ಲ ಬಿಟ್ಟು ನೀನೇ ಧಾರೆಸೀರೆ ಮುಟ್ಟೋದು" ಎಂದು ಗದ್ದರಿಸಿ, ಆ ಸೀರೆಯನ್ನು ಸುಮಂಗಲಿಯಾದ ತಾನು ಮತ್ತೆ ಮುಟ್ಟಿ, ಕಮಲಮ್ಮ ಮುಟ್ಟಿದ ಅನಿಷ್ಟ ಹೋಗಲಿ ಎಂದು ಹೇಳಿ ಕಮಲಮ್ಮನ ಎದುರಿಗೇ ದೇವರ ಮುಂದೆ ಇಟ್ಟಿದ್ದಳು. ಅಂತಹ ತನ್ನ ಮುಂದೆ ನೂತನ ವಧೂವರರು ಹೂವು, ಅರಿಸಿನ, ಕುಂಕುಮ ಇಟ್ಟಾಗ ಕಮಲಮ್ಮನ ಕಣ್ಣಿನಲ್ಲಿ ನೀರು ಬಂದಿತ್ತು. ಆಕೆ ಸುಂದರರಾಜನಿಗೆ "ಅರಸಿನ, ಕುಂಕುಮ, ಹೂವು, ಗಂಧ ನನಗ್ಯಾಕಪ್ಪ, ಆ ಭಾಗ್ಯ ಅವರ ಜತೆಯಲ್ಲಿಯೇ ಹೋಯಿತು" ಎಂದಳು. ಸುಂದರರಾಜನು 'ಅವರಿಗೆ ಅದೃಷ್ಟವಿರಲಿಲ್ಲ' ಹೋಯಿತು. ನನಗೆ, ನಿಮಗೆ ಕೊಡದ ಯಾವ ಮಂಗಳದ್ರವ್ಯವೂ, ಮಂಗಳದ್ರವ್ಯಗಳಾಗಿಯೇ ಕಾಣುವುದಿಲ್ಲ" ಎಂದಿದ್ದನು. ಕಮಲಮ್ಮ ಹೂವು ಬೇಡ ಎಂದಾಗ ಸುಂದರರಾಜನು "ಆಗಲಿ, ನೀವೇ

ಅದನ್ನ ನಿಮ್ಮ ಕೈಯಾರ ನನ್ನ ಹೆಂಡತಿಗೆ ಮುಡಿಸಿ" ಎಂದಿದ್ದನು. ಕಮಲಮ್ಮ ಒಂದು ಭಯ ಸಂತೋಷಗಳಿಂದ ಸೀತಾಲಕ್ಷ್ಮಿಗೆ ಹೂವನ್ನು ಮುಡಿಸಿದ್ದಳು. ಈಚೆಗೆ ಸೀತಾಲಕ್ಷ್ಮಿಯ ಬಾಳು ಮರುಭೂಮಿಯಾದ ಮೇಲೆ, ಸ್ವಾಭಾವಿಕವಾಗಿ ಮೂಢನಂಬಿಕೆ ಇಲ್ಲದ ಕಮಲಮ್ಮನಿಗೆ ಸಹ "ನಾನು ವಿವಾಹದ ದಿನ ನನ್ನ ಅನಿಷ್ಟ ಕೈಯಿಂದ ಹೂವನ್ನು ಮುಡಿಸಿದುದರಿಂದ ಆ ಹಸುಗೂಸಿನ ಸುಖ ಮಣ್ಣುಪಾಲಾಯಿತೇನೋ" ಎಂದು ಭಾವಿಸುವಳು. ಅವಳ ನೀರಸವಾದ ಒಣಗಿದ ಬಾಳವೃಕ್ಷ ಇದ್ದಕ್ಕಿದ್ದಂತೆ ಚಿಗುರಿ ಅದರಮೇಲೆ ಒಂದು ಜತೆ ಹೆಣ್ಣು ಗಂಡು ಗಿಣಿಗಳು ಬಂದು ಕುಳಿತಿದ್ದವು. ಆದರೆ, ಅವು ಕೂಡ ಸುಖವಾಗಿರಲಿಲ್ಲ.

ಅಂದಿನಿಂದ ಕಮಲಮ್ಮನ ಬಾಳಿನಿಂದ ಒಂದು ನಿಮಿಷವೂ ಸೀತಾಲಕ್ಷ್ಮಿ ಸುಂದರರಾಜ ಇವರ ಯೋಚನೆ ಮರೆಯಾಗಲಿಲ್ಲ ಕನಸಿನಲ್ಲಿಯೂ ಅವಳು ಅವರನ್ನೇ ಕಾಣುತ್ತಿದ್ದಳು. ಅವಳ ಮನಸ್ಸು ಯಾವ ಕಾರ್ಯದಲ್ಲಿ ತೊಡಗಿದ್ದರೂ ಇದ್ದಕ್ಕಿದ್ದಂತೆ ಅವಳ ಸ್ವಾಧೀನವನ್ನೇ ಬಿಟ್ಟು ಸುಂದರರಾಜ ಸೀತಾಲಕ್ಷ್ಮಿಯರ ಕಡೆಗೆ ತಿರುಗುತ್ತಿತ್ತು. ಹೂವಿನ ಹಿಂದಲ ಸುವಾಸನೆಯಂತೆ ಅವಳ ಮನೋವ್ಯಾಪಾರದ ಹಿಂದೆಲ್ಲ ಆ ಭಾವ, ನಿತ್ಯವ್ಯವಹಾರದ ಒಣ ಸಂಗತಿಗಳಿಂದ ಅವಳಿಗೆ ವಿಶ್ರಾಂತಿ ಸ್ಥಾನವಾಗಿತ್ತು. ಬೆಂಗಳೂರಿನಿಂದ ಪ್ರಯಾಣಮಾಡಿ ಬರುತ್ತಿರುವಾಗಲೂ ಅವಳ ಮನಸ್ಸು ಪದೇಪದೇ ಸೀತಾಲಕ್ಷ್ಮಿಯನ್ನು ಕುರಿತು ಯೋಚಿಸಿತ್ತು. ಅವಳ ಸೊಬಗು, ಯವ್ವನ, ಗಾನಕಲೆ ಸೇವಾಬುದ್ಧಿ, ಗಂಡನಿಂದ ತಿರಸ್ಕಾರ, ಇಂತಹ ಬಾಳಿಗೆ ಮತ್ತೆ ಬೆಳಕನ್ನು ಕೊಡುವುದು ಹೇಗೆ?

ಈ ಯೋಚನೆಯಲ್ಲಿ ಮಧ್ಯೆ ಮಧ್ಯೆ ನಿದ್ರೆ ಬಂದರೂ ನಿದ್ರೆಯಿಂದ ಆಲೋಚನಾ ತಂತು ಕತ್ತರಿಸಿ ಹೋಗದೆ, ಹತ್ತಿಯಿಂದ ಸ್ವಾಭಾವಿಕವಾಗಿ ನೂಲು ಬರುವಂತೆ ಮನಸ್ಸು ಮತ್ತೆ ಆ ಆಲೋಚನೆಯಲ್ಲಿಯೇ ಲೀನವಾಗುವುದು ಕಮಲಮ್ಮ ಸ್ಟೇಷನ್ನಿನಲ್ಲಿ ಇಳಿದು ಟಿಕೀಟನ್ನು ಕೊಟ್ಟು ಹೋಗುವ ಗೇಟ್ ಬಳಿ ಬಂದಾಗ, ಸ್ವಲ್ಪ ಜನಸಂದಣಿ ಹೆಚ್ಚಾಗಿದ್ದುದರಿಂದ ಕೈಯಲ್ಲಿದ್ದ ಚೀಲವನ್ನು ಕೆಳಗಿಟ್ಟು ಗದ್ದಲ ಕಡಿಮೆಯಾದಮೇಲೆ ಹೋಗೋಣವೆಂದು ಕಂಬದ ಮರೆಯ ನೆಳಲಿನಲ್ಲಿ ನಿಂತಳು. ಪ್ರಯಾಣಿಕರೆಲ್ಲ

ಒಬ್ಬೊಬ್ಬರಾಗಿ ಟಿಕೆಟ್‌ಗಳನ್ನು ಕೊಟ್ಟು, ಬಾಗಿಲಿನಿಂದ ಹೊರಗಡೆಗೆ ಹೋಗುತ್ತಿದ್ದರು. ಆಗ ಮುಂದೆ ಅಮೀನ, ಹಿಂದೆ ಸಾಹುಕಾರರು, ನಡುವೆ ಸುಂದರರಾಜ, ಮೂರು ಜನರೂ ಬಾಗಿಲಿಗೆ ಬಂದರು. ಕಮಲಮ್ಮ ಕಂಬದ ಮರೆಗೆ ತಲೆ ಎಳೆದುಕೊಂಡಳು. ಆದರೂ ಅಮೀನನು ಮೂರು ಟಿಕೆಟ್‌ಗಳನ್ನೂ ಟಿಕೆಟ್ ವಸೂಲಿಮಾಡುತ್ತಿದ್ದವರಿಗೆ ಕೊಟ್ಟು, ಮೂವರೂ ಆಚೆಗೆ ಹೋದುದು ಅವಳಿಗೆ ಕಂಡಿತು.

ಸುಂದರರಾಜನನ್ನು ನೋಡಿದ ಕೂಡಲೇ ಅವನನ್ನು ಮಾತನಾಡಿಸಬೇಕೆಂಬ ಕುತೂಹಲವುಂಟಾದರೂ ಸ್ತ್ರೀ ಸಹಜ ಸಂಕೋಚದಿಂದ ಕಮಲಮ್ಮ ಮಾತನಾಡಲಿಲ್ಲ. ಅಷ್ಟರಲ್ಲಿಯೇ ಹಿಂದಿದ್ದ ಸಾಹುಕಾರರು ಕಣ್ಣಿಗೆ ಬಿದ್ದುದರಿಂದ ಅವಳು ಸುಮ್ಮನೆ ಮರೆಯಾಗಿ ನಿಂತಳು. ಕಮಲಮ್ಮನಿಗೆ ಸಾಹುಕಾರ್ ಅಪ್ಪಾಜಿಸವರು ಚೆನ್ನಾಗಿ ಗೊತ್ತು. ಸಾಹುಕಾರರೂ ಅವರ ತಂತ್ರ ಲೇವಾದೇವಿಗಳೂ ಜಿಲ್ಲೆಯಲ್ಲಿ ಎಲ್ಲರಿಗೂ ಗೊತ್ತಾಗಿದ್ದವು. ಎದುರಿಗೆ ನೋಡಿದವರಿಗೆ ಸಹ "ಅಪ್ಪಾಜಯ್ಯ ಈ ದಿವಸ ಇವನನ್ನು ವಾರಂಟಿನಲ್ಲಿ ಹಿಡಿಸಿದರು, ಇವನ ಜಮೀನು ಹರಾಜು ಹಾಕಿಸಿದರು, ಇವನ ಮನೆ ಮುರಿಸಿ ಹೇರಿಸಿದರು" ಎಂಬ ಮಾತುಗಳಿಂದ ಅವರ ಹೆಸರು ಪ್ರಸಿದ್ಧವಾಗಿತ್ತು. ಕಮಲಮ್ಮ ಹಿಂದೆ ರಂಭಾಪುರಿಯಲ್ಲಿ ಸಹ ಉಪಾಧ್ಯಾಯಿನಿಯಾಗಿದ್ದುದರಿಂದ ಅವಳಿಗೆ ಸಾಹುಕಾರರ ಪರಿಚಯು ಸಹ ಇತ್ತು. ಅಪ್ಪಾಜಿ ಮಲ್ಲಿಗೆಹಳ್ಳಿಯಲ್ಲಿಯೂ ಲೇವಾದೇವಿಮಾಡಿ ಅಲ್ಲಿಗೂ ಪದೇ ಪದೆ ಬರುತ್ತಿದ್ದನು. ಅವನ ಜತೆಯಲ್ಲಿ ಆಗಿಂದಾಗ್ಗೆ ಅಮೀನರು ಬರುವಾಗ, ಈ ಅಮೀನನೂ ಬಂದಿದ್ದುದು ಕಮಲಮ್ಮನಿಗೆ ಗೊತ್ತು. ಆದುದರಿಂದ ಕಮಲಮ್ಮ ಸುಂದರರಾಜನನ್ನು ಹಿಡಿದಿದ್ದ ಅಮೀನನನ್ನು ಗುರುತಿಸಿದಳು.

ಸ್ವಭಾವದಿಂದ ಬುದ್ಧಿವಂತಳಾದ ಆಕೆಗೆ ತತ್‌ಕ್ಷಣ ವಿಷಯ ಹೊಳೆಯಿತು. ರಂಭಾಪುರಿಯಿಂದ ಹಿಂದಿರುಗಿದನಂತರ ಸೀತಾಲಕ್ಷ್ಮಿಯೂ ಮಾವನ ಮನೆಯಲ್ಲಿ ನಡೆದಿದ್ದ ಮಾತು ಕತೆಗಳನ್ನೆಲ್ಲ ಹೇಳಿದ್ದಳು. ಆ ಸಂಭಾಷಣೆಯಲ್ಲಿ ಸುಂದರರಾಜ ಸಾಹುಕಾರ್ ಅಪ್ಪಾಜಿಯವರಲ್ಲಿ ಸಾಲ ಮಾಡಿರುವುದೂ, ಅಂತಹ ಮೋಸಗಾರನ ಹತ್ತಿರ ಸಾಲ ಮಾಡಿದುದರಿಂದ ಅವನು ಆಸ್ತಿಯನ್ನು ಎತ್ತಿಹಾಕುವನೆಂದು ಮನೆಯವರು ಹೇಳುತ್ತಿದ್ದುದೂ

ಆಕೆಗೆ ತಿಳಿದಿತ್ತು. ಈಚೆಗೆ ಸಾಲದ ಹೆಚ್ಚು ಹೊರೆಯನ್ನು ಸುಂದರರಾಜನ ಮೇಲೆ ಹಾಕಿ ಅವನಿಗೆ ಮದುವೆ ಮಾಡಲು ಯತ್ನಿಸಿದುದು, ಅಪ್ಪಾಜಿಯ ವರಿಗೂ ಗುಂಡಣ್ಣನವರಿಗೂ ಕೋರ್ಟಿನಲ್ಲಿ ನಡೆದ ವ್ಯಾಜ್ಯ ಇವೆಲ್ಲ ಕಮಲಮ್ಮನಿಗೂ ಗೊತ್ತಾಗಿತ್ತು. ಹಳ್ಳಿಗಳಲ್ಲಿ ಯಾವುದನ್ನು ಗುಟ್ಟಾಗಿಡು ವುದು ಕಷ್ಟ. ಅಲ್ಲಿ ನಡೆಯುವ ವಿಷಯ ಸಾಧಾರಣವಾಗಿ ಸಾರ್ವಜನಿಕವೇ ಆಗುತ್ತದೆ. "ಸುಂದರರಾಜನನ್ನು ಸಾಹುಕಾರರು ವಾರಂಟಿನಲ್ಲಿ ಹಿಡಿಸಬಹು ದೆಂದು" ರಂಭಾಪುರಿಯವರು ಹೇಳುತ್ತಿದ್ದುದನ್ನು ಸೀತಾಲಕ್ಷ್ಮಿ ಕಮಲಮ್ಮನಿಗೆ ಹೇಳಿದ್ದಳು. ಈಗ ಬಂದಿರುವುದು ಅದೇ ಎಂಬುದರಲ್ಲಿ ಕಮಲಮ್ಮನಿಗೆ ಸ್ವಲ್ಪವೂ ಸಂದೇಹವಿರಲಿಲ್ಲ.

ತನ್ನ ಕೆಲಸ ತಾನು ಮಾಡಿಕೊಳ್ಳುವುದು ಕಮಲಮ್ಮನಿಗೆ ಸ್ವಾಭಾವಿಕ ವಾಗಿ ಅಭ್ಯಾಸವಾಗಿತ್ತು ಆಕೆ ಕೂಡಲೇ ತಮ್ಮ ಇನಿಸ್ಪೆಕ್ಟರ್ ಆಪೀಸು ಗುಮಾಸ್ತನ ಮನೆಗೆ ಹೋದಳು. ಗುಮಾಸ್ತನಿಗೆ "ಅಪ್ಪಾಜಿ ಸುಂದರ ರಾಜನಮೇಲೆ ವಾರಂಟು ಹೊರಡಿಸಿದ್ದಾರೆಯೋ? ಹಣ ಎಷ್ಟೊ ತಿಳಿಯ ಬೇಕಲ್ಲ" ಎಂದಳು ಗುಂಡಯ್ಯನ ಹೆಸರನ್ನು ಕೇಳಿದ ಕೂಡಲೇ ಗುಮಾಸ್ತ "ಅಪ್ಪಾಜಿಯಾದಮೇಲೆ ಹೊರಡಿಸಿಯೇ ಇರುತ್ತಾನೆ. ತಾಳಿ, ನನಗೆ ಕೋರ್ಟು ನಾಜರ್ ಗೊತ್ತು. ತಿಳಿದುಕೊಂಡು ಬರುತ್ತೇನೆ" ಎಂದು ಹೋದನು. ಎರಡು ನಿಮಿಷಗಳ ತರುವಾಯ ಹಿಂದಿರುಗಿ "ನೀವು ಊಹಿ ಸಿದ್ದು ನಿಜ. ಹೊರಡಿಸಿದ್ದಾರೆ, ಸಾವಿರದನೂರು ಚಿಲ್ಲರೆಯಂತೆ; ಸಾಧಾರಣ ವಾಗಿ ಅಮೀನನನ್ನು ಜತೆಯಲ್ಲಿಯೇ ಕರೆದುಕೊಂಡು ಹೋಗುವುದು ಅವರ ಪದ್ಧತಿಯಂತೆ" ಎಂದನು. ಆ ವೇಳೆಗೆ ಮಲ್ಲಿಗೆಹಳ್ಳಿಗೆ ಹೊರಡುವ ಬಸ್ ವೇಳೆಯಾದುದರಿಂದ ಕಮಲಮ್ಮ ಊರಿನದಾರಿ ಹಿಡಿದಳು.

ಸುದ್ದಿಯನ್ನು ಕೇಳಿದಕೂಡಲೇ ಸೀತಾಲಕ್ಷ್ಮಿ ಜರ್ಝರಿತಳಾಗುವ ಳೆಂಬುದು ಕಮಲಮ್ಮನಿಗೆ ಗೊತ್ತಿತ್ತು. ಸೀತಾಲಕ್ಷ್ಮಿಗೆ ಗಂಡನಲ್ಲಿ ಎಂತಹ ಗಾಢವಾದ ಪ್ರೇಮವಿದ್ದಿತೆಂಬುದು ಕಮಲಮ್ಮನಿಗೆ ಮಾತ್ರಗೊತ್ತು. ವ್ಯಾಧದ ಕೈಯಿಂದ ಗಂಡು ಸತ್ತ, ಹೆಣ್ಣುಕ್ರೌಂಚದಂತೆ ಆಕೆ ಪರಿತಪಿಸುತ್ತಿದ್ದುದನ್ನು ಕಮಲಮ್ಮ ನೋಡಿದ್ದಳು. ಗಂಡನಿಗಾಗಿ ಯಾವ ತ್ಯಾಗಕ್ಕೂ ಪ್ರಾಣವನ್ನೇ ಕೊಡುವುದಕ್ಕೂ ಆಕೆ ಸಿದ್ಧವಾಗಿದ್ದಳು. ಅಂತಹ ಅವಕಾಶ ದೊರೆತರೆ

ಅದನ್ನು ಅತ್ಯಂತ ಆನಂದದಿಂದ ಆಲಿಂಗಿಸಿಕೊಳ್ಳುವಳೆಂಬುದೂ ಕಮುಲಮ್ಮ ನಿಗೆ ಗೊತ್ತಿತ್ತು. ಆದರೆ ಈಗ ಎದ್ದ ಭೂತ ಭಯಂಕರವಾಗಿತ್ತು. ಸುಂದರ ರಾಜನನ್ನು ವಾರಂಟಿನಲ್ಲಿ ಹಿಡಿದು ತಂದಿರುವುದು ಪ್ರಾಯಶಃ ಗುಂಡಣ್ಣನವರಿಗಾಗಲಿ ಶಾಮು, ಕೃಷ್ಣರಿಗಾಗಲೀ ಗೊತ್ತಿರಲ್ಲಿಲ್ಲ. ಗೊತ್ತಾಗಿದ್ದರೂ ಕೂಡಲೇ ಅವರೇನೂ ಮಾಡುವಂತೆ ಇರಲಿಲ್ಲ. ಅವರಾರಿಗೂ ಯಾವ ಕಡೆಯಿಂದಲೂ ಯಾವ ಸಾಲವೂ ಹುಟ್ಟುವಂತೆ ಇರಲಿಲ್ಲ. ಹಾಗೂ ಅವರು ಹುಟ್ಟಿಸಬೇಕಾದರೂ ಒಂದೆರಡು ತಿಂಗಳುಗಳಿಲ್ಲದೆ ಸಾಧ್ಯವೂ ಇರಲಿಲ್ಲ, ಅಲ್ಲಿಯವರೆಗೆ ಸುಂದರರಾಜ ಸಿವಿಲ್ ಜೈಲಿನಲ್ಲಿರುವುದೆ?

ಕಮುಲಮ್ಮನಿಗೆ ಬಾಳಿನಲ್ಲಿ ಯಾವ ಬಾಂಧವ್ಯವೂ ಇರಲಿಲ್ಲ. ಆಕೆಯನ್ನು ಒಂದು ವ್ಯಕ್ತಿಯನ್ನಾಗಿ ಭಾವಿಸಿ ಸ್ವಲ್ಪವಾದರೂ ಪ್ರೇಮುವನ್ನು ತೋರಿದವಳು ಸೀತಾಲಕ್ಷ್ಮಿ ಒಬ್ಬಳೇ. ಸೀತಾಲಕ್ಷ್ಮಿಯ ಕಾರಣದಿಂದಲೇ ಕಮುಲಮ್ಮನ ಸಹಜ ಮಾತೃವಾತ್ಸಲ್ಯದ ಪ್ರವೃತ್ತಿಗೆ ಚಲನೆಯುಂಟಾಯಿತು. ಕುಗ್ಗಿದ ಮತ್ತು ಸೆರೆಯಲ್ಲಿ ಬಿದ್ದಿದ್ದ ಆಕೆಯ ಭಾವಗಳ ಬೇಡಿಯನ್ನು ಸೀತಾಲಕ್ಷ್ಮಿ ಬಿಡಿಸಿ ಕಮುಲಮ್ಮನನ್ನು ಒಂದು ಸಹಜ ಪ್ರೇಮ ಪೂರ್ಣ ಸುಂದರ ಸ್ತ್ರೀಯನ್ನು ಮಾಡಿದ್ದಳು. ಸೀತಾಲಕ್ಷ್ಮಿ ಕಮುಲಮ್ಮನ ಬಾಳಿಗೆ ಪ್ರವೇಶಿಸುವುದಕ್ಕೆ ಮುಂಚೆ, ಭಾವನೆಗಳ ಚಲನವಿಲ್ಲದಿದ್ದ ಅವಳ ಮನಸ್ಸೂ ದೇಹವೂ ನಿಂತ ನೀರಿನ ಕೊಳದಂತೆ ಪಾಚಿಕಟ್ಟಿತ್ತು. ಸ್ನೇಹ ವಾತ್ಸಲ್ಯ ಕಾತರ ಆತರ ಆಕಾಂಕ್ಷೆಗಳೆಂಬ ಪ್ರವೃತ್ತಿ ಜಲಗಳು ಆ ದೇಹ ಮನಸ್ಸುಗಳಲ್ಲಿ ಸಂಚರಿಸ ತೊಡಗಿದ ಕೂಡಲೇ, ಅದಕ್ಕೆ ಹೊಸಲಾವಣ್ಯ ಲಾಲಿತ್ಯ ಚೈತನ್ಯಗಳುಂಟಾಗಿ ದೇಹ ಮನಸ್ಸುಗಳು ಅಪೂರ್ವ ಶೋಭೆಯಿಂದ ಬೆಳಗಿದ್ದವು. ಸೊರಗಿದ್ದ ಭಾವಗಳ ಬಂಧನವನ್ನು ಬಿಡಿಸಿ ತನ್ನನ್ನು ಒಂದು ಪೂರ್ಣವ್ಯಕ್ತಿಯನ್ನಾಗಿ ಮಾಡಿದುದಕ್ಕಾಗಿ ಕಮುಲಮ್ಮ ಸೀತಾಲಕ್ಷ್ಮಿಗೆ ಋಣಿಯಾಗಿದ್ದಳು. ಈಗ ಅವಳು ಸೀತಾಲಕ್ಷ್ಮಿಗೆ ನಿಜವಾಗಿಯೇ ಮಾತೆಯಾಗ ಬಯಸಿದಳು.

"ಈ ಅಪಾಯದಿಂದ ಸುಂದರರಾಜನನ್ನು ಉಳಿಸುವುದು ಹೇಗೆ? ಏನೂ ಅರಿಯದ ಆ ಬಡಪಾಯಿ ಹೋಗಿ, ನೊಣ ಜೇಡನ ಬಲೆಗೆ ಬೀಳುವಂತೆ ಆ ಸಾಹುಕಾರನ ಬಲೆಗೆ ಬಿದ್ದು ಬಿಟ್ಟತಲ್ಲ?" ಸುಂದರರಾಜನದು ಎಂತಹ ಸಂಸ್ಕಾರವಾದ ಜೀವವೆಂಬುದು ಆಕೆಗೆ ಗೊತ್ತಿತ್ತು. ಆತನ ಸೂಕ್ಷ್ಮ ಪ್ರಕೃತಿ

ಈ ಅವಮಾನವನ್ನು ತಡೆಯಲಾರದೆ ಹುಚ್ಚಾದರೂ ಆಗಬಹುದು. ಅವನು ಹೊಳೆ ಕೆರೆ ಬಿದ್ದು ಆತ್ಮಹತ್ಯೆ ಮಾಡಿಕೊಂಡರೂ ಮಾಡಿಕೊಳ್ಳಬಹುದೆಂದು ಅವಳು ಹೆದರಿದಳು. "ಇನ್ನು ಅವನು ಹೋದಮೇಲೆ ಸೀತಾಲಕ್ಷ್ಮಿಯೂ ಹೊಳೆ ಬೀಳುತ್ತಾಳೆ. ನಾನು ಮತ್ತೆ ಅನಾಥೆಯೆ!" ಬರಿಯ ಆ ಆಲೋಚನೆಯಿಂದಲೇ ಕಮಲಮ್ಮನಿಗೆ ನಡುಕಬಂತು. ಆದರೆ ಸಾವಿರದ ನೂರು ರೂಪಾಯಿಗಳೆಂಬ ಎದುರಿಗೆ ನಿಂತ ಅಭೇದ್ಯವಾದ ಈ ಬೆಟ್ಟವನ್ನು ದಾಟುವುದು ಹೇಗೆ? ಕಮಲಮ್ಮ ತನ್ನ ಆಸ್ತಿಯನ್ನೆಲ್ಲ ಲೆಕ್ಕ ಹಾಕಿದಳು. ಮತ್ತೆ ಮತ್ತೆ ಮೂರು ನಾಲ್ಕು ಸಲ ಲೆಕ್ಕ ಹಾಕಿದಳು. ಎರಡು ಬೆಳ್ಳಿಯ ಲೋಟ, ಟಪಾಲ್ ಸೇವಿಂಗ್ಸ್ ಬ್ಯಾಂಕಿನಲ್ಲಿಟ್ಟಿದ್ದ ೯೦ ರೂಪಾಯಿ. ಎಷ್ಟು ಸಲ ಲೆಕ್ಕ ಹಾಕಿದರೂ ಇಷ್ಟರ ಹೊರತು ಇನ್ನೇನೂ ಇಲ್ಲ, ಅವಳ ಹಳೆಯ ಪಿಟೀಲು. ಅದರಲ್ಲಿ ಅವಳಷ್ಟು ಸರಾಗವಾಗಿ ಮತ್ತಾರಿಗೂ ನುಡಿಸಲು ಬರುತ್ತಿರಲಿಲ್ಲ. ಅದನ್ನು ೩೦ ರೂಪಾಯಿಗಳಿಗಿಂತ ಹೆಚ್ಚಿಗೆಗೆ ಯಾರೂ ತೆಗೆದುಕೊಳ್ಳರು ಆದರೆ, ಪಿಟೀಲನ್ನು ಮಾರಬೇಕೆಂಬ ಯೋಚನೆಯಿಂದಲೇ ಅವಳ ಕಣ್ಣುಗಳಲ್ಲಿ ನೀರು ಹರಿಯಿತು. ಹೇಗೆ ಹೇಗೆ ಮಾಡಿದರೂ, ಎಷ್ಟೆಷ್ಟು ಕೂಡಿದರೂ ಇನ್ನೂರು ರೂಪಾಯಿಗೆ ಹೆಚ್ಚಿಗೆ ಆಗುವಂತಿರಲಿಲ್ಲ. ಕಮಲಮ್ಮನ ಸಂಬಳ ಯಾವಾಗಲೂ ಹೆಚ್ಚಾಗಿರಲಿಲ್ಲ. ಆದರೆ, ಅದೇ ಆಕೆಗೆ ಸಾಕಾಗಿತ್ತು. ದುಡ್ಡು ಇಲ್ಲದುದರಿಂದ ಆಕೆಗೆ ಎಂದೂ ದುಃಖ ವಾಗಿರಲಿಲ್ಲ. ಇಂದು ಮಾತ್ರ, ಅದೂ ಸುಂದರರಾಜನನ್ನು ಉಳಿಸುವು ದಕ್ಕಾಗಿ ಸಾವಿರದ ನೂರು ರೂಪಾಯಿಗೆ, ತನ್ನ ಮುಂದಲ ಉಳಿತಾಯವನ್ನೆಲ್ಲ ಕೊಡಲೂ ಅವಳು ಸಿದ್ಧಳಾಗಿದ್ದಳು.

ಹೌದು. ಇನ್ಶೂರೆನ್ಸ್‌ನಲ್ಲಿ ಅವಳಿಗೆ ನಾಲ್ಕು ನೂರು ರೂಪಾಯಿ ಸಾಲ ಸಿಕ್ಕುತ್ತಿತ್ತು. ಹಿಂದೆಯೂ ಅದರಿಂದ ನೂರು ರೂಪಾಯಿ ಸಾಲ ತೆಗೆದು ಕೊಂಡಿದ್ದಳು. ಅದು ತನಗಾಗಿ ಅಲ್ಲ. ಎದುರು ಮನೆಯ ರಂಗನಾಯಕಿ ಯುಗಾದಿ ಹಬ್ಬದ ದಿನ ಬೆಳ್ಳಿತಟ್ಟೆಯಲ್ಲಿ ತಿಂಡಿ ತಂದುಕೊಟ್ಟಿದ್ದಳು. ಕಮ ಲಮ್ಮ ಅವಳಿಗೆ ಕುಂಕುಮ ಕೊಟ್ಟು ಕಳುಹಿಸಿ ತಟ್ಟೆಯನ್ನು ಒಳಗಿಟ್ಟು ನೀರು ತರಲು ಬಾವಿಯ ಬಳಿಗೆ ಹೋದಳು. ಅಲ್ಲಿ ಮುಗ್ಗುಲಲ್ಲಿದ್ದ ಬಾಡಿದ ತುಳಸೀ ಗಿಡಕ್ಕೆ ಒಂದು ಬಿಂದಿಗೆ ನೀರು ಎತ್ತಿಹಾಕಿ ಪಾತ್ರೆಗಳನ್ನು ಬೆಳಗಿಕೊಂಡ

ಒಳಕ್ಕೆ ಬರುವವೇಳೆಗೆ ನಾಲ್ಕು ಗಳಿಗೆಯಾಯಿತು. ಕಮಲಮ್ಮ ಒಳಗೆ ಬಂದು ನೋಡಿದಾಗ ತಿಂಡಿಯಾಗಲೀ, ತಿಂಡಿಯನ್ನಿಟ್ಟಿದ್ದ ತಟ್ಟೆಯಾಗಲೀ ಅಲ್ಲಿ ಇರಲಿಲ್ಲ. ಕಮಲಮ್ಮ ಯಾರಮೇಲೆ ತಾನೇ ಅನುಮಾನ ಹೇಳಿಯಾಳು. ಅವಳು ಮೊದಲೇ ಭಯಸ್ತೆ. ಯಾರ ಮೇಲೆಯಾದರೂ ಅನುಮಾನವನ್ನು ಹೇಳಿದರೆ ಒಡವೆ ಕಳಕೊಂಡುದೂ ಅಲ್ಲದೆ ಇರುವ ಸ್ನೇಹಕ್ಕೂ ತೊಂದರೆ ಬರುವುದೆಂದು ಹೆದರಿ ಅವಳು ಮಾತನಾಡದೆ, ಗಾಯದ ಬಾಧೆಯನ್ನು ಸಹಿಸಿಕೊಳ್ಳುವಂತೆ ಸಹಿಸಿಕೊಂಡಳು. ಎರಡು ದಿನ ರಂಗನಾಯಕಿಯನ್ನು ಸಬೂಬುಗಳಿಂದ ಸುದಾರಿಸಿ ಮೂರನೆಯ ದಿನದವೇಳೆಗೆ ಜಿಲ್ಲೆಯ ಮುಖ್ಯ ನಗರದಿಂದ ಬೇರೆ ತಟ್ಟೆಮಾಡಿಸಿ ತರಿಸಿದಳು. ನೂರು ರೂಪಾಯಿ ವೆಚ್ಚವಾಯಿತು. ಬಂದನಂತರ ರಂಗನಾಯಕಿಯು "ಅಯ್ಯೋ ಈಗ ಯಾಕೆ ಹಣ ಖರ್ಚುಮಾಡಿ ತರಿಸಿದಿರಿ. ಹೋದರೆ ಹೋಯಿತು. ನಮ್ಮ ಗ್ರಹಚಾರ" ಎಂದಳು. ಆದರೆ ಬೇರೆ ತಟ್ಟೆಯನ್ನು ತರಿಸದೆ ಇದ್ದಿದ್ದರೆ ವಾತಾವರಣ ಅಷ್ಟು ಶಾಂತವಾಗಿರುತ್ತಿರಲಿಲ್ಲವೆಂಬದು ಅವರಿಬ್ಬರಿಗೂ ಗೊತ್ತಿತ್ತು. ಆಗ ಕಮಲಮ್ಮ ಆ ನೂರು ರೂಪಾಯಿಗಳನ್ನು ಮತ್ತೆ ಭರ್ತಿಹಾಕಿ ಇನ್‌ಶುರೆನ್ಸ್ ಸಾಲ ತೀರಿಸಬೇಕೆಂದು ಮಾಡಿದ್ದಳು. ಆದರೆ ಇಲ್ಲಿಯವರೆಗೆ ಸಾಧ್ಯವಾಗಿರಲಿಲ್ಲ. ಈಗ ಆಕೆ "ನಾಲ್ಕು ನೂರು ರೂಪಾಯಿಗಳಿಂದತಾನೇ ಏನು ಪ್ರಯೋಜನ? ಅದೂ ಈಗ ಕೈಗೆ ಬರುವುದಿಲ್ಲ. ಇವತ್ತು ಬರೆದುಕೊಂಡರೆ ಬರುವವೇಳೆಗೆ ಎರಡು ವಾರವಾಗುತ್ತೆ. ಅಲ್ಲಿಯವರೆಗೆ ಸುಂದರರಾಜ ಜೈಲಿನಲ್ಲಿರುವುದೆ?" ಎಂದು ಯೋಚಿಸಿದಳು.

ಈ ಯೋಚನಾತರಂಗಗಳಲ್ಲಿ ಕಮಲಮ್ಮನಿಗೆ ತಿಳಿಯದಂತೆಯೇ ಬಸ್ ಮಲ್ಲಿಗೆ ಹಳ್ಳಿಯನ್ನು ಸೇರಿತು. ಕಮಲಮ್ಮ ಅರ್ಧ ನಿದ್ರೆಯಲ್ಲಿ ನಡೆಯುತ್ತಿರುವಂತೆ ಹೋಗಿ ತನ್ನ ಮನೆ ಸೇರಿಕೊಂಡಳು. ಬೆಂಗಳೂರಿಗೆ ಹೋಗುವಾಗ ಅವಳು ಮನೆಗೆ ಬೀಗಹಾಕಿಕೊಂಡು ಹೋಗಿದ್ದಳು. ಈಗ ಮನೆಯಮುಂದೆ ನಿಂತು ಬೀಗ ತೆಗೆಯುತ್ತಿರುವಾಗ ಎದುರು ಮನೆಯಲ್ಲಿದ್ದ ಸೀತಾಲಕ್ಷ್ಮಿ ಅವಳನ್ನು ನೋಡಿದಳು. ಸೀತಾಲಕ್ಷ್ಮಿ ಊರಮುಂದೆ ಬಸ್ ಶಬ್ದವಾದಕೂಡಲೇ ಕಮಲಮ್ಮ ಬರುವುದನ್ನು ಅರಿತಳು. ಯಾಕೆಂದರೆ ಇಂದು ಅವಳು ಬರುವ ವಾಯಿದೆಯಾಗಿತ್ತು. ಮೂರು ದಿನಗಳಿಂದ ಸೀತಾಲಕ್ಷ್ಮಿಗೆ ಕಮಲಮ್ಮ

ನಿಲ್ಲದೆ ಬಹಳ ಬೇಸರಿಕೆಯಾಗಿತ್ತು. ಅವಳು ಯಾರ ಮನೆಗೂ ಹೋಗುತ್ತಿರಲಿಲ್ಲ. ತನ್ನ ಹೆಚ್ಚು ಕಾಲವನ್ನು ಕಮಲಮ್ಮನ ಮನೆಯಲ್ಲಿಯೇ ಕಳೆಯುತ್ತಿದ್ದಳು

ಕಮಲಮ್ಮ ಒಳಗೆ ಹೋಗಿ ಕೈ ಚೀಲವನ್ನು ಮೂಲೆಯಲ್ಲಿಟ್ಟು ಉಸ್ ಅಪ್ಪಾಡ ಎಂದು ಹೇಳಿಕೊಂಡು ಕುಳಿತಳು. ಹಿಂದೆಯೇ ಸೀತಾಲಕ್ಷ್ಮಿ ಬಂದು "ಯಾಕೆ ಬಸ್‌ನಲ್ಲಿ ಬಹಳ ಭರ್ತಿಯೋ. ತುಂಬ ಆಯಾಸವಾಯಿತೆ? ಸ್ವಲ್ಪ ಕಾಫಿ ಕಾಯಿಸಿಕೊಳ್ಳಿ. ಒಲೆ ಹತ್ತಿಸುತ್ತೇನೆ" ಎಂದಳು. ಕಮಲಮ್ಮನಿಗೆ ಆಯಾಸವೂ ಆಗಿತ್ತು. ಕಾಫಿಯೂ ಬೇಕಾಗಿತ್ತು. ಆದರೆ ಅವಳ ಮನಸ್ಸು ಸಮಾಧಾನದಲ್ಲಿರಲಿಲ್ಲ. ಏನು ಮಾಡುವುದಿದ್ದರೂ ಇನ್ನು ಅರ್ಧ ಗಂಟೆಯೊಳಗಾಗಿ ಮಾಡಿ ಮುಗಿಸಬೇಕು. ಅರ್ಧ ಗಂಟೆಯೊಳಗೆ ಹೊರಡುವ ಬಸ್‌ನಲ್ಲಿ ಜಿಲ್ಲಾ ಮುಖ್ಯ ಪಟ್ಟಣಕ್ಕೆ ಹೋಗಿ, ಕೋರ್ಟಿನ ಮುಂದೆ ಸುಂದರರಾಜನನ್ನು ಹಾಜರ್ಮಾಡುವುದಕ್ಕೆ ಮುಂಚಿತವಾಗಿ, ಸಾಹುಕಾರರಿಗೆ ಹಣ ಕೊಡಬೇಕು. ಇಲ್ಲದಿದ್ದರೆ ಏನಾದರೂ ಅನಾಹುತವಾಗುವುದು ಎಂಬುದೇ ಅವಳ ಯೋಚನೆಯಾಗಿತ್ತು. ಅವಳು ಸೀತಾಲಕ್ಷ್ಮಿಗೆ "ಸುಂದರರಾಜನನ್ನು ಕಂಡಿದ್ದೆ" ಎಂದಳು. ಸೀತಾಲಕ್ಷ್ಮಿಯ ಮುಖದಲ್ಲಿ ಅವಳು ಬೇಡವೆಂದರೂ ಸಂತೋಷವೂ ಕೆನ್ನೆ ಕೆಂಪೂ ಸುಳಿಯಿತು. "ಏನೋ ವಿಚಾರವಿರಬೇಕು. ಇಲ್ಲದಿದ್ದರೆ ಕಮಲಮ್ಮ ಹೀಗೆ ಪ್ರಾರಂಭಿಸುವುದಿಲ್ಲ" ಎಂದು ಅವಳಿಗೆ ತೋರಿತು. ಜತೆಗೆ ಏನೋ ಎಂತೋ ಎಂಬ ಭಯವೂ ಉಂಟಾಯಿತು. ಅವಳ ಪ್ರಯತ್ನವಿಲ್ಲದೆಲೆ ಅವಳ ಬಾಯಿನಿಂದ "ಎಲ್ಲಿ ಬೆಂಗಳೂರಿನಲ್ಲಿಯೇ?" ಎಂದು ಹೊರಟಿತು. ಕಮಲಮ್ಮ "ನಾನು ನೋಡಿದ್ದು ಹಾಸನದ ಸ್ಟೇಷನ್ನಲ್ಲಿ. ಹೌದು ಅವರೂ ಬೆಂಗಳೂರಿನಿಂದಲೇ ಬಂದರು, ಅವರ ಜತೆ ಸಾಹುಕಾರ್ ಅಪ್ಪಾಜಿ ಸಹ ಇದ್ದರು" ಎಂದಳು. ಸೀತಾಲಕ್ಷ್ಮಿಯು ಗಾಬರಿಯಿಂದ "ನಿಮ್ಮ ದಮ್ಮಯ್ಯ ವಿಷಯ ಬೇಗ ಹೇಳಿ ಏನಾಯಿತು? ಸಾಹುಕಾರ್ರು ಯಾಕೆ ಇದ್ದರು?" ಎಂದಳು. ಕಮಲಮ್ಮ ವಿಷಯಗಳನ್ನೆಲ್ಲ ಸಂಕ್ಷೇಪವಾಗಿ ಹೇಳಿ "ಈಗ ಸಾವಿರದ ನೂರು ರೂಪಾಯಿ ಒದಗಿಸಬೇಕು. ಇಲ್ಲದಿದ್ದರೆ ಸುಂದರರಾಜನಿಗೆ ಕಷ್ಟವೆಲ್ಲ?" ಎಂದಳು.

ಬುದ್ಧಿವಂತಳಾದ ಸೀತಾಲಕ್ಷ್ಮಿಗೆ ಕಮಲಮ್ಮ ಮಾತುಗಳನ್ನು ಪ್ರಾರಂಭಿ

ಸಿದಾಗಲೇ ಕೊನೆಯೂ ತಿಳಿಯಿತು. ಅವಳ ಮನಸ್ಸು ಮಿಂಚಿನಂತೆ ಕೆಲಸ ಮಾಡಿ ಅವಳು ಒಂದು ತೀರ್ಮಾನಕ್ಕೆ ಬಂದಳು. ಅವಳ ಹತ್ತಿರ, ಅವಳ ತಂದೆಯ ತಂಗಿ ಕೊಟ್ಟಿದ್ದ ಭಂಗಾರದ ಡಾಬು ಒಂದು ಇತ್ತು. ಹಿಂದೆ ಅದನ್ನ ಮಾಡಿಸಿದಾಗ ಅದರ ಬೆಲೆ ಐದು ನೂರು ಆರು ನೂರು ರೂಪಾಯಿ ಗಳಿದ್ದರೂ ಈಗ ಧಾರಾಳವಾಗಿ ಸಾವಿರದ ಇನ್ನೂರು ರೂಪಾಯಿ ಆಗುತ್ತಿದ್ದಿತು. ಮದುವೆಯಲ್ಲಿ ನಾಲ್ಕು ದಿನಗಳ ಹೊರತು ಈಚೆಗೆ ಸೀತಾಲಕ್ಷ್ಮಿ ಡಾಬನ್ನು ಧರಿಸಿಕೊಂಡಿರಲಿಲ್ಲ ಅವಳ ಇತರ ಸುಂದರ ಭೋಗ್ಯವಸ್ತುಗಳಂತೆ ಅದೂ ಪೆಟ್ಟಿಗೆಯ ಒಂದು ಮೂಲೆಯಲ್ಲಿ ಬಿದ್ದಿತ್ತು. ಹಾಗೆ ತಿರಸ್ಕೃತವಾಗಿ ಅದು ಬಿದ್ದಿರುವುದನ್ನು ನೋಡಿದಾಗಲೆಲ್ಲ ಸೀತಾಲಕ್ಷ್ಮಿಗೆ, ಆಡಾಬಿಪಾಗಿ ಅಷ್ಟೊಂದು ಕಷ್ಟಪಟ್ಟ ಅತ್ತೆಯ ಜ್ಞಾಪಕ ಬರುತ್ತಿದ್ದಿತು. ಅದು ಚಿನ್ನ ಬೆಲೆಬಾಳುತ್ತೆ ಎಂಬ ಮೋಹ ಸಹ ಅವಳಿಗೆ ಕಡಿಮೆಯಾಗಿ ಅತ್ತೆಯ ಪ್ರೇಮಕ್ಕಾಗಿಯೇ ಅವಳು ಅದನ್ನು ಕುರಿತು ನೆನೆಯುತ್ತಿದ್ದಳು. ಕಮಲಮ್ಮನ ಮಾತು ಮುಗಿ ಯುವುದರೊಳಗಾಗಿ ಆಕೆ ತನ್ನ ಮನೆಗೆ ಓಡಿದಳು. ಪೆಟ್ಟಿಗೆಯಲ್ಲಿದ್ದ ಡಾಬನ್ನು ತಂದು ಕಮಲಮ್ಮನಿಗೆ ಕೊಟ್ಟು "ಇದನ್ನೇ ತೆಗೆದುಕೊಂಡು ಹೋಗಿ ಸಾಹು ಕಾರರಿಗೆ ಕೊಟ್ಟು ಬಿಡಿ. ಏನಾದರೂ ಮಾಡಿ. ಸದ್ಯ ಬಂದಿರುವ ಆಪತ್ತು ಪರಿಹಾರವಾಗಲಿ" ಎಂದಳು. ನೋಡಿದ ಕೂಡಲೇ ಡಾಬಿನಿಂದ ಸುಂದರನಿಗೆ ಬೇಕಾದ ಹಣ ಹುಟ್ಟುವುದೆಂಬುದು ಕಮಲಮ್ಮನಿಗೆ ತಿಳಿಯಿತು. ಮರು ಕ್ಷಣದಲ್ಲಿಯೇ ಅವಳಿಗೆ ಮತ್ತೆ "ಪಾಪ ಇವಳ ಹತ್ತಿರ ಇರುವುದು ಇದೊಂದೆ ಒಡವೆ. ಇವಳ ಆಪತ್ಕಾಲದಲ್ಲಿ ಇವಳಿಗೆ ಇದು ಆಸ್ತಿ. ಇದನ್ನು, ಬಿಟ್ಟು ತಿರುಗುವ ಆ ಗಂಡನಿಗಾಗಿ ನಾನು ಯಾಕೆ ತೆಗೆದುಗೊಂಡು ಹೋಗಿ ಕೊಡಲಿ? ಇವಳೇನೋ ಹುಡುಗಿ ಪಾಪ, ಔದಾರ್ಯ ಕರುಣೆ ಪರೋಪ ಕಾರ ಇವಳ ಸ್ವಭಾವಗುಣ. ಆದರೆ, ಇದಕ್ಕೆ ಇವಳ ಅಣ್ಣಂದಿರು ಒಪ್ಪಬೇಕಲ್ಲ. ಪಾಪ, ಈ ಡಾಬು ಇವರ ಅತ್ತೆಯ ಕಷ್ಟ ಸಾಹಸಗಳ ಫಲ. ಅದಕ್ಕೇ ಒಂದು ಚರಿತ್ರೆ ಇದೆ. ಇವಳ ಈ ಒಂದೇ ಆಪದ್ಧನವನ್ನು ಇವಳ ಕೈಯಿಂದ ಬಿಡಿಸು ವುದು ಯೋಗ್ಯವೆ?" ಎಂಬ ಯೋಚನೆಯುಂಟಾಯಿತು. ಸೀತಾಲಕ್ಷ್ಮಿ ಕಮಲಮ್ಮನ ಮನಸ್ಸನ್ನು ತೆರೆದ ಪುಸ್ತಕವನ್ನು ಓದುವಂತೆ ಓದಿದಳು. ಕಮಲಮ್ಮನ ಮನಸ್ಸಿನಲ್ಲಿ ನಡೆಯುತ್ತಿದ್ದುದೆಲ್ಲ ಅವಳಿಗೆ ಸ್ಪಷ್ಟವಾಗಿ ಗೊತ್ತಾ

ಯಿತು. ಅವಳು ಎಲ್ಲಕ್ಕೂ ಪ್ರತ್ಯುತ್ತರವಾಗಿ ಎಂಬಂತೆ “ ನಿಮ್ಮ ಆಲೋಚನೆಗಳೆಲ್ಲ ನನಗೆ ತಿಳಿಯುತ್ತೆ. ನಿಮಗೆ ಯಾರಿಂದಲೂ ಯಾವ ಆಕ್ಷೇಪಣೆಯೂ ಬರುವುದಿಲ್ಲ. ಏನು ಬಂದರೂ ನನಗೆ ಬರಲಿ. ಇದರ ಹೊರತು ನನಗೆ ಬೇರೆ ದಾರಿ ಇಲ್ಲ. ಅವರು ಜೈಲಿಗೆ ಹೋಗುವುದನ್ನು ನೋಡುತ್ತಾ ಇದನ್ನು ಇಟ್ಟುಕೊಂಡಿರುವುದಕ್ಕಿಂತ ನಾನು ಸಾಯುವುದೇ ಮೇಲು ” ಎಂದಳು. ಅವಳ ಮಾತಿನಲ್ಲಿ ದೃಢ ನಿಶ್ಚಯವಿತ್ತು. ಸಾಯುವುದಕ್ಕೆ ಸೀತಾಲಕ್ಷ್ಮಿ ಎಂದಿಗೂ ಹೆದರುವವಳಲ್ಲವೆಂಬುದು ಕಮಲಮ್ಮನಿಗೆ ಗೊತ್ತಿತ್ತು. ಅಲ್ಲದೆ ಸೀತಾಲಕ್ಷ್ಮಿ ಮಾಡುವುದು ಸರಿ ಎಂದು ಅವಳಿಗೆ ನಂಬಿಕೆಯಾಗಿತ್ತು. ಸೀತಾಲಕ್ಷ್ಮಿಯ ಯಾವ ಮಾತನ್ನು ಮೀರುವುದಕ್ಕೂ ಕಮಲಮ್ಮನಿಗೆ ಸಾಧ್ಯವಾಗಿರಲಿಲ್ಲ. ಸೀತಾಲಕ್ಷ್ಮಿಯ ಗುಣರೂಪಗಾನಚಾಕಚಕ್ಯತೆಗಳಿಗೆ ಅವಳು ದಾಸಳಾಗಿದ್ದಳು. ಆ ಬಡಪ್ರಾಣಿ ಜಗತ್ತಿನ ಆಂದೋಳನದಲ್ಲಿ ಕಲ್ಲಿನ ಸಂದಿನಲ್ಲಿ ಸಿಕ್ಕದ ಸುಮದಂತೆ ಅರೆದು ಹೋಗುತ್ತಿದ್ದುದರಿಂದ ಕಮಲಮ್ಮನಿಗೆ ಸೀತಾಲಕ್ಷ್ಮಿಯಲ್ಲಿ ಅವ್ಯಾಜ ಕರುಣೆಯುಂಟಾಗಿತ್ತು. ಕಣ್ಣುಕಾಣದ ಭೂತವೊಂದಕ್ಕೆ ಸೀತಾಲಕ್ಷ್ಮಿ ಬಲಿಯಾದ ಆಡಿನಂತೆ ಅವಳಿಗೆ ತೋರಿತು. ಕಮಲಮ್ಮನು “ ಅದೆಲ್ಲ ಸರಿ. ಆದರೆ ನಿಮ್ಮ ಅಣ್ಣ ಶ್ರೀನಿವಾಸನನ್ನು ಕಳುಹಿಸೋಣ ” ಎಂದಳು ಸೀತಾಲಕ್ಷ್ಮಿ “ ಬೇಡಿ. ಈಗ ಅವರಿಗೆ ವಿಚಾರ ತಿಳಿಯಲೇಕೂಡದು. ಕೆಲಸ ಕೆಟ್ಟುಹೋಗುತ್ತೆ. ಅವರಾರಿಗೂ ಈ ಪ್ರಶ್ನೆ ಅರ್ಥವಾಗಿಲ್ಲ. ಮೊದಲನೆಯದು, ಡಾಬನ್ನು ಕೊಡುವುದೇ ಬೇಡವೆನ್ನುತ್ತಾರೆ. ಎರಡನೆಯದಾಗಿ ಶ್ರೀನಿವಾಸ ಹೋದರೆ ಸಾಹುಕಾರರಿಗೂ ಇವರಿಗೂ ಚರ್ಚೆ ಪ್ರಾರಂಭವಾಗುತ್ತೆ. ಸಾಹುಕಾರರನ್ನು ಕಂಡರೆ ಇವರಿಗೆ ಆಗದು. ಇವರು ಹಣ ಅಷ್ಟು ಇಷ್ಟು ಎಂದು ಚೌಕಶಿಮಾಡಬಹುದು. ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀನಿವಾಸನನ್ನು ಕಂಡಕೂಡಲೇ, ಇವರ ಸಹಾಯದಿಂದ ಬಿಡುಗಡೆಹೊಂದಲು ಅವರು (ಸುಂದರರಾಜ) ಒಪ್ಪುವುದಿಲ್ಲ. ಅವರ ಈ ಸ್ಥಿತಿಯಲ್ಲಿ ಶ್ರೀನಿವಾಸನಾಗಲಿ ಅಥವ ಗುರುತಿರುವ ಯಾರೇ ಆಗಲಿ ಅವರ ಕಣ್ಣಿಗೆ ಬೀಳಲಾಗದು ” ಎಂದಳು. ಕಮಲಮ್ಮ ಡಾಬನ್ನು ತೆಗೆದುಕೊಂಡು ಬಸ್ಸನ್ನು ಹತ್ತಿದಮೇಲೆಯೇ ಸೀತಾಲಕ್ಷ್ಮಿಗೆ ಸ್ವಲ್ಪ ಸಮಾಧಾನವಾದುದು.

ಕಮಲಮ್ಮ ಹಾಸನವನ್ನು ತಲುಪುವವೇಳಗೆ ಹನ್ನೊಂದು ಗಂಟೆ ಹತ್ತಿರ

ವಾಗುತ್ತ ಬಂದಿತ್ತು. ಸಾಹುಕಾರರನ್ನೂ ಅಮೀನರನ್ನೂ ಎಲ್ಲಿ ಕಾಣಬಹುದೆಂಬುದು ಅವಳಿಗೆ ತಿಳಿಯದಿದ್ದುದರಿಂದ ಅವಳು ಮತ್ತೆ ತನ್ನ ಪರಿಚಿತ ಗುಮಾಸ್ತರಲ್ಲಿಗೇ ಹೋದಳು. ಗುಮಾಸ್ತ ಮತ್ತೆ ಹೋಗಿ ನಾಜರನ್ನು ವಿಚಾರಿಸಿದ. ಆತ "ಕೋರ್ಟಿನಲ್ಲಿ ಹಣ ಹಾಜರ್ಮಾಡಿದರೆ ಸುಂದರರಾಜನನ್ನು "ಕುಲಾಸೆ" ಮಾಡುವುದಾಗಿಯೂ ಕೋರ್ಟಿಗೆ ಅಮೀನ ಅವನನ್ನು ಕರೆದುಕೊಂಡು ಬರುವವರೆಗೆ ತಾನು ಏನನ್ನೂ ಮಾಡುವುದಕ್ಕಾಗುವುದಿಲ್ಲವೆಂದೂ ಹೇಳಿದ. ಕೋರ್ಟಿಗೆ ಸುಂದರರಾಜ ಖೈದಿಯಾಗಿ ಹೋಗುವುದು ಕಮಲಮ್ಮನಿಗೆ ಇಷ್ಟವಿರಲಿಲ್ಲ. ಹಾಗೆ ಅವನು ಹೋಗುವುದರಿಂದ ತನ್ನ ಉದ್ದೇಶಕ್ಕೆ ಭಂಗ ಬರುವುದೆಂದು ಅವಳು ಭಾವಿಸಿದಳು. ಗುಮಾಸ್ತ ಆಕೆಯನ್ನು ತನ್ನ ಮನೆಯಲ್ಲಿ ನಿಲ್ಲಿಸಿ ಸಾಹುಕಾರರನ್ನು ನೋಡಿಕೊಂಡು ಬರಲು ಊರೊಳಗೆ ಹೋದ. ಅವನು ನಿರೀಕ್ಷಿಸಿದಂತೆ ಸಾಹುಕಾರರು, ಕೋರ್ಟಿಗೆ ಹೋಗಲು ಹನ್ನೆರಡು ಗಂಟೆಯಾಗುವುದನ್ನೇ ಕಾಯುತ್ತಾ ಹೋಟಲಿನ ಮಹಡಿಯ ಕೊಠಡಿಯಲ್ಲಿ ಸುಂದರರಾಜ ಅಮೀನನೊಂದಿಗೆ ಕುಳಿತಿದ್ದರು. ಯುವಕನಾದ ಉತ್ಸಾಹಿಯಾದ ಸುಂದರರಾಜ, ಹಾಗೆ ಮಂಕಾಗಿ ಯಾವುದೂ ಬೇಡವಾದವನಂತೆ ಕುಳಿತಿದ್ದುದನ್ನು ನೋಡಿ ಗುಮಾಸ್ತನಿಗೆ ಸಹ "ಸಾಲ ಹೇಗೆ ಈತನ ರಕ್ತವನ್ನೇ ಹೀರಿದೆ?" ಎಂದು ಕನಿಕರವುಂಟಾಯಿತು. ಅವನಿಗೂ ಸಾಹುಕಾರರ ಪರಿಚಯವಿದ್ದುದರಿಂದ, ಕಮಲಮ್ಮ ಬಂದ ಸುದ್ದಿ ಅವರಿಗೆ ತಿಳಿಸಿ ಸಾಹುಕಾರರನ್ನು ಮನೆಗೆ ಕರೆದುಕೊಂಡು ಬಂದನು. ಸಾಹುಕಾರರಿಗೆ "ಯಾರಾದರೂ ಬಂದು ಜೈಲಿಗೆ ಹೋಗುವುದಕ್ಕೆ ಮುಂಚೆ ಸುಂದರರಾಜನನ್ನು ಬಿಡಿಸಿಕೊಳ್ಳಬಹುದೆಂದು" ಗೊತ್ತಿತ್ತು. ಸಾಧಾರಣವಾಗಿ ಎಲ್ಲ ವಾರಂಟು ಕೇಸುಗಳಲ್ಲಿಯೂ ಹಾಗೆಯೇ ಆಗುತ್ತಿದ್ದಿತು. ಆದರೆ ಈ ಸಲ ಸುಂದರರಾಜನ ತಂದೆಗೆ ಇನ್ನೂ ಸುದ್ದಿ ತಿಳಿಯದಿದ್ದುದರಿಂದಲೂ, ತಿಳಿದರೂ ಅವರು ಹಣ ಒದಗಿಸಬೇಕಾದರೆ ಒಂದೆರಡು ತಿಂಗಳಾದರೂ ಬೇಕಾಗಬಹುದಾಗಿದ್ದುದರಿಂದಲೂ ಅವರಿಗೆ ಯಾರೂ ಜಾಮೀನು ಬರುವುದೂ ಕಷ್ಟವಾಗಿದ್ದುದರಿಂದಲೂ, "ಧರ್ಮರಾಯನಿಗೆ ನರಕ ದರ್ಶನವಾದಂತೆ ಸುಂದರರಾಜನಿಗೆ ಜೈಲು ದರ್ಶನ" ಎಂದು ಅವರು ತೀರ್ಮಾನಿಸಿದ್ದರು. ಜೈಲಿಗೆ ತಾವೇ ಭತ್ಯವನ್ನು ಕೊಡಬೇಕಾದುದರಿಂದಲೂ, ಜೈಲಿಗೆ, ಸಾಲ ತೆಗೆದುಕೊಂಡವ

ನನ್ನು ಕಳುಹಿಸುವುದರಿಂದ ಕೋರ್ಟಿನಲ್ಲಿ ಸಹ ತಮ್ಮ ಯೋಗ್ಯತೆಗೆ ಕುಂದಕ ಬರುವುದರಿಂದಲೂ ಆ ತೀರ್ಮಾನ ಅವರಿಗೆ ಅಷ್ಟು ಹಿತವಾಗಿರಲಿಲ್ಲ.

ಗುಮಾಸ್ತನ ಜತೆಯಲ್ಲಿ ದಾರಿಯಲ್ಲಿ ಹೋಗುತ್ತಾ ಅವರು "ವಾರಂಟಿನಲ್ಲಿ ಇರುವ ಹಣವಲ್ಲದೆ ಮೇಲೆ ಖರ್ಚಾಗಿರುವುದು ಎಷ್ಟನ್ನು ಈ ಕೊನೆಯ ಗಳಿಗೆಯಲ್ಲಿ ಹುಟ್ಟಿಸಬೇಕು? ಅವಕ್ಕೆ ಯಾವ್ಯಾವ ಸುಳ್ಳು ಲೆಕ್ಕ ಒದಗಿಸಬೇಕು. ಆ ಕಮಲಮ್ಮನನ್ನು ಹೇಗೆ ಒಪ್ಪಿಸಬೇಕು?" ಎಂದು ಯೋಚಿಸುತ್ತಿದ್ದರು. ಅವರು ಹಿಡಿಸುವ ವಾರಂಟ್ ಆಸಾಮಿಗಳ "ಕೇಸ್" ಗಳಲ್ಲೆಲ್ಲ ಸಾಧಾರಣವಾಗಿ ಹಣ, ಹೆಂಡತಿಯರ ಮೂಲಕವೇ ವಸೂಲಾಗುತ್ತಿದ್ದಿತು. ಹಾಗೆ ವಸೂಲಿ ಆಗುವ ಅವಕಾಶ ಇದ್ದರೇನೇ ಅವರು ವಾರಂಟಿನ ನಿಷ್ಠೂರಕ್ಕೆ ಹೋಗುತ್ತಿದ್ದರು. ಇಲ್ಲದಿದ್ದರೆ ಸುಖವಾಗಿ ಜಮೀನನ್ನು ಜಪ್ತಿ ಹರಾಜನ್ನು ಮಾಡಿಸುತ್ತಿದ್ದರು. "ಸರ್ವಸ್ಯಾಸ್ತ್ರೀಃ ಸರ್ವಸ್ಯ ಜಪ್ತ್ರೀಃ ಸರ್ವಮೇವತೇನಾಪ್ನೋತಿ ಸರ್ವಂ ಹರಾಜಯತಿ" ಎಂಬುದು ಅವರ ವಿನೋದವಚನವಾಗಿದ್ದಿತು. ಆದರೆ, ಸುಂದರರಾಜನ ಸಂದರ್ಭದಲ್ಲಿ ಅವನ ಹೆಂಡತಿಗೂ ಅವನಿಗೂ ಹೀಗೆ ವಿರಸವಾಗಿದ್ದುದರಿಂದಲೂ, ಅವಳಲ್ಲಿ ಯಾವ ಯಾವ ಒಡವೆಗಳಿದ್ದುವೋ ಅದು ಸಾಹುಕಾರರಿಗೆ ತಿಳಿಯದಿದ್ದುದರಿಂದಲೂ, ಅವರಿಗೆ ಹಣ ಇಷ್ಟು ಬೇಗ ಬರುವುದು ಅನುಮಾನವಾಗಿತ್ತು. ಕಮಲಮ್ಮ ಮಲ್ಲಿಗೆಹಳ್ಳಿಯಿಂದ ಬಂದುದನ್ನು ತಿಳಿದು ಬುದ್ಧಿವಂತರಾದ ಅವರಿಗೆ ಈಕೆ ಸೀತಾಲಕ್ಷ್ಮಿಯ ಪರವಾಗಿಯೇ ಬಂದಿರುವಳೆಂಬುದು ಗೊತ್ತಾಯಿತು. ತಮ್ಮಲ್ಲಿ ಯಾವ ಉತ್ತಮ ಗುಣಗಳಿಲ್ಲದಿದ್ದರೂ, ತಿರಸ್ಕೃತಳಾದ ಹೆಂಡತಿಯಾದರೂ ಗಂಡನಿಗಾಗಿ ಹೀಗೆ ಹಣ ಒದಗಿಸಿ ಕಳುಹಿಸಿದ ಸೀತಾಲಕ್ಷ್ಮಿಯಲ್ಲಿ, ಸಾಹುಕಾರರಿಗೆ ಗೌರವವುಂಟಾಯಿತು "ಇಂತಹ ಹೆಂಡತಿ ಇವನಿಗೆ ಇದ್ದಾಳಲ್ಲ" ಎಂದು ಸುಂದರರಾಜನಲ್ಲಿ ಅವರಿಗೆ ಸ್ವಲ್ಪ ಅಸೂಯೆಯೂ ಉಂಟಾಯಿತು.

ಸಾಹುಕಾರರು "ಹಣ ಇಷ್ಟು, ಲೆಕ್ಕ ಇಷ್ಟು" ಎಂದೆಲ್ಲ ಹೇಳುವುದಕ್ಕೆ ಮುಂಚಿತವಾಗಿಯೇ ಕಮಲಮ್ಮ, ತನ್ನಲ್ಲಿದ್ದ ಚಿನ್ನದ ಡಾಬನ್ನು ಅವರ ಕೈಗೆ ಹಾಕಿ "ಇದರಿಂದ ನಿಮ್ಮ ಹಣ ತೆಗೆದುಕೊಂಡು ಸುಂದರರಾಜನನ್ನು ಬಿಡುಗಡೆ ಮಾಡಿ! ಇದನ್ನು ನಾನು ಕೊಟ್ಟುದನ್ನೂ ಸುಂದರರಾಜನಿಗೆ ಹೇಳಬೇಡಿ" ಎಂದಳು. ಸಾಹುಕಾರರು ಕಮಲಮ್ಮನೊಂದಿಗೆ ಮಾತನಾಡು

ತ್ತಲೇ ಇದ್ದರೂ ಅವರ ಕೈ ಮಾತ್ರ ಡಾಬನ್ನು ತೂಕ ಮಾಡುತ್ತಲೇ ಇದ್ದಿತು. ಕಳ್ಳನ ಕೈಗೆ ಕೊಟ್ಟರೂ ತಮ್ಮ ಹಣಕ್ಕಿಂತ ಹೆಚ್ಚಾಗಿಯೇ ಅವರಿಂದ ಉತ್ಪತ್ತಿ ಯಾಗುವುದೆಂದು ಅವರಿಗೆ ಖಾತರಿಯಾಯಿತು. ಅವರು ಹೋಟಲಿಗೆ ಹಿಂದಿರುಗಿ ವಾರಂಟಿನಮೇಲೆ ಬರೆದುಕೊಟ್ಟು ಸುಂದರರಾಜನ ಕಣ್ಣಿಗೆ ಬೀಳದೆ ಹೊರಟುಹೋದರು. ಅಮೀನನು ಸುಂದರರಾಜನಿಗೆ "ಇವತ್ತು ನಿಮ್ಮನ್ನು ಕೋರ್ಟಿಗೆ ಹಾಜರ್ಮಾಡುವುದಿಲ್ಲ. ನಿಮಗೆ ಇಷ್ಟ ಬಂದೆಡೆ ಹೋಗಿ" ಎಂದು ಹೇಳಿ ಹೊರಟುಹೋದನು. ಕಮಲಮ್ಮನೂ ಸುಂದರರಾಜನನ್ನು ಕಾಣಿಸಿ ಕೊಳ್ಳದೆ ಮಲ್ಲಿಗೆಹಳ್ಳಿಗೆ ಹಿಂದಿರುಗಿದಳು. ಸುಂದರರಾಜನಿಗೆ ಯಾವುದೂ ಅರ್ಥವಾಗಲಿಲ್ಲ.

## ೨೧

ಸಾಹುಕಾರ ಅಪ್ಪಾಜಿಯವರು ಆ ಮಧ್ಯಾನ್ಹವೇ ರಂಭಾಪುರಿಗೆ ಹಿಂದಿರುಗಿದರು. ಸುಂದರರಾಜನನ್ನು ವಾರಂಟಿನಲ್ಲಿ ಹಿಡಿಸಿದ ವಿಚಾರ ಯಾರಿಗೂ ತಿಳಿಯಬಾರದೆಂಬುದು ಅವರ ಇಚ್ಛೆಯಾಗಿತ್ತು. ಘಾತುಕತನಕ್ಕೆ ಒಳ್ಳೆ ಸ್ವಭಾವದ ಮುಸುಕು ಒಂದು ಗುರಾಣಿ. ಅವರು ರಂಭಾಪುರಿಗೆ ಹೋಗುವ ವೇಳೆಗೆ ಆ ರಾತ್ರಿ ಅವರ ಮನೆಯಲ್ಲಿ ಕಳವಾಗಿದ್ದ ಸುದ್ದಿ, ಅವರಿಗೆ ತಿಳಿಯಿತು. ಆದರೆ ಅದು ಅಷ್ಟೊಂದು ದೊಡ್ಡ ಪ್ರಮಾಣದ ಕಳುವಾಗಿರಲಿಲ್ಲ. ಹಿಂದಲ ಮನೆಯಲ್ಲಿದ್ದ ಒಂದೆರಡು ದೇವರ ಪೂಜೆಯ ಬಟ್ಟಲು ಒಂದು ಸಣ್ಣತಟ್ಟೆ ಇವನ್ನು ಯಾರೋ ಹೊಡೆದುಕೊಂಡು ಹೋಗಿದ್ದರು. ಸಾಹುಕಾರರ ಮನೆಯವರು ಕಳುವನ್ನು ಇನ್ನೂ ಪ್ರಕಟಿಸಿರಲಿಲ್ಲ. ಅವರಿಗೆ ಯಾವುದನ್ನು ಮಾಡುವುದಕ್ಕೂ ಭಯ. ಅಲ್ಲದೆ ಮನೆಯ ಆಳು ಕರಿಯನ ಮೇಲೆಯೇ ಗುಮಾನಿ ಇದ್ದುದರಿಂದ ಅವರು ಸಾಹುಕಾರರು ಬರಲಿ ಎಂದುಕೊಂಡು ಕರಿಯನಿಗೆ ಸಹ ತಮ್ಮ ಅನುಮಾನವನ್ನು ಸೂಚಿಸದೆ ಕಾಯುತ್ತಿದ್ದರು.

ವಿಷಯ ತಿಳಿದ ಕೂಡಲೇ "ಇದು ಪೋಲೀಸಿಗೆ ತಿಳಿಸುವ ಕಳವಲ್ಲ. ಹೆದರಿಸಿದರೆ ಇಲ್ಲಿಯೇ ಮಾಲು ಸಿಕ್ಕುತ್ತೆ" ಎಂಬುದು ಸಾಹುಕಾರರಿಗೆ ನಂಬಿಕೆ ಯಾಯಿತು. ಅವರು ಕರಿಯನನ್ನು ಕರೆದು ವಿಚಾರಿಸಿದರು, ಗದರಿಸಿದರು, ಹೆದರಿಸಿದರು. ಕರಿಯನಮೇಲೆ ಆ ಬಗೆಯ ಆರೋಪ ಹಿಂದೆಂದೂ ಬಂದಿರ

ಲಿಲ್ಲ. ಆದರೆ, ಕರಿಯನದು ಯಾವಾಗಲೂ ದುಂದು ವೆಚ್ಚ, ಅವನಿಗೆ ಸಾಲ ವಿಲ್ಲದ ದಿನಗಳೇ ಇರಲಿಲ್ಲ. ಆದಕ್ಕೆ ಮುಖ್ಯ ಕಾರಣ ಅವನ ಹೆಂಡತಿ ಕೆಂಪಿ. ಕೆಂಪಿಯಂತಹ ಚೆಲುವೆ ರಂಭಾಪುರಿಯ ಸುತ್ತಲ ನೂರು ಗ್ರಾಮದಲ್ಲಿಯೂ ಇರಲಿಲ್ಲ. ಅವಳನ್ನು ಮದುವೆಯಾದಕೂಡಲೇ ಕರಿಯನ ವೆಚ್ಚ ಹೆಚ್ಚಾಗ ತೊಡಗಿತು. ಕೆಂಪಿ ಪಟ್ಟಣದ ಸೀಮೆಯವಳು. ಮೈಸೂರು, ಬೆಂಗಳೂರಿನಲ್ಲಿ ಇರಲು ಅರ್ಹಳಾದವಳು. ಅವಳ ಥಳಕು, ಬೆಡಗು, ನಾಟಕದ ಸ್ತ್ರೀಯರ ವೇಷವಾಗಿತ್ತು. ಕರಿಯ ಸುಮ್ಮನೆ ಅವಳ ಆಳಾಗಿ ಬಿದ್ದಿದ್ದನು. ಹೆಂಡತಿಯ ಮಾತು ಬಂದರೆ ಕರಿಯ "ಚಂದಾರಿ ಚೆಲ್ವಿ ಸೂರ್ಯನ ನಮ ಅವ್ಳೆ" ಎನ್ನು ತ್ತಿದ್ದನು. ಕೆಂಪಿ ಹಳ್ಳಿಯನ್ನು ಸೇರಿದ ಹೆಣ್ಣು ಆದರೂ ಯಾವ ಕಷ್ಟದ ಕೆಲಸವನ್ನೂ ಮಾಡುತ್ತಿರಲಿಲ್ಲ. ವ್ಯವಸಾಯಕ್ಕೆ ಸೇರಿದ ಗೊಬ್ಬರ ಹೊರು ವುದು, ಕಳೆ ಕೀಳುವುದು ಪೈರು ರೇವೆ ಮಾಡುವುದು, ಈ ಒಂದು ಕಾರ್ಯಕ್ಕೂ ಅವಳ ಮನಸ್ಸು ಮೈ ಓಡುತ್ತಿರಲಿಲ್ಲ. ಅವಳು ಮನೆಯಲ್ಲಿ ಅಡಿಗೆ ಕೆಲಸ ಮಾಡುತ್ತಿದ್ದಳು. ಗಂಡನಿಗೆ ಬಡಿಸಿ ನದಿಗೆ ಹೋಗಿ ಸೀರೆ ಒಗೆದು ಕೊಂಡು ಪಾತ್ರೆ ಬೆಳಗಿಕೊಂಡು ಬರುತ್ತಿದ್ದಳು. ಉಳಿದ ಕಾಲವನ್ನೆಲ್ಲ ನಿತ್ಯಾ ಅಲಂಕಾರಮಾಡಿಕೊಳ್ಳುವುದರಲ್ಲಿಯೇ ಕಳೆಯುತ್ತಿದ್ದಳು ಅವಳದು ನಿತ್ಯಾ ಒಂದೊಂದು ಹೊಸ ಥಳಕು. ರೈತನಾದ ಕರಿಯನ ಹೆಂಡತಿಯಾದರೂ ಆಕೆ ರೈತಗಿತ್ತಿಯಂತೆ ಕಾಣುತ್ತಿರಲಿಲ್ಲ. ಅವಳು ಕಡಿಮೆ ಬೆಲೆಯ ನಾಲ್ಕಾರು ಥಳಕಿನ ಸೀರೆಗಳನ್ನಿಟ್ಟುಕೊಂಡು, ಅವುಗಳನ್ನು ಗಳಿಗೆಗೆ ಒಂದೊಂದು ಸಲ ಉಡುತ್ತಾ ಬದಲಾಯಿಸುತ್ತಾ, ಜನಗಳ ಮನಸ್ಸನ್ನು ಆಕರ್ಷಿಸುತ್ತಿದ್ದಳು. ಅವಳಿಗೆ ಕಾಫಿಯ ಮತ್ತು ಕಾಡುಹರಟೆಯ ಚಪಲ ಹೆಚ್ಚಾಗಿದ್ದುದರಿಂದ ಅವಳು ಗುಂಡಣ್ಣನವರ ಮನೆಯ ಮುಸುರೆ ತಿಕ್ಕುವುದನ್ನು ಗೊತ್ತುಮಾಡಿ ಕೊಂಡಿದ್ದಳು. ಆದರಿಂದ ಅವಳಿಗೆ ಏನೂ ಸಂಪಾದನೆ ಇರಲಿಲ್ಲ. ಮನೆ ಯಲ್ಲುಂಟಾದ ಬೇಸರಿಕೆಯನ್ನು ಕಳೆದುಕೊಳ್ಳಲು ಮಾತನಾಡುವುದಕ್ಕೆ ಒಂದು ಜಾಗಕ್ಕಾಗಿ ಅವಳು, ಗುಂಡಣ್ಣನವರ ಮನೆಯಲ್ಲಿ ಬಂದು ಕೂರುತ್ತಿದ್ದಳು. ವ್ಯವಸಾಯದ ಕಾರ್ಯದಲ್ಲಿ ಹೆಂಡತಿ ಜತೆಯಾಗದಿದ್ದರೆ ಗಂಡನೊಬ್ಬನಿಂದಲೇ ವ್ಯವಸಾಯಮಾಡುವುದು ಸಾಧ್ಯವಿಲ್ಲ. ಹೆಂಡತಿಯು ಸಗಣಿಯನ್ನೂ ಗೊಬ್ಬ ರವನ್ನೂ ಹೊರಲು ಹಿಂದೆಗೆಯುತ್ತಿದ್ದುದರಿಂದ, ಕರಿಯ ತನ್ನ ಜಮೀನು

ಗಳನ್ನು ವಾರ ಸಾಗುವಳಿಗೆ ಕೊಟ್ಟು ತಾನೂ ಸಾಹುಕಾರರ ಮನೆಯಲ್ಲಿ ಕೆಲಸಕ್ಕೆ ಸೇರಿದ್ದನು. ಆದರೂ ಅವನಿಗೆ ಹೆಂಡತಿಯಿಂದ ವೆಚ್ಚ ಹೆಚ್ಚಾಗುತ್ತಿದ್ದುದರಿಂದ ಅವನ ಉತ್ಪತ್ತಿಯ ಮಾರ್ಗ ಜನರಿಗೆ ಯಾವಾಗಲೂ ಸಂದೇಹಾಸ್ಪದವಾಗಿಯೇ ಇತ್ತು.

ಬೆಳ್ಳಿಯ ಬಟ್ಟಲು ತಟ್ಟೆಗಳು ಕಣ್ಮರೆಯಾದುದನ್ನು ಕಂಡು ಸಾಹುಕಾರ್ ಅಪ್ಪಾಜಿಯವರು, ನಾಲ್ಕು ಮೈಲಿ ದೂರದಲ್ಲಿದ್ದ ಪೋಲೀಸ್ ಸ್ಟೇಶನ್‌ಗೆ ಹೋಗಿ ಕಳವಿನ ಅರ್ಜಿಯನ್ನು ಕೊಡದೆ, ಸುಮ್ಮನೆ ಒಬ್ಬ ದಫೆದಾರನನ್ನು ಕರತಂದರು. ದಫೆದಾರರು ಬಂದುದನ್ನು ಕಂಡು ಊರವರಿಗೆಲ್ಲ ಗಾಬರಿಯಾಯಿತು. ಸಾಹುಕಾರರು ಆಗಿಂದಾಗ್ಗೆ ತಮ್ಮ "ಜುಲುಮಿನ" ಕಾರ್ಯಗಳಿಗಾಗಿ ಹೀಗೆ ಪೋಲೀಸ್ ಸಿಬ್ಬಂದಿಗಳನ್ನು ಕರೆಸುತ್ತಿದ್ದುದು ವಾಡಿಕೆ. ಅದು ಎಷ್ಟರಮಟ್ಟಿಗೆ ಅಭ್ಯಾಸಕ್ಕೆ ಬಂದಿದ್ದಿತೆಂದರೆ, ಸಾಹುಕಾರರ ಕೆಲಸ ಇರಲಿ ಇಲ್ಲದಿರಲಿ ಆ ದಾರಿಯಲ್ಲಿ ಬಂದ ಪೋಲೀಸಿನವರು "ನಮಗೆ ಇಲ್ಲಿ ಒಂದು ಮನೆ ಇದೆಯೆಲ್ಲ" ಎಂದುಕೊಂಡು ಸಾಹುಕಾರರ ಮನೆಯಲ್ಲಿ ಆತಿಥ್ಯ ಸ್ವೀಕರಿಸಿ ಮುಂದಕ್ಕೆ ಹೋಗುತ್ತಿದ್ದರು. ಸಾಹುಕಾರರೇ ನ್ಯಾಯಾಧಿಪತಿಗಳು. ಆ ನ್ಯಾಯಾಂಗದ ಕಾರ್ಯಾಂಗವೇ ಪೋಲೀಸು. ಇಬ್ಬರಿಗೂ ಪಶುಬಲವೇ ಹೊರತು ಕಾನೂನಿನ ಬಲ ಯಾವುದೂ ಇರಲಿಲ್ಲ. ಈ ಎಲ್ಲ ಕಾರ್ಯಗಳನ್ನೂ ಸಾಹುಕಾರರು ದಫೆದಾರರ ದರ್ಜೆ ಅಥವ ಅದಕ್ಕಿಂತ ಕೆಳದರ್ಜೆಯ ನೌಕರರಿಂದ ಮಾಡಿಸುತ್ತಿದ್ದರೇ ಹೊರತು, ಮೇಲಿನವರಿಗೆ ಇದರ ಗಂಧ ಗಾಳಿ ಸಹ ಸೋಕುತ್ತಿರಲಿಲ್ಲ.

ದಫೆದಾರರು ಬಂದವರೇ ಸಾಹುಕಾರರ ಮನೆಯಲ್ಲಿಯೇ ಇದ್ದ ಕರಿಯನ ಮೇಲೆ ಕಳವನ್ನು ರುಜುವಾತುಮಾಡಿದರು. "ಈ ಮನೆಯಲ್ಲಿ ನೀನೊಬ್ಬನೇ ಆಳು. ಆದುದರಿಂದ ನೀನೇ ಕದ್ದಿರಬೇಕು. ನಿನ್ನನ್ನು ಪೋಲೀಸ್ ಸ್ಟೇಶನ್‌ಗೆ ಹಿಡಿದುಕೊಂಡು ಹೋಗುತ್ತೇನೆ" ಎಂದರು. ಕೇಳಿ ಕರಿಯನ ಕೈಕಾಲುಗಳು ಗಡಗಡನೆ ನಡುಗತೊಡಗಿದವು. ಹಿಂದೆ ಸಾಹುಕಾರರು ಪೋಲೀಸಿನವನನ್ನು ಕರೆದುಕೊಂಡು ಬಂದಿದ್ದಾಗ ಯಾರು ಯಾರಿಗೆ ಯಾವ ಯಾವ ಗತಿಯಾಯಿತೆಂಬುದು ಕರಿಯನಿಗೆ ಗೊತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಸಾಹುಕಾರರ ಕೋಪಕ್ಕೆ ಪಾತ್ರನಾದ ಚೆನ್ನ, ಸಾಹುಕಾರರ ಮನೆಯ ನೇಗ

ಲಿನ ಕಳವಿನ ಆಪಾದನೆಯಿಂದ ಆರು ತಿಂಗಳು ಸೆರೆವಾಸ ಅನುಭವಿಸಿದುದನ್ನು ಅವನು ಎಂದೂ ಮರೆಯುವಂತಿರಲಿಲ್ಲ. ಅನಂತರ ಆ ಸೇಗಿಲು ಸಾಹು ಕಾರರ ಮನೆಯಲ್ಲಿಯೇ ಸಿಕ್ಕಿತ್ತು. ಅಲ್ಲಿಂದ ಈಚೆಗೆ ಸಾಹುಕಾರರು ಏನು ಬೇಕಾದರೂ ಮಾಡಬಲ್ಲರೆಂಬ ಭಯ ಅವನಿಗೆ ಉಂಟಾಯಿತು. ಅವನು "ಸ್ವಾಮಿ, ದೇವರಾಣೆಗೂ ನನಗೆ ತಿಳಿಯದು. ನನ್ನಂತಹ ಬಡಪಾಯಿಗೆ ಬೆಳ್ಳಿ ಪಾತ್ರೆ ಯಾಕೆ? ಅದರಲ್ಲಿ ನಾನು ಯಾವ ಪಾಯಸ ಅಥವ ಹಾಲು ಹಾಕಬೇಕು? ನಮಗೇನು ಮಡಕೆ ಸಿಕ್ಕುವುದಿಲ್ಲವೆ? ಬೇಕಾದರೆ ಬಂದು ನನ್ನ ಮನೆಯನ್ನೆಲ್ಲ ಹುಡುಕಿ" ಎಂದನು. ದಫೇದಾರರಿಗೂ ಬೇಕಾಗಿದ್ದುದು ಅದೇಯೆ. ಅವರು ಸಾಹುಕಾರರೊಂದಿಗೆ ಕರಿಯನ ಮನೆಗೆ ಹೋದರು.

ಅದೊಂದು ಸಣ್ಣ ಗುಡಿಸಲು. ಅಲ್ಲಿ ಹುಡುಕಬೇಕಾದ ವಸ್ತುಗಳು ಯಾವುವೂ ಹೆಚ್ಚಾಗಿರಲಿಲ್ಲ. ಒಂದು ಚೀಲದಲ್ಲಿ ರಾಗಿ, ನಾಲ್ಕಾರು ಮಡಿಕೆ ಗಳು, ಊಟದ ತಣಿಗೆಗಳು, ಚಾಪೆ, ಕಂಬಳಿ, ನೋಡಿದಕೂಡಲೇ ಅವುಗಳಲ್ಲಿ ಕಳುವಾದ ವಸ್ತುಗಳು ಇಲ್ಲವೆಂಬುದು, ದಫೇದಾರರಿಗೂ ಸಾಹುಕಾರರಿಗೂ ಗೊತ್ತಾಯಿತು ಇನ್ನು ಹುಡುಕತಕ್ಕ ಸಾಮಾನು ಯಾವುದೂ ಇರಲಿಲ್ಲ. ಸಾಹುಕಾರರು ಇನ್ನಾವ ಉಪಾಯ ಯೋಚಿಸೋಣ ಎಂದು ಚಿಂತಾಕ್ರಾಂತ ರಾದರು. ದಫೇದಾರರೂ ಪೋಲೀಸಿನವರೂ ಸ್ವಾಭಾವಿಕವಾದ ಹೆಚ್ಚು ಚಾಕ ಚಕ್ಯತೆಯಿಂದ ಸುತ್ತಲೂ ನೋಡುತ್ತಿರುವಾಗ ಅಟ್ಟದಮೇಲಿದ್ದ ಒಂದು ಮರದಪೆಟ್ಟಿಗೆ ಅವರಿಗೆ ಕಾಣಿಸಿತು. ಆ ಪೆಟ್ಟಿಗೆ ಅಲ್ಲಿದ್ದುದು ಮೊದಲಿನಿಂದಲೂ ಕರಿಯನಿಗೆ ಗೊತ್ತಿತ್ತು. ಆದರೆ, ಅದು ತನ್ನ ಹೆಂಡತಿಯ ಪೆಟ್ಟಿಗೆಯಾದುದ ರಿಂದ ಅದರಮೇಲೆ ಸಾಹುಕಾರರಿಗೆ ಸಂಶಯವಿದ್ದಿರಲಾರದೆಂದು ಅವನು ಭಾವಿಸಿದ್ದನು. ಪೆಟ್ಟಿಗೆಯನ್ನು ನೋಡಿದಕೂಡಲೇ ದಫೇದಾರರು ಅದನ್ನು ಕೆಳಕ್ಕೆ ಇಳಿಸಿದರು. ಕರಿಯನು "ಇದು ನನ್ನ ಹೆಂಡತಿಯ ಪೆಟ್ಟಿಗೆ. ಬಂದಿರುವ ಕಳವಿನ ಆಪಾದನೆ ನನ್ನ ಮೇಲೆಯೇ ಹೊರತು ಅವಳ ಮೇಲೆ ಅಲ್ಲವಲ್ಲ" ಎಂದನು. ದಫೇದಾರನು "ನಿನ್ನ ಪಾಡಿಗೆ ಇರು" ಎಂದು ಹೇಳಿ ಪೆಟ್ಟಿಗೆಯ ಮುರುಕಲು ಬೀಗವನ್ನು ಕೈಯಿಂದಲೇ ಅಮುಕಿ ಮುರಿದು ಹಾಕಿದರು. ಸಾಹುಕಾರರಿಗೆ ಪೆಟ್ಟಿಗೆಯಲ್ಲಿ ತಮ್ಮ ಬೆಳ್ಳಿಯ ಪಾತ್ರೆಗಳು ಇರ ಬಹುದೆಂಬ ನಂಬಿಕೆಯಂತೂ ಇರಲಿಲ್ಲ. ದಫೇದಾರರು ಪೆಟ್ಟಿಗೆಯಲ್ಲಿದ್ದ

ಸಾಮಾನುಗಳನ್ನು ಕೆಳಕ್ಕೆ ಹಾಕತೊಡಗಿದರು. ಮೂರು ನಾಲ್ಕು ಹಳೆಯ ಮತ್ತು ಹೊಸ ಸೀರೆಗಳು. ಒಂದು ಕನ್ನಡಿ. ಆದರೆ, ಎಲ್ಲಕ್ಕಿಂತ ಹೆಚ್ಚಾಗಿ ದಫೆದಾರರಿಗೆ ಆಶ್ಚರ್ಯವಾದುದು ಆ ಪೆಟ್ಟಿಗೆಯಲ್ಲಿದ್ದ ಇನ್ನೊಂದು ಸಣ್ಣ ಪೆಟ್ಟಿಗೆ. ಆ ಪೆಟ್ಟಿಗೆ ಟಪಾಲಿನಲ್ಲಿ ಬಂದಿದ್ದುದಾಗಿದ್ದು ಅದರ ಕಟ್ಟನ್ನು ಒಡೆದಿರಲಿಲ್ಲ. ನಾಲ್ಕಾರು ದಿನಗಳ ಕೆಳಗೆ ಅದು ಬಂದಿದ್ದಿತೆಂಬುದು ಅದರ ಮೇಲಿನ ಟಪಾಲ್ ಮುದ್ರೆಯಿಂದ ಗೊತ್ತಾಗುತ್ತಿದ್ದಿತು. ಅದು ಇನ್ಶೂರ್ ಮಾಡಿದ "ಪ್ಯಾಕೆಟ್." ಬೆಂಗಳೂರಿನ ಚಿನ್ನ ಬೆಳ್ಳಿ ವ್ಯಾಪಾರಿಗಳಿಂದ ಬಂದಿದ್ದಿತು. ದಫೆದಾರರು ಆ ಪೆಟ್ಟಿಗೆಯ ಮೇಲಿದ್ದ ವಿಳಾಸವನ್ನು ನೋಡಿದರು. ಅದು ಗುಂಡಣ್ಣನವರ ಮಗ ಕೃಷ್ಣನ ವಿಳಾಸಕ್ಕೆ ಬಂದಿತ್ತು. ಆದರೆ, "ಪ್ಯಾಕೆಟ್" ನ್ನು ಒಡೆದೇ ಇರಲಿಲ್ಲ. ಅದರಲ್ಲಿ ತಮ್ಮ ತಟ್ಟೆ ಬಟ್ಟಲುಗಳು ಇಲ್ಲವೆಂಬುದು ಸಾಹುಕಾರರಿಗೆ ಗೊತ್ತಾದರೂ, ಆ ನಿರಾಶೆಗಿಂತ ಹೆಚ್ಚಾಗಿ ಈ ಹೊಸ ಪೆಟ್ಟಿಗೆಯನ್ನು ನೋಡಿ ಅವರಿಗೆ ಆಶ್ಚರ್ಯವುಂಟಾಯಿತು.

ಆ "ಪ್ಯಾಕೆಟ್" ಬೆಂಗಳೂರಿನಿಂದ ಬಂದಿದ್ದುದರಿಂದ ಕಳುವಾದ ವಸ್ತುಗಳಿಗಾಗಿ ಅದನ್ನು ಒಡೆಸಬೇಕಾದ ಆವಶ್ಯಕತೆ ಅವರಿಗೆ ಇರಲಿಲ್ಲ. ಆದರೆ ಪ್ಯಾಕೆಟ್ ಮೇಲೆ ಕೃಷ್ಣನ ವಿಳಾಸವಿದ್ದು ಅದು ಇನ್ನೂ ಮುಚ್ಚಿದ್ದಂತೆಯೇ ಕರಿಯನ ಪೆಟ್ಟಿಗೆಗೆ ಬಂದುದು ಅವರಿಗೆ ಆಶ್ಚರ್ಯವಾಯಿತು. ಆ ಪೆಟ್ಟಿಗೆ ಅಲ್ಲಿದ್ದುದು ಕರಿಯನಿಗೂ ಸಹ ಮೊದಲು ಗೊತ್ತಿದ್ದಂತೆ ತೋರಲಿಲ್ಲ. ಕರಿಯನಿಗೆ ಅಕ್ಷರ ಬರುತ್ತಿರಲಿಲ್ಲವಾಗಿ ಅವನು ಅದನ್ನೂ ಹೆಂಡತಿಯ ಒಂದು ಸಾಧಾರಣ ಪೆಟ್ಟಿಗೆಯೆಂದೇ ಭಾವಿಸಿದನು. ಸಾಹುಕಾರರು "ಇದು ಯಾರ ಪೆಟ್ಟಿಗೆ? ಏನಿದೆ ಇದರಲ್ಲಿ?" ಎಂದು ಕರಿಯನನ್ನು ಗದರಿಸುವ ಧ್ವನಿಯಲ್ಲಿಯೇ ಕೇಳಿದರು. ಮೊದಲು ಕರಿಯನಿಗೂ ಗಾಬರಿಯಾಯಿತು. ಕಳುವಾದ ವಸ್ತುವಿಗೂ ಆ ಪೆಟ್ಟಿಗೆಗೂ ಏನಾದರೂ ಸಂಬಂಧವಿರಬಹುದೆ? ಎಂದು ಅವನು ಹೆದರಿದನು. ಇದು ನನ್ನ ಹೆಂಡತಿಯ ಪೆಟ್ಟಿಗೆ; ಕುಂಕುಮ ಸಾದು ಏನನ್ನಾದರೂ ಇಟ್ಟುಕೊಂಡಿರಬಹುದು.. ಇದನ್ನು ನಾನು ಈಗಲೇ ನೋಡುತ್ತಿರುವುದು" ಎಂದನು.

ಆ ವೇಳೆಗೆ ಹೊಳೆಗೆ ಹೋಗಿದ್ದ ಕೆಂಪಿ, ಒಗೆದ ಬಟ್ಟೆಗಳ ಕುಕ್ಕೆ ಹೊತ್ತುಕೊಂಡು ಮನೆಗೆ ಹಿಂಗಿರುಗಿದಳು. ತನ್ನ ಪೆಟ್ಟಿಗೆ ಅಟ್ಟದಿಂದ ಕೆಳಕ್ಕೆ

ಬಂದಿದ್ದನ್ನೂ ಅದರಲ್ಲಿದ್ದ ಸಣ್ಣ ಪೆಟ್ಟಿಗೆಯನ್ನು ಸಾಹುಕಾರರು ಕೈಯಲ್ಲಿ ಹಿಡಿದಿದ್ದುದನ್ನೂ ಪೋಲೀಸಿನವನೂ, ತನ್ನ ಗಂಡನೂ, ಇದ್ದುದನ್ನೂ ಕಂಡು ಅವಳ ಮುಖ ವಿವರ್ಣವಾಯಿತು. ಬಿಸಿಲಿನಿಂದ ಕೆಂಪೇರಿದ್ದ ಅವಳ ಕೆನ್ನೆಗಳು ಭಯದಿಂದ ಗಳಿಗೆ ಗಳಿಗೆಗೆ ಕೆಂಪು, ಬಿಳುಪುಗಳ ವಿನ್ಯಾಸವನ್ನೇ ತೋರಿದುವು. ಸಾಹುಕಾರರ ಸನ್ನೆಯಮೇಲೆ ದಫೇದಾರರು ಪರಿಸ್ಥಿತಿಯನ್ನು ಪತ್ತೆಗೆ ತೆಗೆದುಕೊಂಡರು. ಹೆದರಿಕೆಯಿಂದ ಕೆಂಪಿಯ ಬಾಯಲ್ಲಿ ಮಾತೇ ಹೊರಡ ದಂತಾಗಿತ್ತು. ಅಲ್ಲಿ ಪೋಲೀಸ್ ಉಡುಪನ್ನು ಕಾಣದಿದ್ದಿದ್ದರೆ ಕೆಂಪಿ ಯಾವ ಪ್ರತ್ಯುತ್ತರವನ್ನೂ ಕೊಡುತ್ತಲೇ ಇರಲಿಲ್ಲ. ಅಥವ ಮೊದಲೇ ಪೋಲೀಸಿ ನವನನ್ನು ಕಂಡಿದ್ದರೂ ಅಲ್ಲಿಗೆ ಬರುತ್ತಲೇ ಇರಲಿಲ್ಲ. ಆದರೆ, ಈಗ ಅವಳ ಕಾಲುಗಳನ್ನು ನೆಲಕ್ಕೆ ಮೊಳೆಯಿಂದ ಹೊಡೆದಂತೆ ಆಗಿತ್ತು. ಆ ಸ್ಥಳ ಬಿಟ್ಟು ಹೋಗುವುದಕ್ಕೂ ಅವಳಿಗೆ ಶಕ್ತಿ ಇರಲಿಲ್ಲ. ಇದ್ದಕ್ಕಿದ್ದಂತೆ ದಫೆ ದಾರರು "ಈ ಪೆಟ್ಟಿಗೆ ನಿನಗೆ ಎಲ್ಲಿಂದ ಬಂತು" ಎಂದು ಗದರಿಸಿದರು. ಹೆದರುತ್ತಾ ಹೆದರುತ್ತಾ ಕೆಂಪಿ, ನಾಲ್ಕು ಪ್ರಶ್ನೆಗಳಿಗೆ ಒಂದು ಉತ್ತರ ಹೇಳ ತೊಡಗಿದಳು ದಫೆದಾರರು ಸರಿಯಾಗಿ ಪ್ರಶ್ನೆ ಹಾಕದಿದ್ದಾಗ ಸಾಹುಕಾರರೇ ಹಾಕುತ್ತಿದ್ದರು. ಕೆಂಪಿ—ಹೇಳಿದ ಜವಾಬಿನ ಸಾರಾಂಶ ಹೀಗೆ ಇತ್ತು. "ಕೃಷ್ಣಯ್ಯನವರು ನನ್ನ ಬೆನ್ನು ಹತ್ತಿದ್ದಾರೆ. ನಾನು ಬೇಡ ಅಂತ ಎಷ್ಟು ಹೇಳಿದರೂ ಕೇಳೋದಿಲ್ಲ. ನಾನು ಎಲ್ಲಿ ಹೋದರೆ ಅಲ್ಲಿ ನನ್ನ ಹಿಂದೆಯೇ ಇರುತ್ತಾರೆ. ಈಗ ಸುಮಾರು ಎಂಟು ದಿನಗಳ ಕೆಳಗೆ ಹೊಳೆಯಲ್ಲಿ ನಾನು ಒಬ್ಬಳೇ ಪಾತ್ರೆ ಬೆಳಗುತ್ತಿರುವಾಗ ಬಂದು ಈ ಪೆಟ್ಟಿಗೆ ನನ್ನ ಕೈಗೆ ಕೊಟ್ಟು "ಇದನ್ನು ಬಿಚ್ಚಿ ನೋಡು, ನನ್ನ ಸರ್ವಸ್ವವೂ ಇದರಲ್ಲಿದೆ. ನಿನ್ನಲ್ಲಿ ನನಗೆ ಎಷ್ಟು ಆಸೆ ಎಂಬುದು ಇದರಿಂದಲಾದರೂ ನಿನಗೆ ಗೊತ್ತಾಗಲಿ" ಎಂದರು. ಎರಡು ಜತೆ ಚಿನ್ನದ ಬಳೆ ಎಂದೂ ಹೇಳಿದರು. ನಾನು ಇವತ್ತು ನಾಳೆ ಒಡೆಯೋಣ ಅಂತ ಇಟ್ಟಿದ್ದೆ. ಪೊಟ್ಟ ಒಡೆಯೋದಕ್ಕೂ ಭಯವಾದ್ದರಿಂದ ಹಾಗೇ ಇಟ್ಟಿದ್ದೆ, ಬೇಕಾದರೆ ಈಗಲೂ ಕೃಷ್ಣಯ್ಯನವರಿಗೆ ಹಿಂದಕ್ಕೆ ಕೊಟ್ಟುಬಿಡುತ್ತೇನೆ. ಇದನ್ನು ನಾನು ಕೃಷ್ಣಯ್ಯನವರಿಂದ ಕದಿಯಲಿಲ್ಲ."

ದಫೆದಾರರು ಪೆಟ್ಟಿಗೆಯನ್ನು ಎರಡು ಮೂರು ಸಲ ತಿರುಗಿಸಿ ನೋಡಿ ದರು. ಪೋಸ್ಟಾಫೀಸಿನಿಂದ ಬಂದ ಪೆಟ್ಟಿಗೆಯನ್ನು ಒಡೆದು ಮತ್ತೆ ಹಾಗೆಯೇ

ಮೊಳೆಗಳನ್ನು ಹೊಡೆದಿರುವುದು ಅವರಿಗೆ ಕಾಣಿಸಿತು. ಕೃಷ್ಣ, ಒಡೆದು ನೋಡಿ ಮತ್ತೆ ಮೊಳೆಗಳನ್ನು ಹಾಗೆಯೇ ಅಮುಕಿ ಕೊಟ್ಟಿದ್ದಾನೆಂಬುದು ಅವರಿಗೆ ಗೊತ್ತಾಯಿತು. ಬೆಂಗಳೂರಿನಿಂದ ತರಿಸಿದವನು ಅದನ್ನು ಒಡೆದು ನೋಡದೆ ಇರುತ್ತಾನೆಯೆ? ನೋಡಿಬಿಟ್ಟು, ಕೆಂಪಿಗೆ ಆಶ್ಚರ್ಯ ಆನಂದ ಇನ್ನೂ ಹೆಚ್ಚಾಗಲೆಂದೂ, ಅದನ್ನು ಯಾರೂ ಬಿಚ್ಚಿ ನೋಡಿಲ್ಲವೆಂದೂ ಅವಳೇ ಮೊದಲು ಬಿಚ್ಚುವವಳೆಂದೂ ಹೊಸಾಹೊಸದೆಂದೂ ತೋರಿಸುವುದಕ್ಕಾಗಿ ಕೃಷ್ಣ "ಪ್ಯಾಕೆಟ್" ನ್ನು ಮೊದಲಿನಂತೆ ಮೊಳೆ ಹೊಡೆದು ಕೆಂಪಿಗೆ ಕೊಟ್ಟಿರುವನೆಂದು, ಮನುಷ್ಯ ಸ್ವಭಾವವನ್ನರಿತ ದಫೆದಾರರಿಗೆ ಗೊತ್ತಾಯಿತು.

ದಫೆದಾರರೂ, ಸಾಹುಕಾರರೂ ಹೀಗೆ ವಿಚಾರಣೆ ಮಾಡುತ್ತಿರುವಾಗ ಗಂಡನ ಮುಖದಮೇಲೆ ಆಗುತ್ತಿದ್ದ ಬದಲಾವಣೆಯನ್ನು ಕೆಂಪಿ ಭಯದಿಂದ ಗಮನಿಸುತ್ತಿದ್ದಳು. ಕರಿಯನಿಗೆ, ಕಳುವಾಗಲಿ ಅಥವ ತನ್ನ ಮೇಲೆ ಬಂದಿದ್ದ ಕಳವಿನ ಆಪಾದನೆಯಾಗಲೀ ನೆನಪಿದ್ದಂತೆ ತೋರಲಿಲ್ಲ. ಕೋಪ ಖೇದಗಳಿಂದ ಅವನ ಕಣ್ಣು ಕೆಂಪಗಾಗಿತ್ತು. ಅಸೂಯೆಯಿಂದ ಮೈ ಥರಥರನೆ ನಡುಗುತ್ತಿತ್ತು. ಅವನು ಕೆಂಪಿಯನ್ನು ನುಂಗುವಂತೆಯೇ ಅವಳ ಕಡೆ ನೋಡುತ್ತಿದ್ದನು. ದಫೆದಾರರು ಆ ಪ್ಯಾಕೆಟನ್ನು ಬಿಚ್ಚಿದರು. ಕೆಂಪಿ ಹೇಳಿದ್ದಂತೆ ಅದರಲ್ಲಿ ಎರಡು ಜತೆ ಥಳಥಳಿಸುವ ಚಿನ್ನದ ಬಳೆಗಳಿದ್ದವು ದಫೆದಾರರು ಆ ಪೆಟ್ಟಿಗೆಯಲ್ಲಿದ್ದ ಕಾಗದ ನೋಡಿದರು ಅದೊಂದು ಲೆಕ್ಕಾಚಾರದ ಪಟ್ಟಿ. ಅದರಲ್ಲಿ ಕೃಷ್ಣನಿಂದ ಜಮ ಹನ್ನೊಂದುವರೆ ತೊಲದ ಸರಪಣಿ ಕರಗಿಸಿದ ನಂತರ ಕೊಳೆ "ತೇಮಾನ" ಹೋಗ್ತ ಹನ್ನೊಂದುಕಾಲು ತೊಲ, ಅದಕ್ಕೆ ಎರಡು ಜತೆ ಬಳೆಗಳು. ಕೂಲಿ ಹದಿನಾಲ್ಕು ರೂಪಾಯಿ." ಬಳೆಗಳ ನಿಜವಾದ ತೂಕ ತಿಳಿಯಲೆಂದು ಕೃಷ್ಣ ಆ ಪಟ್ಟಿಯನ್ನೂ ಅದರಲ್ಲಿಯೇ ಇಟ್ಟಿದ್ದನೆಂದು ಕಾಣುತ್ತದೆ

ದಫೆದಾರರಿಗೆ ಆ 'ಬಿಲ್' ನ್ನು ನೋಡಿ ಹೆಚ್ಚಿಗೆ ಏನೂ ಅರ್ಥವಾಗದಿದ್ದರೂ ಸಾಹುಕಾರರಿಗೆ ಮಾತ್ರ ಮುಖದಮೇಲೆ ತಿಳಿವಿನ ಬೆಳಕು ಹರಿಯಿತು. ಗುಂಡಣ್ಣನವರ ಮನೆಯಲ್ಲಿ ಹಿಂದೆ ಕೃಷ್ಣನ ಹೆಂಡತಿಯ ಸರ ಕಳವಾದುದಕ್ಕೂ ಇದಕ್ಕೂ ಸಂಬಂಧ ಅವರಿಗೆ ಸುಲಭವಾಗಿ ಗೊತ್ತಾಯಿತು. ಕೆಂಪಿಯ ಆಸೆಯಿಂದ ಕೃಷ್ಣನೇ ಹೆಂಡತಿಯ ಒಡವೆ ಕದ್ದು ಅದನ್ನು ಬದಲಾಯಿಸಿ ತನಗೆ

ೀಕಾದ ಹೆಣ್ಣಿಗೆ ಕೊಟ್ಟಿದ್ದ, ಸಾಲದುದಕ್ಕೆ ಕಳುವಿನ ಅಪಾದನೆಯನ್ನೂ
ುಂದರರಾಜನ ಹೆಂಡತಿ ಸೀತಾಲಕ್ಷ್ಮಿಯ ತಲೆಯ ಮೇಲೆ ಹೊರಿಸಿದ್ದ.
ಾಹುಕಾರರಿಗೆ ಸೀತಾಲಕ್ಷ್ಮಿಯ ಮೇಲೆ ಕನಿಕರವೇನೂ ಇರಲಿಲ್ಲ. ಅವರಿಗೆ
್ವಭಾವಿಕವಾಗಿಯೇ ಯಾರಲ್ಲಿಯೂ ಕನಿಕರವಿರುತ್ತಿರಲಿಲ್ಲ. ಆದರೆ ಅವರಿಗೆ
ುಂಡಣ್ಣನ ಮನೆಯವರ ಮೇಲೆಲ್ಲ, ಹಣದ ಕಾರಣದಿಂದ ದ್ವೇಷವಿದ್ದುದರಿಂದ
ಷ್ಣನ ಅಯೋಗ್ಯತೆಯನ್ನು ಪ್ರಕಟಿಸುವುದೇ ಅವರಿಗೆ ಒಂದು ಔತಣವಾ
ಾತು. ಭಯದಿಂದ ನಡುಗತ್ತಿದ್ದ ಕೆಂಪಿಯನ್ನೂ ಕೋಪದಿಂದಲೂ ಅವ
ಾನದಿಂದಲೂ ನಡುಗುತ್ತಿದ್ದ ಕರಿಯನನ್ನೂ ಅವರು ಎಳೆದುಕೊಂಡು ದಫೆ
ಾರರೊಂದಿಗೆ ಪೆಟ್ಟಿಗೆ ಸಮೇತ ಗುಂಡಣ್ಣನವರ ಮನೆಗೆ ಹೊರಟರು. ದಾರಿ
ಲ್ಲಿ ಸಿಕ್ಕ ಸಿಕ್ಕವರಿಗೆಲ್ಲ ಅವರು "ಕಳ್ಳನು ಸಿಕ್ಕಿದ ಬನ್ನಿ. ಈಗ ಎಲ್ಲ ಸ್ಪಷ್ಟ
ಾಗಿ ಹೋಯಿತು" ಎಂದು ಹೇಳಿಕೊಂಡು ಹೊರಟರು. ಅವರೆಲ್ಲ ಸಾಹು
ಾರರ ಬೆಳ್ಳಿ ತಟ್ಟೆಗಳು ಕರಿಯನಿಂದ ಪತ್ತೆಯಾದುವೆಂದು ಭಾವಿಸಿದರು.
ದರೆ ಸಾಹುಕಾರರ ಮನಸ್ಸಿನಲ್ಲಿದ್ದ ಕಳುವೇ ಬೇರೆ; ಕಳ್ಳನೇ ಬೇರೆ. ಅಂತೂ
ಂದೆರಡು ಗಳಿಗೆಗಳೊಳಗಾಗಿ ಊರಿನ ಜನರೆಲ್ಲ ಗುಂಡಣ್ಣನವರ ಜಗಲಿ
ೇಲೆ ಸೇರಿದರು. ವಿಷಯವೇನೆಂಬುದು ಸ್ಪಷ್ಟವಾಗಿ ಯಾರೊಬ್ಬರಿಗೂ
ಳಿದಿರಲಿಲ್ಲ.

ಗುಂಡಣ್ಣನವರು ಜಗಲಿಯ ಮೇಲೆಯೇ ಕುಳಿತಿದ್ದರು. ಸಾಹುಕಾ
ು, ಕರಿಯ ಕೆಂಪಿ ಪೋಲೀಸಿನವರು ಇವರನ್ನೆಲ್ಲ ನೋಡಿ ಅವರೂ ಇತರ
ಂತೆ ಸಾಹುಕಾರರ ಬೆಳ್ಳಿ ತಟ್ಟೆ ಬಟ್ಟಲು ಕರಿಯನಲ್ಲಿ ಸಿಕ್ಕಿರಬಹುದೆಂದು
ಾವಿಸಿದರು. ಆದರೆ ಜನರೆಲ್ಲ ಬಂದು ತಮ್ಮ ಜಗಲಿ ಸೇರಿದಾಗ ಅನೇಕ
ನಿರೀಕ್ಷಿತ ಅನಾಹುತಗಳನ್ನು ಎದುರಿಸಿ ಅಭ್ಯಾಸವಾಗಿದ್ದ ಅವರಿಗೆ, ಇದೇನೊ
ಂದು ಹೊಸ ಅಪಾಯ ಎಂಬುದು ಸ್ಪಷ್ಟವಾಯಿತು. ಕೆಂಪಿ, ಗುಂಡಣ್ಣ
ನವರ ಮನೆಯೊಳಕ್ಕೆ ಹೋಗಿ ಅಳುತ್ತಾ ಕುಳಿತುಬಿಟ್ಟಳು. ಕೃಷ್ಣ ಮನೆಯಲ್ಲಿ
ರಲಿಲ್ಲ. ಕರಿಯನು ಗುಡುಗುವ ಧ್ವನಿಯಲ್ಲಿ ಗುಂಡಣ್ಣನವರನ್ನು "ಕೃಷ್ಣ
್ಯನವರು ಎಲ್ಲಿ?" ಎಂದು ಕೇಳಿದನು. ಗುಂಡಣ್ಣನವರು "ಯಾಕೆ
ಾಕೆ?" ಎಂದು ಮೃದುವಾಗಿಯೇ ವಿಚಾರಿಸಿದರು. ವಯಸ್ಸಿನಿಂದಲೂ
ಡತೆಯಿಂದಲೂ ಗೌರವಾರ್ಹರಾದ ಅವರನ್ನು ಕಂಡು, ಬಂದಿದ್ದವರ ವೇಗ

ಸ್ವಲ್ಪ ಕಡಿಮೆಯಾಯಿತು. ಅನಂತರ ನಿಧಾನವಾಗಿ ಸಾಹುಕಾರರೇ ಆ ಪ್ಯಾಕೆಟ್‌ನ್ನು ಗುಂಡಣ್ಣನವರ ಕೈಗೆ ಕೊಟ್ಟರು. ಮೊದಲು ಗುಂಡಣ್ಣನವರಿಗೆ ಅರ್ಥವಾಗಲಿಲ್ಲ. ಆದರೆ ಸಾಹುಕಾರರು ಒಂದೇ ಒಂದು ಮಾತಿನಲ್ಲಿ ಸೂಚನೆ ಕೊಟ್ಟ ಕೂಡಲೇ ಅವರಿಗೆ ವಿಷಯಗಳೆಲ್ಲ ಸ್ಪಷ್ಟವಾಗಿ ಬೆಳ್ಳಂಬೆಳಕಾಗಿಯೇ ಅರ್ಥವಾದುವು. ದಾರಿದ್ರ್ಯದಲ್ಲಿದ್ದರೂ ಸ್ವಭಾವದಿಂದ ಸಾತ್ವಿಕರೂ ಧರ್ಮಬುದ್ಧಿಯುಳ್ಳವರೂ ಆದ ಅವರಿಗೆ, ತುಂಬ ನಾಚಿಕೆಯೂ ಬಾಳಿನಲ್ಲಿ ಬೇಸರಿಕೆ ಜಿಗುಪ್ಸೆಗಳೂ ಉಂಟಾದುವು. ಕರಿಯನು ಬಾಯಿಗೆ ಬಂದಂತೆ ರೇಗಾಡಿದನು. ಸಾಹುಕಾರರು ಪೆಟ್ಟಿಗೆಯನ್ನು ಗುಂಡಣ್ಣನವರಿಗೆ ಕೊಟ್ಟು ಬಿಟ್ಟರು.

ಒಂದು ಗಳಿಗೆಯನಂತರ ಎಲ್ಲರೂ ಗುಂಡಣ್ಣನವರ ಮನೆ ಬಿಟ್ಟು ಕದಲಿದರು. ಕೆಂಪಿ ಮಾತ್ರ ಒಳಗೆ ಅಳುತ್ತಲೇ ಕುಳಿತಿದ್ದಳು. ಗುಂಡಣ್ಣನವರು ಕೃಷ್ಣನ ಹೆಂಡತಿಯನ್ನು ಕರೆದು ಪೆಟ್ಟಿಗೆಯನ್ನು ಅವಳ ಕೈಗೆ ಕೊಟ್ಟು "ನಿನ್ನ ಸರ ಹೋಗಿದ್ದ ದಾರಿ ಈಗಲಾದರೂ ತಿಳಿಯಿತೆ? ಅನ್ಯಾಯವಾಗಿ ಸುಮ್ಮನೆ ಆ ಬಡವಾಯಿಯ (ಸೀತಾಲಕ್ಷ್ಮಿ) ತಲೆಗೆ ಪಾಪ ಕಟ್ಟಿದ್ದೀರಿ" ಎಂದು ಹೇಳಿದರು. ಮಹಾಲಕ್ಷ್ಮಿಗೆ ಒಂದು ಕಡೆ ಒಡವೆ ಸಿಕ್ಕಿದ ಸಂತೋಷ ಮತ್ತೊಂದು ಕಡೆ ಗಂಡನು ತನಗೆ ಹೀಗೆ ಮೋಸಮಾಡಿದನಲ್ಲ" ಎಂಬ ದುಃಖ. ಸಂತೋಷಕ್ಕಿಂತ ಹೆಚ್ಚಾಗಿ ದುಃಖವೇ ಹೆಚ್ಚಾದುವನ್ನು ಅವಳು ಅನುಭವಿಸಿದಳು. ಇದುವರೆಗೆ ಒಡವೆ ಹೋಗಿದ್ದರೂ ಗಂಡ ತನ್ನಲ್ಲಿ ಪ್ರಾಣವುಳ್ಳವನಾಗಿದ್ದಾನೆಂದು ಅವಳು ಭಾವಿಸಿದಳು. ಬಡತನದಲ್ಲಿಯೂ ಅದೇ ಅವಳ ಸಂಸಾರದ ಸಂಜೀವಿನಿಯಾಗಿತ್ತು. ಈಗ ಒಡವೆ ಸಿಕ್ಕಿತು. ಆದರೆ ಗಂಡ ಅವರೊಂದಿಗೆ, ತನ್ನಿಂದ ದೂರನಾಗಿದ್ದಾನೆಂಬುದು ಆಕೆಗೆ ತಿಳಿಯಿತು.. ಈಗ ಅವಳಿಗೆ ತನ್ನ ಸರ ಬಂದಿದ್ದರೂ, ಸರ ಹೋದ ದಿನ ಆದುದರ ಹತ್ತರಷ್ಟು ದುಃಖವುಂಟಾಯಿತು. ಹೋಗಿದ್ದ ಸರವನ್ನು ಮತ್ತೆ ಸಂಪಾದಿಸಬಹುದಾಗಿತ್ತು. ಅಥವ ಹೋಗಿದ್ದರೂ ಚಿಂತೆ ಇರಲಿಲ್ಲ. ಆದರೆ ಹೋದ ಗಂಡನನ್ನ ಮತ್ತೆ ಸಂಪಾದಿಸುವುದೆಂತು? ಮಹಾಲಕ್ಷ್ಮಿಗೆ ಏನು ಮಾಡಿದರೂ ತಡೆಯದಷ್ಟು ಅಳು ಬಂದಿತು. ಅವಳ ದುಃಖದ ಆವೇಗವನ್ನು ನೋಡಿ ಕೆಂಪಿಗೆ ಸಹ ಗಾಬರಿಯಾಯಿತು. ಕೆಂಪಿ ಆ ಸ್ಥಳವನ್ನು ಬಿಟ್ಟು, ನಿಧಾನ

ವಾಗಿ ಮನೆಯ ಕಡೆಗೆ ಕಾಲ್ತೆಗೆದಳು. ಮಹಾಲಕ್ಷ್ಮಿ ಅಳುತ್ತಾ ಹೋಗಿ ತನ್ನ ಕೊಠಡಿಯಲ್ಲಿ ಬಿದ್ದುಕೊಂಡಳು.

ಆ ಕೊಠಡಿ ಕೃಷ್ಣನ ಕೊಠಡಿ; ಒಂದೇ ಒಂದು ಸಣ್ಣ ಕಿಟಕಿಯಿದ್ದ ಆ ಅಂಧಕಾರಮಯವಾದ ಕೋಣೆಗೆ ಮಹಾಲಕ್ಷ್ಮಿ ಹಗಲು ಹೊತ್ತು ಹೋಗುತ್ತಲೇ ಇರಲಿಲ್ಲ. ಅಲ್ಲಿದ್ದುದು ಹಾಸಿಗೆ ಮತ್ತು ಕೃಷ್ಣನ ಒಂದು ಟ್ರಂಕು. ಹಿಂದೆ ಕೃಷ್ಣ ಟ್ರಂಕಿನ ಬೀಗದಕೈಯನ್ನು ಎಲ್ಲಿ ಅಂದರೆ ಅಲ್ಲಿ ಹಾಕಿಬಿಡುತ್ತಿದ್ದನು. ಆದರೆ ಈಚೆಗೆ ೨-೩ ತಿಂಗಳುಗಳಿಂದ, ಸೀತಾಲಕ್ಷ್ಮಿ ಊರಿಗೆ ಬಂದನಂತರ ಕೃಷ್ಣ ಯಾವಾಗಲೂ ಟ್ರಂಕಿಗೆ ಬೀಗ ಹಾಕಿ ಬೀಗದಕೈಯನ್ನು ತನ್ನ ಜನಿವಾರದಲ್ಲಿ ಕಟ್ಟಿಕೊಂಡಿರುತ್ತಿದ್ದನು. ಪೆಟ್ಟಿಗೆಯ ಬೀಗವನ್ನೂ ಸಹ ಅವನು ಇತರರ ಎದುರಿಗೆ ತೆರೆಯುತ್ತಿರಲಿಲ್ಲ. ಬೀಗ ತೆರೆದು ಅವನು ಪೆಟ್ಟಿಗೆ ಮುಂದೆ ಕುಳಿತಿರುವಾಗ ಯಾರಾದರೂ ಬಂದರೆ, ಮಹಾಲಕ್ಷ್ಮಿ ಬಂದರೂ ಸರಿಯೇ — ಬೆಚ್ಚಿಬಿದ್ದವನಂತೆ ಸರಕ್ಕನೆ ಬೀಗ ಹಾಕಿಬಿಡುತ್ತಿದ್ದನು. ಒಂದೊಂದು ಸಲ 'ಮಹಾಲಕ್ಷ್ಮಿ "ಏನು ಮಹಾ ಅಲ್ಲಿರುವ ನಿಧಿ. ಒಂದು ಗಳಿಗೆಯೂ ಬೀಗ ಹಾಕುವುದನ್ನು ಮರೆಯುವುದಿಲ್ಲವಲ್ಲ ?" ಎನ್ನುತ್ತಿದ್ದಳು. ಕೃಷ್ಣನು ಕೋಪದಿಂದಲೇ "ಅದನ್ನೆಲ್ಲ ಕಟ್ಟಿಕೊಂಡು ನಿನಗೇನು" ಎಂದಿದ್ದನು. "ಈ ಸಣ್ಣ ಮಾತಿಗೆ ಇವರಿಗ್ಯಾಕೆ ಇಷ್ಟು ಕೋಪ" ಎಂಬುದು ಮಹಾಲಕ್ಷ್ಮಿಗೆ ಅರ್ಥವಾಗಿರಲಿಲ್ಲ.

ಇಂದು ಮಹಾಲಕ್ಷ್ಮಿ ಅಳುತ್ತಾ ಹಾಸಿಗೆ ಒರಗಿಕೊಂಡು ಬಿದ್ದಿದ್ದವಳು ಸ್ವಾಭಾವಿಕವಾಗಿ ಕೃಷ್ಣನ ಟ್ರಂಕಿನ ಕಡೆ ನೋಡಿದಳು. ಕೃಷ್ಣ ಆತುರದಲ್ಲಿ ಬೀಗ ಹಾಕಿದಾಗ ಸರಿಯಾಗಿ ಹಾಕಿರಲಿಲ್ಲವೊ ಏನೋ? ಅಂತೂ ಬೀಗ ತೆರೆದು, ಚಿಲಕದಲ್ಲಿ ಅಲುಗಾಡುತ್ತಿತ್ತು. ಅದು ಅಮುಕಿದರೆ ಹಾಕಿಕೊಳ್ಳುವ ಬೀಗವಾದುದರಿಂದ ಕೃಷ್ಣ ಅದನ್ನು ಸರಿಯಾಗಿ ಅಮುಕಿರಲಿಲ್ಲ. ಬೀಗ ತೆರೆದಿದ್ದುದು ಮಹಾಲಕ್ಷ್ಮಿಯ ಕಣ್ಣಿಗೆ ಬಿದ್ದರೂ ಮೊದಲು ಮೊದಲು ಅವಳು ಅದನ್ನು ಉದಾಸೀನಳಾಗಿ ನೋಡಿದಳು. ಹಾಗೆಯೇ ನೋಡುತ್ತಿದ್ದಂತೆಯೇ ಅವಳ ಕಣ್ಣುಗಳಲ್ಲಿ ಇದ್ದಕ್ಕಿದ್ದಂತೆಯೇ ಒಂದು ಬೆಳಕು ಹೊಳೆಯಿತು. ಕೃಷ್ಣನಿಗೆ ಬೀಗದಮೇಲೆ ಯಾವಾಗಲೂ ಇದ್ದ ಎಚ್ಚರಿಕೆ ಅವಳಿಗೆ ಜ್ಞಾಪಕ ಬಂದು, ಇದರಲ್ಲಿರುವ ಅಂತಹ ಪದಾರ್ಥತಾನೆ ಏನು ಎಂದು ಅವಳು ಚಿಂತಿ

ಸಿದಳು. ಕೃಷ್ಣನ ಆಸುರೀ ಭಾವನೆಯಿಂದ ಆ ಗಳಿಗೆಯಲ್ಲಿ ಅವಳಿಗೆ ಕೃಷ್ಣನ ಮೇಲೆ ತುಂಬ ಕೋಪವೂ ಜಿಗುಪ್ಸೆಯೂ ಉಂಟಾಗಿತ್ತು, ಅವಳು ಪೆಟ್ಟಿಗೆಯ ಮುಂದೆ ಕುಳಿತು ಅದರ ಮುಚ್ಚಳ ತೆರೆದು ಒಳಗಿದ್ದ ಪದಾರ್ಥಗಳನ್ನು ನೋಡತೊಡಗಿದಳು ಆ ಪೆಟ್ಟಿಗೆಯಲ್ಲಿ ಅಂತಹ ಅಪರೂಪವಸ್ತು ಯಾವುದೂ ಇರಲಿಲ್ಲ. ಹಿಂದಲಕಾಲದ ಹರಿದ ಒಂದು ಜರಿಯಪಂಚೆ, ಕೆಟ್ಟುಹೋಗಿದ್ದ ಹಳೆಯ ಫೌಂಟನ್‌ಪೆನ್, ಇನ್ಶುರೆನ್ಸ್ ಆಫೀಸಿನ ಎರಡು ಕವರುಗಳು. "ಇಷ್ಟಕ್ಕೆ ಯಾಕೆ ಇಷ್ಟುಗುಟ್ಟು?" ಎಂದುಕೊಂಡು ಮಹಾಲಕ್ಷ್ಮಿ ಪೆಟ್ಟಿಗೆಯ ಬಾಗಿಲನ್ನು ಮುಚ್ಚಿದಳು. ಹಾಗೆ ಮುಚ್ಚುವಾಗ ಆ ಮುಚ್ಚಳದ ಒಳಗಡೆ, ಕಾನಿಯಲ್ಲಿ ಕಾಗದ ಸಿಕ್ಕಿಸುವುವಕ್ಕೆ ಮಾಡಿದ್ದ ಸ್ಥಳದಲ್ಲಿದ್ದ ಒಂದು ಲಕ್ಕೋಟೆ ಅವಳ ಕಣ್ಣಿಗೆ ಬಿತ್ತು. ಮಹಾಲಕ್ಷ್ಮಿ ಅದೂ ಒಂದು ಹಳೆಯ ಕೆಲಸಕ್ಕೆ ಬಾರದ ಕಾಗದವೆಂದೇ ತಿಳಿದು ನೋಡೋಣ ಎಂದು ತೆಗೆದುಕೊಂಡು ಲಕ್ಕೋಟೆಯನ್ನು ಕೆಳಕ್ಕೆ ಒದರಿದಳು. ಅದರೊಳಗಿನಿಂದ ಎರಡು ಕಾಗದಗಳು ಕೆಳಗೆ ಬಿದ್ದವು. ಮೊದಲನೆಯದು ಸತ್ಯನಾಥನಾ ಜ್ಯುಯಲರಿ ಮಾರ್ಟ್‌ನ ಕಾಗದ; ಕನ್ನಡದಲ್ಲಿ ದಪ್ಪ ದಪ್ಪ ಅಕ್ಷರದಲ್ಲಿ ಕೃಷ್ಣನ ಹೆಸರಿಗೆ ಬರೆದಿತ್ತು. "ನಿಮ್ಮ ಸರ, ನೀವು ಹೇಳಿದಂತೆ ಹನ್ನೆರಡು ತೊಲ ಇಲ್ಲ. ಹನ್ನೊಂದುವರೆ ತೊಲೆ ಮಾತ್ರ ಇದೆ. ನಿಮ್ಮ ಆರ್ಡರಿನಂತೆ ಎರಡು ಜತೆ ಬಹಳ ನವೀನ ಪ್ಯಾಟರ್ನ್ ಬಳೆ ಮಾಡಿಸಿ ಕಳುಹಿಸಿದ್ದೇವೆ. ಕೂಲಿಗೆ ಹನ್ನೆರಡು ರೂಪಾಯಿ ಕೊಟ್ಟಿದೆ. ಇದಲ್ಲದೆ ನೀವು ಇಲ್ಲಿ ಬಂದಿದ್ದಾಗ್ಗೆ ನಮ್ಮ ಸ್ಟೇಶನರಿ ಬ್ರಾಂಚ್‌ನಲ್ಲಿ ತೆಗೆದುಕೊಂಡ ಟಾಯಿಲೆಟ್ ಸಾಬೂನು, ಸುಗಂಧ ಕೇಶತೈಲ, ಈವನಿಂಗ್ ಇನ್‌ಸ್ಪ್ಯಾರಿಸ್ ಸೆಂಟ್, ಹ್ಯಾಂಡ್‌ಕರಚಿಪ್, ದಂತದ ಬಾಚಣಿಗೆಗಳು, ಕನ್ನಡಿ ಇವುಗಳ ಬೆಲೆ ನಲವತ್ತೈದು ರೂಪಾಯಿ ಆಗಿದೆ. ಆ ಬಿಲ್‌ನ್ನೂ ಕಳುಹಿಸಿದ್ದೇವೆ. ಈ ಅರವತ್ತೊಂದು ರೂಪಾಯಿಗಳನ್ನು ಕಳುಹಿಸುವುದು."

ಎರಡನೆಯ ಕಾಗದ ಆ ಟಾಯಿಲೆಟ್ ಪದಾರ್ಥಗಳ ಬಿಲ್ ಆಗಿತ್ತು. ಆ ಬಿಲ್ಲನ್ನು ನೋಡಿದ ಕೂಡಲೇ ಮಹಾಲಕ್ಷ್ಮಿಗೆ ಆ ರಾತ್ರಿ ತಾವು ಸೀತಾಲಕ್ಷ್ಮಿಯ ಹಾಸಿಗೆಯಲ್ಲಿ ಕಂಡಿದ್ದ ಆ ವಸ್ತುಗಳೆಲ್ಲ ಜ್ಞಾಪಕ ಬಂದವು. ನಾಲ್ಕು ಕಡೆಯಿಂದಲೂ ಕಿರಾತರು ಈಟಿಗಳನ್ನು ಹಿಡಿದು ತಿವಿಯಲು ಸಿದ್ಧ

ರಾಗಿರುವಾಗ, ಅವರ ನಡುವೆ ಸಿಕ್ಕಿ ಗಡಗಡನೆ ನಡುಗುತ್ತಿರುವ ಹೆಣ್ಣು ಹುಲ್ಲೆಯಂತಿದ್ದ ಸೀತಾಲಕ್ಷ್ಮಿಯ ಅಂದಿನ ಬೆದರಿದ ನೋಟ ಅವಳಿಗೆ ಜ್ಞಾಪಕ ಬಂತು. ಒಂದು ಹೆಣ್ಣು ಅಷ್ಟರಮಟ್ಟಿಗೆ ಹೆದರಿದ್ದುದನ್ನು ಆಕೆ ಎಂದೂ ನೋಡಿಯೇ ಇರಲಿಲ್ಲ. ಸೀತಾಲಕ್ಷ್ಮಿಯ ಮೇಲೆ ಅವಳಿಗೆ ಎಷ್ಟೇ ಅಸಮಾಧಾನವಿದ್ದರೂ, ಆ ಗಳಿಗೆಯಲ್ಲಿ ಸಮಾನವಾದ ಸ್ತ್ರೀತ್ವ ಅವಳನ್ನು ಒಂದು ಗಳಿಗೆ ಮಟ್ಟಿಗೆ ಸೀತಾಲಕ್ಷ್ಮಿಗೆ ಬಂಧಿಸಿತ್ತು. ಆ ಕಾರುಣ್ಯದಿಂದಲೇ, ಶ್ರೀರಂಗಮ್ಮ ಉದ್ದಕ್ಕೂ ಮಹಾಲಕ್ಷ್ಮಿಯ ಪಕ್ಷವನ್ನೇ ಹಿಡಿದು ವಾದಿಸಿದ್ದರೂ ಸಿಂಗಾರಮ್ಮನನ್ನು ಕರೆತಂದು ಸೀತಾಲಕ್ಷ್ಮಿಯ ಮಾನಭಂಗ ಮಾಡಿದುದನ್ನು ಮಹಾಲಕ್ಷ್ಮಿ ಎಂದೂ ಒಪ್ಪಿರಲಿಲ್ಲ. ಒಂದುವೇಳೆ ನಿಜವಾಗಿಯೂ ಸೀತಾಲಕ್ಷ್ಮಿ, ಆ ಅಲಂಕಾರ ಪದಾರ್ಥಗಳನ್ನು ದುರ್ಮಾರ್ಗದಿಂದ ಸಂಪಾದಿಸಿದ್ದರೂ, ಸಿಂಗಾರಮ್ಮನಂತಹ ನೀಚಳ ಮಧ್ಯಸ್ಥಿಕೆಯ ಪಂಚಾಯ್ತಿ ಆವಶ್ಯಕವಿರಲಿಲ್ಲವೆಂದು ಮಹಾಲಕ್ಷ್ಮಿ ಭಾವಿಸಿದ್ದಳು. ಈಗ ತನ್ನ ಗಂಡನ ಪೆಟ್ಟಿಗೆಯಲ್ಲಿ ಆ ಪದಾರ್ಥಗಳನ್ನು ತರಿಸಿದ್ದ ಬಿಲ್ ಇದ್ದುದರಿಂದ, ಅವಳಿಗೆ ತನ್ನ ಗಂಡನೇ ಸೀತಾಲಕ್ಷ್ಮಿಯ ಬೆನ್ನು ಹತ್ತಿದ್ದನೆಂದೂ, ಕಡೆಯಲ್ಲಿ ಅವಳ ಹಾಸಿಗೆಯಲ್ಲಿ ಆ ವಸ್ತುಗಳು ಸಿಕ್ಕುವುದಕ್ಕೂ ತನ್ನ ಗಂಡನೇ ಕಾರಣವೆಂದೂ ಸ್ಪಷ್ಟವಾಗಿ ಗೊತ್ತಾಯಿತು. ಎಲ್ಲದಕ್ಕಿಂತ ಹೆಚ್ಚಾಗಿ ಸ್ತ್ರೀ ಸ್ವಭಾವಜನ್ಯವಾದ ಬುದ್ಧಿ ಕುಶಲತೆಯಿಂದ ಆಕೆ, ಸೀತಾಲಕ್ಷ್ಮಿಯನ್ನು ತನ್ನ ದಾರಿಗೆ ಎಳೆಯಲು ಗಂಡನಿಗೆ ಸಾಧ್ಯವಾಗದುದರಿಂದ ಅವಳಮೇಲೆ ಈ ಅಪವಾದ ಬರುವಂತೆ ತನ್ನ ಗಂಡ ಮಾಡಿದ್ದನೆಂದೂ ಅರಿತುಕೊಂಡಳು. ಒಡವೆ ಸಿಕ್ಕಿದ್ದುದರಿಂದ ಅವಳಿಗೆ ಮೊದಲೇ ಸೀತಾಲಕ್ಷ್ಮಿಯಲ್ಲಿ ಕನಿಕರವುಂಟಾಗಿತ್ತು. ಈಗ ಆ ಕನಿಕರ ಅವಳ ಮನಸ್ಸನ್ನು ಪೂರ್ಣವಾಗಿ ತುಂಬಿ, ಸೀತಾಲಕ್ಷ್ಮಿಗಾಗಿ ಸಹ ಅವಳ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯಿತು. ಅತ್ತು ಅತ್ತು ಸೊರಗಿ ಮಹಾಲಕ್ಷ್ಮಿ ತನ್ನ ನಿತ್ಯ ಕೆಲಸದಲ್ಲಿ ತೊಡಗಿದಳು.

ಬೆಳಗ್ಗೆ ಎದ್ದು ಎಲ್ಲಿಗೋ ಹೋಗಿದ್ದ ಕೃಷ್ಣ ಮಧ್ಯಾಹ್ನದ ವೇಳೆಗೆ ಮನೆಗೆ ಬಂದನು ಬಾಗಿಲಿನಲ್ಲಿ ಕುಳಿತಿದ್ದ ಗುಂಡಣ್ಣನವರಿಗೂ ಅವನಿಗೂ ವಾಗ್ವಾದವಾಯಿತು. ಗುಂಡಣ್ಣನವರು ಸಿಟ್ಟು ಅವಮಾನ ತಾಳಲಾರದೆ ಕೃಷ್ಣನನ್ನು ಮನಸ್ಸಿಗೆ ಬಂದಂತೆ ಬಯ್ದರು. ಅವನೂ ಕೋಪದ ಆವೇಶದಲ್ಲಿ

ತಾನು ಹೇಳುತ್ತಿರುವುದೇನೆಂಬುದರ ಅರಿವಿಲ್ಲದೆ ಬಾಯಿಗೆ ಬಂದದ್ದನ್ನು ಕೂಗಿ ಬಿಟ್ಟನು. ಗುಂಡಣ್ಣನವರು "ನಿನ್ನಂತಹ ಪೋಕರಿ ಇರುವ ಮನೆಯಲ್ಲಿರುವುದರಿಂದ ಮಾನಬರುವುದಿಲ್ಲ. ಎಲ್ಲಿಯಾದರೂ ಕಣ್ಮರೆಯಾಗಿ ಹೋಗುತ್ತೇನೆ" ಎಂದರು. ಕೃಷ್ಣ ಅಷ್ಟೇ ಕೋಪದಿಂದ "ಇಲ್ಲಿಯೇ ಇರಬೇಕೆಂದು ನಿಮ್ಮನ್ನು ಹಿಡಿದು ಕಟ್ಟಿಹಾಕಿರುವವರಾರು?" ಎನ್ನುತ್ತಾ ಒಳಕ್ಕೆ ಹೋದನು. ತನ್ನ ಕೊಠಡಿಗೆ ಅವನು ಹೋದಕೂಡಲೇ, ತಾನು ಮುಚ್ಚಿದ್ದ ಪೆಟ್ಟಿಗೆಯ ಬಾಗಿಲು ಮೇಲೆದ್ದಿರುವುದು ಅವನಿಗೆ ತೋರಿತು. ತಾನು ಯಾವಾಗಲೂ ಮುಚ್ಚಿರುತ್ತಿದ್ದ ಬಾಗಿಲು ತೆರೆದಿದ್ದುದನ್ನು ಕಂಡು ಅವನಿಗೆ ಆ ಕೋಪವಲ್ಲಿಯೂ ತನ್ನ ಅಜಾಗ್ರತೆಯ ಬಗ್ಗೆ ತಿರಸ್ಕಾರವುಂಟಾಯಿತು. ಪೆಟ್ಟಿಗೆಯ ಹತ್ತಿರ ಬಂದು ನೋಡಿದಕೂಡಲೇ ಅವನ ಕಣ್ಣಿಗೆ ಮೊದಲು ಬಿದ್ದುದು ಕವರಿನಿಂದ ತೆರೆದು ಕೆಳಕ್ಕೆ ಬಿದ್ದಿದ್ದ ಜ್ಯೂಯಲರಿ ಮಾರ್ಟ್ ಕಾಗದ ಮತ್ತು ಟಾಯಿಲೆಟ್ ಸಾಮಗ್ರಿಗಳ ಬಿಲ್; ಮತ್ತೊಂದೆಡೆ ತಾನು ಕೆಂಪಿಗೆ ಕೊಟ್ಟಿದ್ದ ಬಳೆಗಳಿದ್ದ ಪೆಟ್ಟಿಗೆ ಹೆಂಡತಿಯೇ ಪೆಟ್ಟಿಗೆಯನ್ನು ತೆರೆದಿರುವುದು ಕೃಷ್ಣನಿಗೆ ಗೊತ್ತಾಯಿತು. ಅವನ ಕಣ್ಣು ಕೋಪದಿಂದ ಅದುರಿತು. ಆದರೆ ಮುಖ ಅವಮಾನದಿಂದ ಬಾಡಿತು. ಅವನು ಒಳಗೆ ಹೋಗಿ "ಪೆಟ್ಟಿಗೆಯನ್ನು ಯಾಕೆ ತೆರೆದೆ? ತೆರೆಯಕೂಡದೆಂದು ಹೇಳಿರಲಿಲ್ಲವೆ?" ಎಂದು ಗರ್ಜಿಸಿದನು. ಮಹಾಲಕ್ಷ್ಮಿಗೆ ಯಾವಾಗಲೂ ಕೃಷ್ಣನನ್ನು ಕಂಡರೆ ಅತಿ ಭಯ. ಸಾಧಾರಣವಾಗಿ ಮಾತಿನಲ್ಲಿ ಹೆಚ್ಚು ಕಡಮೆಯಾದಾಗಲೆಲ್ಲ ಕೃಷ್ಣ ಅವಳನ್ನು ಬಡಿಯುತ್ತಿದ್ದನು. ಮದುವೆಯಾಗಿ ಹದಿನೈದು ವರುಷ ಕಳೆದು ನಾಲ್ಕಾರು ಮಕ್ಕಳಾಗಿದ್ದರೂ, ಮಹಾಲಕ್ಷ್ಮಿಗೆ ಗಂಡನಿಂದ ಬಡಿತಗಳು ಬೀಳುತ್ತಲೇ ಇದ್ದವು. ಆಗಲೆಲ್ಲ ತನ್ನದೇ ತಪ್ಪು ಎಂದು ಅವಳು ಭಾವಿಸಿದ್ದಳು. ಆದರೆ ಕೃಷ್ಣನ ನೀಚತನ ಸ್ಪಷ್ಟವಾದ ಆ ಗಳಿಗೆಯಲ್ಲಿ ಅವಳಿಗೆ ಅವನಲ್ಲಿ ಭಯ ಮಾಯವಾಯಿತು. ಅವಳು "ಹೌದು. ನಾನೇ ತೆರೆದೆ, ಯಾಕೆ ತೆರೆಯಬಾರದು? ನಿಮ್ಮ ಲೀಲೆಗಳು ನನಗೆ ತಿಳಿದುಬಿಟ್ಟವೆಲ್ಲ ಎಂದು ನಿಮಗೆ ಕೋಪವಲ್ಲವೆ?" ಎಂದಳು. ಅವಳ ಮುಖದಲ್ಲಿ ಒಂದು ಬಗೆಯ ದುಃಖದ ಬೇಸರ—ಏನು ಬೇಕಾದರೂ ಆಗಲಿ, ಎಂಬ ಜಿಗುಪ್ಸೆ ತೋರುತ್ತಿದ್ದಿತು. "ಹಾ! ಏನೆಂದೆ?" ಎಂದು ಕೃಷ್ಣನು ಸುತ್ತ ನೋಡಿದನು. ಹುಣಸೆಹಣ್ಣನ್ನು ಜಜ್ಜಲು ಇಟ್ಟಿದ್ದ ಸುತ್ತಿಗೆ ಅವನ ಕಣ್ಣಿಗೆ

ಬಿತ್ತು. ಉನ್ಮತ್ತನಂತಿದ್ದ ಕೃಷ್ಣ ಆ ಸುತ್ತಿಗೆಯನ್ನೇ ಕೈಗೆ ತೆಗೆದುಕೊಂಡನು. ಅದರಿಂದ ಒಂದು ಏಟು ಬಿದ್ದರೂ ತಾನು ಜೀವಂತ ಉಳಿಯುವುದಿಲ್ಲವೆಂಬುದು ಮಹಾಲಕ್ಷ್ಮಿಗೆ ಗೊತ್ತು. ಕೃಷ್ಣ ಅದರಿಂದ ಹೊಡೆಯುವುದೂ ನಿಶ್ಚಯವೆಂದು ಆಕೆಗೆ ನಂಬಿಕೆಯಾಗಿತ್ತು ಅದೆಲ್ಲ ಹಿಂದಲಿಂದ ನಡೆದು ಬಂದ ಸಂಪ್ರದಾಯವೇ? ಹಿಂದೆ ಕೃಷ್ಣ, ಹೊಡೆಯಲು ಕೈ ಎತ್ತಿದಾಗ ಗಡಗಡನೆ ನಡುಗುತ್ತಿದ್ದ ಅವಳಿಗೆ, ಈಗ ಭಯವೇ ಉಂಟಾಗಲಿಲ್ಲ. ಕೃಷ್ಣನು ಸುತ್ತಿಗೆಯನ್ನು ಮೇಲಕ್ಕೆತ್ತಿದನು. ಆದರೆ ಅವನಿಗೆ ಏನಾಯಿತೋ? ಏಟು ಮಹಾಲಕ್ಷ್ಮಿಗೆ ಬೀಳಲಿಲ್ಲ. ಸುತ್ತಿಗೆಯನ್ನು ಕೃಷ್ಣ ಕೋಪದಿಂದ ದೂರ ಎಸೆದು ಮಾತನಾಡದೆ ಮನೆಬಿಟ್ಟು ಹೊರಟುಹೋದನು. ಮಹಾಲಕ್ಷ್ಮಿಯ ಕಣ್ಣುಗಳಿಂದ ನೀರು ಒಂದೇಸಮನೆ ಸುರಿಯುತ್ತಿತ್ತು. ಆ ರಾತ್ರಿ ಬಹಳ ಹೊತ್ತಾದರೂ ಕೃಷ್ಣ ಮನೆಗೆ ಬರಲಿಲ್ಲ. ಹೊತ್ತು ಕಳೆಯುತ್ತಾ ಬಂದಂತೆಲ್ಲಾ ಮಹಾಲಕ್ಷ್ಮಿಗೆ ಗಾಬರಿಯೂ ದುಃಖವೂ ಹೆಚ್ಚಾಗತೊಡಗಿತು. "ಅವರು ಬರದೆಲೆ ಹಾಗೆಯೇ ಎಲ್ಲಿಯಾದರೂ ಹೊರಟುಹೋದರೆ ಏನು ಗತಿ? ಅಯ್ಯೋ ನಾನು ಏಕೆ ನನ್ನ ಅಸಮಾಧಾನ ತೋರಿಸಿಕೊಂಡೆ. ಹೇಗಾದರೂ ಅವರ ಪಾಡಿಗೆ ಅವರು ಇರಲಿ, ಎಂದು ಇದ್ದಿದ್ದರೆ ಎಷ್ಟೋ ಸುಖವಾಗಿರುತ್ತಿದ್ದೆನಲ್ಲ? ಅವರ ರಹಸ್ಯಗಳನ್ನೆಲ್ಲ ಕಟ್ಟಿಕೊಂಡು ನನಗೆ ಆಗಬೇಕಾದುದೇನು? ಸದ್ಯ ಈ ಸಲ ಬಂದುಬಿಟ್ಟರೆ ಸಾಕೆಲ್ಲ ಎಂದು ಅವಳು ಕೊರಗುತ್ತಿದ್ದಳು. ರಾತ್ರಿ ಹನ್ನೊಂದು ಗಂಟೆಗೆ ಎಲ್ಲರೂ ಮಲಗಿಕೊಂಡರೂ ಮಹಾಲಕ್ಷ್ಮಿ ಮಾತ್ರ ಯೋಚಿಸುತ್ತಾ ತನ್ನ ಕೊಠಡಿಯಲ್ಲೇ ಕುಳಿತಿದ್ದಳು. ತಿರಸ್ಕೃತರಾದ ಮಕ್ಕಳು ಹಾಸಿಗೆಯನ್ನು ಸಹ ಕಾಣದೆ ನೆಲದಮೇಲೆ ಅಲ್ಲಲ್ಲಿ ಬಿದ್ದುಕೊಂಡು ನಿದ್ರೆಮಾಡುತ್ತಿದ್ದವು.

ರಾತ್ರಿ ಹನ್ನೆರಡು ಗಂಟೆಯ ಹೊತ್ತಿಗೆ ಕೃಷ್ಣ ಮನೆಗೆ ಬಂದನು. ಹೆದರುತ್ತ ಹೆದರುತ್ತ ಒಳಕ್ಕೆ ಬಂದ ಅವನ ಮುಖವನ್ನು ಮಹಾಲಕ್ಷ್ಮಿ ಭಯದಿಂದಲೇ ನೋಡಿದಳು. ಕೃಷ್ಣ ಬಹಳ ಕೋಪದಿಂದಲೇ ಹಿಂದಿರುಗುವನೆಂದು ಆಕೆ ಭಾವಿಸಿದ್ದಳು. ಆದರೆ, ಹಿಂದಿರುಗಿದ ಕೃಷ್ಣನ ಮುಖ ಬಹಳ ಶಾಂತವಾಗಿ ಗಂಭೀರವಾಗಿ ಸಪ್ಪಗಾಗಿತ್ತು. ಮಹಾಲಕ್ಷ್ಮಿಯನ್ನು ತಲೆ ಎತ್ತಿ ನೋಡುವ ಧೈರ್ಯ ಅವನಿಗೆ ಇರಲಿಲ್ಲ. ಅವಮಾನವನ್ನು ಹೊಂದಿದವನು ಬಚ್ಚಿಟ್ಟುಕೊಳ್ಳಲು ಸ್ಥಳವನ್ನು ಹುಡುಕುವಂತೆ ಕೃಷ್ಣ ತನ್ನ ಹಾಸಿಗೆ ಪ್ರವೇಶಿ

ಸುವುದರಲ್ಲಿದ್ದನು. ಆ ವೇಳೆಗೆ ಎಲ್ಲರೂ ಮಲಗಿ ನಿದ್ರಿಸುತ್ತಿರುವರೆಂದೇ ಅವನ ಭಾವನೆಯಾಗಿತ್ತು. ಮಲಗಿಕೊಳ್ಳಲು ಸಿದ್ಧವಾಗುತ್ತಿದ್ದ ಅವನನ್ನು ಮಹಾಲಕ್ಷ್ಮಿ "ಏಳಿ ಊಟಮಾಡಿ" ಎಂದಳು. ಕೃಷ್ಣನು ಅವಳ ಕಡೆ ನೋಡದೆಯೇ "ಇಲ್ಲ ಹಸಿವಾಗಿಲ್ಲ" ಎಂದನು ಮಹಾಲಕ್ಷ್ಮಿಯು "ಹಸಿವಾಗದೆ ಏನು? ಬೆಳಗಿನಿಂದಲೂ ಊಟಮಾಡಿಲ್ಲ. ಬಿಸಿಬಿಸಿಯಾಗಿ ಅನ್ನ ಸಾರು ಮುಚ್ಚಿಟ್ಟಿದ್ದೇನೆ. ನಾನೂ ಇನ್ನೂ ಊಟಮಾಡಿಲ್ಲ" ಎಂದಳು ಕೃಷ್ಣನು ಹೆಚ್ಚು ಮಾತನಾಡದೆ ಗಂಭೀರವಾಗಿ ಒಳಗೆ ನಡೆದು ಊಟಮಾಡಿದನು. ಅವನ ದೈನ್ಯವನ್ನು ಕಂಡು ಮಹಾಲಕ್ಷ್ಮಿಗೇ "ಅಯ್ಯೋ ಪಾಪ" ಎನ್ನಿಸಿತು ಮಹಾಲಕ್ಷ್ಮಿಯೂ ಊಟಮಾಡಿ ಮಲಗಿಕೊಂಡಳು

ಆದರೆ, ಕೃಷ್ಣನ ಬುದ್ಧಿ ಸ್ಥಿಮಿತವಾಗಿರಲಿಲ್ಲ. ಮರುದಿನ ಬೆಳಗ್ಗೆ ಹಾಸಿಗೆಯಿಂದ ಎದ್ದವನೇ ಅವನು ಮತ್ತೆ ಎಲ್ಲಿಗೋ ಹೊರಟುಹೋದನು. ತನ್ನ ಮೇಲಿನ ಕೋಪಕ್ಕಿಂತ, ಅವನಿಗೆ ಮನೆಯಲ್ಲಿರಲು ಬೇಸರಿಕೆ ಹೆಚ್ಚಾಗಿದ್ದಿತೆಂದು ಮಹಾಲಕ್ಷ್ಮಿಗೆ ಅರ್ಥವಾಯಿತು ಆ ಮಧ್ಯಾಹ್ನ ಗುಂಡಣ್ಣನವರು ತಮ್ಮ ಶಾಲು ಮಡಿಪದಾರ್ಥಗಳು ನಾಮದ ಪೆಟ್ಟಿಗೆ ಪಂಚೆಗಳನ್ನು ತಮ್ಮ ಮಡಿಚೀಲದಲ್ಲಿ ಕಟ್ಟಿ ಪ್ರಯಾಣಸನ್ನದ್ಧರಾಗುತ್ತಿದ್ದರು. ಅದನ್ನು ನೋಡಿ ಮನೆಯಲ್ಲಿ ಎಲ್ಲರಿಗೂ ಗಾಬರಿಯಾಗಿತ್ತು. ಗಂಟನ್ನು ಕಟ್ಟಿದ ನಂತರ ಗುಂಡಣ್ಣನವರು, ಹೆಂಡತಿ ಕಲ್ಯಾಣಿಯನ್ನು ಕರೆದು "ಇನ್ನು ಈ ಮನೆಯಲ್ಲಿ ನಾನು ಇರಲಾರೆ. ಈ ಹೊಲಸು, ನಾತ ನಾರು, ಎಲ್ಲೆಲ್ಲಿ ನೋಡಿದರೂ ಕೃಷ್ಣನ ಅನಾಚಾರದ ಮಾತೇ ಮಾತಾಗಿದೆ. ನಿನಗೂ ಇಲ್ಲಿ ಏನೂ ಕೆಲಸವಿಲ್ಲ. ಹೊರಡು, ಬೆಂಗಳೂರಲ್ಲಿ ಹೋಗಿ ನಮ್ಮ ದೊಡ್ಡಪ್ಪನ ಮಗ ವೇದಾಂತನ ಮನೆಯಲ್ಲಿ ಇನ್ನು ಇದ್ದುಬಿಡೋಣ" ಎಂದರು ಕಲ್ಯಾಣಿಗೂ ರಂಭಾಪುರಿಯ ಮನೆ ಬೇಸರವಾಗಿತ್ತು. ಅಲ್ಲದೆ ವೇದಾಂತನ ಹೆಂಡತಿ, ಕಲ್ಯಾಣಿಗೆ ತಾಯಿ ಕಡೆ ಸಂಬಂಧ. ಮನೆಯಲ್ಲಿ ಬೇಸರಿಕೆ ಬಂದಾಗಲೆಲ್ಲ ಗುಂಡಣ್ಣನವರು "ಪದೇ ಪದೇ ನಾನು ಬೆಂಗಳೂರಿಗೆ ಹೋಗಿ ಇದ್ದುಬಿಡುತ್ತೇನೆ" ಎಂದು ಹೇಳುತ್ತಿದ್ದ ಮಾತುಗಳು ಇಂದು ನಿಜವಾಗಿದ್ದವು. ಗುಂಡಣ್ಣನವರಿಗೆ ಶ್ರೀರಂಗಮ್ಮನ ಮೇಲೆಯೂ ಬೇಸರಿಕೆಯುಂಟಾಗಿತ್ತು. ಆದುದರಿಂದ ಅವರು ಅವಳನ್ನು ಕರೆಯಲಿಲ್ಲ. ಕಲ್ಯಾಣಿಯೂ ತನ್ನ ಗಂಟನ್ನು ಕಟ್ಟಿ ಹೊರಡಲು

ಸನ್ನದ್ಧಳಾದಳು. "ಸುಂದರರಾಜ ಇಲ್ಲಿಗೆ ಬರುತ್ತಾನೆ. ನಾನು ಇಲ್ಲಿ ಇದ್ದರೆ ವಾಸಿ" ಎಂಬ ಚಪಲವೊಂದು ಮಾತ್ರ ಅವಳನ್ನು ಇನ್ನೂ ಸ್ವಲ್ಪ ಬಾಧಿಸು ತ್ತಿತ್ತು.

ಗುಂಡಣ್ಣನವರು ತಮ್ಮ ಮಡಿಚೀಲವನ್ನು ಕಟ್ಟಿಕೊಂಡು ಜಗಲಿಯ ಮೇಲೆ ಕುಳಿತರು. ಅವರನ್ನು ರೈಲು ಸ್ಟೇಶನ್‌ಗೆ ಕರೆದುಕೊಂಡು ಹೋಗಲು ಒಂದು ಬೋಳುಗಾಡಿ ಬಂದು ನಿಂತಿತ್ತು. ಗುಂಡಣ್ಣನವರನ್ನು ಶ್ರೀರಂಗಮ್ಮ ಸಮಾಧಾನಪಡಿಸುತ್ತಿದ್ದಳು. ಗುಂಡಣ್ಣನವರು ಅವಳಮೇಲೂ ರೇಗಿ ಕಲ್ಯಾಣಿಯನ್ನು ಅವಸರಪಡಿಸುತ್ತಿದ್ದರು. ಇನ್ನೇನು ಕಲ್ಯಾಣಿ ಗಂಟನ್ನು ತೆಗೆದುಕೊಂಡು ಹೊರಡಬೇಕು ಎನ್ನುವಷ್ಟರಲ್ಲಿ, ಮಹಾಲಕ್ಷ್ಮಿ ಬಂದು ಅತ್ತೆಯ ಮುಂದೆ ಅಳುತ್ತಾ ನಿಂತಳು. "ಅವರ ಬುದ್ಧಿ ಈಗ ಸರಿಯಾಗಿಲ್ಲ. ಮಾವಂದಿರು ನೀವು ಇಬ್ಬರೂ ಹೊರಟುಹೋದರೆ ಇಲ್ಲಿ ಹೇಳುವವರು ಕೇಳು ವವರು ಯಾರೂ ಇರುವುದಿಲ್ಲ. ನನಗೇಕೊ ಬಹಳ ಭಯವಾಗುತ್ತಿದೆ. ಮಾವಂದಿರಿಗೆ ಹೇಳೋಕೆ ನನಗೆ ಧೈರ್ಯ ಇಲ್ಲ. ಇದ್ದಿದ್ದರೆ ಅವರನ್ನೇ ಕೇಳಿಕೊಳ್ಳುತ್ತಿದ್ದೆ. ನೀವೂ ಹೊರಟುಹೋದರೆ ನಾನೊಬ್ಬಳೇ ಹೇಗೆ ಇರಲಿ? ನೀವು ನನಗಾಗಿ ಇಲ್ಲಿಯೇ ಇರಬೇಕು. ನಿಮ್ಮ ಕಾಲಿಗೆ ಬೀಳುತ್ತೇನೆ" ಎಂದಳು ಮಹಾಲಕ್ಷ್ಮಿಯ ಕನಿಕರ ಸ್ಥಿತಿ ನೋಡಿ ಕಲ್ಯಾಣಿಗೆ ಅವಳಲ್ಲಿ ನಿಜವಾಗಿಯೂ ಮರುಕವುಂಟಾಯಿತು. ಮತ್ತೆ ಮತ್ತೆ ತನ್ನನ್ನು ಅವಸರ ಪಡಿಸುತ್ತಿದ್ದ ಗುಂಡಣ್ಣನವರಿಗೆ ಕಲ್ಯಾಣಿ "ಮಹಾಲಕ್ಷ್ಮಿ ಬಹಳ ಗಾಬರಿ ಯಾಗಿದ್ದಾಳೆ. ಅಳುತಿದ್ದಾಳೆ. ಹೋಗಬೇಡ ಎನ್ನುತ್ತಿದ್ದಾಳೆ. ಅವಳನ್ನು ನೋಡಿದರೆ ನನಗೂ ಭಯವಾಗುತ್ತಿದೆ. ಈ ಅವಸ್ಥೆಯಲ್ಲಿ ಅವಳನ್ನು ಬಿಟ್ಟು ಹೋದರೆ ಹೊಳೆ ಭಾವಿ ಮುಳುಗಿಕೊಳ್ಳಬಹುದು. ಏನು ಮಾಡಲಿ?" ಎಂದಳು. ಗುಂಡಣ್ಣನವರಿಗೆ ಕಾದು ಕಾದು ಸಹನೆ ಮಿತಿಮೀರುತ್ತಾ ಬಂದಿತ್ತು. ಅವರು "ಹಾಗಾದರೆ ನಿನ್ನ ಇಷ್ಟ, ನಾನಂತೂ ಈ ಮನೆಯಲ್ಲಿ ಒಂದು ಗಳಿಗೆಯೂ ಇನ್ನು ನಿಲ್ಲಲಾರೆ" ಎಂದು ಹೇಳಿ "ನಿಲ್ಲಿ ನಿಲ್ಲಿ" ಎಂದು ಕಲ್ಯಾಣಿ ಕಿರುಚುತ್ತಿದ್ದರೂ ಗಾಡಿ ಏರಿ ರೈಲ್ವೆ ಸ್ಟೇಶನ್‌ಗೆ ಹೊರಟೇಹೋದರು. ಕಲ್ಯಾಣಿಯೂ ಕಣ್ಣಿನಲ್ಲಿ ನೀರು ತಂದುಕೊಂಡು ನಿಟ್ಟುಸಿರು ಬಿಡುತ್ತಾ ಒಳಕೆ ಹೋದಳು.

❖ ❖ ❖

ತನಗುಂಟಾದ ಅವಮಾನದಿಂದ ಕೃಷ್ಣ ಚೇತರಿಸಿಕೊಳ್ಳುವಂತೆಯೇ ತೋರಲಿಲ್ಲ. ಮಹಾಲಕ್ಷ್ಮಿಯ ಎದುರಿಗೆ ಅವನು ಹುಲಿಯ ಎದುರಿನ ಹುಲ್ಲೆಯಂತಾಗಿದ್ದನು ಇದರಿಂದ ಮಹಾಲಕ್ಷ್ಮಿಯ ಮನಸ್ಸಿನಮೇಲೆ ವಿಚಿತ್ರವಾದ ಪರಿಣಾಮವುಂಟಾಯಿತು ಗಂಡ ತನ್ನನ್ನು ಬಡಿದಾಗಲೆಲ್ಲ ಅವನನ್ನೂ ತಾನು ಬಡಿಯಬೇಕೆಂದು ಬಯಸಿದ್ದವಳು ಮಹಾಲಕ್ಷ್ಮಿ. ಹಿಂದೊಂದು ಸಲ ಕೃಷ್ಣ ಮಹಾಲಕ್ಷ್ಮಿಯನ್ನು ಯಾವುದೋ ಮಾತಿಗೆ, ಬಾಯಿಗೆ ನೀರು ಕೇಳುವ ವರೆಗೆ ಬಡಿದಿದ್ದನು. ಆ ದಿನ ಮಹಾಲಕ್ಷ್ಮಿಗೆ "ಇವರನ್ನೂ ಹೀಗೆ ಒಂದು ದಿನ ನಾನು ಹೊಡೆಯಬೇಕಲ್ಲ" ಎಂದು ಆಸೆಯಾಗಿತ್ತು. ಆದರೆ ಆಗ ಕೃಷ್ಣನ ಮೇಲೆ ಏನೂ ದೂರು ಇರಲಿಲ್ಲ. ಅವನು ಹೊಡೆಯುತ್ತಿದ್ದುದು ತನ್ನ ಗಂಡಸು ಪರಾಕ್ರಮವನ್ನು ತೋರಿಸುವುದಕ್ಕಾಗಿ. ಆಗ ಕೃಷ್ಣ ಯಾವ ತಪ್ಪನ್ನೂ ಮಾಡಿರಲಿಲ್ಲ. ಅಥವ ಆ ತಪ್ಪು ಹೆಂಡತಿಗೂ ಇತರರಿಗೂ ತಿಳಿದಿರಲಿಲ್ಲ. ಈಚೆಗೆ ಕೃಷ್ಣ ಮಹಾಲಕ್ಷ್ಮಿಯ ಎದುರಿಗೆ ಅತ್ಯಂತ ಹೇಡಿಯೂ ನಮ್ರನೂ ಆಗಿಬಿಟ್ಟಿದ್ದನು. ಅವಳನ್ನು ಕತ್ತೆತ್ತಿ ಮಾತನಾಡಿಸುವ ಅಥವ ಅವಳ ಮುಖವನ್ನು ನೋಡುವ ಧೈರ್ಯ ಸಹ ಅವನಿಗೆ ಇದ್ದಂತೆ ತೋರಲಿಲ್ಲ. ಸೆರೆಮನೆಯಲ್ಲಿರುವ ಅಪರಾಧಿಯು ಸೆರೆಮನೆಯ ಅಧಿಕಾರಿಯನ್ನು ನೋಡುವಂತೆ ಅವನು ಮಹಾಲಕ್ಷ್ಮಿಯ ಬೆನ್ನು ತನ್ನ ಕಡೆಗೆ ಆದಾಗ ಅವಳನ್ನು ಕದ್ದು ನೋಡುತ್ತಿದ್ದನು. ತಾನು ಮಾಡಿದ ಕಾರ್ಯ ತಪ್ಪೆಂಬುದು ಅವನಿಗೆ ಗೊತ್ತಾಗಿದ್ದುದರಿಂದ ಅವನು ಬಹಳ ದೀನನಾಗಿದ್ದನು. ಗಂಡನ ಆ ದೈನ್ಯವನ್ನು ಸಹಿಸುವುದು ತನಗೆ ಸಾಧ್ಯವಿಲ್ಲವೆಂದು ತೋರಿದಾಗ, ಮಹಾಲಕ್ಷ್ಮಿಗೇ ಆಶ್ಚರ್ಯವಾಯಿತು. ಅವಳ ಮನಸ್ಸನ್ನು ಅವಳೇ ಅರಿಯಲಾರದವಳಾದಳು. "ಗಂಡ ಏನೋ ಒಂದು ತಪ್ಪುಮಾಡಿಬಿಟ್ಟರು. ಆದರೆ ಆಯಿತು. ಅದನ್ನು ಮರೆತು ತಲೆ ಎತ್ತಿಕೊಂಡು ಮೊದಲಿನಂತೆ ಜೋರಾಗಿರಬೇಕು. ಗಂಡಸು ಯಾವಾಗಲೂ ಬಹದ್ದೂರ್‌ನಾಗಿರಬೇಕು ನನ್ನನ್ನೇ ಬಡಿದರೂ ಚಿಂತೆಯಿಲ್ಲ. ಅವರ ಈ ದೈನ್ಯ ತರವಲ್ಲ. ಹಿಂದಲಜೋರು ಇವರಿಗೆ ಯಾವಾಗ ಬಂದೀತೋ" ಎಂದು ಅವಳು ಆಶಿಸುತ್ತಿದ್ದಳು.

ಈಚೆಗಂತೂ ಕೃಷ್ಣ ಮನೆಗೆ ಬರುವುದು ಸಾಧಾರಣವಾಗಿ ರಾತ್ರಿ ಬಹಳ ಹೊತ್ತು ಆಗುತ್ತಿದ್ದಿತು. ಅನೇಕ ದಿನಗಳು ಅವನು ಊಟಮಾಡದೆಯೇ

ಮಲಗುತ್ತಿದ್ದನು. ಅಂದು ಮಹಾಲಕ್ಷ್ಮಿಗೂ ಊಟವಿಲ್ಲ. ಒಂದು ರಾತ್ರಿ ಕೃಷ್ಣ ಇನ್ನೂ ಬಂದಿರಲಿಲ್ಲ. ಮಕ್ಕಳಿಲ್ಲ ಮಲಗಿ ಒಂದು ಗಂಟೆಯಮೇಲೆ ಆಗಿತ್ತು. ಗಂಡನ ಆಗಮನವನ್ನು ನಿರೀಕ್ಷಿಸುತ್ತಾ ಚಾಪೆಯಮೇಲೆ ದಿಂಬಿಗೆ ಒಂದು ಮಣೆಯಿಟ್ಟುಕೊಂಡು ಮಹಾಲಕ್ಷ್ಮಿ ಮಲಗಿದ್ದಳು. ಶ್ರಮದಿಂದಲ್ಲೂ ಸೆಖೆಯಿಂದಲೂ ಅವಳಿಗೆ ಹಾಗೇ ಸ್ವಲ್ಪ ಜೊಂಪು ಹತ್ತಿತು. ಅನಂತರ ಅವಳು ಕಣ್ಣುಬಿಟ್ಟು ನೋಡಿದಾಗ ಕೃಷ್ಣ ಕೊಠಡಿಯ ಪೆಟ್ಟಿಗೆಯಮುಂದೆ ಕುಳಿತಿರುವುದು ಅವಳಿಗೆ ಕಂಡಿತು ಕೃಷ್ಣನ ಕೈಯಲ್ಲಿ ಸೀತಾಲಕ್ಷ್ಮಿಯು ಪೆಟ್ಟಿಗೆಯಿಂದ ಪೂಜೆಗೆಂದು ತೆಗೆದು ಇಟ್ಟುಕೊಂಡಿದ್ದ ಪಟ ಇತ್ತು. ಈಚೆಗೆ ಕೃಷ್ಣ ಅದರ ಮುಂದೆ ಹಿಂದಲಂತೆ ಹೆಚ್ಚಾಗಿ ಜಪಕ್ಕೆ ಕೂರುತ್ತಿರಲಿಲ್ಲ, ಪಟವೆಲ್ಲ ಧೂಳು ಕಸದಿಂದ ತುಂಬಿತ್ತು, ಕೃಷ್ಣ ಅದನ್ನು ಕೈಯಿಂದ ತೊಡೆದು ಧೂಳನ್ನು ಬಾಯಿಂದ ಊದುತ್ತಿದ್ದನು. ಮಹಾಲಕ್ಷ್ಮಿ ಎದ್ದು ಅವನ ಸಮೀಪಕ್ಕೆ ಹೋಗಿ "ಬಹಳ ದಿನಗಳಿಂದ ಆ ಪಟವನ್ನು ತೊಡೆಯಲಿಲ್ಲ. ಅದಕ್ಕೇ ಹೀಗೆ ಧೂಳು ಮುಚ್ಚಿದೆ" ಎಂದಳು. ಕೃಷ್ಣನು ಒಂದು ಗಳಿಗೆ ಮಾತನಾಡದೆ ಸುಮ್ಮನಿದ್ದನು ಅನಂತರ "ನನ್ನ ಸಂಸಾರವೂ ಹೀಗೆ ಆಯಿತು. ಧೂಳು ಮಲಿನವಾಗಿದೆ" ಎಂದನು. "ಇಟ್ಟುಕೊಂಡಿದ್ದರೆ ಎಷ್ಟೋ ಚೆನ್ನಾಗಿಟ್ಟುಕೊಳ್ಳಬಹುದಾಗಿತ್ತು" ಎಂದನು. ಆ ಮಾತಿನಲ್ಲಿದ್ದ ವೇದನೆ ಮಹಾಲಕ್ಷ್ಮಿಗೆ ಗೊತ್ತಾಯಿತು. ಆದರೂ; ಅವಳು ಬಹಳ ದಿನ ಗಳಿಂದ ಕೇಳಬೇಕೆಂದಿದ್ದ ಒಂದು ಮಾತನ್ನು ಕೇಳಿಯೇಬಿಟ್ಟಳು. "ನಿಮಗೆ ಯಾಕೆ ಸೀತಾಲಕ್ಷ್ಮಿಯಮೇಲೆ ಅಷ್ಟು ಸಿಟ್ಟು?" ಎಂದು. ಅವಳ ಮನಸ್ಸಿನ ನೋವೂ ಕೃಷ್ಣನಿಗೆ ಗೊತ್ತಾಗದಿರಲಿಲ್ಲ. ಅವನು ಒಂದು ಗಳಿಗೆ ಸುಮ್ಮನಿದ್ದು "ನನ್ನಿಂದ ಬಹಳ ತಪ್ಪು ನಡೆದುಹೋಯಿತು. ಆಸೆಯಿಂದ ಮನುಷ್ಯ ನೀಚ ನಾಗುತ್ತಾನೆ, ಕುರುಡನಾಗುತ್ತಾನೆ, ಪಶುವಾಗುತ್ತಾನೆ, ನಿನ್ನ ಸುಖವನ್ನೂ ನಾನು ಕದ್ದೆ. ನೀನು ಭೂದೇವಿ ಎಲ್ಲವನ್ನೂ ಸಹಿಸಿಕೊಂಡೆ. ನನ್ನನ್ನು ಕ್ಷಮಿಸಿಬಿಡು" ಎಂದನು. ಮಹಾಲಕ್ಷ್ಮಿ "ಆ ಮಾತನ್ನೆಲ್ಲ ನನಗೆ ಯಾಕೆ ಹೇಳುತ್ತೀರಿ. ನನಗೆ ಎಂದಿದ್ದರೂ ನೀವೇ ಗತಿ, ಆದರೆ ಸೀತಾಲಕ್ಷ್ಮಿ?" ಎಂದಳು. ಕೃಷ್ಣನು, "ಸೀತಾಲಕ್ಷ್ಮಿಯೂ ಕ್ಷಮಿಸಬೇಕು. ಕ್ಷಮಿಸುತ್ತಾಳೆ. ತಪ್ಪೆಂದು ಹೇಳುತ್ತೇನೆ" ಎಂದನು.

ಆ ರಾತ್ರಿ ಕೃಷ್ಣನಿಗೂ, ಮಹಾಲಕ್ಷ್ಮಿಗೂ ಬಹಳ ಚೆನ್ನಾಗಿ ನಿದ್ರೆ ಬಂತು. ಅಂತಹ ನಿದ್ರೆ ಅವರಿಗೆ ಬಂದು ತುಂಬ ದಿನಗಳಾಗಿದ್ದವು, ಅವರು ಮತ್ತೆ ಒಬ್ಬರಿಗೊಬ್ಬರು ಹತ್ತಿರವಾದರು. ಅವರನ್ನು ಅಗಲಿಸಿದ್ದ ಅವರ ಮಧ್ಯೆ ಇದ್ದ ಯಾವುದೋ ಪಿಶಾಚ ತೊಲಗಿ, ಅವರಿಗೆ ಶಾಂತಿ ದೊರೆತು ಹೊಸ ಬಾಳು ಪ್ರಾರಂಭವಾಯಿತು.

## ೨೨

ಸುಂದರರಾಜ ಸಾಹುಕಾರರ ಕೈಯಿಂದ ಬಿಡುಗಡೆ ಹೊಂದಿ ಬೆಂಗಳೂರಿಗೆ ಹೋದನು. ತನ್ನ ಬಿಡುಗಡೆಗೆ ಕಾರಣರಾರೆಂಬುದು ಅವನಿಗೆ ಮೊದಲ ದಿನ ತಿಳಿಯದಿದ್ದರೂ ಮರುದಿವಸ ತಿಳಿಯಿತು. ಅವನಿಗೆ ಹೆಂಡತಿಯ ವಿಷಯದಲ್ಲಿ ಪ್ರೇಮ ಕನಿಕರವುಂಟಾಯಿತು. ಒಂದು ಸಲ ಹೆಂಡತಿಯನ್ನು ನೋಡಬೇಕೆಂದೂ ಅವನಿಗೆ ಆಸೆಯಾಯಿತು. ಆದರೆ ಯಾವುದಕ್ಕೂ ಅವನಿಗೆ ಧೈರ್ಯವುಂಟಾಗಲಿಲ್ಲ. ಅವನು ಮತ್ತೆ ಬೆಂಗಳೂರಿನಲ್ಲಿ ತನ್ನ ಉದ್ದೇಶ ರಹಿತ ಜೀವನವನ್ನು ಪ್ರಾರಂಭಿಸಿ ಸಿನಿಮಾ, ಹೋಟೆಲುಗಳನ್ನು ತಿರುಗುತ್ತಾ ಕಾಲಹರಣ ಮಾಡತೊಡಗಿದನು. ರಂಭಾಪುರಿಗೆ ಮತ್ತೆ ಹಿಂದಿರುಗುವುದು ಅವನ ಉದ್ದೇಶವಾಗಿರಲಿಲ್ಲ ಅವನಿಗೆ ಯಾರ ಮೇಲೆಯೂ ಅಸಮಾಧಾನವಾಗಲೀ ದ್ವೇಷವಾಗಲೀ ಇರಲಿಲ್ಲ. ಹೆಂಡತಿಯೊಂದಿಗೆ ಬಾಳಬೇಕೆಂಬ ಆಸೆ; ಆದರೆ ಅದಕ್ಕೆ ಬೇಕಾದ ಧೈರ್ಯವಿರಲಿಲ್ಲ. ದಿನ ಕಳೆದಂತೆಲ್ಲ ಅವನ ಈ ಆಸೆ ಹೆಚ್ಚುತ್ತಲೇ ನಡೆಯಿತು. ಆಸೆ ಹೆಚ್ಚಿದಂತೆ ಹೆಂಡತಿ ಅವನ ದೃಷ್ಟಿಯಲ್ಲಿ ಅದ್ಭುತ ದೇವತೆಯಾಗಿ, ತನಗೆ ಎಂದೆಂದಿಗೂ ಎಟುಕಲಾರದಷ್ಟು ಎತ್ತರದಲ್ಲಿ ಇರುವಂತೆ ತೋರಿತು. ಯಾವ ಮನುಷ್ಯನಿಗೂ ತನ್ನ ಸ್ವಂತ ಹೆಂಡತಿಯೇ ಇಷ್ಟು ಅಪರೂಪವಾಗಿದ್ದಿರಲಾರಳೆಂದು ಅವನು ಭಾವಿಸಿದನು. ಒಬ್ಬ ಮೂರನೆಯ ಮನುಷ್ಯನನ್ನು ನೋಡುವಂತೆ ಅವನು ತನ್ನನ್ನೇ ನೋಡಿದಾಗ ಅವನಿಗೆ ವಿನೋದವೂ ತನ್ನಲ್ಲಿಯೇ ಕನಿಕರವೂ ಉಂಟಾಯಿತು.

ತನ್ನ ತಂದೆ ಗುಂಡಣ್ಣನವರು ವೇದಾಂತನ ಮನೆಗೆ ಬಂದಿರುವುದು ಸುಂದರರಾಜನಿಗೆ ಗೊತ್ತಾಯಿತು. ಅವನು ಅವರನ್ನು ಒಂದು ದಿನ ಮಾತ್ರ ಹೋಗಿ ನೋಡಿದನು. ಅನಂತರ ಅವರನ್ನು ಮತ್ತೆ ಮತ್ತೆ ಹೋಗಿ ನೋಡಲು

ಅವನಿಗೆ ಹೇಗೋ ಮನಸ್ಸು ಹಿಂದೆಗೆಯಿತು. ಬೆಂಗಳೂರನ್ನು ಬಿಟ್ಟು ಎಲ್ಲಿ ಗಾದರೂ ಹೋಗಬೇಕೆಂದು ಅದನು ಯೋಚಿಸುತ್ತಿದ್ದನು. ಅವನ ಹಳೆಯ ಆಸೆಗಳ ಪೈಕಿ ಸಂಗೀತದ ಆಸೆಯೊಂದು ಮಾತ್ರ ಅವನಿಗೆ ಇನ್ನೂ ಇದ್ದಿತು. ಉತ್ತರ ದೇಶದ ಹಿಂದಿ ಸಿನಿಮಾಗಳ ಸಂಗೀತ, ದಾಕ್ಷಿಣಾತ್ಯ ಸಂಗೀತದಷ್ಟು ಅವನ ಮನಸ್ಸಿಗೆ ಹಿಡಿಸದಿದ್ದರೂ ಅವನಿಗೆ ಅವುಗಳಲ್ಲಿಯೂ ಒಂದು ಬಗೆಯ ಇಂಪು ತೋರದೆ ಇರಲಿಲ್ಲ. ಆ ವೇಳೆಗೆ ಬೆಂಗಳೂರಿನಲ್ಲಿ ತ್ಯಾಗರಾಜ ಸಭೆ ಯವರು ಚೈತ್ರ ನವರಾತ್ರಿಯ ಸಂದರ್ಭದಲ್ಲಿ ದಕ್ಷಿಣ ದೇಶದ ಪ್ರಬಲ ಗಾಯ ಕರ ಕಛೇರಿಗಳನ್ನು ಏರ್ಪಡಿಸಿದ್ದರು. ಹತ್ತು ಹನ್ನೆರಡು ದಿವಸ ಗಾನಾಮೃತ ವಾಹಿನಿ. ಕಛೇರಿ ಮಾಡುವವರ ಹೆಸರುಗಳ ಪಟ್ಟಿಯನ್ನು ನೋಡಿದಾಗಲೇ ಸುಂದರರಾಜನಿಗೆ ಬಾಯಿ ನೀರು ಕರೆಯಿತು. ಯಾವ ಕಾರ್ಯವೂ ಇಲ್ಲದೆ, ಕಾಲಕಳೆಯುವುದಕ್ಕೇ ತೋರದೆ ಅಲೆಯುತ್ತಿದ್ದ ಸುಂದರರಾಜನಿಗೆ, ತ್ಯಾಗ ರಾಜ ಸಭೆಯ ಮಂಟಪ, ದೇವಲೋಕದ ನಂದನ ವನದ ಆಕರ್ಷಣೆಯಾ ಯಿತು. ವಿರಹಿಯಾದ ಅವನ ತಾಪ, ಗಾನದಿಂದ ಹೆಚ್ಚುತ್ತಲೇ ಇದ್ದರೂ ಅವನ ಮನಸ್ಸಿಗೆ ಒಂದು ವಿಧವಾದ ನೆಮ್ಮದಿಯುಂಟಾಗುತ್ತಿದ್ದಿತು.

ಗುಂಡಣ್ಣನವರಿಗೆ ಸುಂದರರಾಜನ ಮನಸ್ಸಿನ ನಿಲುವು ಪೂರ್ಣವಾಗಿ ಅರ್ಥವಾಗಿತ್ತು. ಸೀತಾಲಕ್ಷ್ಮಿಯ ಒಡವೆ ಸುಂದರರಾಜನ ಸಾಲಕ್ಕೆ ಹೋದುದೂ ಅವರಿಗೆ ಗೊತ್ತಾಗಿತ್ತು. ಸುಂದರರಾಜನಿಗೂ ಸೀತಾಲಕ್ಷ್ಮಿಗೂ ಪರಸ್ಪರ ಅವಲಂಬನವಿಲ್ಲದೆ ಸುಖಶಾಂತಿಗಳಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಾಗಿತ್ತು. ಆದರೆ ಅವರು ಹಿಂದಲಕಾಲದವರು. ಹತ್ತು ಜನಗಳ ಅಭ್ಯಾಸ ಪದ್ಧತಿಗಳಿಗೆ ವಿರುದ್ಧವಾಗಿ ಯಾವ ಕಾರ್ಯವನ್ನೂ ಮಾಡಲು ಅವ ರಿಗೆ ಧೈರ್ಯವಿರಲಿಲ್ಲ. ಸೀತಾಲಕ್ಷ್ಮಿಯೂ ಸುಂದರರಾಜನೂ ಗಂಡ ಹೆಂಡ ರಾಗಿ ಸಂಸಾರಮಾಡುವುದು ನ್ಯಾಯ ಧರ್ಮ ಸರಿಯಾದುದು ಸುಖವಾ ದುದು, ಎಂದು ಅವರಿಗೆ ನಂಬಿಕೆಯಾಗಿತ್ತು. ಮೊದಲು ಮೊದಲು ಆ ನಂಬಿಕೆ ಯನ್ನು ಅವರು ತಮ್ಮ ಹೆಂಡತಿ ಕಲ್ಯಾಣಿಯ ಎದುರಿನಲ್ಲಿ ಸಹ ಪ್ರಕಟಿಸಲು ಅಂಜರಿದರು. ರಂಭಾಪುರಿಯಲ್ಲಿ ತಮ್ಮ ಜನರ ಎದುರಿಗೆ ಅದರಲ್ಲಿಯೂ ತಮ್ಮ ಮನೆಯವರ ಎದುರಿಗೆ ಸಹ, ತಮ್ಮ ಅಭಿಪ್ರಾಯವನ್ನು ಪ್ರಕಟಿಸಲು ಅವರಿಗೆ ಧೈರ್ಯವಿರಲಿಲ್ಲ. ಅವರು ತಮ್ಮ ಹೆಂಡತಿ ಕಲ್ಯಾಣಿಗೂ ಇದೇ

ಭಾವನೆ ಇದೆಯೆಂದು ಹೇಗೋ ಆಕೆಯ ಮುಖವನ್ನು ನೋಡುವುದರಿಂದಲೇ ಅರಿತರು ಹಳ್ಳಿಯವಳಾದ ಹಳೆಯ ಕಾಲದ ವೈದಿಕರ ಮಗಳಾದ ಕಲ್ಯಾಣಿಗೆ, ಈ ಕ್ರಾಂತಿಕಾರಕ ಸಮಾಜವಿರುದ್ಧವಾದ ಅಭಿಪ್ರಾಯವಿರುವುದು ಅವರಿಗೆ ತಿಳಿದಾಗ, ಗುಂಡಣ್ಣನವರಿಗೆ ಆಶ್ಚರ್ಯವೂ ಗಾಬರಿಯೂ ಉಂಟಾಯಿತು. ಹೀಗೆ ಗಂಡ ಹೆಂಡರು ಒಂದು ಸಲ ಕೂಡ ಬಾಯಿಬಿಟ್ಟು ಕೇಳದಿದ್ದರೂ ಒಂದೇ ಅಭಿಪ್ರಾಯವುಳ್ಳವರಾಗಿದ್ದರು. ಆದರೆ ತಮ್ಮ ಸಂಪ್ರದಾಯಬದ್ಧವಾದ, ತುಂಬಿದ ಮನೆಯಲ್ಲಿ ಅದನ್ನು ಹೇಳುವುದು ಹೇಗೆ? ಮೊಗುವನ್ನು ಹೆತ್ತು ಕಳಂಕಿನಿ ಎಂದು ಹೆಸರಾದ ಸೀತಾಲಕ್ಷ್ಮಿಯ ಹೆಸರನ್ನೇ ಮನೆಯಲ್ಲಿ ಯಾರೂ ಉಚ್ಚರಿಸುತ್ತಿರಲಿಲ್ಲ. ಶಾಮು, ಕೃಷ್ಣ, ಮಹಾಲಕ್ಷ್ಮಿ ಇವರೆಲ್ಲ ಸೀತಾಲಕ್ಷ್ಮಿಯನ್ನು "ಅವಳು" ಎಂದು ಸಂಬೋಧಿಸುತ್ತಿದ್ದರು. ಶ್ರೀರಂಗಮ್ಮ ಆಕೆಯನ್ನು ಆ ಮೂಳಿ ಎಂದೇ ಕರೆಯುತ್ತಿದ್ದಳು. "ಮನೆಯಲ್ಲಿ ಹೆಣ್ಣು ಗಂಡು ಮಕ್ಕಳು ತುಂಬಿವೆ. ಎಲ್ಲರಿಗೂ ಮದುವೆ ಮುಂಜಿ ಶೋಭನ ಪರಂಪರೆಗಳು ಆಗಬೇಕು. ಹಾಲಿನ ಮಡಕೆಗೆ ಹುಳಿ ಹಿಂಡಿದ ಹಾಗೆ, ಈ ಮೂದೇವಿಯೊಂದಿಗೆ ಸಂಬಂಧವಾಗಿ ಹೋಯಿತು. ಇದು ಇಷ್ಟಕ್ಕೆ ತೀರುವುದಿಲ್ಲ. ಯಾವ ಯಾವ ಗಳಿಗೆಯಲ್ಲಿ ತಲೆ ಹಾಕಿ ಕೆಲಸಗಳನ್ನು ಕೆಡಿಸಿಬಿಡುತ್ತದೆಯೋ. ಈ ಅವಾಂತರ ನಮ್ಮ ಜನರಲ್ಲಿ ತಿಳಿಯದ್ದು ಯಾರಿಗೂ ಇಲ್ಲ. ಎಲ್ಲರೂ ಕೀಟಲೆಯವರೇ. ಸಮಯದಲ್ಲಿ ಶಿವಪೂಜೆ ನಡುವೆ ಕರಡಿ ಬಿಟ್ಟಂತೆ, ಇಲ್ಲದ್ದು ಉಂಟಾದ್ದು ಹೇಳಿ ಇವರು, ಗೊತ್ತಾದ ಮದುವೆ ತಪ್ಪಿಸುವುದಕ್ಕೂ ಹೇಸುವುದಿಲ್ಲ" ಎಂದು ಶ್ರೀರಂಗಮ್ಮ ಕೂಗಾಡುತ್ತಲೇ ಇದ್ದಳು. ಆದುದರಿಂದ ಆ ಮನೆಯಲ್ಲಿ ತಮ್ಮ ಮಕ್ಕಳ ಎದುರಿಗೇ ಆದರೂ ಸಹ "ಸೀತಾಲಕ್ಷ್ಮಿ ಗಂಡನೊಂದಿಗೆ ಯಾಕೆ ಬಾಳಬಾರದು?" ಎಂದು ಹೇಳಲು ಗುಂಡಣ್ಣನವರಿಗೆ ಧೈರ್ಯವಿರಲಿಲ್ಲ.

ಇದ್ದಕ್ಕಿದ್ದಂತೆ ಸೀತಾಲಕ್ಷ್ಮಿಯನ್ನು ಶ್ರೀನಿವಾಸ ತಂನು ತಮ್ಮ ಮನೆಯಲ್ಲಿ ಬಿಟ್ಟು ಹೋದಮೇಲೆಯಂತೂ, ಗುಂಡಣ್ಣನವರು ತಾವು ಕತ್ತರಿಯಲ್ಲಿ ಸಿಕ್ಕಿಕೊಂಡ ಅಡಕೆಯಂತಾದರು. ಸಕಲಗುಣ ಪರಿಪೂರ್ಣಳಾದ ನಮ್ರಳಾದ ತಾನಾಗಿಯೇ ಮನೆಗೆ ಯಾವ ಕಷ್ಟ-ಅವಮಾನವನ್ನೂ ಸಹಿಸಲು ಸಿದ್ಧಳಾಗಿ ಬಂದಿರುವ ಸೊಸೆಯನ್ನು ಅಂಗೀಕರಿಸಬೇಕು. ಆದರೆ ಮನಸ್ಸು ಹೇಗೋ

ಹಿಂಜರಿಯುತ್ತಿದೆ. ಎಲ್ಲರಿಗೂ ಕಾಣುವಂತೆ ವ್ಯಭಿಚಾರದಿಂದ ಆಸ್ಪತ್ರೆಯಲ್ಲಿ ಮಗುವನ್ನು ಹೆತ್ತವಳನ್ನು, ಮನೆಗೂ ಊರಿಗೂ ಹಿರಿಯನಾದ ತಾನು, ಸ್ವೀಕರಿಸುವುದು ಹೇಗೆ? ಈಕೆಯಲ್ಲಿ ಹುಟ್ಟುವ ಮಕ್ಕಳ ಗತಿಯೇನು? ಇನ್ನು ನಮ್ಮೊಂದಿಗೆ ಸಂಬಂಧಮಾಡುವವರಾರು? ಎಂದು ಅವರ ಮನಸ್ಸು ಗೊಂದಲದಲ್ಲಿ ಬಿದ್ದಿತು. ಮಳೆ ಗಾಳಿ ಬಿಸಿಲು ಗುಡುಗು ಮುಂತಾದ ಪ್ರಕೃತಿ ಶಕ್ತಿಗಳಿಗೆ ಎದುರಾಗಿ ಹೋರಾಡುವುದು ಹೇಗೆ ಸಾಧ್ಯವಿಲ್ಲವೋ ಹಾಗೇ ಈ ಸಮಸ್ಯೆ ಅವರ ಮನಸ್ಸಿನ ಆಧಿಪತ್ಯಕ್ಕೆ ಮೀರಿದುದಾಗಿ ತೋರಿತು. ಹೆಂಡತಿಯಲ್ಲಿ ಆಸೆಯಿದ್ದರೂ ಈ ಸಮಸ್ಯೆಯನ್ನು ಬಗೆಹರಿಸುವ ಶಕ್ತಿ ಸುಂದರರಾಜನಿಗೂ ಇಲ್ಲವೆಂಬುದೂ, ಇದ್ದಿದ್ದರೆ ಅವನು ಹೀಗೆ ಊರನ್ನು ಬಿಟ್ಟು ಬೆಂಗಳೂರಿನಲ್ಲಿ ತಿರುಗುತ್ತಿರಲಿಲ್ಲವೆಂಬುದು ಅವರಿಗೆ ಗೊತ್ತಿತ್ತು.

  

ಅತ್ತ ಮಲ್ಲಿಗೆಹಳ್ಳಿಯಲ್ಲಿ ಸೀತಾಲಕ್ಷ್ಮಿಯ ಬಾಳು ತನ್ನ ನಿರುತ್ಸಾಹದ ಮಾರ್ಗದಲ್ಲಿ ಗುರಿಯಿಲ್ಲದೆ ಸಾಗಿತ್ತು. ರಂಭಾಪುರಿಯಿಂದ ಬಂದಮೇಲೆ, ಅವಳಿಗಿದ್ದ ಆವೊಂದು ಆಸೆಯೂ ಮಾಯವಾಗಿದ್ದುದರಿಂದ "ಇವಳಿಗಾಗಿ ಇನ್ನು ನಾವು ಮಾಡಬೇಕಾದುದು ಏನೂ ಬಾಕಿ ಇಲ್ಲ. ಹಾಲು ಕೊಡದ ಅಥವ ಕಾಲು ಊನವಾದ ಹಸುವನ್ನು ಗೋರಕ್ಷಣಾ ಶಾಲೆಯಲ್ಲಿ ಇಟ್ಟುಕೊಳ್ಳುವುದೇ" ಎಂದು ಶ್ರೀನಿವಾಸ ಸುಮ್ಮನಾದನು. ಅವನಿಗೂ ಅವನ ಹೆಂಡತಿಗೂ ನಿಜವಾಗಿ ಬೇಸರಿಕೆಯುಂಟಾಗಿತ್ತು. "ಈ ಇಪ್ಪತ್ತು ವರುಷದ ಹುಡುಗಿಯನ್ನು ಎಪ್ಪತ್ತು ವರುಷಗಳವರೆಗೆ ಕಾಪಾಡುವುದು ಹೇಗೆ? ನಾವು ಮಾಡಿದ ಪ್ರಯತ್ನಗಳೆಲ್ಲ ಹೀಗೆ ವಿಫಲವಾದುವೆಲ್ಲ" ಎಂದು ಶ್ರೀನಿವಾಸ ಖಿನ್ನನಾದನು.

ಇದ್ದಕ್ಕಿದಂತೆ ತನ್ನ ಡಾಬನ್ನು ಸೀತಾಲಕ್ಷ್ಮಿ ಸುಂದರರಾಜನಿಗಾಗಿ ಕಳುಹಿಸಿದುದು. ತನಗೆ ತಿಳಿದಾಗ, ಶ್ರೀನಿವಾಸನು ಮೊದಲು ಮೊದಲು ಅದನ್ನು ನಂಬಲೇ ಇಲ್ಲ. ವಿಷಯ ನಿಶ್ಚಯವೆಂದು ಖಂಡಿತವಾಗಿ ತಿಳಿದಾಗ ಅವನಿಗೆ ಸೀತಾಲಕ್ಷ್ಮಿಯ ಮೇಲೆ ಬಹಳ ಕೋಪ ಬಂತು. ಅವಳು ಮಾಡಿದುದು ಉದ್ಧತತನ, ಅತಿ ಯಜಮಾನಿಕೆ ಎಂದು ಅವನಿಗೆ ತೋರಿತು. "ಮನೆಯಲ್ಲಿ ನಾನು ಯಜಮಾನ ಕೂತಿದ್ದೇನೆ. ಇವಳ ಹತ್ತಿರ ಇದ್ದದ್ದು

ಅದೊಂದು. ತನ್ನ ಕಷ್ಟ ಸುಖಕ್ಕೆ ಆಗಲಿ ಎಂದು ಇಟ್ಟುಕೊಳ್ಳಬಾರದೆ?" ಒಡವೆಯನ್ನು ಸೀತಾಲಕ್ಷ್ಮಿ ಕೊಟ್ಟುದು ಶ್ರೀನಿವಾಸನಿಗೆ ಸ್ವಲ್ಪವೂ ನೇರ ಲಿಲ್ಲ. ಗಂಡ ಈಕೆಯನ್ನು ಬಿಟ್ಟಮೇಲೆ, ಆ ಒಡವೆಯಾದರೂ ಇವಳ ರಕ್ಷಣೆಯ ಭಾರವನ್ನು ಹೊತ್ತ ಸಮಗೆ ಆಗಬಹುದಾಗಿತ್ತಲ್ಲ, ಇವಳನ್ನು ಕಾಲಿನ ಕಸಕ್ಕಿಂತ ಕಡೆ ಮಾಡಿರುವ ಗಂಡನಲ್ಲಿ ಇವಳಿಗೆ ಯಾಕೆ ಇಷ್ಟು ಆಸೆ! ಹಾಗಾದಮೇಲೆ ಅಲ್ಲಿಯೇ ಹೋಗಿ ಇರಲಿ." ಶ್ರೀನಿವಾಸ ಕೋಪದ ಆವೇಶ ದಲ್ಲಿ "ನಿನ್ನ ಗಂಡ ಮುಟ್ಠಾಳ ಜೂಜುಕೋರ ಸಾಲಗಾರ ಕುಡುಕ, ಅವನ ಈ ದುಷ್ಟತನದ ಸಾಲಗಳನ್ನೆಲ್ಲ ತೀರಿಸಲು ನಿನಗೆ ಆಪತ್ಸನವಾಗಿ ಕೊಟ್ಟಿದ್ದ ಚಿನ್ನವನ್ನು ಕೊಟ್ಟುಬಿಟ್ಟ ನಿನ್ನದು ತಲೆಯಲ್ಲ ಯಜಮಾನಿಕೆ. ಮನೆಯಲ್ಲಿರುವ ಹಿರಿಯರನ್ನು ಕೇಳಬೇಕೆಂಬುದು ನಿನಗೆ ತೋರಲೇ ಇಲ್ಲ. ನಿನ್ನನ್ನು ಕಂಡರೆ ನಿನ್ನ ಗಂಡ ಪ್ರಾಣಬಿಡ್ತಾನೆ. ಅಯ್ಯೋ ಪುಣ್ಯವಾಡಿ ಇಂತಹ ಗಂಡನನ್ನು ಸಂಪಾದಿಸಿದೆ. ಅವನಿರುವಾಗ ನಿನಗೆ ನಾವೆಲ್ಲ ಯಾಕೆ ಇನ್ನು? ಅಲ್ಲಿಯೇ ಹೋಗಿ ಇರು" ಎಂದು ಕಿರಚಿದನು. ಹುಚ್ಚನಂತಾಗಿದ್ದ ಶ್ರೀನಿವಾಸ ತಾನು ಏನು ಹೇಳುತ್ತಿರುವೆನೆಂಬುವರ ಅರಿವೇ ಇಲ್ಲದೆ "ನೀನು ಹೀಗೆ ಸ್ವತಂತ್ರಳಾಗುವ ಹೊತ್ತಿಗೆಯೇ ನಿನ್ನ ಗತಿ ಹೀಗಾಯಿತು ನೀನು ಯಾರ ಮಾತನ್ನೂ ಕೇಳುವವಳಲ್ಲ. ಯಾರಿಗೂ ಬಗ್ಗುವವಳಲ್ಲ. ನೀನು ಗಂಡ ಹೇಳಿದಂತೆ ಕೇಳಿಕೊಂಡು ಸಂಸಾರ ತಾನೆ ಎಲ್ಲಿ ಮಾಡಿಕೊಂಡಿರುತ್ತೀ" ಎಂದುಬಿಟ್ಟನು.

ಶ್ರೀನಿವಾಸ ಯಾವ ಮಾತನ್ನೂ ಯೋಚಿಸಿ ಆಡಿದವನಲ್ಲ. ಒಡವೆ ಸೀತಾಲಕ್ಷ್ಮಿಯು ಕೈಯಿಂದ ಹೋಗಬಾರದು. ಅದು ತನ್ನ ಸಂಸಾರದಲ್ಲಿ ಉಳಿಯಬೇಕು. ಆಗುವುದಾಗಿ ಹೋಯಿತು. ಅದಾದರೂ ಇದೆಯೆಲ್ಲ ಎಂದು ಅವನು ಸಮಾಧಾನಪಟ್ಟುಕೊಂಡಿರುವಾಗ ಸೀತಾಲಕ್ಷ್ಮಿ ತನ್ನನು ಒಂದು ಮಾತನ್ನೂ ಕೇಳದೆ ಯಜಮಾನಿಕೆ ವಹಿಸಿ, ಕೊಟ್ಟುದುದರಿಂದ ಅವನಿಗೆ ತಲೆಯ ಮೇಲೆ ಕಲ್ಲು ಬಿದ್ದಂತೆ ಆಯಿತು. ಸೀತಾಲಕ್ಷ್ಮಿಗೆ ಇದೊಂದೂ ಅರ್ಥವಾಗದೆ ಇರಲಿಲ್ಲ. ಅಣ್ಣತಮ್ಮಂದಿರೇ ಆದರೂ ತನ್ನ ಸಂಕಟದ ಲಾಭವನ್ನು ಹೆಂದಲು ಅವರು ಎಷ್ಟು ಕಾತುರರಾಗಿರುವರೆಂಬುದು ಅವಳಿಗೆ ಅನುಭವವಾಗಿತ್ತು. ಗಂಡನ ಮನೆಗೆ ಹೋಗಿದ್ದಾಗ ಅಲ್ಲಿ ಓರಗಿತ್ತಿಯರೂ

ಭಾವಮೈದುನರೂ ತನ್ನಲ್ಲಿದ್ದ ಬಾಚಣಿಗೆ ಪಠ ಮೊದಲುಗೊಂಡು ಎಲ್ಲ ಒಳ್ಳೆಯ ಪದಾರ್ಥಗಳನ್ನೂ ಹಾರಿಸಿಬಿಟ್ಟರು. ಹಾಗೆಯೇ ಇಲ್ಲಿ ಶ್ರೀನಿವಾಸನ ಮನೆಯಲ್ಲಿಯೂ ತನ್ನಲ್ಲಿ ಯಾವ ಒಳ್ಳೆಯ ಪದಾರ್ಥವಿದ್ದರೂ ಅವರು ಸಹಿಸುತ್ತಿರಲಿಲ್ಲ. ಕೊನೆಗೆ ಒಂದು ಒಳ್ಳೆಯ ಕರವಸ್ತ್ರ, ಸೇಫ್ಟಿಪಿನ್, ಬಾಚಣಿಗೆ ಎಲ್ಲವನ್ನೂ ಶ್ರೀನಿವಾಸನ ಹೆಂಡತಿ ಹೊತ್ತುಬಿಡುತ್ತಿದ್ದಳು. ಶ್ರೀನಿವಾಸನ ಹೆಂಡತಿಗೂ ಸೀತಾಲಕ್ಷ್ಮಿಯ ಡಾಬಿನ ಮೇಲೆ ಕಣ್ಣಿತ್ತು. ಅವಳು ಅದನ್ನು ಸೀತಾಲಕ್ಷ್ಮಿಯಿಂದ ತೆಗೆದುಕೊಂಡು ನಾಲ್ಕಾರು ದಿನ ಹಬ್ಬ ಹರಿದಿನಗಳಲ್ಲಿ ಹಾಕಿಕೊಂಡಿದ್ದಳು. ಆ ದಿನಗಳಲ್ಲಿ ತಾನೂ ಅದನ್ನು ಹಾಕಿಕೊಳ್ಳಬೇಕೆಂಬುದು ಸೀತಾಲಕ್ಷ್ಮಿಯ ಆಸೆಯಾಗಿತ್ತು. ಆದರೆ "ಇವಳಿಗೆ ಇದು ಬೇಕಿಲ್ಲ" ಎಂದು ಶ್ರೀನಿವಾಸನ ಹೆಂಡತಿ ತಾನೇ ತೀರ್ಮಾನಿಸಿದಂತೆ, ಕೇಳಿ ತೆಗೆದುಕೊಂಡು ಬಿಡುತ್ತಿದ್ದಳು ಆ ವೇಳೆಯಲ್ಲಿ "ನನ್ನನ್ನು ಗಂಡ ಬಿಟ್ಟಿದ್ದಾನೆಯೋ ಇಲ್ಲವೋ ತಿಳಿಯದು. ಆದರೆ ಅವನು ಬಿಟ್ಟನೆಂದು ಇವರಂತೂ ತೀರ್ಮಾನಿಸಿದ್ದಾರೆ" ಎಂದು ಸೀತಾಲಕ್ಷ್ಮಿ ಭಾವಿಸಿಕೊಳ್ಳುವಳು. ಡಾಬನ್ನು, ಶ್ರೀನಿವಾಸನ ಹೆಂಡತಿ ತಾನಾಗಿಯೇ ಏನು ಮಾಡಿದರೂ ಕೊಡುತ್ತಿರಲಿಲ್ಲ. ಸೀತಾಲಕ್ಷ್ಮಿ ಕೇಳಿಯೇ ಹಿಂದಕ್ಕೆ ತೆಗೆದುಕೊಳ್ಳಬೇಕಾಗಿತ್ತು. ಕೊಡುವಾಗಲೂ ಸಹ ಅವಳು "ನಿನ್ನ ಯೋಗ್ಯತೆಗೆ ಇದು ಇಲ್ಲದೆ ಏನು ಉಳಿದುಹೋಗಿದೆ?" ಎಂದು ಹೇಳುವಷ್ಟೆ ಸ್ಪಷ್ಟವಾಗಿ ಮುಖಭಾವ ಮಾಡಿ ಡಾಬನ್ನು ಹಿಂದಕ್ಕೆ ಕೊಡುತ್ತಿದ್ದಳು. ಇವಳಿಗೆ ಇದರ ಮೇಲೆ ಏನು ಆಸೆ! ಅಬ್ಬ ಎಂದು ಸೀತಾಲಕ್ಷ್ಮಿ ಭಾವಿಸುವಳು. ಶ್ರೀನಿವಾಸನ ಹೆಂಡತಿಗೆ ತನ್ನ ಮೇಲೆ ಕನಿಕರಕ್ಕಿಂತ ಹೆಚ್ಚಾಗಿ ಕೋಪವೇ ಇರುವಂತೆ ಸೀತಾಲಕ್ಷ್ಮಿಗೆ ತೋರುತ್ತಿತ್ತು ಅತ್ತಿಗೆಯ ಮುಖದ ಆಸೆಯ ನೋಟವನ್ನು ನೆನೆಸಿಕೊಂಡಾಗಲೆಲ್ಲ, ಸೀತಾಲಕ್ಷ್ಮಿಗೆ ಭಯವುಂಟಾಗುತ್ತಿತ್ತು. ಒಂದು ಹಬ್ಬದ ದಿನ ಅತ್ತಿಗೆ ಡಾಬನ್ನು ಹಿಂದಕ್ಕೆ ಕೊಡುವಾಗ ತನ್ನನ್ನೇ ನುಂಗುವಂತೆ ಕಣ್ಣಿನಲ್ಲಿ ಕೆಂಡವುಗುಳುತ್ತಾ ಮುಖ ಗಂಟು ಹಾಕಿಕೊಂಡಳು. ಆ ರಾತ್ರಿ ಅತ್ತಿಗೆ ಬಂದು ತನ್ನ ಸೊಂಟಕ್ಕೆ ಕೈ ಹಾಕಿ ಡಾಬನ್ನು ಕೀಳುತ್ತಿರುವಂತೆ ಸೀತಾಲಕ್ಷ್ಮಿಗೆ ಕನಸಾಯಿತು. ಅವಳು ಕನಸಿನಲ್ಲಿಯೇ ಕೂಗಿಕೊಳ್ಳಲು ಪ್ರಯತ್ನಿಸಿದಳು. ಅತ್ತಿಗೆ ಅವಳ ಗಂಟಲಿನಿಂದ ಧ್ವನಿ ಹೊರಡದಂತೆ ಅವಳ ಕುತ್ತಿಗೆ ಹಿಸುಕುತ್ತಿದ್ದಳು. ಅವಳಿಗೆ ಕೂಗುವು

ದಕ್ಕಾಗದೆ ಬಾಯಿನಿಂದ ಒಂದು ವಿಕಾರವಾದ ಧ್ವನಿ ಮಾತ್ರ ಹೊರಟಿತು. ಬಹಳ ಕಷ್ಟದಿಂದ ಅವಳಿಗೆ ಎಚ್ಚರಿಕೆಯಾದಾಗ ಅವಳ ಮೈಯೆಲ್ಲ ಬೆವತಿತ್ತು. ಈ ಕನಸು ತನ್ನ ಎಚ್ಚರವಾದಾಗಿನ ಮನೋಭಾವದ ಪ್ರತಿಬಿಂಬವೆಂದು ಅವಳಿಗೇನೊ ಗೊತ್ತಾಯಿತು. ಆದರೆ ಅದಕ್ಕೆ ಕಾರಣ, ತನ್ನ ಅಣ್ಣ ಅತ್ತಿಗೆಯರ ಆಸೆ ಎಂಬುದೂ ಅವಳಿಗೆ ಗೊತ್ತಾಯಿತು. ಶ್ರೀನಿವಾಸನೊಬ್ಬನಿಗೆ ಮಾತ್ರವೇ ಅಲ್ಲ. ರಾಮಸ್ವಾಮಿ ಮತ್ತು ಅವನ ಹೆಂಡತಿಗೂ ಡಾಬಿನಮೇಲೆ ಆಸೆ ಇರುವುದು ಸೀತಾಲಕ್ಷ್ಮಿಗೆ ಗೊತ್ತಾಯಿತು. ರಾಮಸ್ವಾಮಿ ತಂಗಿ ಎಂಬ ಪ್ರೀತಿಗಾಗಿ ಸೀತಾಲಕ್ಷ್ಮಿಯನ್ನು ಪೋಷಿಸಲು ಸಿದ್ಧನಾಗಿಲ್ಲದಿದ್ದರೂ, ಅವನ ಹೆಂಡತಿ ಒಡವೆಗಾಗಿ ಸೀತಾಲಕ್ಷ್ಮಿಯನ್ನು ಸಾಕಲು ಸಿದ್ಧಳಾಗಿದ್ದಳು. ಒಂದು ದಿನ ತೇರು ಬೀದಿಯ ಅಲಮೇಲಮ್ಮ ರಾಮಸ್ವಾಮಿಯ ಹೆಂಡತಿಯೊಂದಿಗೆ ಯಾವುದೋ ಮಾತಿಗೆ "ಸೀತಾಲಕ್ಷ್ಮಿಯ ಭಾರ ಶ್ರೀನಿವಾಸನಿಗೇ ಬಿದ್ದಂತೆ ತೋರುತ್ತೆ" ಎಂದಾಗ, ರಾಮಸ್ವಾಮಿಯ ಹೆಂಡತಿ ಸರಕ್ಕನೆ "ಅವನಿಗೇನು ದಾಡಿ. ಒಂದು ಸೇರಿನ ಡಾಬು ಸಿಕ್ಕುತ್ತೆ. ನಿಮಗೆ ಸಿಕ್ಕಿದರೆ ನೀವು ಅನ್ನ ಹಾಕುವುದಿಲ್ಲವೇ? ನನಗೆ ಸಿಕ್ಕಿದರೆ ನಾನು ಹಾಕುವುದಿಲ್ಲವೇ? ಯಾರಾದರೂ ದಮ್ಮಯ್ಯ ಅಂತ ಹಾಕುತ್ತಾರೆ" ಎಂದಳು.

ಆಮುವರಿಂದ ಸೀತಾಲಕ್ಷ್ಮಿ ಡಾಬನ್ನು ಕಮಲಮ್ಮನ ಕೈಲಿ ಸುಂದರರಾಜನ ಸಾಲಕ್ಕಾಗಿ ಕಳುಹಿಸಿದಾಗ, ಶ್ರೀನಿವಾಸನಿಗೂ ರಾಮಸ್ವಾಮಿಗೂ ಅವಳಮೇಲೆ ಸಮಾನವಾದ ಕೋಪವುಂಟಾಯಿತು. ಸ್ವಲ್ಪ ದಿನಗಳಿಂದ ಒಬ್ಬರೊಂದಿಗೆ ಒಬ್ಬರು ಸ್ನೇಹದಿಂದ ಮಾತನಾಡದೇ ಇದ್ದ ಆ ಅಣ್ಣತಮ್ಮಂದಿರು ಇದನ್ನೇ ತಮ್ಮ ಸಂಭಾಷಣೆಯ ವಿಷಯವನ್ನಾಗಿಟ್ಟುಕೊಂಡು ತಮ್ಮ ನಿಂತುಹೋಗಿದ್ದ ಮಾತು ಕತೆಗಳನ್ನು ಪ್ರಾರಂಭಿಸಿದರು. ರಾಮಸ್ವಾಮಿಯ ಹೆಂಡತಿ ಮತ್ತು ಶ್ರೀನಿವಾಸನ ಹೆಂಡತಿಯರಂತೂ ಈ ಮಾತಿನಮೇಲೆ ಸ್ನೇಹಿತರೇ ಆದರು. ಒಡೆದುಹೋಗಿದ್ದ ಆ ಇಬ್ಬರು ಅಣ್ಣತಮ್ಮಂದಿರ ಸಂಸಾರಗಳು ಮತ್ತೆ ಸೀತಾಲಕ್ಷ್ಮಿಯ ಈ "ಸ್ವಾತಂತ್ರ್ಯದಿಂದ" ಸಮಾನ ಶತ್ರುವನ್ನು ಎದುರಿಸುವಂತೆ ಒಂದಾದವು. ಅವರ ದೃಷ್ಟಿಯಲ್ಲಿ ಸೀತಾಲಕ್ಷ್ಮಿಯ ಈ ಎರಡನೆಯ ತಪ್ಪು ಮೊದಲನೆಯ ತಪ್ಪಿನಷ್ಟೇ ದೊಡ್ಡದಾಗಿ ತೋರಿತು.

ಆ ಅಣ್ಣತಮ್ಮಂದಿರು ಮಾತ್ರವೇ ಅಲ್ಲ. ಊರಿನಲ್ಲಿ ಎಲ್ಲರಿಗೂ ಸೀತಾ

ಲಕ್ಷ್ಮಿ, ತನ್ನನ್ನು ಬಿಟ್ಟು ಗಂಡನಿಗಾಗಿ, ತನ್ನ ಕೊನೆಯ ಆಸ್ತಿಯನ್ನು ಆಪದ್ಧನವನ್ನು ಕೊಟ್ಟುದು ಒಪ್ಪಿಗೆಯಾಗಲಿಲ್ಲ. ಅನೇಕರು ತಪ್ಪಿನ ಹೆಚ್ಚು ಭಾಗವನ್ನು ಕಮಲಮ್ಮನ ಮೇಲೆ ಹಾಕಿದರು. ಸೀತಾಲಕ್ಷ್ಮಿಗಂತೂ, ಇವರ ದೃಷ್ಟಿಯಲ್ಲಿ ತನ್ನ ಮೊದಲಿನ ತಪ್ಪಿಗಿಂತ ಇದೇ ದೊಡ್ಡ ತಪ್ಪು ಎಂಬ ಭಾವನೆಯುಂಟಾಯಿತು. ಮೊದಲಿನ ತಪ್ಪನ್ನು ಮಾಡಿದಾಗ ಶ್ರೀನಿವಾಸನಾದರೂ ತನ್ನ ವಿಷಯದಲ್ಲಿ ಕನಿಕರಪೂರ್ಣನಾಗಿದ್ದನು. ಈಗ ಅದೂ ಇಲ್ಲ ಒಡವೆಯ ಆಸೆಯನ್ನು ಕಟ್ಟಿದ್ದು ಯಾವುದೂ ಇಲ್ಲವೆಂದುಕೊಂಡಳು ಅವಳು. ಹೆಜ್ಜೆ ಹೆಜ್ಜೆಗೂ ಹೆಚ್ಚು ದುಃಖಕರವಾಗುತ್ತಲೇ ನಡೆದಿದ್ದ ಅವಳ ಬಾಳಿನ ಕಥೆ ಇನ್ನೂ ವಿಷಮವಾದಂತೆ ಅವಳಿಗೆ ತೋರಿತು. ಅವಳ ಮನಸ್ಸು, ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಪರಿತಪಿಸುತ್ತಿತ್ತು. ಕಮಲಮ್ಮ ಒಬ್ಬರಿಗೆ ಮಾತ್ರ ಆ ಮನಸ್ಸಿನ ದುಃಖದ ನಿಲುವು ಗೊತ್ತಾಗಿತ್ತು. ತನ್ನಷ್ಟು ಯಾರಿಗೂ ಪೀಡವಾದವನ್ನು ಜಗತ್ತಿನಲ್ಲಿ ಯಾರೂ ಇರಲಾರರೆಂದು ಸೀತಾಲಕ್ಷ್ಮಿ ಭಾವಿಸಿದಳು. ಆತ್ಮಹತ್ಯಾ ಪ್ರಯತ್ನದಿಂದ ಸೀತಾಲಕ್ಷ್ಮಿಯ ಮನಸ್ಸನ್ನು ತಿರುಗಿಸುವುದೇ ಕಮಲಮ್ಮನ ನಿತ್ಯದ ಕಾರ್ಯವಾಗಿ ಹೋಯಿತು. ಹೀಗೆ ಬಹಳ ಕಾಲ ತಾನು ಸೀತಾಲಕ್ಷ್ಮಿಗೆ ಸಮಾಧಾನವನ್ನೂ ಕೊಡುವುದರಲ್ಲಿ ಜಯಶಾಲಿಯಾದೇನೆಂಬ ನಂಬಿಕೆ ಸಹ ಕಮಲಮ್ಮನಿಗೆ ಇರಲಿಲ್ಲ.

ಇದ್ದಕ್ಕಿದ್ದಂತೆ ಸೀತಾಲಕ್ಷ್ಮಿಯ ಸೋದರಮಾವ ಆಯುರ್ವೇದಾಚಾರ್ಯ, ಪ್ರಾಣಾಚಾರ್ಯ ಪಂಡಿತರು ಮಲ್ಲಿಗೆಹಳ್ಳಿಗೆ ಬಂದರು. ಪಂಡಿತರು ಇದ್ದದ್ದು ಬೆಂಗಳೂರಿನಲ್ಲಿ, ಅವರು ಹಿಂದೆ ಸೀತಾಲಕ್ಷ್ಮಿಯ ವಿವಾಹಕಾಲದಲ್ಲಿ ಮಲ್ಲಿಗೆ ಹಳ್ಳಿಗೆ ಬಂದಿದ್ದರು. ತಮ್ಮ ತಂಗಿ, ಸೀತಾಲಕ್ಷ್ಮಿಯ ತಾಯಿ ಬದುಕಿದ್ದಾಗ ಆಗಿಂದಾಗ್ಗೆ ಮಲ್ಲಿಗೆಹಳ್ಳಿಗೆ ಬರುತ್ತಿದ್ದ ಅವರು, ಆಕೆ ಸ್ವರ್ಗಸ್ಥಳಾದಮೇಲೆ ಮಲ್ಲಿಗೆಹಳ್ಳಿಗೆ ಬರುವುದನ್ನು ಪೂರ್ಣವಾಗಿಯೇ ನಿಲ್ಲಿಸಿದ್ದರು. ಅವರಿಗೆ ಸೀತಾಲಕ್ಷ್ಮಿಯಲ್ಲದೆ, ಇನ್ನೂ ಕೆಲವು ಬಂಧುಗಳು ಮಲ್ಲಿಗೆಹಳ್ಳಿಯಲ್ಲಿದ್ದರು ಆದರೂ ಅವರು ಹೆಚ್ಚಾಗಿ ಮಲ್ಲಿಗೆಹಳ್ಳಿಗೆ ಬಂದು ಹೋಗುತ್ತಿರಲಿಲ್ಲ.

ಆಯುರ್ವೇದ ಪ್ರಾಣಾಚಾರ್ಯರದು ಸಾಹಸದ ಬದುಕು ಅವರು ಒಳ್ಳೆಯ ಸುಧಾರಕರೂ ಹೌದು. ಅವರು ಮುಖ್ಯವಾಗಿ ಆಯುರ್ವೇದವನ್ನು ಅಭ್ಯಾಸಮಾಡಿದುದೇ ಸಮಾಜಸುಧಾರಣೆಯ ದೃಷ್ಟಿಯಿಂದ. ಅದರಲ್ಲಿಯೂ

ಮುಖ್ಯವಾಗಿ ಗಂಡಂದಿರಿಂದ ತಿರಸ್ಕೃತರಾದ ಅಥವ ವಿಧವೆಯರಾದ, ಅಪ ವಾದಕ್ಕೆ ಸಿಲುಕಿದ, ಸರಿಯಾಗಿ ಬಳುವಳಿ ತರಲಿಲ್ಲವೆಂದು ಮಾವನಮನೆ ಯಿಂದ ಹೊರದೂಡಲ್ಪಟ್ಟ, ಅತ್ತೆ, ನಾದಿನಿಯರ ಹಿಂಸೆಯನ್ನು ತಾಳಲಾರದೆ ಮನೆಬಿಟ್ಟು ಬಂದ ಸ್ತ್ರೀಯರ, ಕಷ್ಟವನ್ನು ತಪ್ಪಿಸಿ ಅವರನ್ನು ಸಮಾಜಕ್ಕೆ ಉಪಕಾರಿಗಳನ್ನಾಗಿ ಮಾಡಿ ಅವರ ಬಾಳನ್ನು ಸಾರ್ಥಕಗೊಳಿಸುವುದಕ್ಕಾಗಿಯೇ ಪ್ರಾಣಾಚಾರ್ಯರು ಬೆಂಗಳೂರಿನಲ್ಲಿ ಧನ್ವಂತರೀ ಆಶ್ರಮವನ್ನು ಸ್ಥಾಪಿಸಿದುದು. ದಿಕ್ಕುಕೆಟ್ಟ ಸ್ತ್ರೀಯರನ್ನು ತಂದೆಯಂತೆ ಸಲಹಿ, ಅವರು ಅವರಿಗೆ ಆಯುರ್ವೇದ ವನ್ನು ಕಲಿಸಿ, ಅವರನ್ನು, ವೈದ್ಯರನ್ನೂ, ದಾದಿಯರನ್ನೂ ಮಾಡಿ ಒಂದೊಂದು ಹಳ್ಳಿಯಲ್ಲಿಯೂ ಒಬ್ಬೊಬ್ಬರನ್ನು ಸ್ಥಾಪಿಸುತ್ತಿದ್ದರು. ಪ್ರಾಣಾಚಾರ್ಯರು ಸಾಧಾರಣವಾಗಿ ವೈದ್ಯರಿಲ್ಲದ, ರಸ್ತೆಗಳಿಲ್ಲದ ಕಾರಣದಿಂದ ಹೋಗುವುದಕ್ಕೇ ಕಷ್ಟವಾದ, ಮಲೆನಾಡಿನ ಸಂದಿಗೊಂದಿಗಳ ಸಣ್ಣಸಣ್ಣ ಊರುಗಳಲ್ಲಿಯೇ ಆ ವೈದ್ಯರನ್ನು ಸ್ಥಾಪಿಸುತ್ತಿದ್ದರು ಗರ್ಭಿಣಿಸ್ತ್ರೀ ರಕ್ಷಣೆ, ಹೆರಿಗೆಗೆ ಸಹಾಯ, ಶಿಶುಪೋಷಣೆ, ಸಾಮಾನ್ಯ ರೋಗಗಳಿಗೆ ಚಿಕಿತ್ಸೆಗಳು ಇವನ್ನೆಲ್ಲ ಆ ಹೆಣ್ಣು ಗಳು ಕಲಿತು ಜನರೊಂದಿಗೆ ಬೆರತು ಅವರಿಗೆ ಹೆಚ್ಚು ವೆಚ್ಚವಿಲ್ಲದಂತೆ ಚಿಕಿತ್ಸೆ ಮಾಡುತ್ತಿದ್ದರು. ದುಃಖಿಗಳೂ, ತಿರಸ್ಕೃತರೂ ಸಮಾಜಕೋಪಕ್ಕೆ ಪಾತ್ರ ರಾದವರೂ ಆದ ಆ ವೈದ್ಯರಿಗೆ, ಜೀವನದಲ್ಲಿ ಒಂದು ಗುರಿ ಉಂಟಾಗಿ ಪಳಿತರ ಸೇವೆಯಲ್ಲಿ ಅವರಿಗೂ ಒಂದು ಆನಂದ ದೊರಕಿ, ತಾವೂ ಸಮಾಜಕ್ಕೆ ಆವಶ್ಯಕ್ರ ವಾದ ಅಂಗ ಎಂಬ ನಂಬಿಕೆಯಿಂದ ಅವರ ಬಾಳಿಗೆ ಒಂದು ಬೆಲೆ ಬರುತ್ತಿತ್ತು. ಆತ್ಮ ಹತ್ಯದ ಹೊರತು ಮತ್ತಾವ ದಾರಿಯೂ ತೋರದಿದ್ದ ಅನೇಕ ಮಹಿಳೆ ಯರು ಹೀಗೆ ಪ್ರಾಣಾಚಾರ್ಯರ ಕೈಯೊಳಗೆ ಬಂದಕೂಡಲೇ ಸಮಾಜದ ಸೇವಕರಾಗಿಬಿಡುತ್ತಿದ್ದರು.

ಒಂದು ಉದಾಹರಣೆಯನ್ನು ಪ್ರಾಣಾಚಾರ್ಯರು ಎಂದಿಗೂ ಮರೆಯು ವಂತೆ ಇರಲಿಲ್ಲ. ಆಕೆಯ ಹೆಸರು ರಾಧಾ. ಗಂಡ ದೊಡ್ಡ ಕೆಲಸದಲ್ಲಿದ್ದನು. ಎರಡು, ನಾಲ್ಕು, ಆರು, ಎಂಟು ವರುಷಗಳ ನಾಲ್ಕು ಗಂಡು ಮಕ್ಕಳು. ಇದ್ದದ್ದು ಬೆಂಗಳೂರಲ್ಲಿ. ಇದ್ದಕ್ಕಿದ್ದಂತೆ ಗಂಡ ಟೈಫಾಯಿಡ್ ರೋಗಕ್ಕೆ ತುತ್ತಾದ. ರಾಧೆಯ ತಂದೆಯ ಮನೆ ಇದ್ದುದೂ ಬೆಂಗಳೂರಿನಲ್ಲಿಯೇ ರಾಧೆಗೆ ತಂದೆ, ಮೂರು ಜನ ಅಣ್ಣಂದಿರು ಇದ್ದರು. ತಾಯಿ ಇರಲಿಲ್ಲ.

ರಾಧೆ ತಂದೆಯ ಮನೆಗೆ ಹೋದಳು. ಅವಳ ಹಿರಿಯಣ್ಣನದೇ ಮನೆಯಲ್ಲಿ ಯಜಮಾನಿಕೆ. ಅವನದು ಕಿರಾತ ಸ್ವಭಾವ. ಏನೂ ಸಂಪಾದನೆ ಇರಲಿಲ್ಲ. ಯಾವುದಾವುದೋ ವ್ಯಾಪಾರ ಏಜೆನ್ಸಿ ಅದು ಇದು. ಆದರೆ ಯಾವುದರಲ್ಲಿಯೂ ಒಂದು ಕಾಸೂ ಲಾಭವಿರಲಿಲ್ಲ. ರಾಧೆಯ ಮನೆಯ ಮೇಜ, ಮಂಚ, ಪಾತ್ರೆ ಪದಾರ್ಥಗಳನ್ನೆಲ್ಲ ಹಿರಿಯಣ್ಣನೇ ತೆಗೆದುಕೊಂಡನು. ಅವನು ಅವನ್ನು ಆಗ ಏನು ಮಾಡಿದನೆಂಬುದನ್ನು ವಿಚಾರಿಸುವುದಕ್ಕೂ, ದುಃಖದ ಆವೇಗದಲ್ಲಿ ರಾಧೆಗೆ ತೋರಲಿಲ್ಲ. ಅನಂತರ ಬೆಲೆ ಬಾಳುವ ಬೆಳ್ಳಿಯ ಪಾತ್ರೆ, ಒಳ್ಳೆ ಕುರ್ಚಿ, ಮೇಜ, ಮಂಚ ಎಲ್ಲವನ್ನೂ ಹಿರಿಯಣ್ಣ ಮಾರಿದುದು ರಾಧೆಗೆ ಗೊತ್ತಾಯಿತು. ಆದರೂ ಅವಳು ಸುಮ್ಮನಿದ್ದಳು. ಹಿರಿಯಣ್ಣ ಇವಳ ಗಂಡನ ಇನ್ಶೂರೆನ್ಸ್ ಹಣ ಆರು ಸಾವಿರ ರೂಪಾಯಿಗಳನ್ನೂ ತರಿಸಿದನು. "ಇರಲಿ ಜೋಪಾನವಾಗಿ ಇಟ್ಟಿರುತ್ತೇನೆ" ಎಂದನು. ರಾಧೆ ಏನು ಮಾಡುವುದಕ್ಕೂ ತೋರದೆ ಸುಮ್ಮನಾಗಿದ್ದಳು.

ಅದು ದೊಡ್ಡ ಸಂಸಾರ. ತಂದೆ, ಮೂವರು ಅಣ್ಣಂದಿರು. ಎಲ್ಲರಿಗೂ ಮದುವೆಯಾಗಿ ಮಕ್ಕಳು. ರಾಧೆಯನ್ನು ಅಡಿಗೆ ಮನೆಗೆ ಹಾಕಿಬಿಟ್ಟರು. ಪ್ರತಿ ವರುಷವೂ ಮೂವರು ಅತ್ತಿಗೆಯರ ಪೈಕಿ ಯಾರಿಗಾದರೂ ಬಾಣಂತನ. ಉಳಿದವರು ಬಸುರಿಗಳಾದುದರಿಂದ ಕೆಲಸಮಾಡುವಂತೆ ಇಲ್ಲ. ಅಂತೂ ಮನೆಯ ಕತ್ತೆಚಾಕರಿಯೆಲ್ಲ ರಾಧೆಯ ಪಾಲಿಗೇ ಬಿತ್ತು. ಅವಳು ದುಡಿದು ದುಡಿದು ಸಣ್ಣಗೆ, ಕಪ್ಪಗೆ ಆದಳು. ಅವಳ ಜತೆಯಲ್ಲಿ ಅವಳ ಮಕ್ಕಳೂ ದುಡಿಯಬೇಕಾಗಿತ್ತು. ತನ್ನ ಅಣ್ಣಂದಿರ ಮಕ್ಕಳು ಸುಖವಾಗಿರುವಾಗ, ತನ್ನ ಮಕ್ಕಳು ಮಾತ್ರ ನೀರು ಸೇದುವುದು, ಅಂಗಡಿಯಿಂದ ಸಾಮಾನು ಹೊರುವುದು, ಹಾಸಿಗೆ ಹಾಸುವುದು ಬಟ್ಟೆ ಒಗೆಯುವುದು ಎಲ್ಲ ಕೆಲಸವನ್ನೂ ಮಾಡಬೇಕಾಗಿತ್ತು. ಮನೆಯಲ್ಲಿ ಯಾವಾಗಲೂ ಮಕ್ಕಳಿಗೆ ಜಗಳ ನಡೆಯುತ್ತಲೇ ಇತ್ತು ಆಗಲೆಲ್ಲ ಅಣ್ಣಂದಿರು ತಪ್ಪದೆ ರಾಧೆಯ ಮಕ್ಕಳನ್ನು ಹೊಡೆಯುತ್ತಿದ್ದರು.

ಮನೆಯಲ್ಲಿ ಹಿರಿಯ ಅಣ್ಣನೇ ರಾಕ್ಷಸನಾಗಿದ್ದನು. ಉಳಿದ ಇಬ್ಬರು ಅಣ್ಣಂದಿರಿಗೆ ಅವನಲ್ಲಿ ಪ್ರೀತಿ ಗೌರವವಿಲ್ಲದಿದ್ದರೂ ಭಯದಿಂದಲೂ ಸಂಸಾರದ ಗೌರವಕ್ಕಾಗಿಯೂ ಸುಮ್ಮನಿದ್ದರು. ರಾಧೆಯ ಮಕ್ಕಳು ಶಾಲೆಗೆ ಕೂಡ ಸರಿ

ಯಾಗಿ ಹೋಗುತ್ತಿರಲಿಲ್ಲ ಹಿರಿಯಣ್ಣ ಅವರಿಗೆ ಕೊಡಬೇಕಾದ ಶಾಲಾ ಶುಲ್ಕ ಸಹ ಇಲ್ಲವೆನ್ನುತ್ತಿದ್ದನು. ಒಂದು ದಿನ ರಾಧೆಗೆ ಬಹಳ ದುಃಖವೂ ಕೋಪವೂ ಬಂತು. "ಎಲ್ಲಿ ನನ್ನ ಯಜಮಾನರ ಕಡೆಯ ಆರು ಸಾವಿರ ರೂಪಾಯಿ ಕೊಟ್ಟುಬಿಡು. ನನಗೆ ಈ ಜೀತ ಸಾಕಾಗಿತೆ. ನಿನ್ನ ಕೈಯಿನ ಏಟು ತಿಂದು ಹುಡುಗರ ಜೀವ ಅರೆ ಜೀವವಾಗಿದೆ" ಎಂದಳು. ಹಿರಿಯಣ್ಣನ ಕೈಲಿ, ಆರು ಸಾವಿರದ ಪೈಕಿ ಆರು ಕಾಸೂ ಇರಲಿಲ್ಲ. ಅದು ಅದರ ದಾರಿ ಎಂದೋ ಹಿಡಿದುಹೋಗಿತ್ತು. ಕುಬೇರನ ಭಂಡಾರ ಅವನ ಕೈಗೆ ಸಿಕ್ಕಿದ್ದರೂ ಅದರ ಗತಿಯೂ ಆಗುತ್ತಿದ್ದುದು ಹಾಗೆಯೇ. ತನಗೆ ಸಿಕ್ಕಿದ ಪಣವನ್ನು ಮತ್ತೆ ಹಿಂದಕ್ಕೆ ಕೊಡಬೇಕೆಂಬುದು ಎಂದಿಗೂ ಹಿರಿಯಣ್ಣನ ಇಚ್ಛೆಯಾಗಿರಲಿಲ್ಲ. ಅವನು "ಈಗ ಆಗ" ಎಂದು ಇನ್ನೂ ನಾಲ್ಕಾರು ತಿಂಗಳು ಕಾಲ ಕಳೆದನು. ಆ ಅವಧಿಯಲ್ಲಿ ರಾಧೆಯ ಮೇಲಿನ ಕೋಪ ಅವನಿಗೆ ಹೆಚ್ಚಾಯಿತೇ ಹೊರತು ಮತ್ತಾವ ಫಲವೂ ಉಂಟಾಗಲಿಲ್ಲ. ಬೇರೆ ಹೋಗಿ ಹೊಸದಾಗಿ ಸಂಸಾರವನ್ನು ಹೂಡುವುದಕ್ಕಾಗಿಯಾದರೂ ಸಾವಿರ ರೂಪಾಯಿ ಕೊಡಬೇಕೆಂದು ರಾಧೆ ಹಿರಿಯಣ್ಣನನ್ನು ಬೇಡಿದಳು. ಒಬ್ಬರಿಗೊಬ್ಬರಿಗೆ ಕಾವಿನ ಮಾತು ಕತೆ ನಡೆಯಿತು. ವಯಸ್ಸಾದ ತಂದೆಗೆ ರಾಧೆಯ ಮಾತು ನ್ಯಾಯವಾಗಿ ಕಂಡರೂ ಯಾವ ಕೆಲಸವೂ ತಮ್ಮಿಂದ ಸಾಧ್ಯವಿಲ್ಲದೆ ಅವರು ನಿರುಪಾಯರಾಗಿ ಸುಮ್ಮನಾದರು. ಹಿರಿಯಣ್ಣನಿಗೂ ತನಗೂ ಹಣದ ಮಾತು ಇದ್ದಕ್ಕಿದ್ದಂತೆ ಒಂದು ದಿನ ತುಂಬ ವಿರಸವಾದಾಗ, ರಾಧೆ "ಇನ್ನು ಈ ಮನೆಯಲ್ಲಿ ಒಂದು ಗಳಿಗೆಯೂ ಇರುವುದಿಲ್ಲ" ವೆಂದು ಹೇಳಿ ಮಕ್ಕಳೊಡನೆ ತಂದೆಯ ಮನೆ ಬಿಟ್ಟು ಹೊರಟುಬಂದಳು. ಆ ದಿವಸ ಅವಳಿಗೆ ವಾಸಕ್ಕೆ ಬೇರೆ ಬಾಡಿಗೆ ಮನೆ ಯಾವುದೂ ಸಿಕ್ಕಲಿಲ್ಲ. ಬಸವನಗುಡಿಯ ಒಂದು ಧರ್ಮಶಾಲೆಯ ಒಂದು ಕೊಠಡಿಯಲ್ಲಿ ಮೂರು ದಿವಸ ಇರಲು ಆ ವ್ಯವಸ್ಥಾಪಕರ ಅಪ್ಪಣೆಬೇಡಿ ಅಲ್ಲಿಹೋಗಿ ಉಳಿದಳು.

ಮೂರನೆ ದಿವಸ ಸಂಧ್ಯಾಕಾಲದ ವೇಳೆಗೆ ನಾಲ್ಕು ವರುಷದ ಅಕೆಯ ಕಿರಿಯ ಮಗನಿಗೆ ಜ್ವರ ಬಂತು. ಬಿಡುವಿಲ್ಲದ ಕೆಮ್ಮಲು ಬಂತು. ಕೆಮ್ಮಿ ಕೆಮ್ಮಿ ಹುಡುಗ ಪೂರ್ಣವಾಗಿ ನಿಶ್ಶಕ್ತನಾದನು. ಅವನ ಮುಖ ಬೆವತು ಕೆಂಪಾಗಿತ್ತು. ಒಂದೊಂದು ಸಲ ಕೆಮ್ಮಿನೊಂದಿಗೆ ಉಸಿರೂ ಮೇಲೆ ಹೋಗಿ

ಬಿಡುವಂತೆ ಕಾಣುತ್ತಿದ್ದಿತು. ರಾಧಾ ಭಯದಿಂದಲೂ ಯೋಚನೆಯಿಂದಲೂ ಗಡಗಡನೆ ನಡುಗುತ್ತಿದ್ದಳು. ಸಿಟ್ಟಿನ ವೇಳೆಯಲ್ಲಿ ನಾಲ್ಕು ಮಕ್ಕಳನ್ನೂ ಕಟ್ಟಿಕೊಂಡು ಬಂದುಬಿಟ್ಟಿದ್ದಳು. ಮುಂದೇನು ಮಾಡಬೇಕೆಂಬ ಹೊರೆಯೇ ವಿಶೇಷವಾಗಿತ್ತು. ಹೇಗಾದರೂ ನೋಡೋಣ ಎಂದು ಧೈರ್ಯಮಾಡಿಕೊಳ್ಳು ವುದರೊಳಗೆ ಮಗುವಿಗೆ ಖಾಯಿಲೆ. ಕೆಮ್ಮಲನ್ನು ನೋಡಿದರೆ ನ್ಯೂಮೋ ನಿಯ ಆಗುತ್ತೋ ಎಂಬ ಭಯ. ರಾಧಾ ಅಡಿಗೆ ಮಾಡದೆ ಸುಮ್ಮನೆ ಯೋಚಿಸುತ್ತಾ ಕುಳಿತಿದ್ದಳು. ತಾಯಿಯ ಪೆಚ್ಚು ಮುಖವನ್ನು ನೋಡಿ ಉಳಿದ ಮೂರು ಮಕ್ಕಳೂ ಪಿಸಪಿಸನೆ ಮಾತ್ರ ಮಾತನಾಡುತ್ತ ಕುಳಿತಿದ್ದರು. ಧರ್ಮಶಾಲೆಯ ಎದುರು ಗಡೆಯಲ್ಲಿಯೇ ಡಾಕ್ಟರ್ ದಯಾಸಾಗರ್, ಎಂ ಬಿ. ಬಿ.ಎಸ್. ಎಂಬ ಬೋರ್ಡು. ರಾಧೆ ಬೋರ್ಡಿನಕಡೆ ನೋಡಿದಳು ಒಳಗೆ ಡಾಕ್ಟರ್ ಇರುವುದು ಕಂಡಿತು. ಅವಳು ಮಗುವನ್ನು ನೋಡಿಕೊಳ್ಳುವಂತೆ ತನ್ನ ಹಿರಿಯ ಹುಡುಗನಿಗೆ ಹೇಳಿ ಎದುರಿಗಿದ್ದ ಡಾಕ್ಟರ್ ಅಂಗಡಿಗೆ ಹೋದಳು. ಡಾಕ್ಟರ್ ದಯಾಸಾಗರ್ ಆಗಲೇ ಅಂಗಡಿಗೆ ಬೀಗಹಾಕಿ ಹೊರಕ್ಕೆ ಹೊರಟಿದ್ದನು. ಅಂದು ಕಂಪೋಸ್ಮೆಂಟಿನಲ್ಲಿ ಒಂದು ಹೊಸ ತ್ರಿವರ್ಣಚಿತ್ರ ಬಂದಿತ್ತು. ಅದನ್ನು ನೋಡುವುದಕ್ಕೆ ಅವನು ಕಾತರನಾಗಿ ಬೈಸಿಕಲ್ ಏರುವುದರಲ್ಲಿದ್ದನು. ರಾಧೆ ಹೋಗಿ ಸಂಕೋಚದಿಂದ "ಮಗುವಿನ ಸ್ಥಿತಿ ಯನ್ನು ನೋಡಿ ಒಂದು ಔಷಧಿಕೊಟ್ಟು ಹೋಗಬೇಕೆಂದು" ಕೇಳಿಕೊಂಡಳು. ದಯಾಸಾಗರ್‌ಗೆ ದಯವೇ ಬರಲಿಲ್ಲ ರಾಧೆ ಹೇಳಿದುದನ್ನು ಅವನು ಸಾವ ಧಾನವಾಗಿ ಕೇಳಲೂ ಇಲ್ಲ. "ಈಗ ಕ್ಲೋಸ್‌ಮಾಡಿದೆ. ಬೆಳಗ್ಗೆ ಬರು ತ್ತೇನೆ. ಆಗ ಬನ್ನಿ." ಎಂದು ಹೇಳಿ ಆರ್ತಳಾದ ರಾಧೆ ಮತ್ತೆ ಮಾತನಾಡು ವುದಕ್ಕೆ ಮುಂಚೆ ಬೈಸಿಕಲ್ ಏರಿ ಹೊರಟೇಹೋದನು. ರಾಧೆಯು "ದಯಾ ಸಾಗರ್ ದಯಾಸಾಗರ್!" ಎಂಬ ಹೆಸರನ್ನು ಉಚ್ಚರಿಸುತ್ತಾ ಎರಡು ಗಳಿಗೆ ಬೆಪ್ಪಾಗಿ ನಿಂತಿದ್ದು ಧರ್ಮಶಾಲೆಗೆ ಹಿಂದಿರುಗಿದಳು.

ಅವಳು ಹಿಂದಿರುಗುವವೇಳೆಗೆ ಮಗುವಿನ ಕೆಮ್ಮಲು ಇನ್ನೂ ಹೆಚ್ಚಾ ಗಿತ್ತು. ಒಂದು ಗಳಿಗೆಯೂ ಬಿಡುವಿಲ್ಲದೆ ಅದು ಒಂದೇ ಸಮನೆ ಕೆಮ್ಮು ತ್ತಿತ್ತು. ಹೀಗೆ ಇನ್ನಷ್ಟು ಹೊತ್ತು ಕೆಮ್ಮಿದರೆ ಅದರ ಉಸಿರು ಹೋಗುವುದೆಂ ಬುದರಲ್ಲಿ ರಾಧೆಗೆ ಸಂದೇಹವುಳಿಯಲಿಲ್ಲ. ಆ ವೇಳೆಗೆ ರಾತ್ರಿ ಸಮಾರು ಎಂಟು

ಗಂಟೆಯಾಯಿತು. ರಾಧೆ ಗೋಳೋ ಎಂದು ಅಳತೊಡಗಿದಳು. ಧರ್ಮ ಶಾಲೆಯ ಮತ್ತೊಂದು ಕೊಠಡಿಯಲ್ಲಿ ಇಳಿದುಕೊಂಡಿದ್ದ ವಯಸ್ಸಾದ ಹೆಂಗ ಸೊಬ್ಬಳು ರಾಧೆಯ ಕೊಠಡಿಗೆ ಬಂದು ಸಂಗತಿಯನ್ನು ಕೇಳಿ ತಿಳಿದಳು. ಮಗುವನ್ನು ನೋಡಿದಳು. ದಯಾಸಾಗರ್ ಬರಲಿಲ್ಲವೆಂದು ರಾಧೆ ಹೇಳಿದು ದನ್ನು ಕೇಳಿ ಆಕೆ "ಈ ಕಾಲದ ಇಂಗ್ಲಿಷ್ ಡಾಕ್ಟರುಗಳು ಹಾಗೆಯೇ. ಇಲ್ಲಿಂದ ನಾಲ್ಕು ಮನೆ ಆಚೆಗೆ ಧನ್ವಂತರಿ ಆಶ್ರಮ ಎಂಬುದಿದೆ. ನಾನು ಅಲ್ಲಿ ಹೋಗಿ ಔಷಧಿ ತೆಗೆದುಕೊಂಡು ಬರುತ್ತೇನೆ. ಏನೂ ಹೆದರಬೇಡ, ಅನಂತರ ಬೆಳಿಗ್ಗೆ ನೋಡೋಣ" ಎಂದು ಹೇಳಿ ಮಗುವಿನ ವಯಸ್ಸನ್ನೂ ಖಾಯಿಲೆಯ ಸ್ವಭಾವವನ್ನೂ ತಿಳಿದುಕೊಂಡು ಹೋದಳು. ಆ ಅಪರಿಚಿತಳ ಅವ್ಯಾಜ ಪ್ರೇಮದಿಂದ ಆ ಕಷ್ಟದಲ್ಲಿಯೂ ರಾಧೆಗೆ ಸ್ವಲ್ಪ ಸಮಾಧಾನ ವಾಯಿತು.

ಹೋದವಳು ಹಿಂದಿರುಗುವುದಕ್ಕೆ ಇನ್ನೂ ಸ್ವಲ್ಪ ಹೊತ್ತು ಆಗಬಹು ದೆಂದು ಅವಳು ಯೋಚಿಸುತ್ತಿರುವಷ್ಟರಲ್ಲಿಯೇ ಆಕೆ ಬಂದೇ ಬಂದಳು ಅವರ ಹಿಂದೆ ಸುಮಾರು ಐವತ್ತು ವರುಷ ವಯಸ್ಸಿನ ಗಂಭೀರ ಮುಖ ಭಾವದ ಪುರುಷರೊಬ್ಬರು ಕೈಯಲ್ಲಿ ಒಂದು ಪೊಟ್ಟಣದೊಡನೆ ಬಂದರು. ವಯಸ್ಸಾದ ಹೆಂಗಸು ಆಕೆ, ರಾಧೆಗೆ ಅವರನ್ನು ಪರಿಚಯಮಾಡಿಸುವಂತೆ "ಡಾಕ್ಟರು" ಎಂದಳು ಡಾಕ್ಟರ್ ಪ್ರಾಣಾಚಾರ್ಯರು ತತ್‌ಕ್ಷಣ ಹಾಸಿಗೆಯ ಬಳಿಗೆ ಬಂದು ಮಗುವಿನ ನಾಡಿ ಪರೀಕ್ಷಿಸಿದರು. ಕಣ್ಣು, ನಾಲಗೆ, ಎದೆಯನ್ನು ನೋಡಿ ದರು. ರಾಧೆ ಗಾಬರಿಯಿಂದಲೂ ಕಾತರತೆಯಿಂದಲೂ ದೈನ್ಯದಿಂದಲೂ ಅವರ ಕಡೆಯೇ ನೋಡುತ್ತಿದ್ದಳು. ರೋಗಿಯ ಪರೀಕ್ಷೆ ಮುಗಿದನಂತರ ಪ್ರಾಣಾಚಾರ್ಯ ರು ರಾಧೆಯ ಕಡೆ ತಿರುಗಿ "ಏನೂ ಗಾಬರಿ ಇಲ್ಲ. ಹೆದರಿಕೊಳ್ಳಬೇಡಿ ಈ ಪುಡಿಯನ್ನು ಜೇನುತುಪ್ಪದಲ್ಲಿ ಕಲಸಿಕೊಡಿ. ನಿದ್ರೆ ಬಂದುಬಿಟ್ಟರೆ ಬೆಳಗಿನ ವೇಳೆಗೆ ಕೆಮ್ಮಲು ಕಡಿಮೆಯಾಗುತ್ತದೆ. ನಿದ್ರೆಬರದೆ ಕೆಮ್ಮಲು ಬರುತ್ತಲೇ ಇದ್ದರೆ, ಇನ್ನೊಂದು ಪೊಟ್ಟಣವನ್ನು ಕೊಡಿ; ಜ್ವರವೂ ಕಡಿಮೆಯಾಗುತ್ತೆ. ನಾನು ಬೆಳಿಗ್ಗೆ ಬಂದು ನೋಡುತ್ತೇನೆ" ಎಂದು ಹೇಳಿ ಹೊರಟುಹೋದರು. ಅವರ ಕಡೆಯೇ ಕೃತಜ್ಞತೆಯಿಂದ ನೋಡುತ್ತಿದ್ದ ರಾಧೆಗೆ ಆ ಹೆಂಗಸು "ಔಷಧಿ ಕೇಳಿದ್ದಕ್ಕೆ ಅವರೇ ಬಂದರು. ಪಾಪ ಎಷ್ಟು ಒಳ್ಳೆಯವರು!"

ಎಂದರು. ಪ್ರಾಣಾಚಾರ್ಯರು ಕಣ್ಮರೆಯಾಗುವವರೆಗೆ, ಬಿಳಿಯ ಖಾದಿಯನ್ನು ಧರಿಸಿ ಆಜಾನುಬಾಹುವಾಗಿದ್ದ ಅವರನ್ನೇ ಅವಳ ಕಣ್ಣು ಹಿಂಬಾಲಿಸುತ್ತಿತ್ತು. ಕಾಹಿಲೆಯಾದ ಮಗುವನ್ನು ನೋಡುವಾಗಿನ ಅವರ ಮುಖದಲ್ಲಿ ತೋರಿದ ಕನಿಕರ ರಾಧೆಯ ಕಣ್ಣಲ್ಲಿ ಕಟ್ಟಿತು. ಔಷಧಿ ಕೇಳುವುದಕ್ಕೆ ಹೋದರೆ ತಾವಾಗಿಯೇ ಬಂದ ಅವರು, ದೇವರ ದೂತನೆಂದೇ ಆಕೆ ಭಾವಿಸಿದಳು. ಅವರು ಬಂದಮೇಲೆ ಮಗುವಿಗೆ ಗುಣವಾಗುವುದೆಂದೇ ಆಕೆಗೆ ಧೈರ್ಯವಾಯಿತು. ಎದುರಿಗೆ ಇದ್ದ ಅಂಗಡಿ ಯಜಮಾನ ಡಾಕ್ಟರ್ ದಯಾಸಾಗರನ ಜ್ಞಾಪಕವೂ ಬಂತು. ಒಂದಕ್ಕೊಂದಕ್ಕೆ ಎಷ್ಟು ವ್ಯತ್ಯಾಸ! ” ಎಂದುಕೊಂಡಳು.

ಆ ರಾತ್ರಿ ಮಗುವಿಗೆ ಚೆನ್ನಾಗಿ ನಿದ್ರೆ ಬಂತು, ಕೆಮ್ಮಲು ಕಡಿಮೆಯಾಯಿತು ಜ್ವರವೂ ಕಡಿಮೆಯಾಗಿತ್ತು. ಬೆಳಿಗ್ಗೆ ಎಂಟು ಗಂಟೆಯ ವೇಳೆಗೆ ಪ್ರಾಣಾಚಾರ್ಯರು ಬಂದರು. ಮಗುವನ್ನು ಪರೀಕ್ಷಿಸಿದರು. “ ಏನೂ ಭಯವಿಲ್ಲ. ಇನ್ನೂ ಒಂದೆರಡು ಹೊತ್ತು ಔಷಧಿ ಕೊಡಿ, ಆಹಾರ ಪಥ್ಯ ಸಾಮಾನ್ಯವಾಗಿರಲಿ ” ಎಂದರು. ರಾಧೆಯು ಸಂಕೋಚದಿಂದ “ ನೀವು ದೇವರ ಹಾಗೆ ಬಂದಿರಿ, ನನಗೆ ಕೈಕಾಲು ಆಡುವುದೇ ನಿಂತುಹೋಗಿತ್ತು, ರಾತ್ರಿ ನೀವು ಬರದಿದ್ದರೆ ಮಗುವೂ ಉಳಿಯುತ್ತಿರಲಿಲ್ಲ ” ಎಂದಳು. ಪ್ರಾಣಾಚಾರ್ಯರು “ ಅದೆಲ್ಲ ಇಲ್ಲ. ಅಷ್ಟೊಂದು ಹೆದರಲೇಬಾರದು. ದೇವರ ಮೇಲೆ ಭಾರ ಹಾಕಿ ಬಂದವನ್ನು ಅನುಭವಿಸಲು ಸಿದ್ಧರಾಗಿರಬೇಕು ” ಎಂದರು.

ಪ್ರಾಣಾಚಾರ್ಯರು ಸುತ್ತಲೂ ನೋಡಿದರು. ರಾಧೆಯ ಉಳಿದ ಹುಡುಗರು ಒಳ್ಳೆ ಗೆಲುವಾಗಿ ಓಡಾಡುತ್ತಿದ್ದರು. ಅವುಗಳ ಮುಖದಲ್ಲಿ ಉತ್ಸಾಹ ಚೇಷ್ಟೆ ಬುದ್ಧಿ ಉಕ್ಕಿ ಹರಿಯುತ್ತಿತ್ತು. ಅವರಲ್ಲಿ ಪ್ರಾಣಾಚಾರ್ಯರಿಗೆ ವಾತ್ಸಲ್ಯವುಂಟಾಯಿತು ಉದಾರ ಚರಿತ್ರರಿಗೆ ಜಗತ್ತೇ ಸಂಸಾರವಲ್ಲವೆ? ರಾಧೆ ಧರ್ಮಶಾಲೆಯಲ್ಲಿ ಇಳಿದುಕೊಂಡಿದ್ದುದರಿಂದ ಪ್ರಾಯಶಃ ಬೆಂಗಳೂರಿನವರಾಗಿರಲಾರರೆಂದೂ ಯಾವುದೋ ಹಳ್ಳಿಯವರಿರಬೇಕೆಂದೂ ಪ್ರಾಣಾಚಾರ್ಯರು ಊಹಿಸಿದರು. “ ನಿಮ್ಮ ಊರು ಯಾವುದು? ಎಂದು ಕೇಳಿದರು. ಅವರ ವಯಸ್ಸು ಮುಖಭಾವ ಮೃದುಮಾತು ಇವುಗಳಿಂದ ರಾಧೆಗೆ ಅವರಲ್ಲಿ ಭಕ್ತಿಯೂ ಆದರವೂ ಉಂಟಾಯಿತು. ಅವರು ಅನೇಕ ವರುಷಗಳಿಂದ ಪರಿಚಿತರಾದ ಸಮೀಪ ಬಂಧುವಾಗಿ ತೋರಿದರು. ರಾಧೆ ತನ್ನ ಕನಿಕರ ಕಥೆಯನ್ನು

ಹೇಳಿದಳು. ಕತೆಯನ್ನೆಲ್ಲ ಪೂರ್ತಿಯಾಗಿ ಹೇಳಬೇಕೆಂಬುದು ಅವಳ ಪ್ರಾರಂಭದ ಉದ್ದೇಶವಾಗಿರಲಿಲ್ಲ. ಆದರೆ ಪ್ರಾಣಾಚಾರ್ಯರ ವಾತ್ಸಲ್ಯ ಅಪರಿಚಿತರನ್ನೂ ಹಾಗೆ ಚಿರಪರಿಚಿತರನ್ನಂತೆ ಬಂಧಿಸಿತ್ತು.

ಅವ್ಯಾಜವಾದ ಪ್ರೇಮ ಕೆಲವು ಮಹನೀಯರ ಸ್ವಭಾವವಾಗಿರುತ್ತದೆ. ಅದು ಶುದ್ಧ ಹುಚ್ಚುತನ ಎನ್ನುವ ಮಟ್ಟಿಗೆ, ಆಧುನಿಕ ನಾಗರೀಕತೆ ಹೋಗಿದೆ. ಅಬಲರಿಗೆ ಸಹಾಯಮಾಡುವುದೇ ತಮ್ಮ ಜೀವನದ ಗುರಿಯೆಂದು ಪ್ರಾಣಾಚಾರ್ಯರು ಅರಿತಿದ್ದರು ಗಾಂಧಿ ಬದುಕಿದ್ದ ಯುಗದಲ್ಲಿ ಅವರು ಬದುಕಿದ್ದುದೂ, ಗಾಂಧಿಯವರ ಆವೇಶದಂತೆ ತುರಂಗವಾಸವನ್ನು ಅನುಭವಿಸಿದುದೂ, ತಿಲಕರ ಸಂದೇಶವನ್ನು ಹೊಂದಿದುದೂ ಬರಿಯ ವ್ಯಾಪಾರಕ್ಕಾಗಿ ಅಲ್ಲ. ದೇಶ ಸೇವೆಯೂ, ಒಂದು ಲಾಭದ ವ್ಯಾಪಾರವಾದ ನಲವತ್ತೇಳರ ನಂತರ ಕಾಂಗ್ರೆಸ್ ಅಥವ ಗಾಂಧಿ ಭಕ್ತರಲ್ಲ ಅವರು. ದೇಶಸೇವೆ ನಿಜವಾದ ಮುಳ್ಳಿನ ಹಾಸಿಗೆಯೂ, ಛಡಿ ಹೊಡೆತವೂ, ಆಸ್ತಿ ಮುಟ್ಟುಗೋಲೂ, ಕೊನೆಗೆ ಮರಣ ದಂಡನೆಯೂ ಆಗುತ್ತಿದ್ದ ಕಾಲದ ಗಾಂಧಿ ಭಕ್ತರು ಅವರು. ಅಧಿಕಾರ ಖಂಡಿತವಾಗಿ ತಮ್ಮ ಕೈ ಬರುವುದೆಂದು ತಿಳಿದನಂತರ ಗಾಂಧಿ ಭಕ್ತರಾದವರಲ್ಲ ಅವರು. ನಮ್ಮ ಜನತೆಯ ಅವಿದ್ಯೆ ದಾರಿದ್ರ್ಯ ಮೂಢಭಕ್ತಿ ಕೃಪಣತೆ ಎಂದೂ ಅವರ ಕಣ್ಣಿನಿಂದ ಮರೆಯಾಗಲಿಲ್ಲ.

ರಾಧೆಯ ದುಃಖದ ಕತೆ ಕೇಳಿ ಪ್ರಾಣಾಚಾರ್ಯರ ಹೃದಯಕ್ಕೆ ಬರೆ ಬಿದ್ದಂತೆ ಆಯಿತು. ಆವರಿಗೆ ಅಂತಹ ಎಷ್ಟೋ ಹೆಣ್ಣುಗಳಿಗೆ ಅವರು ದಿಕ್ಕು ತೋರಿಸಿ ಅವರ ಬಾಳಿನ ಹೊರೆಯನ್ನು ಕಡಿಮೆಮಾಡಿದ್ದರು. ಒಂದೊಂದು ಸಲ ಹಾಗೆ ಮಾಡಿದಾಗಲೂ ಅವರ ಮನಸ್ಸಿಗೆ ದೈವಿಕವಾದ ತೃಪ್ತಿಯುಂಟಾಗಿ ತಮ್ಮ ಬಾಳು ಸಾರ್ಥಕವಾದ ಭಾವನೆಯುಂಟಾಗುತ್ತಿತ್ತು. ನನ್ನ ಹೃದಯ ಹೀಗೆ ಪರಿಶುದ್ಧವಾಗುವುದಕ್ಕೆ ಅವಕಾಶವಾಯಿತೆಲ್ಲ. ನನ್ನಿಂದ ಈ ಪ್ರಾಣಿಗೆ ಉಪಕಾರವಾಯಿತೆಲ್ಲ. ತನ್ನ ಸಂದೇಶವನ್ನು ಸಾರಲು ಭಗವಂತ ಇಷ್ಟರ ಮಟ್ಟಿಗಾದರೂ ನನ್ನನ್ನು ಉಪಯೋಗಿಸಿಕೊಂಡನೆಲ್ಲ ಎಂದು ಅವರಿಗೇ ಕೃತಜ್ಞತೆಯೂ ನಮ್ರತಾಭಾವವೂ ಉಂಟಾಗುತ್ತಿದ್ದಿತು. ರಾಧೆಯ ಕತೆಯನ್ನು ಕೇಳಿ ಪ್ರಾಣಾಚಾರ್ಯರು ತಾವೇ ಆ ಸಂಸಾರದ ಸೇವಕರೆಂದೂ ತನ್ನ ಸೇವೆ ಕೈಗೊಳ್ಳಲು ಭಗವಂತನೇ ಈ ರೂಪದಲ್ಲಿ ಬಂದಿರುವನೆಂದೂ ಭಾವಿಸಿದರು.

ರಾಧೆ, ಎರಡು ದಿನಗಳೊಳಗಾಗಿ ತನ್ನ ಕೈಯಲ್ಲಿದ್ದ ಒಂದು ಬಳೆಯನ್ನು ಮಾರಿ, ಅಲ್ಲಿಯೇ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ಮಾಡಿಕೊಂಡಳು. ಆಕೆ ಪ್ರಾಣಾಚಾರ್ಯರನ್ನು ನಿಜವಾಗಿಯೂ ತಂದೆಯಂತೆಯೇ ಭಾವಿಸಿದಳು. ಪ್ರಾಣಾಚಾರ್ಯರ ಧನ್ವಂತರೀ ಆಶ್ರಮ ವೈದ್ಯಶಾಲೆ ಮಾತ್ರವೇ ಅಲ್ಲದೆ ಬಡವರಿಗೆ ಸೇವೆಮಾಡುವ ಸೇವಾಶ್ರಮವೂ ಆಗಿತ್ತು. ಪ್ರಾಣಾಚಾರ್ಯರ ಪ್ರೇಮಕ್ಕೆ ಒಳಗಾಗದವರು ಯಾರು ಇರಲಿಲ್ಲ. ದೀನರು ದಳಿತರು ಸಮಾಜ ದೃಷ್ಟಿಯಿಂದ ಪತಿತರಾದವರು ಎಲ್ಲರೂ ಅಲ್ಲಿ ಆಶ್ರಯ ಪಡೆದಿದ್ದರು. ಎಲ್ಲದಕ್ಕಿಂತ ಹೆಚ್ಚಾಗಿ ಸ್ತ್ರೀಯರ ಉದ್ಧಾರವೇ ಪ್ರಾಣಾಚಾರ್ಯರ ಮುಖ್ಯ ಗುರಿಯಾಗಿತ್ತು. ಅವರ ಕಣ್ಣಿಗೆ ಬಿದ್ದ ಗತಿಗೆಟ್ಟ ಸ್ತ್ರೀಗೆ ಗತಿ ತೋರಿಸುವುದೇ ಅವರ ಗುರಿಯಾಗಿತ್ತು. ಅವರು ಎಲ್ಲರನ್ನು ಸೇವೆಗೆ ತೊಡಗಿಸುತ್ತಿದ್ದರು ಪ್ರಾಣಾಚಾರ್ಯರು ರಾಧೆಗೆ ಮೊದಮೊದಲು "ಮಕ್ಕಳ ತಾಯಿಯಾದ ನೀನು ಸಣ್ಣಸಣ್ಣ ರೋಗಗಳಿಗೆಲ್ಲ ಔಷಧಿ ತಿಳಿದುಕೊಳ್ಳಬೇಕು. ಇಂಗ್ಲಿಷ್ ಔಷಧಿಗಳಿಗೆ ಹಣ ಸುರಿಯಲು ನಮ್ಮ ಬಡವರಿಗೆ ಎಲ್ಲಿ ಸಾಧ್ಯ? ನಮ್ಮಂತಹ ಬಡವರ ಸೇವೆಗೆ ಆ ಇಂಗ್ಲಿಷ್ ವೈದ್ಯರುತಾನೇ ಎಲ್ಲಿ ಒದಗುತ್ತಾರೆ. ಆಯುರ್ವೇದ ಔಷಧಿಗಳು ಸುಲಭವಾಗಿ ದೊರಕುತ್ತವೆ. ಅಷ್ಟೊಂದು ಬೆಲೆಬಾಳುವುವೂ ಅಲ್ಲ. ಸಣ್ಣ ಪುಟ್ಟ ಕಾಯಿಲೆಗಳನ್ನು ನಾವೇ ಗುಣಪಡಿಸಿಕೊಳ್ಳಬಹುದು" ಎಂದರು. ರಾಧೆ ಕೆಮ್ಮಲು ಜ್ವರ ಅಜೀರ್ಣ ತಲೆನೋವು ಹೊಟ್ಟೆನೋವು ಚಿಕ್ಕಗಾಯಗಳು ಇವುಗಳಿಗೆಲ್ಲ ಚಿಕಿತ್ಸೆಮಾಡುವುದನ್ನು ಅಭ್ಯಾಸಮಾಡಿಕೊಂಡಳು ಆ ಚಿಕಿತ್ಸೆಗಳಿಂದ ತನ್ನ ಮಕ್ಕಳಿಗೆ ಮಾತ್ರವೇ ಅಲ್ಲದೆ ಇತರರ ಮಕ್ಕಳಿಗೂ ತಾನು ಉಪಕಾರಿಯಾದುದು ರಾಧೆಗೆ ಬಹಳ ಸಂತೋಷವನ್ನುಂಟುಮಾಡಿತು. ತಾನು ಜನರಿಗೆ ಇನ್ನೂ ಹೆಚ್ಚು ಉಪಕಾರಿಯಾಗಬೇಕಾದರೆ ಇನ್ನೂ ಹೆಚ್ಚು ವೈದ್ಯ ಪರಿಶ್ರಮವುಳ್ಳವಳಾಗಬೇಕೆಂಬುದು ಆಕೆಗೆ ತೋರ್ಣಾಯಿತು. ಆಕೆ ಪ್ರಾಣಾಚಾರ್ಯರಲ್ಲಿ ತನ್ನ ಈ ಬಯಕೆಯನ್ನು ತಿಳಿಸಿದಳು. ಪ್ರಾಣಾಚಾರ್ಯರು "ನಿನಗೆ ಈ ಆಸೆ ಉಂಟಾಗಲಿ ಎಂದೇ ನಾನು ಕಾದಿದ್ದೆ" ಎಂದು ಹೇಳಿ ರಾಧೆಗೆ ಆಯುರ್ವೇದ ವೈದ್ಯಭಾಗ, ಅದಕ್ಕೆ ಸಂಬಂಧಪಟ್ಟ ಸಾಹಿತ್ಯಭಾಗ ಎಲ್ಲವನ್ನೂ ಕಲಿಸಿದರು. ರಾಧೆಯ ಶ್ರದ್ಧೆ ಬುದ್ಧಿಯ ಚುರುಕು ಇವನ್ನು ಕಂಡು ಪ್ರಾಣಾಚಾರ್ಯರಿಗೆ ಬಲು ಮೆಚ್ಚಿಕೆಯಾಯಿತು. ಆಕೆಯನ್ನು ಅವರು ಆಯುರ್ವೇದ

ಪರೀಕ್ಷೆಗೆ ಸಹ ಕೂರಿಸಿ ವೈದ್ಯರ ಬೋರ್ಡ್‌ನಿಂದ ಆಕೆಗೆ ಸರ್ಟಿಫಿಕೇಟು ಸಹ ತರಿಸಿಕೊಟ್ಟರು.

ಪ್ರಾಣಾಚಾರ್ಯರ ಸಲಹೆಯಮೇಲೆ ರಾಧೆ ಬೆಂಗಳೂರಿನ ಬಡಾವಣೆಗೆ ಸೇರಿದ ಹಳ್ಳಿಯೊಂದರಲ್ಲಿ ಕಸ್ತೂರಿಬಾ ಚಿಕಿತ್ಸಾಲಯವನ್ನು ಸ್ಥಾಪಿಸಿದ್ದಾಳೆ. ಬಡವರಿಗೆ ಉಚಿತವಾಗಿಯೇ ಸೇವೆ ಮಾಡುತ್ತಾಳೆ. ಆವಶ್ಯಕ ಬಂದಾಗ ಸುತ್ತಲ ಹಳ್ಳಿಗಳಿಗೆ ಹೋಗಿ ವೈದ್ಯ ಚಿಕಿತ್ಸೆಮಾಡುತ್ತಾಳೆ ಅವಳ ಮಕ್ಕಳೆಲ್ಲ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಒಂದು ಮನೆ ಚಿಕಿತ್ಸಾಲಯ ಎಲ್ಲ ಅವಳ ಆಸ್ತಿಗಳಾಗಿವೆ. ಆದರೆ ಅದಾವುದರಿಂದಲೂ ರಾಧೆಗೆ ತನ್ನ ಹಿಂದಲ ಕನಿಕರ ಸ್ಥಿತಿ ಮರೆತಿಲ್ಲ. ನಾವಿಕನಿಲ್ಲದೆ ಬಿರುಗಾಳಿಗೆ ಸಿಕ್ಕಿದ ದೋಣಿಯಂತಿದ್ದ ತನ್ನ ಬಾಳು ಹೀಗೆ ಒಂದು ಗುರಿಯುಳ್ಳದುದಾಗಿ ಜನೋಪಯುಕ್ತವಾದುದು ಪ್ರಾಣಾಚಾರ್ಯರಂತಹ ನಿಸ್ವಾರ್ಥಸೇವಕರ ದಯೆಯಿಂದ ಎಂದು ತಿಳಿದು ತನ್ನ ಗುರುವಿನ ಸೇವೆಯ ಬುದ್ಧಿಯನ್ನೇ ಅವಳೂ ಅನುಕರಿಸುತ್ತಿದ್ದಾಳೆ. "ನಂಟನಿಗೆ ನಂಟ ಮಾರಿ" ಎಂಬ ಗಾದೆ ಅನುಭವವಿಲ್ಲದೆ ಹುಟ್ಟಲಿಲ್ಲ. ನೆಂಟರು ನೀಚರಾದರೆ ಅವರ ದ್ವೇಷ ಯಾವ ನೀಚ ಮಟ್ಟವನ್ನು ಬೇಕಾದರೂ ಮುಟ್ಟುವುದು. ರಾಧೆಯ ಅಣ್ಣಂದಿರಿಗೆ ಆಕೆ ಮನೆಯನ್ನು ಬಿಟ್ಟುಹೋದುದೂ ಅವಳ ದುರ್ಗುಣವಾಗಿಯೇ ತೋರಿತು. ತಮ್ಮ ಪಂಗಿನ ಆಶ್ರಯವನ್ನು ತೊರೆದುಹೋದ ಅವಳ ಚಾರಿತ್ರ್ಯದಲ್ಲಿ ದೋಷವನ್ನು ಎಣಿಸಲೂ ಅವರು ಹಿಂಜರಿಯಲಿಲ್ಲ. ಒಂದು ಸ್ತ್ರೀ, ತಮ್ಮ ತಂಗಿಯೇ ಆದರೂ ಆತ್ಮಗೌರವವನ್ನಿಟ್ಟುಕೊಂಡು ಸ್ವತಂತ್ರವಾಗಿ ಬಾಳಬಲ್ಲಳೆಂಬುದು ಅವರಿಕೆ ನಂಬಿಕೆ ಇರಲಿಲ್ಲ. ಅಕೆಯ ದೂಷಣೆಯ ಪ್ರಚಾರವನ್ನು ಅವರು ಸಾಧ್ಯವಾದಷ್ಟು ಮಾಡಿದರು. ಆದರೆ ರಾಧಾ, ಡಾಕ್ಟರ್ ರಾಧಾಬಾಯಿ ಆಗಿ ಬಡವರೆಲ್ಲ "ಆಕೆಯೇ ನಮ್ಮ ತಾಯಿ ಮಹಾಲಕ್ಷ್ಮಿ ಆಕೆಯ ಪಾದವೇ ಗತಿ" ಎಂದು ಹೇಳಲು ಪ್ರಾರಂಭಿಸಿದಾಗ ಅವರಿಗೆ ರಾಧೆ ಮತ್ತೂ ಒಂದು ಸಮಸ್ಯೆಯೇ ಆದಳು. ಜತೆಯಲ್ಲಿ ಹುಟ್ಟಿದ ಆ ಬಗೆಯ ಅಣ್ಣಂದಿರು—ಅವ್ಯಾಜಪ್ರೇಮದ ಪ್ರಾಣಾಚಾರ್ಯರು; ಎರಡನ್ನೂ ಹೋಲಿಸುತ್ತಾ ರಾಧಾಬಾಯಿ ಈ ಜಗತ್ತು ಹೀಗೇ ಎಂದು ಸಮಾಧಾನಮಾಡಿಕೊಳ್ಳುವಳು. ಪ್ರಾಣಾಚಾರ್ಯರು ಕೈ ಹಿಡಿಯದಿದ್ದರೆ ಮಾತ್ರ ತನ್ನ ಬಾಳು ಹೀಗೆ ಅರಳುತ್ತಿದ್ದಿತೆಂದು ಆಕೆ ನಂಬಲಿಲ್ಲ. ಆಕೆ ಪ್ರಾಣಾಚಾರ್ಯರ ಫೋಟೋವನ್ನು ತನ್ನ

ಚಿಕಿತ್ಸಾಲಯದಲ್ಲಿ ತೂಗಹಾಕಿದಳು. ಅವಳಿಂದ ಉಪಕೃತರಾದವರು ಬಂದು "ನಿಮ್ಮಿಂದ ಬಾಣಂತಿ ಉಳಿದುಕೊಂಡರು ; ದೇವರಂತೆ ಬಂದಿರಿ, ಮಗು ಬದುಕಿತು" ಎಂದೆಲ್ಲ ಕೈ ಮುಗಿಯುವಾಗ ರಾಧಾಬಾಯಿ ಪ್ರಾಣಾಚಾರ್ಯರ ಫೋಟೋವನ್ನು ತೋರಿಸಿ "ನನ್ನಂತಹ ನೂರಾರು ದಿಕ್ಕಿಲ್ಲದಿದ್ದ ಜನರಿಗೆ ಜೀವನದ ಗುರಿ ತೋರಿಸಿ ಸೇವೆಗೆ ತೊಡಗಿಸಿದ ಈ ಮಹಾನುಭಾವರಿಗೆ ಕೈಮುಗಿಯಿರಿ" ಎಂದು ನಮ್ರತೆಯಿಂದ ಹೇಳುತ್ತಿದ್ದಳು.

❖ ❖ ❖

ಪ್ರಾಣಾಚಾರ್ಯರದು ಈ ಬಗೆಯ ಸಾಹಸದ ಬಾಳು. ಅವರಿಗೆ ಸ್ವಂತ ಸಂಸಾರದ ಕೋಟಲೆಯೂ ಇಲ್ಲವೆ ಇರಲಿಲ್ಲ. ಆದರೆ ಅವರ ಸಂಸಾರ ಬಹು ಸಣ್ಣದಾಗಿತ್ತು. ಮನೆಯಲ್ಲಿ ಹೆಂಡತಿ ಮತ್ತು ಒಬ್ಬಳೇ ಹೆಣ್ಣುಮಗಳು. ಹೆಣ್ಣುಮಗಳು ಮದುವೆಗೆ ಬೆಳೆದು ನಿಂತಿದ್ದಳು. ಪ್ರಾಣಾಚಾರ್ಯರು ಇಷ್ಟೆಲ್ಲ ಸಮಾಜ ಸುಧಾರಕರಾದರೂ ಮಗಳು ಲಕ್ಷ್ಮಿ ನಿಜವಾಗಿಯೂ ಒಳ್ಳೆ ಚೆಲುವೆಯೇ ಆಗಿದ್ದರೂ, ಧನವಿಲ್ಲದಿದ್ದ ಆ ತಂದೆಯ ಮಗಳನ್ನು ವಿವಾಹವಾಗುವ ಧೀರರು ನಮ್ಮ ದೇಶದ ಯುವಕರಲ್ಲಿ ಯಾರೂ ಇರಲೇ ಇಲ್ಲ. "ಹೆಣ್ಣಿಗಾಗಿಯೇ ಹೆಣ್ಣನ್ನು ಮದುವೆಯಾಗುತ್ತೇನೆ. ಹಣಕ್ಕಲ್ಲ, ದೊಡ್ಡಸ್ತಿಕೆಗಲ್ಲ ಮಾವನ ಘನತೆಗಲ್ಲ" ಎಂದು ಹೇಳುವ ಯುವಕ, ಈ ಮೂವತ್ತೈದು ಕೋಟಿಯಲ್ಲಿ ಒಬ್ಬನೂ ಇರಲೇ ಇಲ್ಲ. ಅವರು ಕಲಿತ ವಿದ್ಯೆ ಹೆಚ್ಚಾದಷ್ಟೂ ಅವರು ಹೆಚ್ಚು ಹೇಡಿಗಳೂ ಅಸಂಸ್ಕೃತರೂ ದುರಾಶಾಪೀಡಿತರೂ ಆಗಿರುವುದು ಪ್ರಾಣಾಚಾರ್ಯರ ಅನುಭವಕ್ಕೆ ಬಂದಿತು ಅವರು ಎರಡು ಮೂರು ವರ್ಷಗಳವರೆಗೆ ಬಿ ಎ , ಎಂ ಎ., ಬಿ.ಎಸ್.ಸಿ. ಎಂಬ ಅಕ್ಷರಗಳನ್ನು ಜೋಡಿಸಿಕೊಂಡಿದ್ದ ಪದವೀಧರರ ಬೇಟಿಮಾಡಿದರು. ಆದರೆ ಆ ಪದವೀಧರರಿಗೆ ವಿವೇಕವಾಗಲೀ ಕರುಣೆಯಾಗಲೀ ಇರಲಿಲ್ಲವೆಂಬುದು ಅವರಿಗೆ ಬೇಗ ಗೊತ್ತಾಯಿತು. ಹೇಗಾದರೂ ಮಾಡಿ ಯಾರ ಖರ್ಚಿನಲ್ಲಾಗಲಿ ದುಡ್ಡು ಹೊಡೆದು ಸುಖವಾಗಿರಬೇಕೆಂಬುದೇ ಅವರ ಗುರಿಯಾಗಿರುವುದು ಪ್ರಾಣಾಚಾರ್ಯರಿಗೆ ತಿಳಿಯಿತು. ಆದುದರಿಂದ ಅವರು ತಮ್ಮ ಒಳಪಂಗಡವನ್ನು ಬಿಟ್ಟು ತಮ್ಮ ಶಿಷ್ಯನಾಗಿದ್ದ ಸರ್ವವಿಧದಲ್ಲಿಯೂ ಯೋಗ್ಯನಾಗಿದ್ದ ಬಡವನೊಬ್ಬನಿಗೆ ಲಕ್ಷ್ಮಿಯನ್ನು ಕೊಡಬೇಕೆಂದು ನಿಶ್ಚಯಿಸಿದರು. ಹೆಣ್ಣು ಗಂಡುಗಳು ಪರಸ್ಪರರನ್ನು ಮೆಚ್ಚಿ

ಒಪ್ಪಿದರು. ಆದರೆ ಗಂಡಿಗೆ ಸಂಗೀತದಲ್ಲಿ ತುಂಬ ಆಸೆ ಪ್ರೀತಿ. ಅವನ್ನು ಅರಿತ ಲಕ್ಷ್ಮಿ ತಾನೂ ಗಾಯನದಲ್ಲಿ ಸ್ವಲ್ಪ ಪಳಗಬೇಕೆಂದು ಬಯಸಿದಳು. ಪ್ರಾಣಾಚಾರ್ಯರಿಗೂ ಆಸೆ ಅಭಿರುಚಿ ಇದ್ದವು. ಸೀತಾಲಕ್ಷ್ಮಿಯ ವಿವಾಹಕಾಲದಲ್ಲಿ ಪ್ರಾಣಾಚಾರ್ಯರು ಮಲ್ಲಿಗೆಹಳ್ಳಿಗೆ ಬಂದಿದ್ದರಷ್ಟೆ. ಆಗ ಸೀತಾಲಕ್ಷ್ಮಿಯ ಸಂಗೀತ ಪ್ರೌಢಿಮೆ ಅವರಿಗೆ ಗೊತ್ತಾಗಿತ್ತು. ತಮ್ಮ ಮಗಳು ಸಂಗೀತದಲ್ಲಿ ಹೆಚ್ಚು ಪ್ರವೀಣಳಾಗಬೇಕೆಂದು ಬಯಸಿದಾಗ ಪ್ರಾಣಾಚಾರ್ಯರಿಗೆ ಸ್ವಾಭಾವಿಕವಾಗಿ ಸೀತಾಲಕ್ಷ್ಮಿಯ ಜ್ಞಾಪಕ ಬಂತು. ಆಕೆಯನ್ನು ಕರೆದುಕೊಂಡು ಹೋಗಿ ಮಗಳಿಗೆ ಪಾಠ ಹೇಳಿಸಬೇಕೆಂದು ಅವರು ಮಲ್ಲಿಗೆಹಳ್ಳಿಗೆ ಬಂದಿದ್ದರು.

ಹಳ್ಳಿಯ ಕಡೆಗೆ ತಲೆ ಹಾಕದೆ ತಮ್ಮ ಪಾಡಿಗೆ ತಾವು ತಮ್ಮ ಕರುಣೆಯ ಕಾರ್ಯದಲ್ಲಿ ತೊಡಗಿದ್ದ ಪ್ರಾಣಾಚಾರ್ಯರಿಗೆ, ತಾವು ಮಲ್ಲಿಗೆಹಳ್ಳಿಯಲ್ಲಿ, ಮದುವೆಯಾಗುವಾಗ ನೋಡಿದ್ದ ಸುರಸುಂದರಿ ಸೀತಾಲಕ್ಷ್ಮಿಗೆ ಈಚೆಗೆ ಸಂಭವಿಸಿದ ಅಪಾಂತರಗಳೊಂದೂ ಗೊತ್ತೇ ಇರಲಿಲ್ಲ. ಆಕೆ ಸುಖವಾಗಿ ರಂಭಾಪುರಿಯಲ್ಲಿ ಗಂಡನ ಮನೆಯಲ್ಲಿರಬಹುದೆಂದೇ ಅವರು ನಂಬಿದ್ದರು. "ರಂಭಾಪುರಿಯಲ್ಲಿದ್ದರೂ ಚಿಂತೆಯಿಲ್ಲ ಅವರೂ ಏನೂ ನನಗೆ ದೂರದವರಲ್ಲ. ಶ್ರೀನಿವಾಸನನ್ನೋ ರಾಮಸ್ವಾಮಿಯನ್ನೋ ಜತೆಯಲ್ಲಿ ಕರೆದುಕೊಂಡು ಹೋದರೆ ಸೀತಾಲಕ್ಷ್ಮಿಯನ್ನು ಎರಡು ಮೂರು ತಿಂಗಳು ಕಳುಹಿಸುತ್ತಾರೆ" ಎಂದು ಯೋಚಿಸುತ್ತಾ ಅವರು ಮಲ್ಲಿಗೆಹಳ್ಳಿಗೆ ಬಂದಿದ್ದರು. ಆದರೆ ಮಲ್ಲಿಗೆಹಳ್ಳಿಗೆ ಅವರು ಬಂದ ಎರಡು ಗಂಟೆಗಳೊಳಗಾಗಿಯೇ ಅವರಿಗೆ ನಡೆದ ಸಂಗತಿಗಳೆಲ್ಲ ಒಂದು ಚೂರೂ ತಪ್ಪದೆ ವರದಿಯಾದವು. ಒಳ್ಳೆಯ ಅನುಭವಶಾಲಿಗಳಾದ ಅವರು ವಿಷಯಗಳು ತಮ್ಮ ಕಣ್ಣಮುಂದೆ ನಡೆದಿದ್ದರೆ ಹೇಗೋ ಹಾಗೆ ಸ್ಪಷ್ಟವಾಗಿ ಎಲ್ಲವನ್ನೂ ಅರಿತರು. ಪಾತ್ರಗಳ ಮನೋವ್ಯಾಪಾರ ವೇದನೆಗಳೂ ಅವರಿಗೆ ಅರ್ಥವಾದವು. ಸ್ವಭಾವದಿಂದ ಕರುಣಾಶಾಲಿಗಳೂ ಉದಾರ ಚರಿತ್ರರೂ ಆದ ಅವರಿಗೆ ಮೊದಲು ಸೀತಾಲಕ್ಷ್ಮಿಯಲ್ಲಿ ಕನಿಕರವುಂಟಾಯಿತು ಅದೇ ಕನಿಕರ ಸುಂದರರಾಜನಲ್ಲಿಯೂ ಉಂಟಾಯಿತು.

ಆದರೆ ಪ್ರಾಣಾಚಾರ್ಯರು ಜನಿಸಿದ್ದುದೇ ಜನೋಪಕಾರಕ್ಕಾಗಿ. ವಿಷಯಗಳನ್ನು ಕೇಳಿ ಅವರಿಗೆ ಗಾಬರಿಯಾಗಲೀ ನಿರುತ್ಸಾಹವಾಗಲೀ ಉಂಟಾಗಲಿಲ್ಲ. "ನಾನೊಂದು ಉಪಕಾರ ಹೊಂದಲು ಬಂದೆ. ಇಲ್ಲಿ ನೋಡಿದರೆ ಭಗವಂತ

ತನಗೇ ಒಂದು ಕಾರ್ಯ ಇಟ್ಟಿದ್ದಾನೆ" ಎಂದುಕೊಂಡರು ಅವರು. ಸೀತಾ ಲಕ್ಷ್ಮಿ ಅವರಿಗೆ ವೈದ್ಯನು ಪರೀಕ್ಷಿಸಬೇಕಾದ ರೋಗಿಯಾಗಿ ತೋರಿದಳು. ನಾಗರಹಾವಿನಂತೆ ನಲಿಯುತ್ತಾ ಒಯ್ಯಾರದಿಂದ ಅಲ್ಲಿಂದಿಲ್ಲಿಗೆ ಹುಳಿದಾಡುತ್ತಿದ್ದ ಮಿಂಚಿನ ಕುಡಿ, ಪಾಪ ಧೂಳಿನಲ್ಲಿ ಬಿದ್ದ ಹೂವಿನಂತೆ ಹೊರಳಾಡುತ್ತಿರ ಬಹುದು ಎಂದು ಅವರು ನಿಟ್ಟುಸಿರು ಬಿಟ್ಟರು. ಅವರಿಗೆ ತಾವು ಯಾತಕ್ಕಾಗಿ ಬಂದಿದ್ದರೋ ಆ ಸ್ವಂತಕಾರ್ಯ ಮರೆತೇಹೋಗಿ ಆ ನೊಂದ ಜೀವವನ್ನು ಎಷ್ಟುಬೇಗ ಸಂತೈಸುತ್ತೇನೆಯೋ ಎಂಬ ಕಾತುರವಾಯಿತು. ಅವರು ತಮ್ಮ ಮನಸ್ಸಿನ ದುಗುಡವನ್ನು ಮುಖದಮೇಲೆ ತೋರಿಸದೆ ಶ್ರೀನಿವಾಸನ ಮನೆಗೆ ಹೋದರು

ಪ್ರಾಣಾಚಾರ್ಯರು ಬಂದುದು ಮಧ್ಯಾಹ್ನವೇ ಊರಿಗೆಲ್ಲ ತಿಳಿದಿತ್ತು. ಶ್ರೀನಿವಾಸನಿಗೂ ತಿಳಿದಿತ್ತು. ಆದರೆ ತಾವು ಬಂದ ಉದ್ದೇಶವನ್ನು ಪ್ರಾಣಾ ಚಾರ್ಯರು ಯಾರಿಗೂ ಹೇಳಿರಲಿಲ್ಲವಾಗಿ ಅದು ಒಬ್ಬರಿಗೂ ಗೊತ್ತಾಗಿರಲಿಲ್ಲ ಆದರೆ ಪ್ರಾಣಾಚಾರ್ಯರಿಗೂ ಮದುವೆಗೆ ಬೆಳೆದು ನಿಂತ ಹೆಣ್ಣು ಇದ್ದುದು ಎಲ್ಲ ರಿಗೂ ಗೊತ್ತಿದ್ದುದರಿಂದ ಗಂಡನ್ನು ಹುಡುಕುವುದಕ್ಕಾಗಿ ಬಂದಿರಬಹುದೆಂದು ಜನ ಊಹಿಸಿದರು ಶ್ರೀನಿವಾಸನೂ ಹಾಗೆಯೇ ಭಾವಿಸಿದನು. ಮಾತ ನಾಡುತ್ತಾ, ಆಡುತ್ತಾ, ಪ್ರಾಣಾಚಾರ್ಯರು ಶ್ರೀನಿವಾಸನ ಬಾಯಿಂದಲೇ ಸೀತಾಲಕ್ಷ್ಮಿಯ ಸುದ್ದಿಯನ್ನೆಲ್ಲ ಹೊರಡಿಸಿದರು. ಹೇಳಲು ಶ್ರೀನಿವಾಸನಿಗೆ ಹೆಚ್ಚು ಆಹ್ವಾನವೂ ಬೇಕಾಗಲಿಲ್ಲ. ಅವನ ಅಸಮಾಧಾನ ಬೇಸರಿಕೆಗಳು, ಸೀತಾಲಕ್ಷ್ಮಿ ಒಡವೆಯನ್ನು ಸುಂದರರಾಜನಿಗಾಗಿ ಕೊಟ್ಟಮೇಲಿಂದ ಇನ್ನೂ ಹೆಚ್ಚಾಗಿಯೇ ಇದ್ದವು. ಮತ್ತು ಪ್ರಾಣಾಚಾರ್ಯರು ಬಹುದಿನಗಳ ನಂತರ ಬಂದ ನೆಂಟರಾಗಿದ್ದುದರಿಂದ ಶ್ರೀನಿವಾಸನು ಒಂದು ವಿಧವಾದ ಆತ್ಮೀಯತೆಯ ಬಾಂಧವ್ಯದಿಂದಲೂ, ಅನ್ಯಾಯ ದುರಾಕ್ರಮಣಕ್ಕೆ ತುತ್ತಾದ ನೊಂದವನ ಭಾವನೆಯಿಂದಲೂ ಹೇಳಿದನು.

ವಿಷಯವನ್ನೆಲ್ಲ ಪೂರ್ಣವಾಗಿ ಕೇಳಿದನಂತರ ಪ್ರಾಣಾಚಾರ್ಯರು ತಾವು ಬಂದಿದ್ದ ಉದ್ದೇಶವನ್ನು ಶ್ರೀನಿವಾಸನಿಗೆ ಹೇಳಿದರು "ಮಗಳು ಲಕ್ಷ್ಮಿಗೆ ಮದುವೆ ಗೊತ್ತಾಗಿದೆ. ಅಳಿಯನಿಗೆ ಸಂಗೀತದ ಆಸೆ. ಲಕ್ಷ್ಮಿಯೂ ಸ್ವಲ್ಪ ಹಾಡುವುದನ್ನು ಕಲಿತಿದ್ದಾಳೆ. ಸಮಾಜದಲ್ಲಿ ಹೋಗಿ ಪಿಟೀಲು ಬಾರಿಸುವ

ದನ್ನೂ ಕಲಿತಿದ್ದಾಳೆ. ಆದರೆ ಎಲ್ಲ ಇನ್ನೂ ಬಾಲ್ಯ ಪಾಠ. ಸೀತಾಲಕ್ಷ್ಮಿಯ ಕೈಲಿ ಮೂರು ತಿಂಗಳಾದರೂ ಪಾಠ ಹೇಳಿಸಿಕೊಳ್ಳಬೇಕೆನ್ನುತ್ತಾಳೆ. ಕಳು ಹಿಸಿಕೊಡು. ಅವಳಿಗೂ ಸ್ವಲ್ಪ ಬದಲಾವಣೆ ಆದಹಾಗೆ ಆಯಿತು" ಎಂದರು. ಶ್ರೀನಿವಾಸನಿಗೆ ಸೀತಾಲಕ್ಷ್ಮಿಯ ಮೇಲಿನ ಕೋಪ ಸ್ವಲ್ಪವೂ ಇಳಿದಿರಲಿಲ್ಲ. ಅವನು "ಅಪಳ ಪಾಡು. ಈಗ ಅವಳು ತುಟಿಮೀರಿದ ಹಲ್ಲು ಆಗಿದ್ದಾಳೆ. ಯಾರ ಮಾತನ್ನೂ ಕೇಳುವುದಿಲ್ಲ. ನಿಮ್ಮ ಮಾತನ್ನೂ ಕೇಳುವುದಿಲ್ಲ" ಎಂದನು. ಪ್ರಾಣಾಚಾರ್ಯರು "ಛೆ ಛೇ ಹಾಗೆ ಉಂಟೆ? ಅವಳ ಮೇಲೆ ನಾವು ಕೋಪಿಸಿಕೊಳ್ಳಬಾರದು. ಅದೊಂದು ಮಗು. ಆದರೆ ಈ ವಯಸ್ಸಿಗೆ ನಾಲ್ಕು ಬಾಳಿನ ದುಃಖ ಅನುಭವಿಸಿದೆ. ತಾಯಿ ಇದ್ದಿದ್ದರೆ ದುಃಖವನ್ನು ಸಮಾಧಾನಪಡಿಸುತ್ತಿದ್ದಳು. ಪಾಪ, ಎಷ್ಟು ಅತ್ತಿದೆಯೊ? ನೀನು ಸಮಾಧಾನವನ್ನು ತಂದುಕೊಂಡು ಹೋಗಿ ಬರುವಂತೆ ಅವಳಿಗೆ ಹೇಳಿದರೆ ನಾನು ಮೂರು ತಿಂಗಳನಂತರ ಸುರಕ್ಷಿತವಾಗಿ ಕರದುಕೊಂಡು ಬಂದುಬಿಡುತ್ತೇನೆ" ಎಂದರು.

ಪ್ರಾಣಾಚಾರ್ಯರ ಶಾಂತಿಯ ಮಾತುಗಳನ್ನು ಕೇಳಿ ಶ್ರೀನಿವಾಸನಿಗೆ ತಾನು ನಡೆಯುತ್ತಿರುವುದು ತಪ್ಪು ಎಂದು ನಂಬಿಕೆಯಾಗದಿದ್ದರೂ, ಇಂತಹ ವರ ಎದುರಿಗೆ ಕೋಪ ತಾಪ ಅಸಮಾಧಾನಗಳನ್ನು ತೋರಿಸಬಾರದೆಂಬ ವಿವೇಕವುಂಟಾಯಿತು. ಅವನು "ಹಾಗೆಯೇ ಆಗಲಿ ಮಾವಾ, ಕರೆದು ಕೊಂಡುಹೋಗಿ ಬನ್ನಿ. ನಿಮ್ಮ ಮಾತಿಗೆ ನಾವು ಯಾವತ್ತೂ ಪ್ರತಿ ಹೇಳು ವವರಲ್ಲ" ಎಂದನು.

ಪ್ರಾಣಾಚಾರ್ಯರಂತಹ ಉದಾತ್ತ ಪುರುಷರು ತಾವು ಮಾಡುವ ಕಾರ ಗಳನ್ನೆಲ್ಲ ಸಾಧ್ಯವಾದ ಮಟ್ಟಿಗೆ ದೋಷರಹಿತವಾಗಿರುವಂತೆಯೇ ಮಾಡು ತ್ತಾರೆ. ಇತರರಿಗೆ ಮುಖ್ಯವಾದುದು ದೊಡ್ಡದು ಎಂದು ತೋರುವ ಅನೇಕ ವಿಷಯಗಳು ಅವರಿಗೆ ಅಲ್ಪವಾದುವಾಗಿ ತೋರುತ್ತವೆ. ಇತರರಿಗೆ ಅಲ್ಪ ವೆಂದು ತೋರುವ ಸಂಗತಿಗಳು ಅವರಿಗೆ ಮುಖ್ಯವಾಗಿ ತೋರುತ್ತವೆ. ಪ್ರಾಣಾ ಚಾರ್ಯರು ರಾಮಸ್ವಾಮಿಗೂ ಹೋಗಿ ಹೇಳಿ ಸೀತಾಲಕ್ಷ್ಮಿಯನ್ನು ಕರೆದು ಕೊಂಡು ಹೋಗಲು ಅವನ ಅನುಮತಿಯನ್ನು ಪಡೆದರು. ರಾಮಸ್ವಾಮಿಗೆ ತಂಗಿಯಮೇಲಿನ ಕೋಪ ಕಡಿಮೆಯಾಗಿರಲಿಲ್ಲ. ಅವನು "ಅವಳ ವಿಷಯಕ್ಕೆ

ನಾನ್ಯಾರು? ಆ ಶ್ರೀನಿವಾಸ ಅವಳನ್ನು ಕೊಬ್ಬಿಸಿದ್ದಾನೆ. ಈಗ ಅವಳು ಅವನ ಮಾತನ್ನು ಕೇಳುವುದಿಲ್ಲ. ನೀವು ನಾಳೆ ಕರೆದುಕೊಂಡು ಹೋದರೆ ನಿಮ್ಮ ಮಾತನ್ನು ಕೇಳುತ್ತಾಳೆಂಬ ಆಸೆಯನ್ನು ಇಟ್ಟುಕೊಳ್ಳಬೇಡಿ. ಇಷ್ಟರ ಮೇಲೆ ನಿಮ್ಮ ಇಷ್ಟ" ಎಂದನು. ಪ್ರಾಣಾಚಾರ್ಯರು ಅವನಿಗೂ ವಿವೇಕದ ಮಾತುಗಳನ್ನು ಹೇಳಿದರು,

ಮರುದಿನ ಸೀತಾಲಕ್ಷ್ಮಿ ಪ್ರಾಣಾಚಾರ್ಯರ ಜತೆಯಲ್ಲಿ ಬೆಂಗಳೂರಿಗೆ ಹೊರಟಾಗ ಕಮಲಮ್ಮನೊಬ್ಬಳ ಹೊರತು ಮತ್ತಾರಿಗೂ ಊರಿನಲ್ಲಿ ವಿಷಾದ ವುಂಟಾಗಲಿಲ್ಲ. ಆಗಾಗ್ಗೆ ಶ್ರೀನಿವಾಸನ ಮನೆಯ ಸುತ್ತಾ ತಿರುಗುತ್ತಾ ಒಂದು ಸಲವಾದರೂ ಸೀತಾಲಕ್ಷ್ಮಿಯನ್ನು ಕಂಡರೆ ಧನ್ಯರಾದೆವೆಲ್ಲ ಎಂದು ಕೊಳ್ಳುತ್ತಿದ್ದ ಕೆಲವು ಯುವಕರಿಗೆ, ಜೀವನದಲ್ಲಿದ್ದ ಈ ಒಂದೇ ಆನಂದವೂ ಮರೆಯಾಗುತ್ತಿದೆಯಲ್ಲ ಎಂದು ಬೇಸರಿಕೆಯಾಯಿತು. ಸೀತಾಲಕ್ಷ್ಮಿ ನದಿ ಯಲ್ಲಿರುವಾಗ ಆಕೆಯನ್ನು ನೋಡುವುದಕ್ಕಾಗಿಯೇ ಹೋಗಿ ಆ ನೆಪದಲ್ಲಿ ತಮ್ಮ ಬಟ್ಟೆಗಳನ್ನು ಒಗೆದುಕೊಳ್ಳುತ್ತಿದ್ದ ಅನೇಕ ಯುವಕರ ವಸ್ತ್ರಗಳು ಅಲ್ಲಿಂದ ಮುಂದೆ ಎಂದೂ ಕೊಳೆಯಾಗಿಯೇ ಉಳಿದವು. ಸೀತಾಲಕ್ಷ್ಮಿಯ ಮೋಹಕ ಶಕ್ತಿ ಅದ್ಭುತವಾಗಿತ್ತು ಅವಳು ಪ್ರಗತಿಶೀಲತೆಯ ಸಂಕೇತವಾಗಿ ದ್ದಳು. ಹಳ್ಳಿಯ ಯುವಕರು ಅವಳಿಗಾಗಿಯೇ ಒಳ್ಳೆ ಬಟ್ಟೆ ಧರಿಸಿ ಶುದ್ಧರಾಗಿ ನಾಗರಿಕರಾಗಿ ಅಲಂಕರಿಸಿಕೊಳ್ಳುತ್ತಿದ್ದರು. ಪುರುಷರಿರಲಿ; ಸ್ತ್ರೀಯರೂ ಸಹ, ತಮ್ಮ ಪುರುಷರ ಈ ದೌರ್ಬಲ್ಯವನ್ನರಿತು " ತಾವೇನು ಸೀತಾಲಕ್ಷ್ಮಿಗೆ ಕಡಿಮೆ?" ಎಂಬಂತೆ ಯಾವಾಗಲೂ ಒಳ್ಳೆಯ ವಸ್ತ್ರಾಲಂಕಾರಭೂಷಿತೆಯ ರಾಗಿರುತ್ತಿದ್ದರು. ಸೀತಾಲಕ್ಷ್ಮಿ ಊರಿನಲ್ಲಿರುವಾಗ ಹೇಗೆ ಊರಿಗೆ ಊರೇ ಹೂವಿನಿಂದ ತುಂಬಿದ ಲತೆಯಂತಿತ್ತು ಸೀತಾಲಕ್ಷ್ಮಿ ಹೊರಟು ಹೋದ ಮೇಲೆ, ಒಂದು ವಸ್ತುವಿನ ಮೇಲೆ ತನ್ನ ಜ್ಯೋತಿಯನ್ನು ಬೀರುತ್ತಿರುವ ಬೆಳ ಕನ್ನು ಮರೆಮಾಡಿದರೆ ಆ ವಸ್ತು ಹೇಗೆ ತೇಜೋಹೀನವಾಗುವುದೋ, ಹಾಗೆ ಊರು ನಿರ್ಜೀವವಾಯಿತು. ಆ ಹಳ್ಳಿಯ ಬಾಳಿನ ಅನಾಗರೀಕತೆಯ ಅಂಧ ಕಾರವನ್ನು ಕಳೆಯುತ್ತಿದ್ದ, ಆ ಬೀದಿಗಳಲ್ಲಿ ತಿರುಗುತ್ತಿದ್ದ, ಒಂದೇ ಒಂದು ಮಿಂಚು ಮರೆಯಾಯಿತು.

## ೨೩

ಪ್ರಾಣಾಚಾರ್ಯರು ಸೀತಾಲಕ್ಷ್ಮಿಯನ್ನು ಕರೆದುಕೊಂಡು ಬಂದುದರಿಂದ ಬೆಂಗಳೂರಿಗೆ ಒಂದು ಕಣ್ಣು ಬಂದಂತೆ ಆಯಿತು ಯಾಕೆಂದರೆ ಪ್ರಾರಂಭ ದಲ್ಲಿ ಪ್ರಾಣಾಚಾರ್ಯರ ಉದ್ದೇಶ ತಮ್ಮ ಮಗಳು ಲಕ್ಷ್ಮಿಗೆ ಮಾತ್ರ ಸಂಗೀತ ವನ್ನು ಕಲಿಸುವುದಾಗಿದ್ದರೂ, ಸೀತಾಲಕ್ಷ್ಮಿ ಆಶ್ರಮದಲ್ಲಿ ಅಧಿಷ್ಠಿತಳಾದ ಕೂಡಲೇ ಆಶ್ರಮವಾಸಿಗಳೆಲ್ಲ ಅವಳ ಶಿಷ್ಯೆಯರಾದರು. ಆಶ್ರಮದಲ್ಲಿ ಸೇವಾ ದೀಕ್ಷೆಯನ್ನು ಕಲಿಯಲು ಸೇರುತ್ತಿದ್ದ ಮಹಿಳೆಯರಿಗೆ ಗಾನಕಲೆಯನ್ನೂ ಕಲಿಸಬೇಕೆಂಬುದು ಪ್ರಾಣಾಚಾರ್ಯರ ಆಸೆಯಾಗಿದ್ದರೂ ಅವರ ಮನಸ್ಸಿಗೆ ಒಪ್ಪಿದ ಸಂಗೀತದ ಉಪಾಧ್ಯಾಯರು ಈವರೆಗೆ ದೊರತಿರಲಿಲ್ಲ. ಅಷ್ಟೇ ಅಲ್ಲದೆ ಅವರು ಕೇಳುತ್ತಿದ್ದ ಶುಲ್ಕವನ್ನು ಕೊಡುವ ಶಕ್ತಿಯೂ ಪ್ರಾಣಾಚಾರ್ಯ ರಿಗೆ ಇರಲಿಲ್ಲ. ಅದರಿಂದ ಅವರ ಆಸೆ ಈಡೇರದೆ ಹಾಗೆಯೇ ಉಳಿದಿತ್ತು.

ಸೀತಾಲಕ್ಷ್ಮಿ ಆಶ್ರಮವನ್ನು ಪ್ರವೇಶಿಸಿದ ಕೂಡಲೇ ಆಶ್ರಮವು ಆಕರ್ಷಿ ಸುತ್ತಿದ್ದ ಹೆಣ್ಣು ಮಕ್ಕಳ ಸಂಖ್ಯೆಯೂ ಹೆಚ್ಚಾಯಿತು ಆದುದರಿಂದ ಅಲ್ಲಿಗೆ ಬರುತ್ತಿದ್ದವರು ಸಾಧಾರಣವಾಗಿ ಒಂದಲ್ಲ ಒಂದು ಬಗೆಯಿಂದ ಸಮಾಜದ ಕೋಪಕ್ಕೆ ಪಾತ್ರರಾದವರು ದೀನರಾದವರು ಅಥವ ಜೀವನದಲ್ಲಿ ಮತ್ತಾವ ಆಶೆಯೂ ಇಲ್ಲದಿದ್ದವರು. ಅವರು ಬರುತ್ತಿದ್ದುದು ತಮ್ಮ ಮುಂದಲ ಬಾಳಿಗೆ ಒಂದು ಗುರಿಯನ್ನು ಕಾಣುವುದಕ್ಕಾಗಿ ಅವರೆ ಸೀತಾಲಕ್ಷ್ಮಿ ಆಶ್ರಮಕ್ಕೆ ಬಂದು ಪಿಟೀಲು ಧಾರಿಸುತ್ತಾ ಜೇನುಸುರಿಯುವ ಕಂಠದಿಂದ ಹಾಡುವುದು ಕೇಳಿಸಿದ ಕೂಡಲೇ, ಆಶ್ರಮದ ಭಜನೆಗೂ ಪ್ರಾರ್ಥನೆಗೂ ಹೊಸ ಬೆರಗು ಉಂಟಾಯಿತು. ಸುತ್ತಮುತ್ತಲ ಮನೆಯವರೂ ಬೀದಿಯಲ್ಲಿ ತಿರುಗುತ್ತಿದ್ದ ವರೂ, ಎಂದಿನಿಂದಲೂ ಭಜನೆ ಪ್ರಾರ್ಥನೆ ಆಶ್ರಮದಲ್ಲಿ ನಡೆಯುತ್ತಿದ್ದರೂ ಅಲ್ಲಿಗೆ ತಲೆ ಹಾಕದಿದ್ದವರೆಲ್ಲ, ಇದ್ದಕ್ಕಿದ್ದಂತೆ ಆಶ್ರಮದಿಂದ ಹೊರಟ ಈ ಕೋಕಿಲ ಕಂಠವನ್ನ ಕೇಳಿ ಒಳಕ್ಕೆ ಬರತೊಡಗಿದರು. ಅಂತಹ ಉಪಾ ಧ್ಯಾಯಿನಿ ಸಿಕ್ಕುವುದು ಕಷ್ಟವೆಂಬುದು ಹುಡುಗಿಯರಿಗೂ ಅವರ ತಾಯಿ ತಂದೆ ಗಳಿಗೂ ಗೊತ್ತಾಗಿತ್ತು. ಉಪಾಧ್ಯಾಯರಿಂದ, ಗಂಡನನ್ನು ಆಕರ್ಷಿಸುವ ಮಟ್ಟಿಗೆ ಸ್ವಲ್ಪ ಸಂಗೀತವನ್ನು ಕಲಿತು, ಮದುವೆಯಾದ ಕೂಡಲೇ ಅದನ್ನು

ಮರೆತಿದ್ದ ಯುವತಿಯರಿಗೆ, ಸೀತಾಲಕ್ಷ್ಮಿಯಲ್ಲಿ ಒಳ್ಳೆಯ ಉಪಾಧ್ಯಾಯಿನಿ ದೊರಕಿದಳು. ಸೀತಾಲಕ್ಷ್ಮಿ ಹಿಡಿದರೆ ಪಿಟೀಲಿಗೇ ಒಂದು ಬಗೆಯ ಹೊಸ ಸೊಬಗು ಉಂಟಾಗುತ್ತಿದ್ದಿತು. ಅವಳು ಹಾಡಿದರೆ ಆ ರಾಗಕ್ಕೇ ಒಂದು ಹೊಸ ಇನಿಮಾಧುರ್ಯವುಂಟಾಗುತ್ತಿದ್ದಿತು. ಇದ್ದಕಿದ್ದಂತೆ ಆಶ್ರಮದಲ್ಲಿ ಸೇರುತ್ತಿದ್ದ ಹುಡುಗಿಯರ ಸಂಖ್ಯೆ ಅಧಿಕವಾಯಿತು. ಪ್ರಾಣಾಚಾರ್ಯರು ಅಷ್ಟುದಿನಗಳಿಂದ ಸಮಾಜ ಸೇವೆ ಮಾಡಿದ್ದರೂ, ಅವರ ಆಶ್ರಮದ ಹೆಸರು ಆಗಿನಷ್ಟು ಮತ್ತಾವಾಗಲೂ ಪ್ರಸಿದ್ಧವಾಗಲಿಲ್ಲ.

ಪ್ರಾಣಾಚಾರ್ಯರಿಗೇ ಆಶ್ಚರ್ಯವಾಯಿತು. ಅಲ್ಲಿಯವರೆಗೆ ಅವರ ಆಶ್ರಮ ಬರಿಯ ಬಡವರ ಆಶ್ರಮವೇ ಆಗಿತ್ತು. ದೇವರು ಒಂದು ಕುಂದನ್ನು ಒಬ್ಬರಿಗೆ ಕೊಟ್ಟರೆ, ಅದರ ಬದಲು ಇತರರು ಹೊಟ್ಟೆಗಿಚ್ಚು ಪಡುವ ನೂರಾರು ಶಕ್ತಿಗಳನ್ನು ಆ ಕುಂದಕವುಳ್ಳ ಪ್ರಾಣಿಗೆ ಕೊಡುವುದು ಅವರ ಅನುಭವಕ್ಕೆ ಬಂದಿತ್ತು. ಅದೇ ಆಶ್ರಮದಲ್ಲಿದ್ದ ಇನ್ನೊಂದು ಹುಡುಗಿಯ ಅಣ್ಣಾ ಕುರುಡ ಸಂಗೀತದಲ್ಲಿ ಒಳ್ಳೆ ವಿದ್ವಾಂಸನೇ ಆಗಿದ್ದನು. ಸಭ್ಯರ ಸಮಾಜದಿಂದ ಒಂದು ರೀತಿಯಿಂದ ಬಹಿಷ್ಕೃತಳಾಗಿದ್ದ ಸೀತಾಲಕ್ಷ್ಮಿಯನ್ನು ನೋಡಿ ಪ್ರಾಣಾಚಾರ್ಯರಿಗೆ ಹಾಗೆಯೇ ತೋರಿತು.

ಆಯುರ್ವೇದಾಶ್ರಮವನ್ನು ಹೊಕ್ಕ ಕೂಡಲೇ, ಸೀತಾಲಕ್ಷ್ಮಿಗೂ ಸಹ ಒಂದು ಹೊಸ ಲೋಕವೇ ಕಣ್ಣಮುಂದೆ ತೆಗೆದಂತಾಯಿತು. ಅಲ್ಲಿಯವರೆಗೆ, ಜನಕ್ಕೆ ನನ್ನಿಂದ ಏನಾದರೂ ಪ್ರಯೋಜನವಿದೆ ಎಂಬುದೇ ಆಕೆಗೆ ನಂಬಿಕೆಯಾಗಿರಲಿಲ್ಲ. ಆದರಿಂದಲೇ ಅವಳು ಆತ್ಮಹತ್ಯಮಾಡಿಕೊಳ್ಳುವುದಕ್ಕೂ ಅಷ್ಟು ಕಾತುರಳಾಗಿದ್ದಳು. ಆದರೆ ಆಶ್ರಮಕ್ಕೆ ಬಂದ ಒಂದೇ ತಿಂಗಳಿನೊಳಗೆ ಅವಳಿಗೆ "ದೇವರು ನನಗೂ ಒಂದು ಕಾರ್ಯ ಈ ಜಗತ್ತಿನ ನಾಟಕದಲ್ಲಿ ಒದಗಿಸಿದ್ದಾನೆ" ಎಂಬುದು ನಂಬಿಕೆಯಾಯಿತು. ತನ್ನಲ್ಲಿ ಸಂಗೀತ ಕಲಿಯಲು ಬರುತ್ತಿದ್ದ ಹುಡುಗಿಯರಿಗೆಲ್ಲ ಅವಳು ಅತ್ಯಂತ ನಮ್ರಳಾಗಿ "ಇದೇ ನನ್ನ ಸೇವೆ" ಎಂದು ಹೇಳಿಕೊಳ್ಳುತ್ತಿದ್ದಳು. ಸಂಗೀತಗಾರರ ಸ್ವಾಭಾವಿಕವಾದ ಹೆಮ್ಮೆಯನ್ನು ಅನುಭವವಿದ್ದ ಆ ಹುಡುಗಿಯರಿಗೆ ಸೀತಾಲಕ್ಷ್ಮಿಯ ರೂಪ ಯವ್ವನ ವಿದ್ಯೆ ವಿನಯಗಳನ್ನು ಕಂಡು "ನಾವೂ ಹೀಗೆ ಆದೇವೆ?" ಎಂಬ ಹೆಬ್ಬಯಕೆ ಉಂಟಾಯಿತು.

ಆಶ್ರಮದಲ್ಲಿ ಸೇರುತ್ತಿದ್ದ ಬಡವರನ್ನು ನೋಡಿ, ಸೀತಾಲಕ್ಷ್ಮಿಯ ಕನಿಕರ ಅವರಲ್ಲಿ ಅಧಿಕವಾಯಿತು. ಸೇವೆ ಮಾಡಬೇಕೆಂಬ ಅವಳ ಆಕಾಂಕ್ಷೆ ಅದರಿಂದ ಇನ್ನೂ ಹೆಚ್ಚಿತು. ಭಗವಂತನ ಸೃಷ್ಟಿಯ ಈ ಭಾಗವನ್ನು ಸೇವಿಸಿದರೇನೇ ಜನ್ಮ ಸಾರ್ಥಕ ಎಂಬ ಧೃಢನಂಬಿಕೆ ಆಕೆಗೆ ಉಂಟಾಯಿತು. ತನ್ನ ಗಾನ ರೂಪುಗಳಿಂದ ಆಕರ್ಶಿತರಾಗಿ ತನ್ನಲ್ಲಿ ಬರುತ್ತಿದ್ದ ಆಧುನಿಕ ನಾಗರಿಕತೆಯ ಧಳಿಕಿಗಳಿಗಿಂತಲೂ, ತನ್ನ ಸೇವೆಗೆ ಹೆಚ್ಚು ಹಕ್ಕುಳ್ಳವರು ತನ್ನಂತೆಯೇ ಇರುವ ದುರದೃಷ್ಟಶಾಲಿಗಳು ಎಂಬುದು ಅವಳಿಗೆ ಗೊತ್ತಾಯಿತು. ಹಾಗೆ ಪೂರ್ಣವಾಗಿ ಸೇವೆಮಾಡಿದ ಹೊರತು ತನ್ನ ಮನಸ್ಸಿಗೆ ಸಮಾಧಾನವೂ ತನ್ನ ಬಾಳು ಸಾರ್ಥಕವೆಂಬ ನಂಬಿಕೆಯೂ ತನಗೆ ಉಂಟಾಗಲಾರವೆಂದು ಅವಳು ಭಾವಿಸಿದಳು. ಇತರರಿಗೆ ಆಕೆಯ ಗಾನವೇ ಆಕೆಯ ಅತ್ಯಂತ ದೈವಿಕ ಸಂಪತ್ತಾಗಿ ತೋರಿದರೂ ಅವಳಿಗೆ ಮಾತ್ರ ಸೇವೆಯೇ ತನ್ನ ಮೋಕ್ಷವಾಯಿತು. ಆಕೆಯ ಸೇವಾಕಾತುರತೆಯನ್ನು ಕಂಡು ಪ್ರಾಣಾಚಾರ್ಯರಿಗೆ ತೃಪ್ತಿಯಾಯಿತು. "ಈ ಬಾಳಿಗೆ ಒಂದು ಗುರಿ ಕಾಣುತ್ತಿದೆ" ಎಂದು ಅವರು ಸಮಾಧಾನಪಟ್ಟುಕೊಂಡರು. ಸೀತಾಲಕ್ಷ್ಮಿ ಆಶ್ರಮಕ್ಕೆ ಬರುವುದಕ್ಕೆ ಮುಂಚೆಯೂ, ಆಶ್ರಮದಲ್ಲಿ ಚಿಕಿತ್ಸೆಗಾಗಿ ಅನೇಕ ರೋಗಿಗಳು ಬರುತ್ತಿದ್ದರು. ಆದರೆ ಆಕೆ ಅಲ್ಲಿ ಬಂದು ಸೇರಿದಮೇಲೆ ಉಪಚಾರಕ್ಕಾಗಿ ಬರುವ ರೋಗಿಗಳ ಸಂಖ್ಯೆಯೂ ಹೆಚ್ಚಾಯಿತು.

ಪ್ರಾಣಾಚಾರ್ಯರು ಸೀತಾಲಕ್ಷ್ಮಿಗೆ, ಆಯುರ್ವೇದ ಔಷಧಗಳು ಚಿಕಿತ್ಸಾಭಾಗ ಉಪಚಾರಭಾಗ ಎಲ್ಲವನ್ನೂ ಕಲಿಸತೊಡಗಿದರು. ಅವರು ಆಕೆಗೆ ಹೆಚ್ಚಾಗಿ ಕಲಿಸುವುದು ಬೇಕಾಗಲಿಲ್ಲ. ಒಂದೊಂದು ಸಲ ಅವರು ಮಾಡುವುದನ್ನು ನೋಡುವುದರಿಂದಲೇ ಅವಳಿಗೆ ಎಲ್ಲವೂ ಗೊತ್ತಾಗುತ್ತಿದ್ದಿತು. ಅವಳ ಶ್ರದ್ಧೆ ಹಾಗೆ ಇದ್ದುದೇ ಅದಕ್ಕೆ ಮುಖ್ಯ ಕಾರಣ. ಚಿಕಿತ್ಸೆಮಾಡುವವರಿಗೆ ವೈದ್ಯದ ತಿಳಿವಳಿಕೆಗಿಂತ ಹೆಚ್ಚಾಗಿ ರೋಗಿಗಳಲ್ಲಿ ಪ್ರೀತಿಯೂ, ಅವರನ್ನು ತಾನು ಗುಣಪಡಿಸುವೆನೆಂಬ ನಂಬಿಕೆಯೂ ಇರಬೇಕೆಂದು ಪ್ರಾಣಾಚಾರ್ಯರು ಪದೇಪದೇ ಹೇಳುತ್ತಿದ್ದರು. ಸೀತಾಲಕ್ಷ್ಮಿಯನ್ನು ನೋಡಿ ತಮಗೆ ಅನುಗುಣಗಳಾದ ಶಿಷ್ಯಳೇ ದೊರೆತಳೆಂದು ಅವರು ಸಂತೋಷಪಟ್ಟರು ಮೂರು ತಿಂಗಳಿನೊಳಗಾಗಿ ಸೀತಾಲಕ್ಷ್ಮಿ ಆದರ್ಶ ದಾದಿಯಾದಳು. ಅವಳ ವೈದ್ಯ

ಕೀಯ ಚಟುವಟಿಕೆಗಳನ್ನು, ಒಂದು ಬಗೆಯ ನಿರುತ್ಸಾಹ ಅಪನಂಬಿಕೆಗಳಿಂದ ನಿರೀಕ್ಷಿಸುತ್ತಿದ್ದ ಅವಳ ಭಕ್ತ ಕಾಲೇಜ್ ಹುಡುಗಿಯರಿಗೆ ಸಹ, ಹೀಗೆ ದಾದಿಯಾಗಿ ದೀನರನ್ನೂ ದಲಿತರನ್ನೂ ಉಪಚರಿಸುವುದು ಸಹ ಒಳ್ಳೆಯ ಆಕರ್ಶಣೀಯ ಕಾರ್ಯವೇ ಎಂದು ಬೋಧೆಯಾಗತೊಡಗಿತು. ತಾನು ಯಾವ ಕೆಲಸವನ್ನು ಹಿಡಿದರು ಅದಕ್ಕೇ ಒಂದು ಮೆರಗನ್ನೂ ಸೌಂದರ್ಯವನ್ನೂ ಕೊಡುತ್ತಿದ್ದವಳು ಸೀತಾಲಕ್ಷ್ಮಿ. ಅವರಿಂದ ಆ ಕಾರ್ಯದ ಮೇಲೆ ಎಲ್ಲರಿಗೂ ಆಸೆಯುಂಟಾಗುತ್ತಿದ್ದಿತು.

ಇಂತಹ ಉಪಾಧ್ಯಾಯಿನಿಯ ಕೈಯಲ್ಲಿ ಆರು ತಿಂಗಳು ಪಳಗುವುದರೊಳಗಾಗಿ ಲಕ್ಷ್ಮಿ, ಪಿಟೀಲಿನಲ್ಲಿ ಒಳ್ಳೆ ಪ್ರಾವೀಣ್ಯವನ್ನೇ ಹೊಂದಿದಳು. ಅವಳಿಗೆ ಹಿಂದೆಯೂ ಪಿಟೀಲಿನಲ್ಲಿ ಒಳ್ಳೆಯ ಪಾಠವೇ ಆಗಿತ್ತು. ಆಕೆಯನ್ನು ವರಿಸುವ ಶ್ರೀರಾಮು ಬಹಳ ಸಂತುಷ್ಟನೇ ಆಗಿದ್ದನು. ಲಕ್ಷ್ಮಿಯು ಸಂಗೀತದಲ್ಲಿ ಎಷ್ಟು ಪರಿಶ್ರಮ ಹೊಂದಬೇಕೆಂಬುದು ಅವನ ಆಸೆಯಾಗಿದ್ದಿತೋ ಆಕೆ ಅದರ ಪತ್ತರಷ್ಟು ನಿಪುಣೆಯಾಗಿದ್ದಳು ಸರಸ್ವತಿಯ ಅವತಾರವೇ ಎಂಬಂತಿದ್ದ ಸೀತಾಲಕ್ಷ್ಮಿಯಂತಹ ಗುರು ಹೆಂಡತಿಗೆ ಸಿಕ್ಕಿದುದು ತನ್ನ ಪುಣ್ಯವೆಂದು ಅವನು ಭಾವಿಸಿದನು. ಲಕ್ಷ್ಮಿಯ ಮದುವೆ ಹೆಚ್ಚು ಆಡಂಬರವಿಲ್ಲದೆ ಆಶ್ರಮದಲ್ಲಿಯೇ ನಡೆಯಿತು ಆ ಸಂಧ್ಯಾಕಾಲ ವಧೂವರರು ಹಸೆಮಣೆಯ ಮೇಲೆ ಕುಳಿತಿದ್ದಾಗ ಸೀತಾಲಕ್ಷ್ಮಿಯೇ ಪಿಟೀಲು ಬಾರಿಸಿದಳು. ತಾಂಬೂಲಕ್ಕಾಗಿ ಬೆಂಗಳೂರಿನ ಪ್ರಮುಖರೆಲ್ಲ ದಯಮಾಡಿಸಿದ್ದರು. ಆದರೆ ಸೀತಾಲಕ್ಷ್ಮಿಯ ಪಿಟೀಲನ್ನು ಕೇಳಲು ಪ್ರಾರಂಭಿಸಿದನಂತರ ತಾಂಬೂಲ ಮುಗಿದರೂ ಯಾರೂ ಏಳಲೇ ಇಲ್ಲ. ತಾಂಬೂಲದ ಜತೆಯಲ್ಲಿ, ನೆಪಮಾತ್ರಕ್ಕಾಗಿ ಇಟ್ಟುಕೊಂಡಿದ್ದ ಪಿಟೀಲು ವಾದನವೇ ಮುಖ್ಯ ಆಕರ್ಶಣೆಯಾಗಿ ಬಿಟ್ಟಿತು.

ತಾಂಬೂಲಕ್ಕೆ, ಗಾಯನ ಸಮಾಜದ ಅಧ್ಯಕ್ಷ ಶಂಕರಯ್ಯರ್ ಬಂದಿದ್ದರು. ಅವರು ಒಳ್ಳೆ ಸಂಗೀತಪ್ರೇಮಿ ವಿದ್ಯೆ ಎಲ್ಲಿದ್ದರೂ ಅದನ್ನು ತತ್‌ಕ್ಷಣ ಅವರು ಅರಿತು ಪ್ರೋತ್ಸಾಹಿಸುವವರು. ಅವರಿಗೆ ಸೀತಾಲಕ್ಷ್ಮಿಯ ಪಾಂಡಿತ್ಯ ಅದ್ಭುತವಾಗಿ ತೋರಿತು. ಗಾಯನ ಸಮಾಜದಲ್ಲಿ ಕಛೇರಿ ನಡೆಸಲು ಬರುತಿದ್ದ ದಕ್ಷಿಣದೇಶದ ಘನವಿದ್ವಾಂಸರಿಗೆ, ಈ ಹಳ್ಳಿಯ ಹುಡುಗಿ ಸಮನಾಗಿದ್ದಳು. ಕೆಲವು ರಾಗಗಳಲ್ಲಿ ಈಕೆಯ ಕೈ ಹೆಚ್ಚು ಪಳಗಿ ವಿದ್ವಾಂಸರಿಗಿಂತ ಇವಳು

ಚಾರಿಸುವುದೇ ಅವರಿಗೆ ಹೆಚ್ಚು ಸುಖವಾಗಿ ತೋರಿತು. ವಿದ್ಯೆಯನ್ನು ಕಂಡೆಡೆ ರಸಿಕರಿಗೆ ವಿದ್ಯಾಪಕ್ಷಪಾತ ಸಹಜವಾದುದಷ್ಟೆ. ಬಂದಿದ್ದವರು ಪ್ರಾಣಾಚಾರ್ಯರನ್ನು ಲಕ್ಷ್ಮಿಯ ಮದುವೆಗಾಗಿ ಅಭಿನಂದಿಸುವುದಕ್ಕಿಂತ ಹೆಚ್ಚಾಗಿ ಸೀತಾಲಕ್ಷ್ಮಿಯಂತಹ ಗಾನವಿಶಾರದೆಯನ್ನು ಪ್ರಕಾಶಕ್ಕೆ ತಂದುದಕ್ಕಾಗಿ ಅಭಿನಂದಿಸಿದರು. ಶಂಕರಯ್ಯರ್ ಮನಸ್ಸಿನಲ್ಲಿ "ಈಕೆಗೆ ಗಾಯನ ಸಮಾಜದಲ್ಲಿ ಒಂದು ಅವಕಾಶ ಕಲ್ಪಿಸಿಕೊಡಬೇಕು. ಅವಳಾಗಿ ಕೇಳಬೇಕಾದುದಿಲ್ಲ. ನಾವಾಗಿಯೇ ಅವಳನ್ನು ಆಹ್ವಾನಿಸಿ ಜನರು ಈಕೆಯ ವಿದ್ಯೆಯ ಸವಿಯನ್ನು ಆಸ್ವಾದಿಸುವ ಸುಯೋಗವನ್ನು ಕಲ್ಪಿಸಬೇಕೆಂದು" ಮಾಡಿಕೊಂಡರು. ಆದರೆ ಆ ಅವಕಾಶ ಅಷ್ಟು ಬೇಗ ಒದಗಬಹುದೆಂದು ಅವರೂ ಭಾವಿಸಲಿಲ್ಲ. ಅದು ಸಂಭವಿಸಿದುದು ಹೀಗೆ.

ಶಿವರಾತ್ರಿಯ ದಿನ ಗಾಯನ ಸಮಾಜದಲ್ಲಿ ದಕ್ಷಿಣ ದೇಶದ ಘಟಾನುಘಟಿಗಳ ಸಂಗೀತ ಏರ್ಪಾಡಾಗಿತ್ತು. ಕರ್ಣಾಟಕ ಸಂಗೀತ ಪ್ರವೀಣ ಗಣಪತಿ ಭಾಗವತರ ಬಾಯಿ ಹಾಡುಗಾರಿಕೆ, ಪಿಟೀಲುರತ್ನ ಮುತ್ತಣ್ಣನ ಪಿಟೀಲು ವಾದನ, ಪಾಲಘಾಟ್ ಮಣಿ ಮೃದಂಗ, ದೇಶಿಕನ್‌ರ ಖಂಜರಿ, ಒಳ್ಳೆ ಜವಾನಣೆಯಿಂದ ಎಲ್ಲಿಯೋ ಅಪರೂಪವಾಗಿ ಸೇರುವ ಗಾನಸರಸ್ವತಿಯರ ಅಪೂರ್ವ ಜೋಡಣೆ. ಬೆಂಗಳೂರಿಗೆ ಬೆಂಗಳೂರೇ ಕಛೇರಿಯನ್ನು ಕುತೂಹಲದಿಂದಲೂ ಆಸೆಯಿಂದಲೂ ನಿರೀಕ್ಷಿಸುತ್ತಿತ್ತು. ಟಿಕೆಟ್ ಶುಲ್ಕ, ಎಂದಿಗಿಂತ ಹೆಚ್ಚೇ ಆಗಿದ್ದರೂ ಕಛೇರಿಗೆ ಎರಡು ದಿನ ಮುಂಚೆಯೇ ಟಿಕೆಟ್‌ಗಳ ಮಾರಾಟವಾಗಿ ಹೋಗಿತ್ತು.

ಸಂಗೀತಕಛೇರಿ ಶಿವರಾತ್ರಿಯಂದು ನಾಲ್ಕು ಗಂಟೆಗೆ ಪ್ರಾರಂಭವಾಗಬೇಕಿತ್ತು. ಬಿಸಿಲು ಸಹಿಸಲಸಾಧ್ಯವಾಗಿದ್ದರೂ ಮೂರು ಗಂಟೆಗೇ ಶ್ರೋತೃಗಳು ಬಂದು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಅಧ್ಯಕ್ಷ ಶಂಕರಐಯ್ಯರ್ ಎರಡು ಗಂಟೆಯಿಂದಲೂ ಆಸನಗಳ ವ್ಯವಸ್ಥೆ ನೋಡಿಕೊಂಡು ಬಾಗಿಲಿನಲ್ಲಿದ್ದ ಕುರ್ಚಿಯಮೇಲೆ ಕುಳಿತು ಬಂದವರನ್ನು ಒಳಕ್ಕೆ ಕಳುಹಿಸುತ್ತಿದ್ದರು. ಸಂಗೀತಗಾರರ ಆ ಅಪೂರ್ವ ಜೋಡಣೆಯಿಂದ, ಶ್ರೋತೃಗಳಿಗೆ ಅಂದು ಮದುವೆಯ ಸಂಭ್ರಮದಂತಹ ಆನಂದವುಂಟಾಗಿತ್ತು. ಸಮಾಜದ ಭವನದಲ್ಲಿ ಶಖೆಯಿಂದ ಎಲ್ಲರ ಮೈಗಳೂ ಬೆವರುತ್ತಿದ್ದವು. "ಸದ್ಯ ಪ್ರಾರಂಭ

ವಾಗಿಬಿಟ್ಟರೆ ಶಖೆ ಕಾಣುವುದಿಲ್ಲ. ಸಹಿಸಿಕೊಳ್ಳಬಹುದು" ಎಂದು ಜನ ಮಾತನಾಡಿಕೊಳ್ಳುತ್ತಿದ್ದರು. ಇದ್ದಕ್ಕಿದ್ದಂತೆ ಶಂಕರ ಅಯ್ಯರ್ ಕ್ಕೆಗೆ ಒಂದು ಟೆಲಿಗ್ರಾಂ ಬಂತು. ಅವರು ಅದನ್ನು ಬಿಚ್ಚಿ ನೋಡಿದರು. ಅವರ ಮುಖ ಪೆಚ್ಚಾಯಿತು. ಸಂಗೀತಗಾರರನೇಕರು ಕೊನೆಯ ಗಳಿಗೆಯಲ್ಲಿ "ಚಕ್ಕರ್" ಕೊಡುವುದು ಅವರಿಗೆ ಎಂದಿನಿಂದಲೂ ಅಭ್ಯಾಸವಾಗಿತ್ತು. ಆದರೆ, ಈ ಸಲ ಮಾತ್ರ ಅವರು ಹಾಗೆ ಮಾಡಲಾರರೆಂದೂ, ಹಿಂದೆ ಎರಡು ಮೂರು ಸಲ ತಪ್ಪಿ ಹೋಗಿ ಈಗ ಒಪ್ಪಿದ್ದುದರಿಂದ, ಈ ಕಾರ್ಯಕ್ರಮದಂತೆ ಅವರು ನಡೆಯುವರೆಂದೂ ಶಂಕರಯ್ಯರ್ ಭಾವಿಸಿದರು. ಈಗ ಬಂದ ತಂತಿಯಿಂದ ಅವರ ಆಸೆ ನಿರಾಶೆಯಾಯಿತು. ಪಿಟೀಲು ರತ್ನ ಮುತ್ತಣ್ಣ ಬರಲು ಸಾಧ್ಯ ವಿಲ್ಲವೆಂದು ತಂತಿ ಕೊಟ್ಟಿದ್ದರು. ಉಳಿದವರೆಲ್ಲ ಬರುವವರಾಗಿದ್ದರು.

ಪಿಟೀಲ್ ರತ್ನ ಮುತ್ತಣ್ಣನಿಲ್ಲದೆ ಗಣಪತಿ ಭಾಗವತರ ಕಛೇರಿ ನಡೆ ಯುವಂತೆಯೇ ಇರಲಿಲ್ಲ ಗಣಪತಿ ಭಾಗವತರ ಹಾಡುಗಾರಿಕೆಗೆ ಪಿಟೀಲ್ ಬಾರಿಸುವುದು ಸಾಮಾನ್ಯರಿಗೆ ಸಾಧ್ಯವಾಗುತ್ತಲೇ ಇರಲಿಲ್ಲ. ಅವರ ಫಲಕು, ಪಲ್ಲವಿ, ರಾಗಾಲಾಪನೆಯಲ್ಲಿ ಬದಲಾವಣೆ, ಅನಿರೀಕ್ಷಿತ, ಹೊಸಪ್ರಯೋಗಗಳು ಇವುಗಳಿಂದ ಎಂತಹ ಪಿಟೀಲ್ ವಿದ್ವಾಂಸರ ಕೈಯೂ ನಿಂತುಹೋಗಿ ಅವರು ಪೆಚ್ಚಾಗಿ, ಬೆಪ್ಪು ಮೋರೆಯಿಂದ ಭಾಗವತರ ಬಾಯನ್ನೇ ನೋಡುತ್ತಾ ಕುಳಿತುಬಿಡುತ್ತಿದ್ದರು. ಒಂದೊಂದು ಸಲ ಪಿಟೀಲು ನುಡಿಸುವವನಿಗೇ ಗೊತ್ತಿಲ್ಲದೆ ಅವನ ಕೈ ನಿಂತು ಹೋಗುತ್ತಿತ್ತು. ಭಾಗವತರು ಪಿಟೀಲು, ಮೃದಂಗ, ಖಂಜರದವರನ್ನು ಮನಸ್ಸಿಗೆ ಬಂದಂತೆ ಆಡಿಸಿಬಿಡುತ್ತಿದ್ದರು. ಅವರ ಆರ್ಭಟ, ಕಾಡಿನಲ್ಲಿ ಹೋಗುವ ಹದಿನಾರು ಹೆಜ್ಜೆಯ ಹುಲಿಯ ಠೀವಿ, ಅವರು ಆಲಾಪನೆಯನ್ನು ಪ್ರಾರಂಭಿಸುವಾಗಲೇ ಪಕ್ಕ ವಾದ್ಯದವರಿಗೆ ಕೈ ನಡುಗುತ್ತಿತ್ತು. ಅವರು ಹಾಡುವಾಗ ಲೋಕವನ್ನು ಆಳುವುದಕ್ಕೆ ಬಂದ ವೀರಾದಿವೀರನಂತೆ, ಎದ್ದ ಕತ್ತಿನಿಂದ ಕಾಡನ್ನೆಲ್ಲ ಗಂಭೀರವಾಗಿ ನೋಡುವ ಸಿಂಹದಂತೆ ನೋಡುತ್ತಿದ್ದರು. ಪಕ್ಕವಾದ್ಯದವರ ಕೈಗೆ ಪಾರ್ಶ್ವವಾಯು ಬರುವಂತೆ ಮಾಡುವುದೂ ಅವರ ವಿದ್ಯೆಗಳ ಪೈಕಿ ಒಂದಾಗಿತ್ತು. ಅನೇಕ ಪಿಟೀಲ್ ನಿಪುಣರೂ, ಮೃದಂಗ ಪ್ರವೀಣರೂ, ಖಂಜರಿ ನಿಸ್ಸೀಮರೂ ಅವರ ಹಾಡುಗಾರಿಕೆಗೆ ಬಾರಿಸಲಾರದೆ ಸೋತುಹೋಗಿದ್ದರು. ಅವರೆಲ್ಲ ಗಣಪತಿ

ಭಾಗವತರಿಗಿಂತ ಕಡಿಮೆ ದರ್ಜೆಯ ಭಾಗವತರನ್ನು ಆಶ್ರಯಿಸಿಕೊಂಡು ಜೀವಿಸುತ್ತಿದ್ದರು. ಪಿಟೀಲ್‌ರತ್ನ, ಪಾಲಘಾಟ್ ಮಣಿ ಮತ್ತು ದೇಶಿಕನ್ ಗಣಪತಿ ಭಾಗವತರಿಗೆ ಪಕ್ಕವಾದ್ಯ ಬಾರಿಸಿ ಪಳಗಿದ್ದರು. ಭಾಗವತರ ತಂತ್ರಗಳೆಲ್ಲ ಅವರಿಗೆ ಗೊತ್ತಾಗಿದ್ದವು. ಭಾಗವತರು ಎಲ್ಲಿ ಕಛೇರಿಗೆ ಹೋದರೆ ಆ ಮೂವರೇ ಹೋಗಬೇಕಾಗಿತ್ತು. ಉಳಿದವರು ಭಾಗವತರ ಮುಂದೆ ತಮ್ಮ ವಾದ್ಯಗಳನ್ನು ಹಿಡಿಯಲೂ ಸಹ ಹೆದರುತ್ತಿದ್ದರು ಆವತ್ತೆ, ಆ ನಾಲ್ವರ ಮೇಳ ಶ್ರೋತೃವೃಂದಕ್ಕೆ ಅಪೂರ್ವವಾದ ಅನಿರ್ವಚನೀಯವಾದ ಎಂದೂ ಮರೆಯದ ಆನಂದಾಮೃತ ಸೇಚನಮಾಡಿ ಅವರನ್ನು ಗಾನ ಲೋಕದ ಅಮೃತ ನೌಕೆಗಳಲ್ಲಿ ತೇಲಿಬಿಡುತ್ತಿತ್ತು. ಆ ನಾಲ್ವರೂ ಇಂದು ಒಂದಾಗಿ ಸೇರುವುದರಿಂದಲೇ ಬೆಂಗಳೂರಿನ ರಸಿಕರಿಗೆ ಅಂತಹ ಆನಂದ ಉಂಟಾಗಿತ್ತು. ಆದರೆ ಕೊನೆಯ ಗಳಿಗೆಯಲ್ಲಿ ಪಿಟೀಲ್ ರತ್ನದ ಈ ತಂತಿ!

ಅನೇಕ ಕಛೇರಿಗಳಲ್ಲಿ ಕೊನೆಯ ಗಳಿಗೆಯಲ್ಲಿ ಸಂಗೀತಗಾರರು ಹೀಗೆ ಮಾಡಿದ್ದರೂ ಅಂದು ಮಾತ್ರ ಶಂಕರ ಐಯ್ಯರ್ ನಿಜವಾಗಿ ಮಂಕು ಆದರು. ಗಣಪತಿ ಭಾಗವತರ ಹಾಡುಗಾರಿಕೆಗೆ ಬಾರಿಸುವವರು ಬೆಂಗಳೂರಲ್ಲಿ ಅವರ ಕಣ್ಣಿಗೆ ಯಾರೂ ಕಾಣಿಸಲಿಲ್ಲ. ಕಛೇರಿಯ ವೇದಿಕೆಯ ಮೇಲೆಯೇ ಭಾಗವತರು ಮುಖಭಂಗಮಾಡಿಬಿಡುತ್ತಿದ್ದುದರಿಂದ ಅವರ ಹಾಡುಗಾರಿಕೆಗೆ ಬಾರಿಸಲು ಯಾರೂ ಒಪ್ಪುವುದಿಲ್ಲವೆಂಬುದು ಹಿಂದೆಯೇ ಶಂಕರ ಅಯ್ಯರ್‌ಗೆ ಗೊತ್ತಾಗಿತ್ತು ಒಳಗೆ ಕಲಕಲ ಶಬ್ದಮಾಡುತ್ತಾ ಎಡಪಾರ್ಶ್ವದ ತುಂಬ, ಜಾಗವಿಲ್ಲದೆ ಇಕ್ಕಟ್ಟಿನಲ್ಲಿ ಕುಳಿತಿದ್ದ ಸರ್ವಾಲಂಕಾರ ಭೂಷಿತೆಯರಾದ ಸುವಾಸಿನಿಯರನ್ನೂ, ಬಲಗಡೆ ಅವರಿಗಿಂತಲೂ ಹೆಚ್ಚು ಇಕ್ಕಟ್ಟಿನಲ್ಲಿ ಒಬ್ಬರ ಸಂದಿನಲ್ಲಿ ಒಬ್ಬರು ಕುಳಿತಿದ್ದ ಪುರುಷರ ಗುಂಪನ್ನೂ ಅವರು ನೋಡಿದರು. ಶ್ರೋತೃಗಳೆಲ್ಲರ ಮುಖದಮೇಲೆಯೂ ಇದ್ದ ಆಸೆಯನ್ನು ಕಂಡು ಅವರಿಗೆ ಅಯ್ಯೋ ಪಾಪ, ಎನ್ನಿಸಿತು. ಶ್ರೋತೃಗಳನ್ನೆಲ್ಲ ಪಿಟೀಲುರತ್ನ, ವಂಚಿಸಿದನೆಂದೇ ಅವರು ಭಾವಿಸಿದರು. ಆ ವಂಚನೆ ಕೇವಲ ಅವನು ಒಪ್ಪಿಕೊಂಡು ಬರದೆ ಇದ್ದುದು ಮಾತ್ರವಲ್ಲ. ತನ್ನ ಕಲೆಯನ್ನು ಇಲ್ಲಿ ಬೀರಿ ಇವರಿಗೆ ಗಾನ ಸಮಾರಾಧನೆ ಮಾಡಿ ತನ್ನ ವಿದ್ಯೆಗೆ ಸಾರ್ಥಕ್ಯವನ್ನು ಉಂಟುಮಾಡಿಕೊಳ್ಳದೆ ಆ ವಿದ್ಯೆಯನ್ನೂ ವಂಚಿಸಿದನೆಲ್ಲ ಎಂದು ಅವರು ದುಃಖಿತರಾದರು. ಮೂರು

ದಿನಗಳ ಹಿಂದೆ ಟಿಕೇಟು ಕೊಂಡುಕೊಂಡು ಸ್ಥಳ ಕಾದಿಟ್ಟುಕೊಂಡು, ಈ ಸಭೆಯಲ್ಲಿ ಹಿಂದೆ ಕುಳಿತು ಗಾನಾಮೃತದ ಅಮೃತ ವೃಷ್ಟಿಯ ತಂಪಿಗೆ ಕಾಯುತ್ತಿರುವ ಇವರಿಗೆ ಏನು ಹೇಳಲಿ? ಎಂದು ಅವರು ಯೋಚಿಸತೊಡಗಿದರು.

ಭವನದ ಮಧ್ಯದಲ್ಲಿದ್ದ ದೊಡ್ಡಗಡಿಯಾರ, ಮೂರುವರೆ ಗಂಟೆ ತೋರಿಸಿತು. "ಇನ್ನು ಇಪ್ಪತ್ತು ನಿಮಿಷಗಳೊಳಗೆ ಭಾಗವತರೂ ಮೃದಂಗ ಖಂಜರಿಯವರೂ ಬರುತ್ತಾರೆ. ಪಿಟೀಲಿಗೆ ಏನುಮಾಡಲಿ?" ಎಂದು ಅಯ್ಯರ್ ಯೋಚಿಸತೊಡಗಿದರು. ಇದ್ದಕ್ಕಿದ್ದಂತೆ ಅವರಿಗೆ ಒಂದು ಯೋಜನೆ ಹೊಳೆಯಿತು. ಆ ಯೋಚನೆ ಹೊಳೆದ ಕೂಡಲೇ, ಒಳಗಿನ ಜ್ಯೋತಿಯಿಂದ ಹೊರಗಿನ ಅಂಧಕಾರ ಮರೆಯಾಗುವಂತೆ ಅವರ ಮುಖದ ಕಪ್ಪುಛಾಯೆ ಮಾಯವಾಗಿ ಮುಖ ಗೆಲುವಾಯಿತು. ಆ ಆಲೋಚನಾ ಜ್ಯೋತಿಯಿಂದ ಅವರ ಮೈ ಉತ್ಸಾಹದಿಂದ ಹಗುರವಾಯಿತು. ಅವರು ಇನ್ನೂ ಚಿಕ್ಕವಯಸ್ಸಿನವರಾಗಿದ್ದರೆ ಅವರ ಮೈ ರೋಮಾಂಚವಡೆಯುತ್ತಿತ್ತು. "ಇಂತಹ ಅಪಾಯದ ಸಮಯದಲ್ಲಿ ಸತ್ಯದೇವರ ದಯೆಯಿಂದ ಈ ಯೋಚನೆ ನನಗೆ ಹೊಳೆಯಿತಲ್ಲ" ಎಂದು ಅವರು ತಮ್ಮನ್ನೇ ಪ್ರಶಂಶೆ ಮಾಡಿಕೊಂಡು ಕಾರ್ಯದರ್ಶಿಗೆ, ಭಾಗವತರು ಬಂದರೆ ಸರಿಯಾಗಿ ನೋಡಿಕೊಳ್ಳುವಂತೆ ಹೇಳಿ, ಕಾರನ್ನು ತೆಗೆದುಕೊಂಡು ಪ್ರಾಣಾಚಾರ್ಯರ ಧನ್ವಂತರೀ ಆಶ್ರಮಕ್ಕೆ ಹೋದರು. ಆಶ್ರಮದ ಬಾಗಿಲಿನಲ್ಲಿ ನಿಂತಿದ್ದ ಪ್ರಾಣಾಚಾರ್ಯರನ್ನು ಕಂಡು "ಆ ದಿವಸ ಪಿಟೀಲು ಬಾರಿಸಿದಳಲ್ಲ, ಆ ಹುಡುಗಿ ಇದ್ದಾಳೆಯೆ?" ಎಂದು ಕೇಳಿದರು. ಪ್ರಾಣಾಚಾರ್ರು "ಇದ್ದಾಳೆ ಯಾಕೆ? ಒಳಕ್ಕೆ ದಯಮಾಡಿ" ಎಂದರು. ಆಕೆ ಎಲ್ಲಿ ಊರಿಗೆ ಹೊರಟುಹೋಗಿದ್ದಾಳೊ, ಎಂದು ಗಾಬರಿಗೊಂಡಿದ್ದ ಶಂಕರ ಐಯ್ಯರ್‌ಗೆ ಸ್ವಲ್ಪ ಸಮಾಧಾನವಾಯಿತು.

ಸೀತಾಲಕ್ಷ್ಮಿ ಒಳಗಡೆ ಒಂದು ಮಗುವಿನ ಗಾಯವನ್ನು ತೊಳೆದು ಚಿಕಿತ್ಸೆಮಾಡುತ್ತಿದ್ದಳು. ಶಂಕರ ಐಯ್ಯರ್ ಪ್ರಾಣಾಚಾರ್ಯರೊಂದಿಗೆ ನೆಟ್ಟಗೆ ಆಕೆ ಇದ್ದಲ್ಲಿಗೇ ಹೋದರು. ಆಗಲೇ ನಾಲ್ಕು ಗಂಟೆಯ ಹತ್ತಿರವಾಗುತ್ತಿದ್ದುದರಿಂದ ಇನ್ನು ನಿಧಾನಮಾಡುವಂತೆಯೂ ಇರಲಿಲ್ಲ. ಶಂಕರ ಐಯ್ಯರ್ ಸೀತಾಲಕ್ಷ್ಮಿಗೆ "ಅಮ್ಮಾ ದಯವಿಟ್ಟು ನೀನು ಇವತ್ತು ಬಂದು ಪಿಟೀಲು

ಬಾರಿಸಿ ನನ್ನ ಮಾನ ಕಾಪಾಡಬೇಕು" ಎಂದರು. ಸೀತಾಲಕ್ಷ್ಮಿಗೆ ಗಾಬರಿಯಾಯಿತು. ಅವಳು ಮಾತನಾಡುವುದಕ್ಕೆ ಮುಂಚೆ ಶಂಕರ ಅಯ್ಯರೇ "ಗಣಪತಿ ಭಾಗವತರ ಹಾಡುಗಾರಿಕೆ, ಪಿಟೀಲುರತ್ನ ಮುತ್ತು ಬರುತ್ತೇನೆಂದು ಒಪ್ಪಿದ್ದವನು ಕೊನೆಯ ಗಳಿಗೆಯಲ್ಲಿ ಚಕ್ಕರ್‌ಕೊಟ್ಟ. ಫಾಲ್‌ಘಾಟ್ ಮಣಿ, ದೇಶಿಕನ್ ಬರುತ್ತಾರೆ. ಭಾಗವತರ ಹಾಡುಗಾರಿಕೆಗೆ, ಪಿಟೀಲು ಬಾರಿಸುವ ಯೋಗ್ಯತೆ ಇಲ್ಲಿ ಯಾರಿಗೂ ಇಲ್ಲ ಆ ಯೋಗ್ಯತೆ ನಿನಗೆ ಇದೆ. ಬಂದು ಬಾರಿಸಲೇಬೇಕು. ನಿನ್ನ ಫೀಸು ಎಷ್ಟು ಕೇಳಿದರೂ ಕೊಡುವುದಕ್ಕೆ ಗಾಯನ ಸಮಾಜ ಸಿದ್ಧವಾಗಿದೆ" ಎಂದರು ಸೀತಾಲಕ್ಷ್ಮಿಗೆ ಗಣಪತಿ ಭಾಗವತರ ಹೆಸರು ಗೊತ್ತಿತ್ತು. ಆಕೆಗೆ, ಎಲ್ಲಾ ಸಂಗೀತಗಾರರಗೂ ಇರುವಂತೆ ಅವರಲ್ಲಿ ಅಪಾರವಾದ ಗೌರವವೂ ಭಯವೂ ಇತ್ತು. ಅವರ ಹಾಡುಗಾರಿಕೆಗೆ ಪಿಟೀಲು ಬಾರಿಸುವ ರತ್ನ ಮುತ್ತು ಸಹ, ಅವಳ ಗೌರವಕ್ಕೆ ಪಾತ್ರನಾಗಿದ್ದನು. ತಾನು ಯಾವ ಕಾಲದಲ್ಲಾದರೂ ಭಾಗವತರಿಗೆ ಪಿಟೀಲು ಬಾರಿಸಬಹುದೆಂಬುದಾಗಲಿ, ಪಿಟೀಲು ರತ್ನನ ಬದಲು ಅವನ ಸ್ಥಾನವನ್ನು ತಾನು ಆಕ್ರಮಿಸಬಹುದೆಂಬುದಾಗಲೀ ಅವಳಿಗೆ ಕನಸಿನಲ್ಲಿಯೂ ಹೊಳೆದಿರಲಿಲ್ಲ. ಅವಳು ಗಾಬರಿಯಿಂದ "ಸ್ವಾಮಿ ನನ್ನಿಂದ ಸಾಧ್ಯವಿಲ್ಲ. ಭಾಗವತರ ಹೆಸರನ್ನು ಕೇಳಿದರೇನೆ ನನಗೆ ಭಯವಾಗುತ್ತೆ. ನನಗೆ ಅಂತಹ ವಿದ್ಯೆ ತಾನೆ ಎಲ್ಲಿದೆ? ಹಳ್ಳಿಯಲ್ಲಿ ಕುಳಿತು ನಾಲ್ಕಾರು ಹಾಡು ಬಾರಿಸುವುದನ್ನು ಕಲಿತಿದ್ದೇನೆ, ಅಷ್ಟೆ. ಈಚೆಗೆ ನಾನು ಪಿಟೀಲನ್ನೇ ಹಿಡಿದಿರಲಿಲ್ಲ. ಅವತ್ತು ಲಕ್ಷ್ಮಿಯ ಮದುವೆಯ ದಿನ ಬಾರಿಸಿದಷ್ಟೇ ನನಗೆ ಬರುವುದು" ಎಂದಳು. ಶಂಕರ ಅಯ್ಯರು "ಅಮ್ಮ ನಿನಗೆ ಏನು ಬರುತ್ತೆ ಏನು ಬರುವುದಿಲ್ಲ ಎಂಬುದು ನನಗೆ ಗೊತ್ತು. ಪಿಟೀಲಿನ ಮೇಲೆ ಒಂದು ಸಲ ಕೈ ಆಡಿಸಿದರೆ ಅವರ ವಿದ್ಯೆ ಎಷ್ಟು ಎಂಬುದು ನನಗೆ ತಿಳಿಯುತ್ತೆ. ಸಂಗೀತದ ಕೋಟಲೆಯಲ್ಲಿ ನನ್ನ ತಲೆ ಕೂದಲು ಸುಮ್ಮನೆ ಬೆಳ್ಳಗಾಗಿಲ್ಲ. ನಿನ್ನ ಕೈ ಚನ್ನಾಗಿ ಕುದುರಿದೆ. ನಿನ್ನ ಒಳ್ಳೆ ಜ್ಞಾನವಿದೆ. ನಿನ್ನನ್ನು ಗಾಯನಸಮಾಜದ ವೇದಿಕೆ ಏರಿಸಬೇಕೆಂದು ಅವತ್ತೇ ತೀರ್ಮಾನಿಸಿದ್ದೆ. ಆದರೆ ಇಷ್ಟು ಬೇಗ ಅವಕಾಶ ದೊರಕುವುದೆಂದು ಎಣಿಸಿರಲಿಲ್ಲ. ಹೊತ್ತಾಯಿತು ಏಳು. ಈ ದಿನ ಕಛೇರಿ ನಡೆಯದಿದ್ದರೆ ಆ ಹುಚ್ಚು ಜನ ಗಾಯನ ಸಮಾಜದ ಕಟ್ಟಡವನ್ನೇ ಕೆಡವಿ ಎಸೆದಾರು. ನನ್ನನ್ನು ಜೀವ

ಜೊಂದಿಗೆ ಬಿಡುವುದಿಲ್ಲ" ಎಂದರು. ಪ್ರಾಣಾಚಾರ್ಯರು "ನಿಮಗೆ ಹೊತ್ತಾಯಿತು ಹೊರಡಿ. ನಾನು ಕರೆದುಕೊಂಡು ಬರುತ್ತೇನೆ" ಎಂದರು. ಶಂಕರ ಅಯ್ಯರ್ ಒಪ್ಪಿದ ಮೇಲೆ ಸೀತಾಲಕ್ಷ್ಮಿಗೆ, ಬಾರಿಸುವುದು ಸುಲಭವೆಂದೇ ಅವರು ಭಾವಿಸಿದರು. "ನೀವು ಹೋಗಿ ಅಲ್ಲಿಯ ವ್ಯವಸ್ಥೆ ನೋಡಿಕೊಳ್ಳಿ, ನಾನು ಕರೆದುಕೊಂಡು ಬರುತ್ತೇನೆ" ಎಂದರು. ಶಂಕರ ಅಯ್ಯರು "ಇನ್ನು ಕಾಲವಿಳಂಬಕ್ಕೆ ಅವಕಾಶವಿಲ್ಲ. ಸರ್‍ರನೆ ಹೊರಟು ಬರಬೇಕು. ಮೋಟಾರು ಬಿಟ್ಟು ಹೋಗಲೇ" ಎಂದರು. ಪ್ರಾಣಾಚಾರ್ರು "ಬೇಡ ನೀವು ಬೇಗ ಹೋಗಿ, ಎಷ್ಟು ದೂರ. ಜಟಕಪಲ್ಲಿ ಬರುತ್ತೇವೆ" ಎಂದರು. ಸೀತಾಲಕ್ಷ್ಮಿ ಬಟ್ಟೆ ಬದಲಾಯಿಸಿಕೊಳ್ಳಲು ಬಯಸಬಹುದೆಂಬ ಉದ್ದೇಶದಿಂದ ಅಯ್ಯರು ತಾವು ಹೊರಟರು. ಹೊರಡುವಾಗ ಮತ್ತೆ "ಅಮ್ಮಾ ನನ್ನ ಮಾನ ಇಂದು ನಿನ್ನ ಕೈಯ್ಯಲ್ಲಿದೆ. ಯಾವ ದೇವತೆಯನ್ನು ನಾನು ಮರಕ್ಕೆ ಇದಕ್ಕಿಂತ ಹೆಚ್ಚು ಭಕ್ತಿ ಶ್ರದ್ಧೆಯಿಂದ ಪ್ರಾರ್ಥಿಸಲಿಲ್ಲ" ಎಂದರು. ಸೀತಾಲಕ್ಷ್ಮಿಯ ಮುಖವು ನಾಚಿಕೆಯಿಂದ ಮತ್ತಷ್ಟು ಕೆಂಪಾಯಿತು. ಶಂಕರ ಅಯ್ಯರರ ಸಹಾನುಭೂತಿ ತನ್ನಲ್ಲಿರುವುದು ಲಕ್ಷ್ಮಿಯ ಮದುವೆಯ ದಿನವೇ ಆಕೆಗೆ ಗೊತ್ತಾಗಿತ್ತು. ಆ ದಿನ ಪಿಟೀಲು ಬಾರಿಸಿದಾಗಲೂ ಅವರ ಮುಖದ ಪ್ರಶಂಸಾ ಭಾವನೆಯನ್ನು ನೋಡಿಯೇ ಅವಳು, ಅಷ್ಟು ಅದ್ಭುತವಾಗಿ ಅವರೊಬ್ಬರಿಗಾಗಿಯೇ ಎಂಬಂತೆ ಬಾರಿಸಿದ್ದಳು. ಇತರರ ಕಡೆಗೆ ಆಕೆಯ ದೃಷ್ಟಿ ಆವತ್ತು ಹರಿದಿರಲಿಲ್ಲ. ಇಂದೂ ಶಂಕರ ಅಯ್ಯರ್ ಬಂದು ಹೇಳಿ ಹೋದ ಮೇಲೆ "ಇವರ ಎದುರಿಗೆ, ಬಂದದ್ದನ್ನು ಬಾರಿಸೋಣ" ಎಂಬ ಧೈರ್ಯ ಉಂಟಾಯಿತು. ಆ ಗಳಿಗೆಯಲ್ಲಿ ಅವಳಿಗೆ ಆ ಭಯಂಕರ ಹುಲಿ ಗಣಪತಿ ಭಾಗವತರೂ ಪಿಟೀಲ್ ರತ್ನನೂ ಮರೆತೇಹೋದರು. ತಾನು ಬಾರಿಸುತ್ತಿರುವುದು ಶಂಕರ ಅಯ್ಯರ್‌ಗಾಗಿ ಎಂಬ ಭಾವನೆಯಿಂದಲೇ ಆಕೆಗೆ ಧೈರ್ಯವುಂಟಾಯಿತು. ತಾನು ಉಟ್ಟಿದ್ದ ಸಾಮಾನ್ಯ ಸೀರೆಯಲ್ಲಿಯೇ ಆಕೆ ಹೊರಟರೂ ಪ್ರಾಣಾಚಾರ್ಯರು ಕೇಳದೆ, ಒಳ್ಳೆಯ ಸೀರೆಯುಟ್ಟುಕೊಳ್ಳುವಂತೆ ಆಕೆಯನ್ನು ಬಲಾತ್ಕರಿಸಿದರು. ಸೀತಾಲಕ್ಷ್ಮಿಯ ಹತ್ತಿರ ಇದ್ದ ಒಳ್ಳೆಯ ಸೀರೆ ಅವಳ ಮದುವೆಯ ಸೀರೆ ಮಾತ್ರ. ಅದರ ಜ್ಞಾಪಕ ಬಂದ ಕೂಡಲೇ ಅವಳಿಗೆ ಸುಂದರರಾಜನ ಜ್ಞಾಪಕವೂ ಬಂದುದರಿಂದ ಆಕೆ, ಆ ಸೀರೆಯನ್ನುಟ್ಟುಕೊಳ್ಳ

ಲಾರದವಳಾದಳು. ಬೇರೆ ಸೀರೆಯ ಪ್ರಶ್ನೆಯಿಂದ ಸುಂದರರಾಜನ ಜ್ಞಾಪಕ ಬಂದು ಆಕೆ ಖಿನ್ನಳೇ ಆದಳು. ಆದರೆ ಪ್ರಾಣಾಚಾರ್ಯರೂ ಲಕ್ಷ್ಮಿಯೂ ಬಲಾತ್ಕರಿಸಿದುದರಿಂದ ಆಕೆ ಕೊನೆಗೆ ಲಕ್ಷ್ಮಿಯ ಸೀರೆಯನ್ನುಟ್ಟುಕೊಂಡು ಹೊರಟಳು. ಯಾವ ಸೀರೆಯಲ್ಲಿಯೂ ಆಕೆ ವಸಂತಲಕ್ಷ್ಮಿಯಾಗಿ ನವ ಮೋಹನಾಂಗಿಯಾಗಿಯೇ ತೋರುತ್ತಿದ್ದಳು. ಹೆಚ್ಚು ಅಲಂಕಾರಗಳ ಗೋಜಿಗೆ ಹೋಗದೆ ತನಗೆ ಪ್ರಿಯವಾದ ಮಲ್ಲಿಗೆ ದಂಡೆಯೊಂದನ್ನು ಮಾತ್ರ ಮುಡಿದುಕೊಂಡು, ಪ್ರಾಣಾಚಾರ್ಯರು ಲಕ್ಷ್ಮಿಯರೊಂದಿಗೆ, ಕುದುರೆಗಾಡಿಯಲ್ಲಿ ಸರಸರನೆ ಹೊರಟಳು

ಗಾಯನ ಸಮಾಜದ ಬಾಗಿಲನ್ನು ಅವರು ತಲಪುವ ವೇಳೆಗೆ ನಾಲ್ಕು ಗಂಟೆಗೆ ಎರಡೇ ನಿಮಿಷಗಳಿದ್ದವು. ಆಗಲೇ ಗಣಪತಿ ಭಾಗವತರೂ ಘಾಲ ಘಾಟ್ ಮಣಿಯೂ ದೇಶಿಕರ್‌ರೂ ಬಂದು ವೇದಿಕೆಯ ಮೇಲೆ ಕುಳಿತಿದ್ದರು. ಜನರು ಅರ್ಧ ಉತ್ಸಾಹದಿಂದಲೂ ಅರ್ಧ ಆತುರ ಅಶಾಂತಿಯಿಂದಲೂ ಇನ್ನೂ ಪಿಟೀಲ್ ರತ್ನ ಮುತ್ತು ಯಾಕೆ ಬರಲಿಲ್ಲವೆಂದು ಬಾಗಿಲ ಕಡೆಯೇ ನೋಡು ತ್ತಿದ್ದರು. ಆತ ಚಕ್ಕರ್ ಕೊಟ್ಟ ಸಂಗತಿ ಇನ್ನೂ ಯಾರಿಗೂ ತಿಳಿದಿರಲಿಲ್ಲ. ಸೀತಾಲಕ್ಷ್ಮಿ ಗಾಡಿಯಿಂದ ಇಳಿದು ಶಂಕರ ಐಯ್ಯರ ಸೂಚನೆಯಂತೆ ಅವರ ಹಿಂದೆಯೇ ಹೋಗಿ ವೇದಿಕೆಯೇರಿ ಕುಳಿತಳು. ಹಿಂದೆ ಕೈಯಲ್ಲಿ ಪಿಟೀಲು ಹಿಡಿದು ಪ್ರಾಣಾಚಾರ್ಯರೂ, ಲಕ್ಷ್ಮಿಯೂ ನಡೆದು ಬಂದು ವೇದಿಕೆ ಯಲ್ಲಿ ಸ್ಥಳವಿದ್ದೆಡೆ ಕುಳಿತರು. ಶಂಕರ ಅಯ್ಯರ್ ಭಾಗವತರ ಕಿವಿಯಲ್ಲಿ ಏನೋ ಹೇಳಿದರು. ಭಾಗವತರ ಮುಖದ ಮೇಲೆ ಒಂದು ಗಳಿಗೆ ಮಾತ್ರ ಕಪ್ಪುಮೋಡದ ಛಾಯೆ ಕವಿಯಿತು. ಮರುಕ್ಷಣದಲ್ಲಿ ಅವರು ಪ್ರಸನ್ನರಾಗಿ ಆಗಬಹುದೆಂಬಂತೆ ತಲೆಯಲ್ಲಾಡಿಸಿ ತಮ್ಮ ಗಾನವನ್ನೂ ಪ್ರಾರಂಭಿಸಿಯೇ ಬಿಟ್ಟರು. ಪಿಟೀಲ್ ರತ್ನ ಬರಲಿಲ್ಲ ಎಂಬುದು ಜನರಿಗೆ ತಿಳಿದು ಅವರ ಪ್ರತಿಕ್ರಿಯೆ ಆದಕ್ಕೆ ಪ್ರಾರಂಭವಾಗುವುದಕ್ಕೆ ಮುಂಚೆಯೇ, ಪೀಟೀಲಿನ ಧ್ವನಿ ಸಭಾಭವನವನ್ನು ತುಂಬಿತು. ಭಾಗವತರು ಮೊದಲು ಹಂಸಧ್ವನಿಯ ಕೃತಿ ಯನ್ನು ಹಾಡಿದರು. ಸೀತಾಲಕ್ಷ್ಮಿಗೆ ಆ ಭವನ, ಅದರಲ್ಲಿ ಕುಳಿತಿದ್ದ ಜನ, ವೇದಿಕೆಯ ಮೇಲೆ ಕುಳಿತಿದ್ದ ಅದ್ಭುತ ಪಾಂಡಿತ್ಯದ ಕಲಾವಿದರು, ಅನೇಕ ಕಛೇರಿಗಳನ್ನು ಅನುಭವಿಸಿದ್ದ ರಸಜ್ಞರು, ಎಲ್ಲವೂ ಮರೆತೇಹೋಯಿತು.

ಅವಳಿಗೆ ಧೈರ್ಯವನ್ನು ಕೊಡಲು ಅವಳಿಗೆ ಕಾಣುವಂತೆ ಕುರ್ಜಿಯ ಮೇಲೆ ಕುಳಿತು ತಲೆಯಲ್ಲಾಡಿಸುತ್ತಿದ್ದ ಶಂಕರ ಅಯ್ಯರ್ ಕಡೆಗೆ ಮಾತ್ರ ಅವಳ ದೃಷ್ಟಿ ಇತ್ತು. ಶ್ರೋತೃಗಳಿಗೆ ಆಕೆ ಶಂಕರ ಅಯ್ಯರ್‌ರಿಗಾಗಿಯೇ ಬಾರಿಸು ತ್ತಿರುವಳೋ ಎಂದೇ ತೋರಿತು.

ಆಹಾ! ಏನು ಮನಮೋಹಕ ಹೃದಯಹಾರಿ ಅಮೃತತತ್ವಸ್ಪರ್ಶಗಾನ! ಬೆಂಗಳೂರಿನ ನಾಗರಿಕರು ಎಂದಿಗೂ ಆ ಗಾನವನ್ನು ಮರೆಯುವಂತೆ ಇಲ್ಲ. ಪ್ರಾರಂಭದ ಹಂಸಧ್ವನಿಯಲ್ಲಿಯೇ ಸೀತಾಲಕ್ಷ್ಮಿ ಬೆಂಗಳೂರಿನ ನಾಗರಿಕರ ಹೃದಯವನ್ನು ಸೂರೆಗೊಂಡಳು ನಾಲ್ಕು ಸಲ ಪಿಟೀಲಿನ ಮೇಲೆ ಆಕೆ ಕಮಾನು ಆಡಿಸುವುದರೊಳಗೆ, ರಸಜ್ಞರಿಗೆ ಇದು ದೈವಕೃಪೆಯು ಹಸ್ತ ಎಂಬುದು ಗೊತ್ತಾಯಿತು ಮೊದಲನೆಯ ಕೃತಿಯಲ್ಲಿಯೇ ಭಾಗವತರ ಬಾಯಿನಿಂದಲೂ ಭೇಷ್ ಭೇಷ್ ಎಂಬ ಪ್ರಶಂಶೆ ಹೊರಟಿತು. ಜನರಿಗೆ ಪಿಟೀಲ್ ರತ್ನ ಬರಲಿಲ್ಲ. ಕಾರ್ಯಕ್ರಮದ ಪಟ್ಟಿಯಲ್ಲಿಲ್ಲದ, ಎಂದೂ ಹೆಸರೇ ಪ್ರಸಿದ್ಧವಾಗದಿದ್ದ ಇದಾವುದೋ ಹೊಸ ಹುಡುಗಿ ಇಲ್ಲಿ ಬಂದು ಕುಳಿತಿದೆ" ಎಂಬುದು ಮರೆತೇ ಹೋಯಿತು ಅವರ ಮನಸ್ಸು, ಮುಂದೇನು, ಮುಂದಲ ಆನಂದವೇನು ಎಂಬ ಉತ್ಸಾಹದಲ್ಲಿ ಗಾನಾಮೃತವಾಹಿನಿಯಲ್ಲಿ, ಆಳ ಆಳ ವಾಗಿ ಇಳಿಯುತ್ತಿತ್ತು. ಯದುಕುಲ ಕಾಂಬೋದಿ, ತೋಡಿ, ನಾಟ್‌ಕುರಂಜ್ ಮಲಯಮಾರುತ ಮೋಹನ ಎಲ್ಲ ರಾಗಗಳಲ್ಲಿಯೂ ಸೀತಾಲಕ್ಷ್ಮಿ ಸ್ವಾಭಾ ವಿಕವಾಗಿ ಭಾಗವತರನ್ನು ಅನುಸರಿಸುತ್ತಿದ್ದಳು. ಆಕೆಗೆ ಭಾಗವತರನ್ನು ಹಿಂಬಾಲಿಸುವುದು ಸ್ವಲ್ಪವೂ ಕಷ್ಟವಾದಂತೆಯೇ ತೋರಲಿಲ್ಲ. ಮೀನು ನೀರಿ ನಲ್ಲಿ ವಿಹರಿಸುವಂತೆ, ದುಂಬಿ ಮಧುವಿನಿಂದ ಮಧುವಿಗೆ ಸರಾಗವಾಗಿ ಹೋ ಗುವಂತೆ, ಆಕೆ ರಾಗದಿಂದ ರಾಗಕ್ಕೆ ಗಾಳಿಯು ಬೆನ್ನಿನಮೇಲೆ ಸುಳಿಯುವ ಸುಗಂಧದಂತೆ ಚಲಿಸುತ್ತಿದ್ದಳು. ಭಾಗವತರಿಗೆ ಪ್ರಶಂಸೆಯು ಕರತಾಡನ ವಾಗುತ್ತಿದ್ದಂತೆ ಆಕೆಗೂ ಚಪ್ಪಾಳೆಗಳು ಪ್ರತಿಯೊಂದು ಕೀರ್ತನೆಯ ನಂತರವೂ ಬೀಳುತ್ತಿದ್ದುವು. ಒಂದೊಂದು ಸಲ ಈ ಚಪ್ಪಾಳೆ ಬಿದ್ದುದು ಭಾಗವತರಿಗಾಗಿಯೋ ಅಥವ ಸೀತಾಲಕ್ಷ್ಮಿಗೋ ಎಂಬ ಅನುಮಾನ ಶಂಕರ ಅಯ್ಯರ್‌ಗೇ ಉಂಟಾಯಿತು. ಚಪ್ಪಾಳೆ ಬಿದ್ದಾಗಲೆಲ್ಲ ಭಾಗವತರು ಸ್ವಲ್ಪ ಮುಗುಳುನಗುವಿನಿಂದಲೂ, ತಲೆ ಬಗ್ಗಿಸುವುದರಿಂದಲೂ, ಜನರ ಆ ಮೆಚ್ಚುಕೆ

ಯನ್ನು ಸ್ವೀಕರಿಸುತ್ತಿದ್ದರು. ಆದರೆ, ಸೀತಾಲಕ್ಷ್ಮಿಗೆ ಮಾತ್ರ ಅವೊಂದೂ ಗೊತ್ತಾದಂತೆಯೇ ತೋರಲಿಲ್ಲ. ಚಪ್ಪಾಳೆ ಅವಳ ಕಿವಿಯಮೇಲೆ ಮಾತ್ರ ಬಿದ್ದು ಲಯವಾಗುತ್ತಿತ್ತು. ಆಕೆಗೆ ಬಾಹ್ಯ ಜಗತ್ತಿನ ಜ್ಞಾನ ಇದ್ದಂತೆ ತೋರಲಿಲ್ಲ. ತಾನಾಯಿತು ತನ್ನ ಪಿಟೀಲ್ ಆಯಿತು. ಪಿಟೀಲಿನಮೇಲೆ ಇಟ್ಟ ದೃಷ್ಟಿಯನ್ನು ಆಕೆ ಕದಲಿಸಲಿಲ್ಲ. ಆಗಾಗ್ಗೆ ಶಂಕರ ಅಯ್ಯರ್‌ನ್ನು ಮಾತ್ರ ನೋಡುತ್ತಿದ್ದಳು.

ಆನಂದಭೈರವಿಯ ಆಲಾಪನೆ, ಪಲ್ಲವಿ, ಅನುಪಲ್ಲವಿಗಳನ್ನು ಭಾಗವತರು ಹಾಡಿ, ಪದ್ಧತಿಯಂತೆ ಪಿಟೀಲಿಗೆ ಅವಕಾಶ ಕೊಟ್ಟರು. ಅವರಿಗೆ ಒಂದು ದಿನವೂ ಕಛೇರಿಯಲ್ಲಿ ನುಡಿಸದಿದ್ದರೂ ಸೀತಾಲಕ್ಷ್ಮಿ ಸ್ವಾಭಾವಿಕವಾಗಿಯೇ ಭಾಗವತರ ಜಾಡೆಯಲ್ಲಿ ಅನುಸರಿಸಿದಳು. ಭಾಗವತರೇ ಪದೇ ಪದೆ ವಹವಾ ಪಹವಾ ಎಂದರು. ಪ್ರೇಕ್ಷಕರ ಕರತಾಡನ ಸಭಾಭವನದ ಮೇಲುಚಾವಣೆಯೆನ್ನೇ ಹಾರಿಸುವಂತಿತ್ತು. ಅನಂತರ ಭಾಗವತರು ತಾನಂ ಕೀರ್ತನೆ ಮುಗಿಸಿ ಗೀತಗೋವಿಂದದ ಮುಂದಲ ಶ್ಲೋಕ ಹಾಡಿದರು

ಧ್ಯಾನಲಯೇನ ಪುರಃ ಪರಿಕಲ್ಪ್ಯಭವಂ ತಮತೀವ ದುರಾಪಮ್ ।
ವಿಲಪತಿ ಹಸತಿ ವಿಷೀದತಿ ರೋದಿತಿ ಚಂಚತಿ ಮುಂಚತಿತಾಪಮ್ ॥

(ರಾಧೆಯು, ಹೊಂದಲಸಾಧ್ಯನಾದ ಕೃಷ್ಣನನ್ನು ಮನಸ್ಸಿನ ಕಣ್ಣಿನ ಮುಂದೆ ಕಲ್ಪಿಸಿಕೊಂಡು ಪ್ರಲಾಪಿಸುತ್ತಾಳೆ; ದುಃಖಪಡುತ್ತಾಳೆ, ನಗುತ್ತಾಳೆ, ಅಳುತ್ತಾಳೆ, ಭ್ರಮಿಸುತ್ತಾಳೆ, ತಪಿಸುತ್ತಾಳೆ, ತಾಪವನ್ನು ಬಿಡುತ್ತಾಳೆ.)

ಆ ಶ್ಲೋಕ, ಸೀತಾಲಕ್ಷ್ಮಿಗೆ ಹೊಸದಲ್ಲ. ಹಿಂದೆ ಕಮಲಮ್ಮನಿಗಾಗಿ ಸೀತಾಲಕ್ಷ್ಮಿ ಆ ಶ್ಲೋಕವನ್ನು ಬಾಯಲ್ಲಿ ಹಾಡಿದ್ದಳು ಪಿಟೀಲಿನಲ್ಲಿಯೂ ಬಾರಿಸಿದ್ದಳು. ಆ ಶ್ಲೋಕದ ರಾಧೆಯ ಸ್ಥಿತಿಯನ್ನು ಕಂಡು ಅವಳಿಗೆ ಯಾವಾಗಲೂ ಕನಿಕರವುಂಟಾಗಿತ್ತು. ಈಚೆಗೆ ತಾನು ಪತಿಪ್ರೇಮದಿಂದ ವಂಚಿತಳಾದ ನಂತರವಂತೂ ಆ ಶ್ಲೋಕವನ್ನು ಜ್ಞಾಪಿಸಿಕೊಂಡ ಕೂಡಲೇ ಅವಳ ಮನಸ್ಸು ದುಃಖದ ಆವೇಗದಿಂದ ಪೂರ್ಣವಾಗಿ, ಬಿರುಗಾಳಿ ದೋಣಿಯನ್ನು ಆಡಿಸುವಂತೆ ದುಃಖ ಅವಳನ್ನು ಜರ್ಝರಿತ ಮಾಡುತ್ತಿದ್ದಿತು. ಯಾವಾಗ ಆ ಶ್ಲೋಕವನ್ನು ಬಾರಿಸಿದರೂ ಅದರ ಜಂಝಾವಾತಕ್ಕೆ ಸೀತಾಲಕ್ಷ್ಮಿ ಸಿಕ್ಕಿಯೇ ಸಿಕ್ಕುತ್ತಿದ್ದಳು. ಇಂದು ಭಾಗವತರೂ

ಅದೇ ಶ್ಲೋಕವನ್ನು ಹಾಡುತ್ತಾರೆಂದು ಸೀತಾಲಕ್ಷ್ಮಿ ಕನಸಿನಲ್ಲಿಯೂ ಎಣಿಸಿರಲಿಲ್ಲ. ಭಾಗವತರ ಬಾಯಿನಿಂದ ಮೊದಲನೆಯ ಪದ ಹೊರಟ ಕೂಡಲೇ ಸೀತಾಲಕ್ಷ್ಮಿಯನ್ನು ಚೇಳು ಕುಟುಕಿದಂತಾಯಿತು. ಭಾಗವತರು ಒಂದು ಪಾದವನ್ನು ಆಲಾಪನೆ ಮಾಡಿ ನಿಲ್ಲಿಸಿದಾಗ ಸೀತಾಲಕ್ಷ್ಮಿ ಅದನ್ನು ನುಡಿಸಿದಳು ಆಕೆಯ ಪಿಟೀಲಿಗೆ ಅಪೂರ್ವವಾದ ಅದುವರೆಗೆ ಇರದಿದ್ದ ಒಂದು ಮಾರ್ದವ ಮಾಧುರ್ಯ ಬಂದಿತ್ತು. ಪ್ರತಿ ಒಂದು ಸ್ವರದಲ್ಲಿಯೂ ಕರುಣಾರಸ ತೊಟ್ಟಿಕ್ಕುತ್ತಿತ್ತು. ನಿರ್ಜನವಾದ ಆ ತಂತಿ, ಆ ಕಮಾನು, ಆದರೆ, ಅದರಿಂದುಂಟಾಗುವ ರಸಾನುಭವಾನಂದ! ಆ ಶ್ಲೋಕಕ್ಕೆ ಸೀತಾಲಕ್ಷ್ಮಿಯೇ ಪಿಟೀಲು ಆದಳು.

ಇನ್ನೇನು ಕಛೇರಿ ಕೊನೆಮುಟ್ಟಬೇಕು. ಭಾಗವತರೂ ಶ್ಲೋಕ, ರಾಗ ಮಾಲಿಕೆ, ಶೃಂಗಾರ ಹಾಸ್ಯದ ಚುಟಿಕೆಗಳನ್ನು ಬಿಡುತ್ತಿದ್ದರು. ಭಾಗವತರಿಗೂ ಒಳ್ಳೆಯ ಗೆಲುವು ಉಂಟಾಗಿತ್ತು. ಶ್ರೋತೃಗಳು ಸುಖಕರವಾದ ಪ್ರಯಾಣದ ಕೊನೆಯನ್ನು ನಿರೀಕ್ಷಿಸುವವರಂತೆ, ಆನಂದದಿಂದಲೇ ತೃಪ್ತರಾಗಿ ತಮ್ಮನ್ನು ತಾವು ಮರೆತಿದ್ದರು. ಶ್ರೋತೃವೃಂದದಿಂದ ಒಬ್ಬರು ದಾಸರಪದ ಎಂದು ಕೂಗಿದರು. ಮತ್ತೊಂದು ಕಡೆಯಿಂದ "ಸತ್ಯವಂತರಿಗಿದು ಕಾಲವಲ್ಲ" ಎಂಬ ಕೂಗು ಬಂತು. ಅದು ಪುರಂದರದಾಸರ ಕೃತಿ ಭಾಗವತರು ಹಾಡುತ್ತಿದ್ದ ಕನ್ನಡ ಕೃತಿಗಳ ಪೈಕಿ ಅದರಲ್ಲಿಯ ಮಾತುಗಳನ್ನು ಸ್ವಚ್ಛವಾಗಿ ಉಚ್ಚರಿಸುತ್ತಿದ್ದರು. ಆ ಕೃತಿ ಕನ್ನಡನಾಡಿನ ಅವರ ಕಛೇರಿಗಳಲ್ಲಿ ಪ್ರಸಿದ್ಧವಾಗಿತ್ತು. ಅವರ ಕಛೇರಿಯ ಕೊನೆಯ ಭಾಗದಲ್ಲಿ ಸಾಧಾರಣವಾಗಿ ಶ್ರೋತೃಗಳು ಆ ಹಾಡನ್ನು ಕೇಳುತ್ತಿದ್ದರು. ಅಂದೂ ಹಾಗೆ ಕೇಳಿದಾಗ ಭಾಗವತರಿಗೆ ಸಂತೋಷವೇ ಆಯಿತು. ಅವರು ತಮ್ಮನ್ನೇ ತಾವು ಭಲೆ, ಭಲೆ, ಎಂದುಕೊಂಡು ಹಾಡತೊಡಗಿದರು.

ಸತ್ಯವಂತರಿಗಿದು ಕಾಲವಲ್ಲ
ದುಷ್ಟಜನರಿಗೆ ಸುಭಿಕ್ಷಕಾಲ ||
ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ
ಪರಮಪಾಪಿಗಳಿಗೆ ಸುಭಿಕ್ಷ ಕಾಲ ||

ಸ್ಥಿರವಾದ ಪತಿವ್ರತೆಯ ಪರರು ನಿಂದಿಪಕಾಲ
ಧರೆಯ ಜಾತಿಯರ ಕೊಂಡಾಡುವ ಕಾಲ ||

ಆ ಚರಣವನ್ನು ಕೇಳಿದ ಕೂಡಲೇ ಸೀತಾಲಕ್ಷ್ಮಿಗೆ ಹೇಗೆ ಆಯಿತೊ? ತಂತಿಯನ್ನು ಕತ್ತರಿಸಿದಂತೆ ಆಕೆಯ ಕೈ ಬೆರಳುಗಳು ಆಡುವುದು ನಿಂತು ಹೋಯಿತು. ತಂತಿ ಕತ್ತರಿಸಿದಾಗ ಠಾ ಎಂದು ಶಬ್ದವಾಗುತ್ತದೆ. ನಿಜ. ಈಗ ಅಂತಹ ಶಬ್ದವಾಗಲಿಲ್ಲ. ಆದರೆ, ಶ್ರೋತೃವೃಂದಕ್ಕೆ ಅಂತಹ ಶಬ್ದಕ್ಕಿಂತ ಹೆಚ್ಚು ಕಠೋರವಾದ ಶಬ್ದ ಕೇಳಿಸಿದಂತೆ ಭಾಸವಾಯಿತು. ತಂತಿಯು ಕಿತ್ತ ಶಬ್ದ ಬರಿಯ ಕಿವಿಗೆ ಮಾತ್ರ ಕೇಳಿಸುವುದು. ಆದರೆ, ಸೀತಾಲಕ್ಷ್ಮಿಯ ಬೆರಳುಗಳು ತಂತಿಯ ಮೇಲೆ ಕೈ ಆಡದೆ ನಿಂತುದರಿಂದ, ಶ್ರೋತೃಗಳ ಹೃದಯದಲ್ಲಿ ಉಕ್ಕಿ ಬರುತ್ತಿದ್ದ ಆನಂದಾಮೃತಲಹರಿ ಬತ್ತಿಹೋಯಿತು ದೇಹಕ್ಕೆ ಉಂಟಾಗುವ ಕಷ್ಟಕ್ಕಿಂತ ರಸಾನುಭವದಲ್ಲಿ ಚ್ಛೇದವಾದರೆ ಮನಸ್ಸಿಗೆ ಉಂಟಾಗುವ ನೋವು ಹೆಚ್ಚು ಕಷ್ಟ. ಭಾಗವತರ ಹಾಡುಗಾರಿಕೆಯ ಜತೆಯಲ್ಲಿ ಸ್ವಾಭಾವಿಕವಾಗಿ ಪಿಟೀಲು ಹೋಗುತ್ತಿರುವುದು ನಿಂತು ಹೋದ ಕೂಡಲೇ ಭಾಗವತರು ಮೊದಲು ಇತರ ಪಿಟೀಲುಗಾರರಿಗೆ ಆದಂತೆ ಈಕೆಗೂ ಭಯದಿಂದಲೂ, ಆತ್ಮಪ್ರತ್ಯಯವಿಲ್ಲದುದರಿಂದಲೂ ಕೈಸಡಿಲ ಒಂದಿರಬಹುದೆಂದು ಭಾವಿಸಿದರು ಆದರೆ, ಮರುಕ್ಷಣದಲ್ಲಿಯೇ, ಅಂದಿನ ಆ ಗಾನ ಸರಸ್ವತಿಯ ದೈವಿಕ ಪ್ರತಿಭೆಯನ್ನು ಅನುಭವಿಸಿದ್ದ ಅವರಿಗೆ ವಿಷಯ ಹಾಗೆ ಇದ್ದಿರಲಾರದೆಂದು ತೋರಿತು. ಪ್ರೇಕ್ಷಕರಲ್ಲಿಯೂ ಗುಜುಗುಜು ಪ್ರಾರಂಭವಾದುದರಿಂದ ಭಾಗವತರೂ ಮೃದಂಗ ಖಂಜರಿಯವರೂ ತಮ್ಮ ಬಾಯಿ ಕೈಗಳನ್ನು ನಿಲ್ಲಿಸಿದರು. ಭಾಗವತರ ಜೀವಮಾನದಲ್ಲಿ ಅವರು ಹಾಗೆ ಕಛೇರಿಯ ಹಾಡುಗಾರಿಕೆಯಲ್ಲಿ ಮಧ್ಯೆ ನಿಲ್ಲಿಸಿದುದೇ ಇರಲಿಲ್ಲ. ಅವರು ತಲೆ ಎತ್ತಿ ಸೀತಾಲಕ್ಷ್ಮಿಯ ಕಡೆ ನೋಡಿದರು. ಆಕೆ ಪಿಟೀಲನ್ನು ನುಡಿಸುವಾಗ ನುಡಿಸುವಂತೆಯೇ ಹಿಡಿದಿದ್ದಳು. ಬಲಗೈಯ ಕಮಾನೂ ಅದರ ಸ್ಥಳದಲ್ಲಿಯೇ ತಂತಿಯಮೇಲೆ ಒರಗಿತ್ತು. ಆಕೆ ಉತ್ತಮ ಶಿಲ್ಪಿ ಕಡೆದ ಅಮೃತಶಿಲೆಯ ಅದ್ಭುತ ಪ್ರತಿಮೆಯಂತೆ ಕಂಡಳು. ಆದರೆ, ಆವಳ ಕಣ್ಣುಗಳಿಂದ ನೀರು ಧಾರೆಧಾರೆಯಾಗಿ ಕೆಳಕ್ಕೆ ಬೀಳುತ್ತಿದ್ದಿತು. ಪಿಟೀಲನ್ನು ಬಾರಿಸುವಾಗ ಆಕೆ ಹೇಗೆ ಅಂತರ್ಮುಖವಾಗಿದ್ದಳೋ, ಸುತ್ತಲಿನ ಜನರ ಪರಿವೆಯಿಲ್ಲದೆ ನುಡಿಸು

ತ್ತಿದ್ದಳೋ, ಈಗಲೂ ಆಕೆ ಹಾಗೆಯೇ ಬಾಹ್ಯ ಪರಿಸ್ಥಿತಿಯನ್ನು ಮರೆತು ಅಂತರ್ಮುಖಿಯಾಗಿ ತನ್ನ ಪಾಡಿಗೆ ತಾನು ಅಳುತ್ತಿದ್ದಳು ಇದ್ದಕ್ಕಿದಂತೆ ತನ್ನ ಕೈ ನಿಂತುಹೋದುದು ಭಾಗವತರ ಮತ್ತು ಪಕ್ಕವಾದ್ಯದವರ ಕೈ ಬಾಯಿಗಳು ನಿಂತುಹೋದುದೂ, ಶ್ರೋತೃವೃಂದದಲ್ಲಿ ತೋರಿದ ಅಶಾಂತಿ ಕಲಕಲರವವೂ ಆಕೆಗೆ ಅರಿವಾದಂತೆ ತೋರಲೇ ಇಲ್ಲ. ಅವಳ ಆ ದಂತದ ಕೆನ್ನೆಗಳ ಮೇಲೆ ಉರುಳುತ್ತಿದ್ದ ಕಣ್ಣೀರು ವಜ್ರಧಾರೆಯಂತೆ ಹೊಳೆಯುತ್ತಿತ್ತು. ಪಿಟೀಲು ವಾದನ ನಡೆಯುತ್ತಿರುವಾಗ ಆಕೆಯನ್ನು ನೋಡುವುದಕ್ಕೂ ವ್ಯವಧಾನವಿಲ್ಲದೆ ಗಾನಾನಂದದಲ್ಲಿ ಮುಳುಗಿ ಏಳುತ್ತಿದ್ದ ಜನ, ಕಣ್ಣುಗಳಿಂದಲೇ ಆಕೆಯನ್ನು ಕುಡಿಯುವಂತೆ ಅವಳ ಕಡೆ ನೋಡತೊಡಗಿದರು. ಅದುವರೆಗೆ ಆಕೆಯ ಪಿಟೀಲುವಾದನದಿಂದ ಮತ್ತರಾಗಿದ್ದವರೆ ಈಗ ಆಕೆಯ ರೂಪರಾಶಿಯಲ್ಲಿ ಸಿಕ್ಕಿ ತೊಳಲತೊಡಗಿದರು. ಅವರಿಗೆ ಗೊತ್ತಾಗಿದ್ದರೆ ಹಳ್ಳಿಯವರು ಅವಳನ್ನು ಊರ್ವಶಿ ಎಂದು ಕರೆಯುತ್ತಿದ್ದುದು ಅನ್ವರ್ಥನಾಮವೆಂದು ಅವರು ತಿಳಿಯ ಬಹುದಾಗಿತ್ತು.

ಮುಂದಲ ಗಳಿಗೆಯಲ್ಲಿಯೇ ಸೀತಾಲಕ್ಷ್ಮಿಗೆ ತನ್ನ ಇಂದಿನ ಅರಿವು ಉಂಟಾಯಿತು. ಪಿಟೀಲನ್ನು ಕೆಳಗಿಟ್ಟು ಅವಳು ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ವೇದಿಕೆಯ ಮೇಲಿದ್ದ ಪ್ರಾಣಾಚಾರ್ಯರೂ ಲಕ್ಷ್ಮಿಯೂ ಅವಳ ಬಳಿಗೆ ಬಂದರು. ಸೀತಾಲಕ್ಷ್ಮಿಯನ್ನೂ ಕರೆದುಕೊಂಡು ಹೊರಗೆ ಹೋಗಿ ಕುದುರೆಗಾಡಿ ಏರಿ ಮನೆ ಸೇರಿದರು ಸಭಾ ಭವನಕ್ಕೆ ಸಿಡಿಲು ಬಡಿದರೆ ಆಗುವಂತೆ ಜನ ದಿಕ್ಕಾಪಾಲಾಗಿ ಎದ್ದು ಗದ್ದಲವೆಬ್ಬಿಸಿದರು. ಭಾಗವತರ "ಮಾಮೂಲಿನ" ಪವಮಾನಸುತ ಮಂಗಳ" ವಿಲ್ಲದೆಲೆ ಸಭೆ ಗೊಂದಲದಲ್ಲಿ ಮುಕ್ತಾಯವಾಗುವುದೆಂದು ಶಂಕರ ಅಯ್ಯರ್ ಭಾವಿಸಿದರು. ಪಾಪ! ಅವರು "ಯಾವ ಪ್ರಶಂಸೆಯ ಮಾತುಗಳಿಂದ ಈ ಹಳ್ಳಿಯ ಹುಡುಗಿ ಯನ್ನು ಈ ಸಾರ್ವಜನಿಕರ ಎದುರಿಗೆ ಗೌರವಿಸಿ, ಪಿಟೀಲ್ ರತ್ನ ಮುತ್ತುವಿಗೆ ಕೊಡಬೇಕಾಗಿದ್ದ ಐದುನೂರು ರೂಪಾಯಿಗಳನ್ನು ಇವಳಿಗೆ ಕೊಡೋಣ" ಎಂದು ಯೋಚಿಸುತ್ತಿರುವಲ್ಲಿ ಈ ಅವಾಂತರ ನಡೆದು ಹೋಯಿತು. ಭಾಗವತ ರಿಂದಲೂ ಸೀತಾಲಕ್ಷ್ಮಿಗೆ ಎರಡು ಪ್ರಶಂಸೆಯ ಮಾತುಗಳನ್ನಾಡಿಸಬೇಕೆಂ ಬುದು ಅವರ ಗುರಿಯಾಗಿತ್ತು ಆದರೆ ಸಭೆ ಅಲ್ಲೋಲಕಲ್ಲೋಲವಾಯಿತು.

ಭಾಗವತರು ಮಂಗಳ ಹಾಡದೆ ಬಿಟ್ಟಾರೆ? ಸೀತಾಲಕ್ಷ್ಮಿ ಇಟ್ಟು ಹೋಗಿದ್ದ ಪಿಟೀಲನ್ನು ತಾವೇ ತೆಗೆದುಕೊಂಡು ಬಾರಿಸುತ್ತಾ ಪವಮಾನ ಸುತಡುನ್ನೈನ ಹಾಡತೊಡಗಿದ್ದರು. ಅವರಿಗೆ ಸಂಗೀತ ಸಿಂಹ ಎಂದು ಬಿರುದು ಬಂದಿದ್ದದು-ಸುಮ್ಮನೆ ಅಲ್ಲ. ಅವರ ಧ್ವನಿಯನ್ನು ಕೇಳಿದ ಕೂಡಲೇ ಜನ ಮಂತ್ರಕ್ಕೆ ಕಟ್ಟುಬಿದ್ದ ಹಾವಿನಂತೆ ಮತ್ತೆ ತಮ್ಮ ತಮ್ಮ ಸ್ಥಳಗಳಲ್ಲಿಯೇ ಕುಳಿತರು. ಭಾಗವತರೇ ಪಿಟೀಲನ್ನು ಸಹ ಬಾರಿಸುತ್ತಿದುವರಿಂದ ಶ್ರೋತೃಗಳು ಆಶ್ಚರ್ಯ ದಿಂದ ಮೂಕರಾದರು. ಶಂಕರ ಅಯ್ಯರ್ ನಿರೀಕ್ಷಿಸಿದಂತೆ ಸಭೆ ಗೊಂದಲದಲ್ಲಿ ಮುಗಿಯಲಿಲ್ಲ

ಭಾಗವತರು ತಮ್ಮ ಪದ್ಧತಿಗೆ ವಿರೋಧವಾಗಿ, ಎದ್ದು ನಿಂತು ಎರಡು ಮಾತುಗಳನ್ನು ಆಡಿದರು. ಅವರ ಕೈಯ್ಯಲ್ಲಿ ಪಿಟೀಲು ಇತ್ತು. ಅವರು ಪಿಟೀಲನ್ನು ಕಮಾನಿನಿಂದ ತೋರಿಸುತ್ತಾ “ಸಹೃದಯರೆ ಈ ಪಿಟೀಲು ಬಹಳ ಅದೃಷ್ಟಶಾಲಿ, ಅದರಿಂದಲೇ ಆ ಗಾನ ಸರಸ್ವತಿ ಇದನ್ನು ತನ್ನದನ್ನಾಗಿಮಾಡಿ ಕೊಂಡಿದ್ದಾಳೆ. ಆದರೆ ಎಲ್ಲಿಯೋ ಇದರ ಅದೃಷ್ಟದಲ್ಲಿ ಸ್ವಲ್ಪ “ಖೋಟಾ ಇದ್ದಿರಬೇಕು. ನಿಮ್ಮ ಅದೃಷ್ಟದಲ್ಲಿಯೂ ನನ್ನ ಅದೃಷ್ಟದಲ್ಲಿಯೂ ಗಾಯನ ಸಮಾಜದ ಅಧ್ಯಕ್ಷರು ಅದೃಷ್ಟದಲ್ಲಿಯೂ ಸ್ವಲ್ಪ ಖೋಟ ಇರಬೇಕು ಅದ ರಿಂದಲೇ ನನ್ನ ಮಂಗಳಕ್ಕೆ ಇದು ಒದಗದೆ ನಾನೇ ನುಡಿಸಿಕೊಳ್ಳಬೇಕಾ ಯಿತು. ಸಂಗೀತಗಾರರು ಮತ್ತೊಬ್ಬರನ್ನು ಪ್ರಶಂಸಿಸುವುದು ಕಷ್ಟ ಅವರು ಸ್ವಜಾತಿ ವೈರಿ. ಆದರೆ ನಾನು ಒಂದು ಮಾತನ್ನು ಮಾತ್ರ ಹೇಳುತ್ತೇನೆ. ಈಕೆ [ನನಗೆ ಆ ಹೆಣ್ಣುಮಗಳ ಮಂಗಳನಾಮ ಸಹ ತಿಳಿಯದು] ಸರಸ್ವತಿಯ ಅವತಾರ. ಇದು ಹುಟ್ಟುವಿದ್ಯೆ ಕಟ್ಟುವಿದ್ಯವಲ್ಲ. ಇಂತಹವರು ಇರುವವರೆಗೆ ಭಾರತದ ಗಾನಕಲೆ ಅಮರವಾಗಿಯೇ ಉಳಿಯುವುದು”.

ಸಾಮಾನ್ಯವಾಗಿ ಸಂಗೀತದ ನಂತರ ಭಾಷಣಕೇಳಲು ಯಾರೂ ಉಳಿ ಯುವುದಿಲ್ಲ ಆದರೂ ಜನರಿಗೆ ಸೀತಾಲಕ್ಷ್ಮಿಯ ವಿಚಾರದಲ್ಲಿ ಉಂಟಾಗಿದ್ದ ಕುತೂಹಲದಿಂದ ಎಲ್ಲರೂ ಶಾಂತರಾಗಿ ಆಕೆಯ ಗುಣಗಾನವನ್ನು ಇನ್ನೂ ಕೇಳಲು ಸಿದ್ಧರಾಗಿದ್ದರು. ಸಭೆಯಲ್ಲಿ ಹೀಗೆ ಶಾಂತಿ ಸ್ಥಾಪನೆಯಾದ ಕೂಡಲೇ ಶಂಕರ ಅಯ್ಯರ್ ಬಂದು ವೇದಿಕೆಯೇರಿದರು, ಅವರ ಬಾಯಿನಿಂದ ಪಿಟೀಲ್ ರತ್ನ ಮುತ್ತು ಕೊನೆಯಗಳಿಗೆಯಲ್ಲಿ ಬರಲಿಲ್ಲವೆಂದು ಕೇಳುವವರೆಗೆ ಜನರಿಗೆ

ಮುತ್ತುವಿನ ಜ್ಞಾಪಕವೇ ಮರತುಹೋಗಿತ್ತು. ಕಾರ್ಯಕ್ರಮದ ಪಟ್ಟಿಯಲ್ಲಿ ದ್ದಂತೆ ಸಂಗೀತಗಾರರು—ಅವರಲ್ಲಿಯೂ ಇಂತಹ ಪ್ರಸಿದ್ಧರು—ಬರದಿದ್ದರೆ ಗಲಾಟೆ ಮಾಡದೆ ಎಂದಿಗೂ ಸುಮ್ಮನಿರುವುದಿಲ್ಲವೆಂದು ಹೇಳಿಕೊಳ್ಳುತ್ತಿದ್ದ ಕೆಲವರಿಗೆ. ತಾವು ಹೀಗೆ ಅಜಾಗರೂಕರಾದುದು ತಮಗೇ ಆಶ್ಚರ್ಯವಾಯಿತು. ಶಂಕರ ಅಯ್ಯರ್ ನಡೆದ ಸಂಗತಿಗಳನ್ನೆಲ್ಲ ಹೇಳಿದರು. ಪ್ರೇಕ್ಷಕರು ಆಕೆಯ ಹೆಸರೇನು ಎಂದು ಕೇಳಿದಾಗ ಶಂಕರ ಅಯ್ಯರ್ ಸಹ "ಭಾಗವತರು ಅಂದಂತೆ ಆಕೆಯ ಮಂಗಳನಾಮ ನನಗೂ ತಿಳಿಯದು" ಎಂದರು. ಕಛೇರಿ ಶಾಂತ ವಾಗಿ ಮುಕ್ತಾಯವಾಯಿತು. ಸೀತಾಲಕ್ಷ್ಮಿ ಕೊನೆಯ ಗಳಿಗೆಯಲ್ಲಿ ದುಃಖ ಜರ್ಝರಿತಳಾದುದು ಶ್ರೋತೃಗಳಿಗೆ ಮರೆತೇಹೋಗಿ ಅವಳ ಗಾನ ರೂಪ ಇವು ಮಾತ್ರ ಅವರ ಕಣ್ಣು ಕಿವಿ ಮನಸ್ಸುಗಳನ್ನು ತುಂಬಿದುವು. ಅನಂತರ ಬಹುಕಾಲದವರೆಗೆ ಬೆಂಗಳೂರಿನ ಶ್ರೋತೃಗಳ ಎದುರಿಗೆ ಯಾವ ಪಿಟೀಲು ವಿದ್ವಾಂಸನೂ ಗಾನವನ್ನು ಆಳ್ವಾಡಿಸುವುದೇ ಕಷ್ಟವಾಯಿತು.

ಕಛೇರಿ ಮುಗಿದಕೂಡಲೇ ಶಂಕರ ಅಯ್ಯರು ಸೀತಾಲಕ್ಷ್ಮಿಯ ಪಿಟೀಲನ್ನೂ, ಅವಳಿಗಾಗಿ ತರಿಸಿಟ್ಟಿದ್ದ ಹಾರವನ್ನೂ ಅಂದಿನ ಶುಲ್ಕವಾದ ಐದು ನೂರು ರೂಪಾಯಿಗಳನ್ನೂ ತೆಗೆದುಕೊಂಡು, ತಮ್ಮ ಕಾರಿನಲ್ಲಿ ಪ್ರಾಣಾ ಚಾರ್ಯರ ಧನ್ವಂತರೀ ಆಶ್ರಮಕ್ಕೆ ಹೋದರು ಸೀತಾಲಕ್ಷ್ಮಿ ಅಳುವನ್ನು ನಿಲ್ಲಿಸಿ ಶಾಂತಳಾಗಿ ಕುಳಿತಿದ್ದರು. ಅವಳ ಮುಂದೆ ಲಕ್ಷ್ಮಿಯೂ ಪ್ರಾಣಾಚಾರ್ಯರೂ ಕುಳಿತಿದ್ದರು. ಸೀತಾಲಕ್ಷ್ಮಿಯ ಮುಖ ಮೊದಲಿಗಿಂತಲೂ ಸ್ವಲ್ಪ ಬಾಡಿತ್ತು. ಶಂಕರ ಅಯ್ಯರ್ ಬಂದು ಹಾರವನ್ನೂ, ಕವರಿನಲ್ಲಿದ್ದ ಹಣವನ್ನೂ ಒಪ್ಪಿಸಿ ಭಾಗವತರು ಹೇಳಿದುದನ್ನು ಹೇಳಿ "ನಿನ್ನ ಮಂಗಳನಾಮ ನನಗೂ ಗೊತ್ತಿಲ್ಲ." ಎಂದರು. ಪ್ರಾಣಾಚಾರ್ಯರು ಸೀತಾಲಕ್ಷ್ಮಿ ಎಂದು ಹೇಳಿದರು. ಶಂಕರ ಅಯ್ಯರ್‌ರು ಬಹಳವಾಗಿ ಆಕೆಯನ್ನು ಪ್ರಶಂಸಿಸಿ ಮತ್ತೆ ಬರುವುದಾಗಿ ಹೇಳಿ ಹೊರಟುಹೋದರು. ಸೀತಾಲಕ್ಷ್ಮಿಗಾಗಿ ಅವರು, ಕಛೇರಿ ನಡೆಯುತ್ತಿರು ವಾಗ ಕುರ್ಚಿಯಮೇಲೆ ಕುಳಿತು ಎಷ್ಟೋ ಗಾಳಿಗೋಪುರಗಳನ್ನು ಕಟ್ಟಿದ್ದರು. ಅವನ್ನೆಲ್ಲ ಇನ್ನೊಂದು ದಿನ ಬಂದು ಆಕೆಯ ಮುಂದೆ ಇಡುವುದು ಅವರಗುರಿ. ಪ್ರಾಣಾಚಾರ್ಯರು ಅವರನ್ನು ಕಳುಹಿಸಿ, ಯಾರೋ ರೋಗಿಯನ್ನು ನೋಡ ಹೋದರು. ಲಕ್ಷ್ಮಿ ಮನೆ ಕೆಲಸದತ್ತ ಸರಿದಳು.

ಸೀತಾಲಕ್ಷ್ಮಿಯ ಮನಸ್ಸು ಅಂದಿನ ಸಂಗತಿಗಳನ್ನೆಲ್ಲ ನೆನೆಯಿತು. "ಮಂಗಳನಾಮ! ಆಹಾ! ಎಂತಹ ವಿಕೃತಹಾಸ್ಯ. ನನ್ನ ಚರಿತ್ರೆ ತಿಳಿದಿದ್ದರೆ ಇವರು ಹೀಗೆ ಎಂದೂ ಹೇಳುತ್ತಿರಲಿಲ್ಲ!" ರಂಡೆ ಎನ್ನದೆ ಹಳ್ಳಿಯಲ್ಲಿ ಆಕೆಗೆ ಬೇರೆ ಹೆಸರಿಲ್ಲ. ಶ್ರೀರಂಗಮ್ಮ ಅವಳನ್ನು ಮೂಳಿ ಎಂದು ಕರೆಯುತ್ತಿದ್ದಳು. ಅವಳ ಅಕ್ಕ ಅವಳನ್ನು ಮೂದೇವಿ ಎನ್ನುತ್ತಿದ್ದಳು. ಅಣ್ಣ ರಾಮಬ್ರಹ್ಮೇತಿ ಎನ್ನುತ್ತಿದ್ದ. ಶ್ರೀನಿವಾಸ ಪ್ರಾರಬ್ಧ ಎನ್ನುತ್ತಿದ್ದ. ಗುಂಡಣ್ಣನವರು ಕೋಪದಲ್ಲಿದ್ದಾಗ ಆ ಶನಿಕಾಟ ಎನ್ನುತ್ತಿದ್ದರು. ಶಾಂತರಾಗಿದ್ದಾಗ "ಅದು" ಎನ್ನುತ್ತಿದ್ದರು. ಮಂಗಳನಾಮ! ಸೀತಾಲಕ್ಷ್ಮಿಗೆ ಮತ್ತೆ ಅಳು ಬಂತು.

ಸೀತಾಲಕ್ಷ್ಮಿಗೆ ಅಂದಿನ ಸಂಭವದಿಂದ ತನ್ನ ಮಹಿಮೆ ಬಹಳ ಏರಿತೆಂಬುದರಲ್ಲಿ ಸಂದೇಹವಿರಲಿಲ್ಲ. ಆದರೆ ಈ ಮಂಗಳನಾಮ! ಯಾರಿಗೆ ಬೇಕು? ಈ ಹಾರ ಈ ಹಣ ಈ ಹೊಗಳಿಗೆ ಎಲ್ಲಾ ಬೇಕು. ಆದರೆ ಯಾವಾಗ? ಹೆಂಡತಿ ಎಂದು ಕರೆಯುವವರು ಇರುವಾಗ. ಗಂಡನ ಮನೆಯಲ್ಲಿ ದಾಸಿಯಾಗಿರುವ ಭಾಗ್ಯವೂ ನನಗೆ ಇಲ್ಲವಲ್ಲ. ಮಂಗಳನಾಮ! ಮತ್ತೆ ಅವಳಿಗೆ ಅಂದು ಭಾಗವತರು ಹಾಡಿದ್ದ ಮುಂದಲ ಚರಣ ಜ್ಞಾಪಕ ಬಂದಿತು.

ಸ್ಥಿರವಾದ ಪತಿವ್ರತೆಯ ಪರರು ನಿಂದಿಪಕಾಲ
ಧರೆಯ ಜಾತಿಯರ ಕೊಂಡಾಡುವ ಕಾಲ

ಅವಳಿಗೆ ತನ್ನ ದುಃಖಕ್ಕೆ ಮೇರೆಯೇ ತೋರಲಿಲ್ಲ.

## ೨೪

ಜನತೆ ಕಲಾವಿದರನ್ನು ಮೆಚ್ಚುವುದೂ ಬೇಗ, ಮೆಚ್ಚಿದವರನ್ನೂ ಮತ್ತೆ ಕೆಳಕ್ಕೆ ತಳ್ಳುವುದೂ ಬೇಗ. ಜನತೆಯ ರುಚಿಯೂ ದಿನದಿನಕ್ಕೆ ಬದಲಾಯಿಸುತ್ತಲೇ ಇರುತ್ತದೆ. ಸೀತಾಲಕ್ಷ್ಮಿ ಬೆಂಗಳೂರಿನ ಗಾನ ಪ್ರೇಮಿಗಳ ಮೆಚ್ಚಿನ ಪಿಟೀಲುಗಾರ್ತಿಯಾಗಿ ಬಿಟ್ಟಳು. ಕೊನೆಯ ಗಳಿಗೆಯಲ್ಲಿ ಅವಳು ಅಶಕ್ತಳಾಗಿ ಎದ್ದು ಹೊರಟುಹೋಗಿ ಸಭೆಯೆಲ್ಲ ಗೊಂದಲದಲ್ಲಿ ಮುಕ್ತಾಯವಾದುದು ಯಾರಿಗೂ ಜ್ಞಾಪಕ ಬರಲೇಇಲ್ಲ. ಒಂದು ಸುಖ, ಆನಂದ ಜ್ಞಾಪಕ ಬಂದರೆ ಅದರ ಜತೆಯ ದುಃಖ ಕಷ್ಟಗಳು ಮರೆತು ಸುಖಮಾತ್ರವೇ ಕಣ್ಣು ಮುಂದೆ

ಕಟ್ಟಿದಂತಾಗುವುದು ಕೆಲವರ ಸ್ವಭಾವ. ಅಲ್ಲದೆ ಕಲೆ ಬ್ರಹ್ಮಜ್ಞಾನದಂತೆ. ಅದರಿಂದ ದೊರೆಯುವ ಆನಂದ ನಿತ್ಯ, ಶಾಶ್ವತ, ಅಮೃತ. ಅದರ ಆಸ್ವಾದನೆ ಮಾಡಿದವರು ಅದನ್ನು ಮತ್ತೆ ಮರೆಯುವುದಿಲ್ಲ.

ಶಂಕರ ಅಯ್ಯರ್, ಧನ್ವಂತರೀ ಆಶ್ರಮಕ್ಕೆ ಬಂದು ಸೀತಾಲಕ್ಷ್ಮಿ ಇನ್ನೂ ಕೆಲವು ಕಛೇರಿಗಳಿಗೆ ಬರಬೇಕೆಂದು ಆಹ್ವಾನಿಸಿದರು. ಸೀತಾಲಕ್ಷ್ಮಿಗೆ ತನ್ನ ಪಿಟೀಲಿನಲ್ಲಿ ಆನಂದವೇ ಇರಲಿಲ್ಲ. ಅವಳ ಮನಸ್ಸು ಅಂತರ್ಮುಖವಾಗ ತೊಡಗಿತ್ತು. ಅವಳು ಧನ್ವಂತರೀ ಆಶ್ರಮದ ರೋಗಿಗಳನ್ನು ಉಪಚರಿಸುವುದರಲ್ಲಿ ತನ್ನ ಹೆಚ್ಚಿನ ಕಾಲವನ್ನು ಕಳೆಯತೊಡಗಿದಳು. ನೋಯಾಳಿಗಳಿಗೆ ಉಪಚಾರಮಾಡುವುದರಲ್ಲಿ ಅವಳಿಗೆ ಒಂದು ಅನಿರ್ವಚನೀಯ ಆನಂದ ವುಂಟಾಗಿ ಅವಳ ದುಃಖ ಸ್ವಲ್ಪ ಕಡಿಮೆಯಾಗುತ್ತಿತ್ತು. ರೋಗಿಗಳಿಗೆ ಉಪಚಾರಮಾಡುವುದರಲ್ಲಿ ಆಕೆಗಿದ್ದ ಶ್ರದ್ಧೆಯನ್ನು ನೋಡಿ ಸ್ವತಃ ಪ್ರಾಣಾಚಾರ್ಯರಿಗೆ ಆಶ್ಚರ್ಯವಾಯಿತು. ಸೀತಾಲಕ್ಷ್ಮಿ ಯಾವ ಕೆಲಸವನ್ನೂ ಚೆನ್ನಾಗಿಯೇ ಮಾಡುತ್ತಿದ್ದಳು. ಆದರೆ, ರೋಗಿಗಳ ಉಪಚಾರದಲ್ಲಿಯಂತೂ ಆಕೆ ತನ್ನ ಪೂರ್ಣಮನಸ್ಸನ್ನೂ ವಿನಿಯೋಗಿಸುತ್ತಿರುವುದು ಪ್ರಾಣಾಚಾರ್ಯರಿಗೆ ತೋರಿತು. ಸೀತಾಲಕ್ಷ್ಮಿಯ ಸೇವೆ ಶ್ರದ್ಧೆಗಳಿಂದ ನೋಯಾಳಿಗಳನ್ನು ಉಪಚರಿಸುವುದೂ ಸಹ ಒಂದು ಆಕರ್ಷಣೀಯವಾದ ಕಲೆ ಎಂಬ ಭಾವನೆ ಇತರ ಸದಸ್ಯರಿಗೆ ಬರತೊಡಗಿತು. ಧನ್ವಂತರಿ ಆಶ್ರಮದಲ್ಲಿ ಶಿಕ್ಷಣಪಡೆಯುತ್ತಿದ್ದ "ನರ್ಸ್" ಅಮ್ಮಗಳು, ಸೂಲಗಿತ್ತಿಯರು, ಆಯುರ್ವೇದ ವೈದ್ಯರೂ ಎಲ್ಲರಿಗೂ ರೋಗಿಗಳನ್ನು ನೋಡಿಕೊಳ್ಳುವುದರಲ್ಲಿ ಒಂದು ಹೊಸ ಉತ್ಸಾಹವನ್ನು ಸೀತಾಲಕ್ಷ್ಮಿ ಮೂಡಿಸಿದಳು. ಆಶ್ರಮಕ್ಕೆ ಬರುತ್ತಿದ್ದ ರೋಗಿಗಳ ಸಂಖೆ ದಿನದಿನಕ್ಕೆ ಹೆಚ್ಚಾಗತೊಡಗಿತು. ಪ್ರಾಣಾಚಾರ್ಯರಿಗೆ ತಮ್ಮ ಆಶ್ರಮ ಮೊದಲು ಯಾವಾಗಲೂ ಇಲ್ಲದಷ್ಟು ಜನೋಪಕಾರಿಯಾಗಿ ಇರುವುದೆಂದು ಮುಂದಟ್ಟಾಯಿತು ಸೀತಾಲಕ್ಷ್ಮಿಗಂತೂ ನೋಯಾಳಿಗಳನ್ನು ಉಪಚರಿಸುವುದಕ್ಕೆ ಸಮನಾದ ಆನಂದವೇ ಯಾವುದೂ ಇಲ್ಲವೆಂಬ ಭಾವನೆ ಬಂದಿತು.

ಧನ್ವಂತರಿ ಆಶ್ರಮದಲ್ಲಿ ಆಯುರ್ವೇದ ವೈದ್ಯದಲ್ಲಿಯೂ, ರೋಗಿಗಳಿಗೆ ಉಪಚಾರದಲ್ಲಿಯೂ ತಯಾರಾದವರನ್ನೂ, ಆಧುನಿಕ ರೀತಿಯ ಶಿಕ್ಷಣಕ್ಕಾಗಿ

ಸರ್ಕಾರಿ ವೈದ್ಯಶಾಲೆಗೆ ಎರಡು ಮೂರು ತಿಂಗಳು ಪರಿಶ್ರಮಹೊಂದಲು ಕಳು ಹಿಸುತ್ತಿದ್ದರು. ಆ ಕಾರ್ಯದ ಸರದಿಯು ವಾರವಾರವೂ ಒಬ್ಬೊಬ್ಬರಿಗೆ ಬರುತ್ತಿದ್ದಿತು ಒಟ್ಟನಲ್ಲಿ ಮೂರು ತಿಂಗಳು ಪರಿಶ್ರಮುವಾದನಂತರವೇ, ಹಳ್ಳಿಗಳಲ್ಲಿ ಹೋಗಿ ಆಯುರ್ವೇದ ವೈದ್ಯಚಿಕಿತ್ಸೆ ಮತ್ತು ನರ್ಸಿಂಗ್ ಮಾಡಲು ಸರ್ಕಾರದ ಪರವಾನಗಿ ದೊರೆಯುತ್ತಿದ್ದಿತು. ಧನ್ವಂತರೀ ಆಯುರ್ವೇದಾಶ್ರಮದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರವನ್ನು ಕೊಡುತ್ತಿದ್ದ ಸಂಸ್ಥೆಯ ಆ ನಿಯಮವನ್ನು ಸರ್ಕಾರದವರೂ ಒಪ್ಪಿದ್ದರು. ಮುಖ್ಯವಾಗಿ ಸರ್ಕಾರಿ ವೈದ್ಯಶಾಲೆಗಳಲ್ಲಿ ರಾತ್ರಿಯ ಹೊತ್ತು ಇದ್ದು ರೋಗಿಗಳನ್ನು ಉಪಚರಿಸುವ ಕೆಲಸ ಆಯುರ್ವೇದ ಪಥವೀಧರರ ಪಾಲಿಗೆ ಬೀಳುತ್ತಿದ್ದಿತು. ಆದರಿಂದ ರೋಗಿಗಳಿಗೂ ಬಹಳ ಉಪಕಾರವಿತ್ತು. ಯಾಕೆಂದರೆ ಸರ್ಕಾರದ ನಿಯಮ ಇದ್ದರೂ, ವೈದ್ಯಶಾಲೆಗಳಲ್ಲಿ ಮಾತ್ರ ಒಬ್ಬ ವೈದ್ಯರೂ ರಾತ್ರಿಯ ಹೊತ್ತು ಇರುತ್ತಿರಲಿಲ್ಲ. ಜವಾನರೂ "ನರ್ಸ್‌ಗಳೂ ಎಲ್ಲಿಯೋ ಹೋಗಿ ಮಲಗಿಬಿಡುತ್ತಿದ್ದರು. ಒಂದೊಂದು ಸಮಯದಲ್ಲಿಯಂತೂ ನಲ್ಲಿಯ ನೀರು ಸಹ ನಿಂತುಹೋಗಿ ರೋಗಿಗಳು ಬಾಯಾರಿಕೆಯಿಂದ ಬೊಬ್ಬೆ ಹೊಡೆಯುತ್ತಿದ್ದರು. ಅವರು ಹೀಗೆ ಒಂದು ಎರಡು ಗಂಟೆ ಕಿರಚಿದನಂತರ ಎಲ್ಲಿಯೋ ದೂರದ ಕೊಠಡಿಯಲ್ಲಿ ಮಲಗಿರುತ್ತಿದ್ದ ಆಳುಗಳು ಬರುತ್ತಿದ್ದರು. ಸಾಮಾನ್ಯ ರೋಗಿಗಳ ಅವಸ್ಥೆ ಹಾಗಾಗಿತ್ತು. ಆ ವಿಷಯದಲ್ಲಿ ಮೇಲಧಿಕಾರಿಗಳಿಗೆ ಕೊಟ್ಟ ಯಾವ ದೂರಿನಿಂದಲೂ ಏನೂ ಪ್ರಯೋಜನವಾಗಿರಲಿಲ್ಲ. ಧನಿಕರಾದವರು ಮಾತ್ರ, ಸ್ಪೆಷಲ್ ವಾರ್ಡ್‌ಗಳಲ್ಲಿದ್ದುಕೊಂಡೇ ತಮಗೆ ಬೇಕಾದ ಸೌಕರ್ಯಗಳನ್ನು ತಾವೇ ಒದಗಿಸಿಕೊಳ್ಳುತ್ತಿದ್ದರು.

ಆ ವಾರ ವೈದ್ಯಶಾಲೆಯಲ್ಲಿ ರಾತ್ರಿ ಕಾವಲಿರುವ ಸರದಿ ಸೀತಾಲಕ್ಷ್ಮಿಯ ಪಾಲಿಗೆ ಬಂದಿತು. ಆಶ್ರಮದ ಇತರ ವೈದ್ಯಕೀಯ ವಿದ್ಯಾರ್ಥಿನಿಯರು "ಇವಳು ಯಾಕೆ ಈ ವೈದ್ಯದಲ್ಲಿ ಒದ್ದಾಡಿ ಕಷ್ಟಪಡುತ್ತಿದ್ದಾಳೆ. ತಿಂಗಳಿಗೆ ಒಂದು ಕಛೇರಿಮಾಡಿದರೆ ಸುಖವಾಗಿ ಸಾವಿರಾರು ರೂಪಾಯಿಗಳು ಸಿಕುತ್ತೆ. ನಾಲ್ಕು ಹುಡುಗಿಯರಿಗೆ ಸಂಗೀತಪಾಠ ಹೇಳಿದರೆ ಸಾಕು. ಅಥವ ಒಂದು ಚಲನ ಚಿತ್ರದಲ್ಲಿ ನಟಿಸಿದರೆ ಜೀವಮಾನ ಪೂರ್ತ ಸುಖಸಮೃದ್ಧಿಯಲ್ಲಿರಬಹುದು. ಈ ರೋಗಿಗಳ ಉಪಚಾರ, ಈ ಕಷ್ಟ ಕಾರ್ಪಣ್ಯ ಶ್ರಮ ಇವೆಲ್ಲ

ಯಾಕೆ? ಎಂದು ಹೇಳುತ್ತಿದ್ದರು. ಒಂದು ಸಲ ಪ್ರಾಣಾಚಾರ್ಯರೂ ಸಹ "ಸಂಗೀತದ ಉಪಾಧ್ಯಾಯಿನಿಯಾಗಿ ಬಿಡು" ಎಂದು ಹೇಳಿದರು. ಸೀತಾ ಲಕ್ಷ್ಮಿಯು "ಮನಸ್ಸು ಶಾಂತವಾಗಿದ್ದರೆ ಗೆಲುವಾಗಿದ್ದರೆ ಹಗುರವಾಗಿದ್ದರೆ ಮಾತ್ರ ಸಂಗೀತ ಹೇಳುವುದಕ್ಕೂ ಕೇಳುವುದಕ್ಕೂ ಸುಖ, ಆದರೆ ಈಗ ನನ್ನ ಮನಸ್ಸಿಗೆ ಶಾಂತಿ ಇಲ್ಲ. ಹಗುರವಾಗಿಲ್ಲ. ಆದುದರಿಂದ ರೋಗಿಗಳ ಉಪ ಚಾರದಿಂದಲೇ ನನಗೆ ನೆಮ್ಮದಿ" ಎಂದು ತನ್ನ ಸರದಿಯ ರಾತ್ರಿಯ ಕಾವಲಿಗೆ ವೈದ್ಯಶಾಲೆಗೆ ಹೋದಳು.

ಅಂದು ಸೀತಾಲಕ್ಷ್ಮಿಗೆ ಸ್ತ್ರೀ ರೋಗಿಗಳ "ವಾರ್ಡ್" ನ ಕಾವಲು ಬಿತ್ತು. ಆ ವಾರ್ಡ್‌ನಲ್ಲಿ ಇಪ್ಪತ್ತು ರೋಗಿಗಳಿದ್ದರು. ಅವರೆಲ್ಲರ ಕಾಹಿಲೆ ಗಳಿಗೂ ನಿಶ್ಶಕ್ತಿಯೇ ಹೆಚ್ಚು ಕಾರಣವಾಗಿತ್ತು. ಆ ರೋಗಿಗಳೆಲ್ಲ ಅತ್ಯಂತ ಬಡವರು ಅವರ ಬಾಡಿದ ರಕ್ತಹೀನವಾದ ಮುಖವನ್ನು ನೋಡಿದಕೂಡಲೇ ಇವರ ರೋಗಕ್ಕೆ ಕಾರಣ ಇವರಿಗೆ ಪುಷ್ಟಿಯಾದ ಆಹಾರವಿಲ್ಲದುದೇ ಎಂದು ಯಾರಿಗಾದರೂ ಗೊತ್ತಾಗುತ್ತಿದ್ದಿತು. ಅವರ ಸ್ಥಿತಿ ನೋಡಿ ಸೀತಾಲಕ್ಷ್ಮಿಗೆ ಬಹಳ ಕನಿಕರ ಉಂಟಾಯಿತು. ಆ ರೋಗಿಗಳ ಪೈಕಿ ಸೀತಾಲಕ್ಷ್ಮಿಯ ದೃಷ್ಟಿ ಬಹಳ ನಿಶ್ಶಕ್ತಳಾಗಿದ್ದ ಒಬ್ಬಾಕೆಯ ಕಡೆ ಹೋಯಿತು. ಅವಳು ಗಿರಣಿಯಲ್ಲಿ ಕೆಲಸಮಾಡುವ ಒಬ್ಬ ಕೂಲಿಗಾರನ ಹೆಂಡತಿ. ವಯಸ್ಸು ಸುಮಾರು ಇಪ್ಪ ತ್ತೈದು ಇರಬಹುದು. ಆದರೆ ನಿಶ್ಶಕ್ತಿಯಿಂದ ಅವಳು ಪೂರ್ಣ ಕೃಶಳಾಗಿ ಮುದುಕಿಯಂತೆಯೇ ತೋರುತ್ತಿದ್ದಳು ಆಕೆಯ ಮುಖದಲ್ಲಿ ಸೌಂದರ್ಯದ ಲಕ್ಷಣಗಳು ಇನ್ನೂ ಅಲ್ಪ ಸ್ವಲ್ಪ ಇದ್ದೇ ಇದ್ದವು. ಒಳ್ಳೆಯ ಆಹಾರ ಚಟುವಟಿಕೆ ಗಳಿಂದ ಆರೋಗ ದೃಢಕಾಯುಗಳಾದರೆ, ಆಕೆ ಮತ್ತೆ ಸ್ಫುರದ್ರೂಪಿಯಾಗುವುದ ರಲ್ಲಿಯೂ ಸೀತಾಲಕ್ಷ್ಮಿಗೆ ಸಂದೇಹ ತೋರಲಿಲ್ಲ. ಆದರೆ ಸೀತಾಲಕ್ಷ್ಮಿ ಅವಳನ್ನು ನೋಡಿದಾಗಮಾತ್ರ ಅವಳಿಗೆ ಮಾತನಾಡಲು ಸಹ ತ್ರಾಣವಿರಲಿಲ್ಲ. ಆಕೆಯ ಎರಡು ಮಕ್ಕಳು—ನಾಲ್ಕು ವರುಷಗಳ ಒಂದು ಹುಡುಗಿ ಎರಡು ವರುಷದ ಒಬ್ಬ ಹುಡುಗ—ಅವಳ ಸುತ್ತ ಓಡಾಡುತ್ತಿದ್ದವು. ಬಾಗಿಲಿನಲ್ಲಿ ಹಾಕಿದ್ದ ಬೆಂಚಿನಮೇಲೆ ಆಕೆಯ ಗಂಡ ಕುಳಿತಿದ್ದ. ಅನೇಕ ದಿನಗಳಿಂದ ಸರಿಯಾಗಿ ನಿದ್ರೆಯಿಲ್ಲದುದರಿಂದ ಅವನ ಮುಖವೂ ಬಾಡಿ ಕಂಗೆಟ್ಟಿತ್ತು. ಆತ ಸೀತಾಲಕ್ಷ್ಮಿಯನ್ನು ಹಿಂದೆ ನೋಡಿರಲಿಲ್ಲ. ಆದರೆ ಆಕೆಯ ಮುಖದಲ್ಲಿ

ತೋರಿದ ಕರುಣೆ ಗಾಂಭೀರ್ಯ ಔದಾರ್ಯ ಮಾತಿನ ಮಾಧುರ್ಯ ಇವುಗಳಿಂದ "ಇವಳು ನಿತ್ಯ ಬರುತ್ತಿದ್ದ "ನರ್ಸ್" ಗಳಂತಲ್ಲ. ಇವಳ ಮಟ್ಟವೇ ಬೇರೆ" ಎಂಬುದು ಆವನಿಗೆ ಗೊತ್ತಾಯಿತು. ಸೀತಾಲಕ್ಷ್ಮಿ ಆತನೊಂದಿಗೆ ರೋಗಿಯ ವಿಚಾರವನ್ನು ಕುರಿತು ಮಾತನಾಡತೊಡಗಿದಳು. ರೋಗಿಗೆ ಒಂದೇ ಗಳಿಗೆ ಸ್ವಲ್ಪ ನಿದ್ರೆಯಜೊಂಪು ಬಂದಿತ್ತು. ಸೀತಾಲಕ್ಷ್ಮಿ ಆ ಘಳಿಗೆಯಲ್ಲಿಯೇ ಒಳಕ್ಕೆ ಪ್ರವೇಶಿಸಿದ್ದಳು. ಸೀತಾಲಕ್ಷ್ಮಿ ಆಕೆಯ ಗಂಡನೊಂದಿಗೆ ಮಾತ ನಾಡುತ್ತಿರುವಾಗಲೇ ರೋಗಿಗೆ ಎಚ್ಚರವಾಯಿತು. ಅವಳು ನರಳುವ ಸದ್ದು ಸೀತಾಲಕ್ಷ್ಮಿಗೂ ರೋಗಿಯ ಗಂಡನಿಗೂ ಕೇಳಿಸಿತು. ಆತ "ನೋಡಿ. ಹೀಗೆಯೇ ಬೆಳಗಿನಿಂದ ರಾತ್ರಿವರೆಗೆ ರಾತ್ರಿಯಿಂದ ಬೆಳಗಿನವರೆಗೆ, ನರುಳು ತ್ತಾಳೆ. ಹಗಲನ್ನು ಹೇಗೋ ಕಳೆಯಬಹುದು. ರಾತ್ರಿ ಕಳೆಯುವುದು ಕಷ್ಟ. ಈಗ ನಾಲ್ಕು ದಿನಗಳಿಂದ ಒಬ್ಬ ಡಾಕ್ಟರು ರಾತ್ರಿ ಬಂದು ಒಂದು ಇಂಜಕ್ಷನ್ ಕೊಟ್ಟುಹೋಗುತ್ತಾರೆ. ಒಂದು ನಿದ್ರೆ ಚೆನ್ನಾಗಿ ಬರುತ್ತೆ. ಕೆಲವು ದಿನ ರಾತ್ರಿ ಎರಡು ಗಂಟೆಗೆ ಎಚ್ಚರವಾಗುತ್ತೆ. ಇನ್ನು ಕೆಲವು ದಿನ ಬೆಳಗಿನ ಜಾವ ನಾಲ್ಕು ಗಂಟೆಯವರೆಗೆ ಮಲಗಿರುತ್ತಾಳೆ. ನಿದ್ರೆ ಮಾತ್ರ ಬರದೆ ಇದ್ದರೆ, ಇವಳು ಈ ವೇಳೆಗೆ ನತ್ತು ಎಷ್ಟೋ ದಿನಗಳಾಗಬೇಕಿತ್ತು"

"ನಿತ್ಯಾ ಡಾಕ್ಟರು ಎಷ್ಟು ಹೊತ್ತಿಗೆ ಬಂದು ಇಂಜಕ್ಷನ್ ಕೊಡುತ್ತಾರೆ?"

"ಹಿಂದೆ ಬರುತ್ತಿದ್ದ ಡಾಕ್ಟರು ಮೊದಲು ದಿನ ಹತ್ತುವರೆ ಗಂಟೆಗೆ ಬಂದರು. ಆದರೆ ಮೂರನೆ ದಿನದಿಂದ ಒಂಬತ್ತು ಗಂಟೆಗೇ ಬಂದುಬಿಡು ತ್ತಿದ್ದರು. ಒಂಬತ್ತುವರೆ ಗಂಟೆವೇಳೆಗೆ ಅವಳಿಗೆ ನಿದ್ರೆಯೇ ಬಂದುಬಿಡು ತ್ತಿತ್ತು. ಇವತ್ತು ಈ ವಾರ್ಡ್‌ಗೆ ಬಂದಿದ್ದವರು ಹೊಸ ಡಾಕ್ಟರ್. ಎಷ್ಟು ಹೊತ್ತಿಗೆ ಬರುತ್ತಾರೋ ಗೊತ್ತಿಲ್ಲ. ಅವರು ಬಂದಾಗ ನಾನು ಇರಲಿಲ್ಲ. ನಾನು ಮಿಲ್ ಕೆಲಸ ಬಿಟ್ಟುಬರುವುದು ಐದುವರೆ ಗಂಟೆ ಆಗುತ್ತೆ. ಆದರೆ, ಅವಳು ಬೇಗ ಬಂದು ಇಂಜಕ್ಷನ್ ಕೊಡಬೇಕೆಂದು ಕೇಳಿದಳಂತೆ. ಆ ಇಂಜಕ್ಷನ್ ಕೊಡಬೇಕೆಂಬುದು ಅವರಿಗೆ ಗೊತ್ತಿದೆಯೋ ಇಲ್ಲವೊ?"

ಗೊತ್ತಿಲ್ಲವೆ ಏನು ಎಂದುಕೊಂಡು ಸೀತಾಲಕ್ಷ್ಮಿ ರೋಗಿಯ ಬೆನ್ನ ಹಿಂದೆ ಗೋಡೆಗೆ ತಗಲುಹಾಕಿದ್ದ ರೋಗನಿಧಾನ ನಕ್ಷೆಯನ್ನು ನೋಡಿದಳು. "ಮಾಡಬೇಕಾದ ಕೆಲಸ ಎಲ್ಲ ವೈದ್ಯರಿಗೂ ತಿಳಿದೇ ಇರುತ್ತದೆ. ಅಲ್ಲದೆ

ಇದರಲ್ಲಿ ಬರೆದಿದ್ದಾರೆ. ನಿತ್ಯ ರಾತ್ರಿ ಒಂಬತ್ತು ಗಂಟೆಗೆ ಇಂಜಕ್ಷನ್" ಎಂದು.

"ಹೌದು. ಆದರೆ ಈ ಡಾಕ್ಟರದು ಬಹಳ ಜೋರು. ಅವರ ಮುಖದ ಮುಂದೆ ಹಸಿ ಹುಲ್ಲು ಹಾಕಿದರೂ ಉರಿಯುತ್ತೆ. ಅವರನ್ನು ಕಂಡರೆ ರೋಗಿಗಳೆಲ್ಲ ಹೆದರಿ ನಡುಗುತ್ತಾರೆ. ಕೆನ್ನೆಯ ಮೇಲೆ ಹೊಡೆದಂತೆ ಅವರು ಪಠಾರ್ ಪಠಾರ್ ಎಂದು ಮಾತನಾಡಿಬಿಡುತ್ತಾರೆ ಎಂದು ನನ್ನ ಹೆಂಡತಿ ಹೇಳಿದಳು. ಬೆಳಿಗ್ಗೆ ಅವರು ಬಂದಾಗ ಎಲ್ಲರನ್ನೂ ಅಳಿಸಿಬಿಟ್ಟು ಹೋದರಂತೆ. ಒಬ್ಬಳಿಗೆ ವಾಂತಿಯಾದುದಕ್ಕೆ 'ನೀನು ಹೊರಗಿನಿಂದ ತಿಂಡಿ ತರಿಸಿ ತಿನ್ನುತ್ತಿದ್ದಿ. ಸಾಯಿ' ಎಂದರಂತೆ. ಮತ್ತೊಬ್ಬಳು 'ಈ ಹಾಲು ನೀರು ಹಸಿವೇ ಅಡಗುವುದಿಲ್ಲ' ಎಂದುದಕ್ಕೆ "ಮನೆಯಿಂದ ಹಣ್ಣು, ಹಾಲು ತರಿಸಿ ತೆಗೆದುಕೊಳ್ಳಿ. ಸರ್ಕಾರದ ಆಹಾರ ಹೊರತು ಬೇರೆ ತಿನ್ನುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೀರಾ? ಎಂದರಂತೆ, ಒಬ್ಬಳ ಮಗು ಅತ್ತುದಕ್ಕೆ 'ಈ ರಾಜಕುಮಾರ ಇಲ್ಲದೆ ನಿನಗೆ ಉಳಿದು ಹೋಗಿತ್ತು. ಕಿವಿ ಚಿಟರಾಗುತ್ತೆ. ಬಾಯಿಗೆ ಬಟ್ಟೆನಾದರೂ ತುರುಕಿ ನಿಲ್ಲಿಸು' ಎಂದರಂತೆ. ನನ್ನ ಹೆಂಡತಿಗೂ ಅವರನ್ನು ಕಂಡರೆ ಬಹಳ ಭಯ. ರಾತ್ರೆ 'ಒಂದು ಇಂಜಕ್ಷನ್ ಬೇಗ ಕೊಡಿ. ನೋವು ತಡೆಲಾರೆ. ನಿದ್ರೆ ಬಂದರೆ ಬದುಕ್ಕೊಂತೇನೆ' ಎಂದು ಅವಳು ಹೇಳಿದುದಕ್ಕೆ 'ಅವರು ನನ್ನ ಕರ್ತವ್ಯ ನನಗೆ ನೀವೆಲ್ಲ ಹೇಳಿಕೊಡಬೇಕು!' ಎಂದು ಗದರಿಸಿದರಂತೆ.''

ಸೀತಾಲಕ್ಷ್ಮಿ ಗಡಿಯಾರದ ಕಡೆ ನೋಡಿದಳು. ಹತ್ತು ಗಂಟೆ ಆಗಿ ಹತ್ತು ನಿಮಿಷವಾಗಿತ್ತು. ಉಳಿದ ರೋಗಿಗಳೆಲ್ಲ ನಿಧಾನವಾಗಿ ನಿದ್ರೆ ಬರಿಸಿಕೊಳ್ಳುವುದರಲ್ಲಿ ತೊಡಗಿ ಮುಸುಕು ಹಾಕಿಕೊಳ್ಳುತ್ತಿದ್ದರು. ಕಾಲು ಗಂಟೆಯೊಳಗಾಗಿ ರೋಗಿಗಳೆಲ್ಲ ಮಲಗಿ ನಿದ್ರೆ ಹೋದರು. ಗೌರಿ (ನರಳುತ್ತಿದ್ದ ಗಿರಣಿ ಕೆಲಸಗಾರನ ಹೆಂಡತಿ) ಮತ್ತೊಂದು ಸಲ ಗಟ್ಟಿಯಾಗಿ ನರಳಿದಳು. ಆಕೆಯ ಮಕ್ಕಳು ಆಟವಾಡಿ ಸೋತು ನೆಲದಮೇಲ ಬಿದ್ದುಕೊಂಡವು. ಆಕೆಯ ಗಂಡನಿಗೂ ಮೂರು ದಿನಗಳಿಂದ ನಿದ್ರೆ ಇಲ್ಲದೆ ಕಣ್ಣು ಕೆಂಪಾಗಿತ್ತು. ಮಾತನಾಡುತ್ತಾ ಆಡುತ್ತಾ ಅವನು ಅರ್ಧದಲ್ಲಿಯೇ ಮಾತುಗಳನ್ನು ನಿಲ್ಲಿಸಿ ತೂಕಡಿಸುತ್ತಿದ್ದನು. ಆಕಳಿಕೆ ಬಂದಾಗಲೆಲ್ಲ "ನಿದ್ರೆ ಮಾಡಿದರೆ ಹೆಂಡತಿಯನ್ನು ಕಾಯುವವರಾರು?" ಎಂಬ ಭಾವನೆಯಿಂದ ಅವಳ ಕಡೆ ನೋಡು

ತ್ತಿದ್ದನು. ಅವನ ಸುಸ್ತನ್ನೂ ನಿದ್ರೆಗೆಟ್ಟ ಮೊಖವನ್ನೂ ನೋಡಿ ಸೀತಾಲಕ್ಷ್ಮಿ "ನೀವು ಮಲಗಿಕೊಳ್ಳಿ, ನಾನು ಡಾಕ್ಟರು ಬರುವವರೆಗೆ ಎಚ್ಚರವಾಗಿದ್ದು ಗೌರಿಯನ್ನು ನೋಡಿಕೊಳ್ಳುತ್ತೇನೆ" ಎಂದಳು. ಆತ "ನನಗೆ ನೀವು ಎಂತ ಹೇಳಬೇಕಾದುದಿಲ್ಲ, ನೀನು ಎಂದರೆ ಸಾಕು. ಹಾಗಾದರೆ ಡಾಕ್ಟರು ಬರುವವರೆಗೆ ನೀವೇ ಎಚ್ಚರವಾಗಿರುತ್ತೀರಾ?" ಎಂದು ಕೇಳಿದ. ಸೀತಾಲಕ್ಷ್ಮಿ ಹೂ ಎಂದು ತಲೆಯಲ್ಲಾಡಿಸುವುದರೊಳಗಾಗಿ ಅವನು ಬೆಂಚಿನಮೇಲೆಯೇ ಮಲಗಿ ಕಣ್ಣುಮುಚ್ಚಿ ಗೊರಕೆ ಹೊಡೆಯಲು ಪ್ರಾರಂಭಿಸಿದ್ದನು. ಅವನಿಗೆ ಅಷ್ಟು ಆಯಾಸವಾಗಿತ್ತು. ಸೀತಾಲಕ್ಷ್ಮಿ ಅವನನ್ನು ಒಂದು ಸಲ ಕನಿಕರದಿಂದ ನೋಡಿ, ಗೌರಿಯ ಹಾಸಿಗೆಯ ಬಳಿ ಬಂದು ಕುರ್ಚಿ ಎಳೆದುಕೊಂಡು ಕುಳಿತುಕೊಂಡಳು. ಗೌರಿ ಮಧ್ಯೆ ಮಧ್ಯೆ ನರಳುತ್ತಾ ಸೀತಾಲಕ್ಷ್ಮಿ ಬೇಡವೆಂದು ಸನ್ನೆಮಾಡಿದರೂ ಕೇಳದೆ ತನ್ನ ವಿಷಯವನ್ನು ಹೇಳತೊಡಗಿದಳು. ಮುಂದಿನ ವಿಷಯಗಳನ್ನು ಸೀತಾಲಕ್ಷ್ಮಿ ಅರಿತಳು— ಗೌರಿಯೂ ಗಿರಣಿಗೆ ಕೂಲಿಗೆ ಹೋಗುತ್ತಾಳೆ. ಇಬ್ಬರೂ ಸಂಪಾದಿಸದಿದ್ದರೆ ಸಂಸಾರ ನಡೆಯುವುದಿಲ್ಲ. ಆದರೆ ಗೌರಿಗೆ ಕುಡಿತದ ಚಪಲ ಹೆಚ್ಚು. ಆ ಅಭ್ಯಾಸ ಪ್ರಾರಂಭವಾದುದೂ ಗಂಡನಿಂದಲೇ. ಅವನಿಗೆ ಪ್ರಾರಂಭವಾದುದು ಅವನ ಗೆಳೆಯರಿಂದ. ಹಿಂದೆ ಗಂಡ ಕುಡಿಯುತ್ತಿರಲಿಲ್ಲ. ಆಗ ಇವರು ಇದ್ದುದು ಹಾಸನದ ಜಿಲ್ಲೆಯ ಹಳ್ಳಿಯಲ್ಲಿ. ಸ್ವಲ್ಪ ಜಮೀನು ಇತ್ತು ಅವರಿಗೆ. ಕಷ್ಟಪಟ್ಟು ಕೆಲಸಮಾಡಿ ಅರ್ಧಹೊಟ್ಟೆಗೆ ತಿಂದುಕೊಂಡು ಗಂಭೀರವಾಗಿದ್ದರು. ಸಾಲಕ್ಕಾಗಿ ಜಮೀನು ಸಾಹುಕಾರರ ವಶವಾಯಿತು. ಆದರೂ ಹಳ್ಳಿಯನ್ನು ಬಿಡಬೇಕಾದ ಆವಶ್ಯಕತೆ ಇರಲಿಲ್ಲ. ಹೇಗೋ ಕೂಲಿಮಾಡಿಯಾದರೂ ಜೀವಿಸಬಹುದಾಗಿತ್ತು. ಆದರೆ ಪಟ್ಟಣಗಳಿಗೆ ಹೋಗಿ ಕೂಲಿ ಕೆಲಸಗಳಿಗೆ ಸೇರಿಕೊಂಡ ಗೆಳೆಯರು ಆಗಾಗ್ಗೆ ಹಳ್ಳಿಗೆ ಬರುತ್ತಿದ್ದವರು, ಬಹಳ ಆಕರ್ಷಣೆ ತೋರಿಸಿದರು. ಅವರ ಬಟ್ಟೆ, ಕ್ರಾಪು, ಸಿಗರೇಟು ಜೇಬಿನಲ್ಲಿ ಓಡಾಡಿ ಸುತ್ತಿನ್ನ ಚಿಲ್ಲರೆ ದುಡ್ಡು ಅವರ ಹೆಂಡತಿಯರ ಬಟ್ಟೆ—ನಾಗರಿಕ ಉಡುಪನ್ನು ಧರಿಸಿದ ಅವರ ಹೆಂಡತಿಯರು ಹಳ್ಳಿಯ ಗೊಬ್ಬರ ಹೊರುವ ಬೇಸಾಯಮಾಡುವ ಹೆಂಗಸರಾಗಿ ಕಾಣುತ್ತಲೇ ಇರಲಿಲ್ಲ—ಎಲ್ಲಾ ನೋಡಿ ಗೌರಿಯ ಗಂಡನೂ ಭದ್ರಾವತಿಗೆ ಹೋಗಿ ಕಾರ್ಖಾನೆ ಸೇರಿಬಿಟ್ಟ. ಹಳ್ಳಿ

ಯಲ್ಲಿದ್ದ ಅವನ ಮನೆ ಪಾಳುಬಿದ್ದು ಹೋಯಿತು. ಭದ್ರಾವತಿಯಲ್ಲಿ ಹೀಗೆ ಹಳ್ಳಿಗಳನ್ನು ಬಿಟ್ಟುಬಂದ ಅನೇಕ ಸಾವಿರ ಕೂಲಿಗಳು ಒಂದೆಡೆ ಸೇರಿದ್ದರು. ಯಂತ್ರಗಳಲ್ಲಿ ಕೆಲಸಮಾಡುತ್ತಿದ್ದ ಅವರೂ ಯಂತ್ರಗಳೇ ಆಗಿದ್ದರು. ಪ್ರಾರಂಭದಲ್ಲಿ ಆ ಜೀವನ ಗೌರಿಗೂ ಅವಳ ಗಂಡನಿಗೂ ಒಗ್ಗಲಿಲ್ಲ. ಎಷ್ಟೇ ಕಷ್ಟವಾದರೂ ಗಾಳಿ ಬೆಳಕು ಜಮೀನು ನದಿ ನೀರು ಬಯಲು ದನಕರುಗಳಿದ್ದ ತಮ್ಮ ಊರು ಅವರಿಗೆ ಉತ್ತಮವಾಗಿ ತೋರಿತು. ಆದರೆ ಕಣ್ಣಿಗೆ ಕಾಣುವಂತೆ ನಿತ್ಯಾ ಗೌರಿಯ ಗಂಡನಿಗೆ ಒಂದು ರೂಪಾಯಿ, ಗೌರಿಗೆ ಎಂಟಾಣೆ, ಹೀಗೆ ಒಂದುವರೆ ರೂಪಾಯಿ ಬರುತ್ತಿತ್ತು. ತಿಂಗಳಿಗೆ ಹಾಗೆ ನಲವತ್ತೈದು ರೂಪಾಯಿಗಳನ್ನು ಅವರ ಜೀವಮಾನದಲ್ಲಿಯೇ ಅವರು ಸಂಪಾದಿಸಿಮದಿರಲಿಲ್ಲ, ಆದರೆ ಅಷ್ಟು ದುಡ್ಡಿನ ದುಡುಮೆಯಿಂದ ಅವರಿಗೆ ಎಷ್ಟು ಸುಖವಾಗಬೇಕಾಗಿತ್ತೋ ಅಷ್ಟು ಆಗಲಿಲ್ಲ ಆ ಹಣ, ಹಾವಾಡಿಗನು ಮಾಡುವ ರೂಪಾಯಿನಂತೆ ಇದ್ದಕ್ಕಿದ್ದಂತೆ ಇದ್ದಲ್ಲಿಂದಲೇ ಮಾಯವಾಗತೊಡಗಿತು. ಜತೆಗೆ ಗೌರಿಯ ಗಂಡ, ಕುಡಿಯುವುದಕ್ಕೆ ಪ್ರಾರಂಭಿಸಿಬಿಟ್ಟನು. ಹಳ್ಳಿಯಲ್ಲಿ ಎಷ್ಟೇ ಬಡವನಾಗಿ ಕಷ್ಟದಲ್ಲಿದ್ದಾಗಲೂ ಅವನು ಕುಡಿಯುತ್ತಿರಲಿಲ್ಲ. ಅಲ್ಲಿದ್ದಾಗ ಅವನು ಕುಡಿಯುವುದು ಒಂದು ಅವಮಾನದ ಕೆಲಸವೆಂದು ಭಾವಿಸಿದ್ದನು. ಆದರೆ ಕಾರ್ಖಾನೆಯ ಅವನ ಸ್ನೇಹಿತರೆಲ್ಲ ಕುಡಿಯುತ್ತಿದ್ದರು. ಅವರ ಹೆಂಡತಿಯರು ತಾವೂ ಪಡಕಾನೆಗೆ ಹೋಗಿ ಗಂಡಂದಿರ ಜತೆಯಲ್ಲಿಯೇ ಕುಡಿಯುತ್ತಿದ್ದರು. ಗೌರಿ, ಗಂಡನ ಜತೆಯಲ್ಲಿ ಪಡಕಾನೆಗೆ ಹೋಗುತ್ತಿರಲಿಲ್ಲ. ಅವಳಿಗೆ ಅದು ಬಹು ನೀಚಕಾರ್ಯವಾಗಿ ತೋರಿತ್ತು. ಆದರೆ ಹಳ್ಳಿಯಿಂದ ಹೋಗಿ ಕಾರ್ಖಾನೆ ಸೇರಿದ್ದ ಇತರ ಸ್ತ್ರೀಯರು ಅವಳನ್ನು ಬಿಡಲಿಲ್ಲ. ಗಂಡಸರು ಗೌರಿಯ ಗಂಡನನ್ನೂ ಹಾಸ್ಯಮಾಡಿದರು. "ಗೌರಿಯ ಮುಂದೆ ಇವನ ಆಟ ಏನೇನೂ ನಡೆಯುವುದಿಲ್ಲ" ವೆಂದರು ಒಂದು ದಿನ ಪಡಕಾನೆಯಲ್ಲಿ ಹೆಣ್ಣು ಗಂಡುಗಳ ಎದುರಿಗೆ ಕುಡಿತದ ಅಮಲಿನಲ್ಲಿ ಗೌರಿಗೆ ಹೆಂಡ ಕುಡಿಸುವುದಾಗಿ ಅವಳ ಗಂಡ ಪ್ರತಿಜ್ಞೆಮಾಡಿದನು. ಕೂಡಲೇ "ಪಾನ ಮಿತ್ರರು" ಸೀಸೆಯಲ್ಲಿ ತಮ್ಮ ಖರ್ಚಿನಿಂದಲೇ ಹೆಂಡ ತುಂಬಿಸಿಕೊಂಡು, ಎಲ್ಲರೂ ಕುಡಿದು ಮತ್ತರಾಗಿ ಗೌರಿಯ ಗಂಡನ ಜತೆಯಲ್ಲಿ ಅವನ ಗುಡಿಸಲಿಗೆ ಬಂದರು. ದಾರಿಯುದ್ದಕ್ಕೂ ಅವರು ಗೌರಿಯ ಗಂಡನನ್ನು "ಹೆಂಡತಿಯನ್ನು

ಕಂಡು ಹೆದರುತ್ತಾನೆ. .ಅವಳ ದೊಡ್ಡಸ್ಥಿಕೆಗೆ ಇವನು ಕುಡಿಯುವುದು ಕಡಿಮೆ ಯಂತೆ. ಇವನ ಮಾತು ಮನೆಯಲ್ಲಿ ಏನೂ ನಡೆಯುವುದಿಲ್ಲ. ಅವಳು ಹೇಳಿದ ಹಾಗೆ ಇವನು ಬಿದ್ದಿರುತ್ತಾನೆ. ಇವನು ಮನೆಯಲ್ಲಿ ಇಲಿ, ಹೊರಗೆ ಹುಲಿ ಎಂದೆಲ್ಲ ರೇಗಿಸಿಬಿಟ್ಟರು. ಗಂಡ ಮನೆಗೆ ಬಂದು, ಕುಡಿಯುವಂತೆ ಗೌರಿ ಯನ್ನು ಬಲಾತ್ಕರಿಸಿದ. ಸೀಸೆಯಲ್ಲಿ ನೊರೆನೊರೆಯಾಗಿ ಹುಳಿಯಾಡುತ್ತಿದ್ದ ಹೆಂಡದ ವಾಸನೆ ಕಂಡು ಗೌರಿಗೆ ವಾಂತಿ ಬಂತು. ಆದರೂ ಗಂಡನ ಬಲಾ ತ್ಕಾರಕ್ಕೆ ಕುಡಿದುಬಿಟ್ಟಳು. ಅಂದಿನಿಂದಲೇ ಅವಳ ಅವನತಿ ಪ್ರಾರಂಭ ವಾಯಿತು.

" ಒಂದು ಸಲ ಪ್ರಾರಂಭಿಸಿದುದೇ ತಡ, ಗೌರಿಗೆ ಕುಡಿತದ ಚಟ ಬಹಳ ತೀವ್ರವಾಯಿತು. ಗಂಡನ ಜತೆಯಲ್ಲಿ ತಾನೂ ಪಡ್ಖಾನೆಗೆ ಹೋಗತೊಡಗಿ ದಳು. ಗಂಡನಿಗಿಂತಲೂ ಹೆಚ್ಚಾಗಿಯೇ ಕುಡಿಯತೊಡಗಿದಳು. ಗಂಡನಿ ಗಿಂತಲೂ ಹೆಚ್ಚಾಗಿ ರೇಗತೊಡಗಿದಳು. ಗಂಡ ರಾತ್ರಿ ಹೊತ್ತು ಮಾತ್ರ ಕುಡಿ ಯುತ್ತಿದ್ದನು. ಗೌರಿ ಬೆಳಗಿನಹೊತ್ತೂ ಕುಡಿಯಲು ಪ್ರಾರಂಭಿಸಿದಳು ಒಂದು ದಿನ ಬೆಳಿಗ್ಗೆ ಕುಡಿದು ಕಾರ್ಖಾನೆಗೆ ಹೋಗಿ ಬಾಯಿಗೆ ಬಂದಂತೆ " ಮ್ಯಾನೇ ಜರ್ ಸಾಹೇಬರನ್ನು ಬೈದಳು. ಮತ್ತೊಂದು ದಿನ ಕುಡಿತದ ಅಮಲಿನಿಂದ ಹೋಗಿ ಮೇಲಧಿಕಾರಿಯ ಕುರ್ಚಿಯ ಮೇಲೆ ಕುಳಿತು ಆಳುಗಳಿಗೆ ಆಜ್ಞಾ ಪಿಸಿತೊಡಗಿದಳು. ಇನ್ನೊಂದು ದಿನ ತನ್ನ ಎರಡು ವರುಷದ ಮಗುವನ್ನು ಮನೆಯಲ್ಲಿ ಬಿಟ್ಟು ಕುಡಿತದ ಹಂಬಲದಿಂದ ಪಡಕಾನೆಗೆ ಹೋಗಿಬಿಟ್ಟಳು. ಅಲ್ಲಿಂದ ಹಿಂದಿರುಗುವುದು ಸ್ವಲ್ಪ ನಾವಕಾಶವಾಯಿತು. ತನ್ನ ಎರಡು ವರು ಷದ ಗಂಡು ಮಗುವನ್ನು ಮನೆಯಲ್ಲಿಯೇ ಬಿಟ್ಟು ಹೋಗಿಬಿಟ್ಟಿದ್ದಳು. ಗಂಡ ನೂ ಇರಲಿಲ್ಲ. ಕುಡಿತದ ಕಾತರದಿಂದ ಅವಳ ಬುದ್ಧಿಯೇ ಅವಳ ಸ್ವಾಧೀನ ದಲ್ಲಿರಲಿಲ್ಲ. ಹಿಂದಿರುಗುವ ವೇಳೆಗೆ ಮಗು ಒಲೆ ಹತ್ತಿರ ಜ್ಞಾನತಪ್ಪಿ ಬಿದ್ದಿತ್ತು. ಆದರ ಒಂದು ಕೈ ಒಲೆಯೊಳಗೆ ಇದ್ದು ಸುಟ್ಟು, ಮಾಂಸದ ವಾಸನೆ ಬರುತ್ತಿತ್ತು. ಗೌರಿ ಹೋಗುವಾಗ, ಹತ್ತಿ ಉರಿಯುತ್ತಿದ್ದ ಒಲೆಯ ಬಳಿಗೆ ಮಗು ಹೋಗಿ, ಬೆಂಕಿ ಮುಟ್ಟಿ ಕೈ ಸುಟ್ಟುಕೊಂಡು ಮೂರ್ಛೆ ಬಿದ್ದಿತ್ತು. ಸಂಧ್ಯಾಕಾಲದ ಹೊತ್ತಿಗೆ ಮಗು ಸತ್ತಿತು. ಗಂಡ ಬಂದವನೇ ಸಮಾಚಾರ ತಿಳಿದು ಗೌರಿಯನ್ನು ಚೆನ್ನಾಗಿ ಬಡಿದ. ಕಾರ್ಖಾನೆಯಲ್ಲೆಲ್ಲ ಅವನ ಮಾನ

ಅವಳ ಕುಡಿತದಿಂದ ಹೋಗಿತ್ತು. ಮ್ಯಾನೇಜರು ಸಹ ಗೌರಿಯ ಗಂಡನಿಗೆ 'ನಿನ್ನ ಹೆಂಡತಿಯನ್ನು ತವರುಮನೆಗಾದರೂ ಕಳುಹಿಸು. ಇಲ್ಲದಿದ್ದರೆ ನೀನೂ ಕೆಲಸಕ್ಕೆ ಬರಬೇಡ' ಎಂದು ಗದರಿಸಿದರು. ಗೌರಿ ಕುಡಿಯದಿದ್ದಾಗ ಗಂಡ ನನ್ನು ಹಾಸ್ಯಮಾಡಿದ್ದ ಸ್ನೇಹಿತರೆಲ್ಲ "ಇವನ ಹೆಂಡತಿ ಈಗ ಹೀಗೆಯೇ" ಎಂದು ಅವನನ್ನು ಅಪಹಾಸ್ಯಮಾಡತೊಡಗಿದರು. ಕಾರ್ಖಾನೆಯ ಹೆಣ್ಣು ಗಂಡುಗಳಲ್ಲಿ ಗೌರಿಯಷ್ಟು ಕುಡಿಯುವವರು ಯಾರೂ ಇರಲಿಲ್ಲ. ಮತ್ತೊಂದು ದಿನ ಗೌರಿಯು ಮಿತಿಮೀರಿ ಕುಡಿದಾಗ ಅವಳ ಗಂಡ ಅವಳನ್ನು ಚೆನ್ನಾಗಿ ಚಚ್ಚಿ ಕೈಕಾಲುಗಳನ್ನೆಲ್ಲ ಘಾಯಮಾಡಿ ಅವಳ ಹಳ್ಳಿಗೆ ಕರೆದು ಕೊಂಡುಹೋಗಿ, ಬಿಟ್ಟನು. ಅಷ್ಟೆ ಅಲ್ಲ, ತಾನು ಕುಡಿಯುವುದನ್ನೂ ಪೂರ್ಣ ವಾಗಿ ಬಿಟ್ಟು, ಕುಡಿಯುವ ಚಟ ಬಿಡುವವರೆಗೆ ತನ್ನ ಹತ್ತಿರ ಬರಲೇ ಕೂಡ ದೆಂದೂ ಹೇಳಿ ಹೊರಟುಹೋದನು. ಗೌರಿ ಹಳ್ಳಿಯಲ್ಲಿ ಎರಡು ತಿಂಗಳು ಇದ್ದಳು. ಆಗ ಅವಳಿಗೆ ಕುಡಿತದ ಆಸೆ ಬರಲಿಲ್ಲ, ದುಡ್ಡೂ ಇರಲಿಲ್ಲ. ಎರಡು ತಿಂಗಳನಂತರ ಮತ್ತೆ ಭದ್ರಾವತಿಗೆ ಹೋದಳು. ಹಿಂದಲಂತೆ ಪ್ರಾರಂಭವಾಯಿತು. ಬೆಳಿಗ್ಗೆ ಸಂಜೆ ಕುಡಿತ.

ಮನುಷ್ಯನ ಸ್ವಭಾವ ವಿಚಿತ್ರ. ಗೌರಿಯ ಗಂಡ ಕುಡಿಯಕೂಡದೆನ್ನು ವವರ ಮುಖಂಡನಾಗಿದ್ದನು. ಗಾಂಧಿ ಪ್ರಭಾವ ಅವನ ಮೇಲೆ ಪೂರ್ಣ ವಾಗಿ ಬಿದ್ದಿತ್ತು. ಕಾರ್ಖಾನೆಯ ಕೂಲಿಗಳು ಅವನನ್ನು "ಗಾಂಧಿ" ಎಂದೇ ಕರೆಯುತ್ತಿದ್ದರು. ಕೂಲಿಗಳ ಭಜನೆ ಮಂದಿರದಲ್ಲಿ ಪ್ರತಿ ಶನಿವಾರ ಸಂಧ್ಯಾಕಾಲವೂ ಕುಡಿಯುವುದು ತಪ್ಪೆಂದು ಅವನು ಭೋದಿಸುತ್ತಿದ್ದನು. ಆದರೆ ಅವನ ಹೆಂಡತಿ ಗೌರಿ ಮಾತ್ರ ತನ್ನ ಪಾಡಿಗೆ ತಾನು ನಿತ್ಯ ಎರಡು ವೇಳೆ ಕುಡಿಯುತ್ತಲೇ ಇದ್ದಳು. ಒಂದು ದಿನ ಗಂಡ ಭಜನೆ ಮಂದಿರದಲ್ಲಿ ಕುಡಿತದ ಕೇಡುಗಳನ್ನು ಕುರಿತು ಮಾತನಾಡುತ್ತಿರುವಾಗ, ಇದ್ದಕ್ಕಿದ್ದಂತೆ ಮಧ್ಯೆ ಗೌರಿ ಎದ್ದು "ಈಚಲಮರದವ್ವ" ಹಾಡನ್ನು ಪ್ರಾರಂಭಿಸಿಬಿಟ್ಟಳು. ಪಾನನಿರೋಧ ವಿರೋಧಿಗಳಿಗೆ ಆ ಗಂಡ ಹೆಂಡಿರನ್ನು ಕಂಡು ಬಹು ವಿಚಿತ್ರವಾಯಿತು. ಅಲ್ಲಿಂದ ಮುಂದೆ ಗೌರಿಯ ಗಂಡನ ಮಾತಿಗೆ, ಭಜನೆ ಮಂದಿರದಲ್ಲಿಯಾಗಲೀ ಕಾರ್ಖಾನೆಯಲ್ಲಿಯಾಗಲೀ ಹೆಚ್ಚು ಬೆಲೆ ದೊರೆಯಲಿಲ್ಲ. ಅವನು ಮತ್ತೆ ಗೌರಿಯನ್ನು ಅವಳ ತವರುಮನೆಗೆ ಕಳುಹಿಸಿ, ತನ್ನನ್ನು ತಿರಸ್ಕರಿಸುತ್ತಿದ್ದ

ಭದ್ರಾವತಿಯನ್ನು ಬಿಟ್ಟು ಬೆಂಗಳೂರಿಗೆ ಬಂದು ಅಲ್ಲೊಂದು ಗಿರಣಿಯನ್ನು ಸೇರಿದನು. ಗೌರಿಯೂ ಅಲ್ಲಿಗೆ ಬಂದಳು. ಏನುಮಾಡಿದರೂ ಕುಡಿಯುವ ಅಭ್ಯಾಸ ಬಿಡಲು ಅವಳಿಗೆ ಸಾಧ್ಯವಾಗಲಿಲ್ಲ. ಬೆಂಗಳೂರಿನಲ್ಲಿಯೂ ಅವಳಿಂದ ಅವಳ ಗಂಡನ ಮಾನ ಹೋಯಿತು. ಎರಡು ಮಕ್ಕಳು, ತಾನು, ಗಂಡ, ಜೀವನವೆಲ್ಲ ಗಂಡನ ಸಂಪಾದನೆಯಿಂದ ಆಗಬೇಕು. ಮನೆಯ ಖರ್ಚಿಗೆ ಗಂಡ ಕೊಟ್ಟ ಹಣವನ್ನೆಲ್ಲ ಗೌರಿ ಕುಡಿತಕ್ಕೆ ಹಾಕಿಬಿಡುತ್ತಿದ್ದಳು. ಇದು ತಿಳಿದು ಗಂಡ ಸಾಮಾನುಗಳನ್ನೇ ಮನೆಗೆ ತಂದುಹಾಕಲು ಪ್ರಾರಂಭಿಸಿದ. ಗೌರಿ ಸಾಮಾನುಗಳನ್ನು ಮಾರಿ ಕುಡಿಯುತೊಡಗಿದಳು. ಮನೆಯಲ್ಲಿ ಒಬ್ಬರಿಗಾಗಲೀ ಪುಷ್ಟಿಯಾದ ಆಹಾರ ಸಿಗುತ್ತಿಲ್ಲ. ಆಹಾರವಿಲ್ಲದೆ ಕುಡಿತ ಮಾತ್ರ ಹೆಚ್ಚಾದುದರಿಂದ ಗೌರಿಗೆ ನಿಶ್ಶಕ್ತಿಯಾಗಿ ಕಾಯಿಲೆ ಬಂತು. ಡಾಕ್ಟರು "ಹಿಸ್ಟಿರಿಯ" ಎಂದರು. ಗಂಡನದೇನೂ ತಪ್ಪಿಲ್ಲ. ತಪ್ಪೆಲ್ಲ ಗೌರಿಯದೇಯೆ.

ಗೌರಿ ವಿಷಯಗಳನ್ನು ಈ ವಾಣಿಯಲ್ಲಿ ಕ್ರಮಬದ್ಧವಾಗಿ ಹೇಳಿದಳೆಂದಲ್ಲ ಆದರೆ ಅವಳ ಮಾತುಗಳ ಸಾರಾಂಶ ಇದು. ಸೀತಾಲಕ್ಷ್ಮಿ ಅವಳ ಮಂಚದ ಮೇಲೆ ತೂಗುಹಾಕಿದ್ದ ಅವಳ ರೋಗದ ನಕ್ಷೆಯನ್ನು ಮತ್ತೆ ನೋಡಿದಳು. "ಅತಿ ಕುಡಿತ, ನಿಶ್ಶಕ್ತಿ, ಪುಷ್ಟಿಯಿಲ್ಲದ ಆಹಾರ, ಹಿಸ್ಟಿರಿಯ" ಎಂದು ಬರೆದಿತ್ತು.

ವೈದ್ಯಶಾಲೆಯ ಗಡಿಯಾರ ಹನ್ನೆರಡು ಗಂಟೆ ಹೊಡೆಯಿತು. ಡಾಕ್ಟರ್ ಬರಲಿಲ್ಲ. ಸೀತಾಲಕ್ಷ್ಮಿ ಗೌರಿಯನ್ನು ತಟ್ಟಿ ಸಮಾಧಾನಮಾಡುತ್ತಿದ್ದಳು. ಗೌರಿಗೆ ಏನು ಏನು ಮಾಡಿದರೂ ನಿದ್ರೆ ಬರಲಿಲ್ಲ. ಸೀತಾಲಕ್ಷ್ಮಿ ಜತೆಯಲ್ಲಿಲ್ಲದಿದ್ದರೆ ಅವಳು ಗಟ್ಟಿಯಾಗಿ ನರಳಿ ಮಲಗಿದ್ದವರನ್ನೆಲ್ಲ ಎಬ್ಬಿಸಿಬಿಡುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಸೀತಾಲಕ್ಷ್ಮಿ ಅವಳು ಗಟ್ಟಿಯಾಗಿ ನರಳುವುದಕ್ಕೆ ಬಿಡದೆ, ಹಂಡಿಹಿಡಿದ ಸಣ್ಣಮಗುವನ್ನು ತಾಯಿ ಸಮಾಧಾನ ಮಾಡುವಂತೆ ಸಮಾಧಾನಮಾಡುತ್ತಿದ್ದಳು. ಗೌರಿಗಂತೂ ನರಳುವುದೇ ಸ್ವಭಾವವಾಗಿದ್ದಂತೆ ತೋರುತ್ತಿದ್ದಿತು. ನಿದ್ರೆಯಲ್ಲಿಯೂ ಸಹ ಆಕೆ ಉಸಿರಾಡುವಂತೆ ನರಳುತ್ತಲೂ ಇದ್ದಳು. ಸೀತಾಲಕ್ಷ್ಮಿ ಕಷ್ಟಪಟ್ಟು ತಟ್ಟಿ ಮೃದುವಾದ ಮಾತುಗಳನ್ನಾಡುತ್ತಿದ್ದರೆ ಗೌರಿಗೆ ಸ್ವಲ್ಪ ಜೋಂಪು ಹತ್ತುತ್ತಿತ್ತು. ಆದರೆ ಅದು ಕಾಲುಗಂಟೆ ಅರ್ಧಗಂಟೆ ಮಾತ್ರ. ಆ ಅರನಿದ್ರೆಯಿಂದ ಎಚ್ಚರವಾಗುವಾಗ ಗೌರಿ

ಗಟ್ಟಿಯಾಗಿ ನರಳುತ್ತಲೇ ಎದ್ದು ಬಿಡುತ್ತಿದ್ದಳು ಸೀತಾಲಕ್ಷ್ಮಿಗೂ ಸಹ ಒಂದು ರಾತ್ರಿ ನಾಲ್ಕು ರಾತ್ರಿಯಷ್ಟು ದೀರ್ಘವಾಗಿ ಕಂಡಿತು. ಬೆಳಗಿನಜಾವ ನಾಲ್ಕು ಗಂಟೆಯವೇಳೆಗೆ ಗೌರಿಗೆ ಸ್ವಲ್ಪ ನಿದ್ರೆ ಬಂತು. ಆದರೆ, ಸೀತಾಲಕ್ಷ್ಮಿಗೆ ಬರಲಿಲ್ಲ. ಅವಳಿಗೆ ನಿದ್ರೆಗಿಂತ ಹೆಚ್ಚಾಗಿ ಡಾಕ್ಟರಮೇಲೆ ಕೋಪ ಬಂತು.

ಮರುದಿನ ಬೆಳಗ್ಗೆ ಸುಮಾರು ಎಂಟುವರೆ ಗಂಟೆಗೆ ಡಾಕ್ಟರು ಬಂದರು. ಅವರ ಕಣ್ಣು ಕೆಂಪಾಗಿತ್ತು. ಅವರೂ ಕುಡಿದಿರುವುದು ಅವರನ್ನು ನೋಡಿದ ಕೂಡಲೇ ಗೊತ್ತಾಗುತ್ತಿದ್ದಿತು ಅವರು ವಾರ್ಡ್‌ನ್ನು ಪ್ರವೇಶಿಸಿದಕೂಡಲೇ ರೋಗಿಗಳ ಮುಖ ಭಯದಿಂದ ಬಾಡಿತು. ಅವರು ನೆಟ್ಟಗೆ ಗೌರಿಯ ಮಂಚದ ಬಳಿಗೆ ಬಂದರು. ಅವರ ಉಸಿರಿನ ಮದ್ಯಗವಾಸನೆ ಸುತ್ತಾ ಹರಡುತ್ತ ಇತ್ತು. ಅವರು ಗೌರಿಯ ನಾಡಿಯನ್ನು ಹಿಡಿದು ನೋಡುವುದಕ್ಕೆ ಹೋದಾಗ ಅವರ ಕೈ ಥರಥರ ನಡುಗುತ್ತಿತ್ತು. ಸೀತಾಲಕ್ಷ್ಮಿ ಅವರಿಗೆ "ರಾತ್ರಿಯೆಲ್ಲ ಈಕೆ ನಿಮ್ಮನ್ನು ಕನವರಿಸುತ್ತಾ ಇದ್ದು, ಮನಶ್ಶಾಂತಿ ಹಾಳುಮಾಡಿಕೊಂಡಳು. ಹೇಳಿದ ಹೊತ್ತಿಗೆ ಬಂದು ರೋಗಿಗಳಿಗೆ ಔಷಧಿಕೊಡದಿದ್ದರೆ ಅವರ ರೋಗ ಆ ಕಾತರತೆಯಿಂದಲೇ ಉಲ್ಬಣವಾಗುತ್ತೆ" ಎಂದಳು. ಡಾಕ್ಟರಿಗೆ ಅವಳ ಮಾತನ್ನುಕೇಳಿ ಕೋಪಬಂತು. ತಾನು ಏನು ಹೇಳುತ್ತಿರುವೆನೆಂಬುದೂ ಅವರಿಗೆ ಆ ಗಳಿಗೆಯಲ್ಲಿ ಸರಿಯಾಗಿ ಅರ್ಥವಾಗಿರಲಿಲ್ಲ, ಅವರು "ನಿನ್ನಬೋಧನೆ ನನಗೆ ಬೇಕಿಲ್ಲ. ಡಾಕ್ಟರುಗಳಿಗೇ ವಿವೇಕ ಕಲಿಸಬೇಕೆನ್ನುವ ಹೆಮ್ಮೆಯ "ನರ್ಸ್" ಗಳಿಂದ ಪ್ರಯೋಜನವಿಲ್ಲ. ಸ್ವಲ್ಪ ವಿಧೇಯರಾದ ನರ್ಸ್ ಗಳನ್ನು ನಾಳೆಯಿಂದ ಕಳುಹಿಸುವಂತೆ ಧನ್ವಂತರಿ ಆಶ್ರಮಕ್ಕೆ ಬರೆಯುತ್ತೇನೆ" ಎಂದರು. ಸೀತಾಲಕ್ಷ್ಮಿಯು "ನಿಮಗೆ ಇಷ್ಟ ಬಂದದ್ದನ್ನು ಮಾಡಬಹುದು. ಆದರೆ ಇವತ್ತು ನೀವು ರೋಗಿಗಳಿಗೆ ಔಷಧಿಕೊಡುವ ಸ್ಥಿತಿಯಲ್ಲಿಲ್ಲ. ಅದು ನಿಮಗೂ ಗೊತ್ತು. ಕೈ ನಡುಗುತ್ತಿದೆ. ಆದುದರಿಂದ ಇಂಜಕ್ಷನ್ ಕೊಡಬೇಡಿ, ಎಂದಳು. ತನ್ನ ಕೈ ನಡುಗುತ್ತಿರುವುದು ಡಾಕ್ಟರಿಗೂ ಹೊತ್ತಾಯಿತು. ಅದು ನಡುಗದಂತೆ ಮಾಡಬೇಕೆಂದು ಅವರು ಪ್ರಯತ್ನಿಸಿದುದು ಫಲವಾಗಲಿಲ್ಲ. ಅವರು "ನಿಮ್ಮಿಂದ ಪ್ರಯೋಜನಕ್ಕಿಂತ ತೊಂದರೆಯೇ ಹೆಚ್ಚು" ಎಂದು ಹೇಳಿಕೊಂಡು ರೋಗಿಗಳನ್ನೆಲ್ಲ ನುಂಗುವಂತೆ ದುರದುರನೆ ನೋಡುತ್ತಾ ಹೊರಟುಹೋದರು.

ಆ ಡಾಕ್ಟರನ್ನು ಕಂಡರೆ ರೋಗಿಗಳೆಲ್ಲ ಬಹಳ ಹೆದರುತ್ತಿದ್ದರು. ಅವರಿಗೆ ಎದುರಾಗಿ ಮಾತನಾಡಲು ರೋಗಿಗಳಿಗಾಗಲಿ "ನರ್ಸ್" ಗಳಿಗಾಗಲೀ ಧೈರ್ಯವಿರಲಿಲ್ಲ. ಸೀತಾಲಕ್ಷ್ಮಿಯ ಎದೆಗಾರಿಕೆಯನ್ನು ಕಂಡು ಅವರಿಗೆಲ್ಲ ಆಶ್ಚರ್ಯವೂ, ಉತ್ಸಾಹವೂ, ಉಂಟಾಯಿತು. ಡಾಕ್ಟರನ್ನು ಎದುರಿಸಿ ಸರಿಯಾಗಿ ಮಾತನಾಡಬೇಕೆಂದಿದ್ದ ಗೌರಿಯ ಅನೇಕ ದಿನಗಳ ಆಸೆ ಅಂದು ಪೂರ್ಣವಾಗಿತ್ತು.

ಮಾರನೆಯ ದಿನದಿಂದಲೇ ಡಾಕ್ಟರ ಸ್ವಭಾವ ಬದಲಾಯಿಸಿತು. ಅವರು ಧನ್ವಂತರೀ ಆಶ್ರಮಕ್ಕೆ ಬೇರೆ ನರ್ಸ್‌ಗಾಗಿ ಬರೆಯಲಿಲ್ಲ. ಅವರಿಗೆ ಆರು ತಿಂಗಳು ಪಾಠ ಕಲಿತರೂ ಮೈಗೆ ಒಪ್ಪದಿದ್ದ ಅಭ್ಯಾಸಗಳು, ಸೀತಾಲಕ್ಷ್ಮಿ ಆಸ್ಪತ್ರೆಯಲ್ಲಿರುವುದನ್ನು ನೆನೆಸಿಕೊಂಡರೇ ಉಂಟಾಗುತ್ತಿದ್ದವು. ಅದು ಅವರಿಗೆ ಹೊರಗಿನ ಬಂಧನವಾಗದೆ ತಮ್ಮ ಮೇಲೆ ತಾವೇ ಹೇರಿಕೊಂಡ ಒಳಗಿನ ಬಂಧನವಾದುದರಿಂದ ಸುಖವಾಯಿತು. ಅವರಲ್ಲಿ ಉಂಟಾದ ಬದಲಾವಣೆಯನ್ನು ಕಂಡು ರೋಗಿಗಳಿಗೆ ಆನಂದವಾಗುವುದಿರಲಿ, ವೈದ್ಯ ಶಾಲೆಯ ಮೇಲಧಿಕಾರಿಗಳಿಗೇ ಆನಂದಾಶ್ಚರ್ಯಗಳುಂಟಾದವು.

ವೈದ್ಯಶಾಲೆಯಲ್ಲಿ ತನ್ನ ವಾರದ 'ಟ್ರೇನಿಂಗ್' ಮುಗಿದ ನಂತರ ಸೀತಾಲಕ್ಷ್ಮಿ ಆಶ್ರಮಕ್ಕೆ ಮತ್ತೆ ಹಿಂದಿರುಗಲು ಹೊರಟಾಗ, ವೈದ್ಯಶಾಲೆ ಯಲ್ಲಿದ್ದ ರೋಗಿಗಳಿಗೆ ತಮ್ಮ ಅತ್ಯಂತ ಸಮೀಪದ ಬಂಧು ಒಬ್ಬರನ್ನು ಕಳೆದು ಕೊಂಡ ದುಃಖವಾಯಿತು. ತನ್ನ ಪ್ರೇಮಸ್ವಭಾವದ ಪ್ರಕಾಶನಕ್ಕೆ, ಸೀತಾ ಲಕ್ಷ್ಮಿಗೂ ಅವರೆಗೆ ಅಂತಹ ಅವಕಾಶ ಸಿಕ್ಕಿರಲಿಲ್ಲ. ಸೇವೆಯನ್ನೇ ಆನಂದ ವನ್ನಾಗಿ ಭಾವಿಸಿದ್ದ ಅವಳ ಮನಸ್ಸು ಆ ಅವಕಾಶ ತನಗೆ ದೊರೆತುದರಿಂದಲೇ ತನ್ನ ಬಾಳು ಸಾರ್ಥಕವಾಯಿತೆಂದು ಆನಂದಗೊಂಡಿತು.

## ೨೫

ಸೀತಾಲಕ್ಷ್ಮಿ ಬೆಂಗಳೂರಿಗೆ ಬಂದು ಆರು ತಿಂಗಳಾಗಿತ್ತು. ಆಯುರ್ವೇದ ಪ್ರಾಣಾಚಾರ್ಯರ ನಿಯಮದಂತೆ ಅವಳು ಆಯುರ್ವೇದ ಪರೀಕ್ಷೆಗೆ ಕುಳಿತು ತೇರ್ಗಡೆ ಸಹ ಹೊಂದಿದಳು. ಈಚೆಗೆ ಮತ್ತೆ ಶಂಕರಐಯ್ಯರ್ ಅವಳಿಂದ ಒಂದೆರಡು ಸಂಗೀತ ಕಛೇರಿಗಳನ್ನು ಮಾಡಿಸಿದ್ದರು. ಸೀತಾಲಕ್ಷ್ಮಿ ಉತ್ಪತ್ತಿ

ಯಾದ ಹಣವನ್ನೆಲ್ಲ ಧನ್ವಂತರಿ ಆಶ್ರಮಕ್ಕೆ ಕೊಟ್ಟುಬಿಟ್ಟಳು. ಅವಳಿಗೆ ಆಯುರ್ವೇದ ಚಿಕಿತ್ಸೆಯಲ್ಲಿ ಹೊರತು ಮತ್ತಾವುದರಲ್ಲಿಯೂ ಉತ್ಸಾಹವಿರಲಿಲ್ಲ. ಆ ಏಕಾಗ್ರತೆಯ ಸೇವಾಬುದ್ಧಿಯಿಂದ ಅವಳ ಬಾಳಿಗೆ ಒಂದು ನೆಲೆಯೂ ಗುರಿಯೂ ಬಂದಂತಾಗಿತ್ತು.

ಆಶ್ರಮ ವಾಸಿಗಳೂ ಪ್ರಾಣಾಚಾರ್ಯರೂ ಅಲ್ಲಿಯೇ ಉಳಿಯಬೇಕೆಂದು ಹೇಳಿದರೂ ಒಪ್ಪದೆ, ಸೀತಾಲಕ್ಷ್ಮಿ, ಮಲ್ಲಿಗೆಹಳ್ಳಿಗೆ ಹಿಂದಿರುಗುವುದಾಗಿಯೇ ತೀರ್ಮಾನಿಸಿದಳು. ಅವಳು ಪ್ರಾಣಾಚಾರ್ಯರೊಂದಿಗೆ "ನನ್ನ ವೈದ್ಯ ವಿದ್ಯೆಯಿಂದ ಹಳ್ಳಿಯಲ್ಲಿ ಹೆಚ್ಚು ಉಪಯೋಗವಿದೆ. ಪಟ್ಟಣದಲ್ಲಿ ಒಂದಲ್ಲ ನಾಲ್ಕು ವೈದ್ಯಶಾಲೆಗಳಿವೆ. ಆದರೆ ಹಳ್ಳಿಗಳಲ್ಲಿ ಕೇಳುವವರೇ ಯಾರೂ ಇಲ್ಲ. ಒಂದೊಂದು ಸಲ ಒಳಹಳ್ಳಿಗಳಿಗೆ ಪಟ್ಟಣದ ಸೂಲಗಿತ್ತಿಯರು ಬರುವುದರೊಳಗೆ, ಮಗು, ತಾಯಿ ಇಬ್ಬರೂ ಸತ್ತಿರುತ್ತಾರೆ. ಹಳ್ಳಿಗೆ ಹೋದರೇನೆ ಈ ವಿದ್ಯೆ ಕಲಿತುದಕ್ಕೆ ಸಾರ್ಥಕ." ಎಂದು ಹೇಳಿದ್ದಳು. ಮಲ್ಲಿಗೆಹಳ್ಳಿಗೆ ಬಂದು ಇರುವುದರಲ್ಲಿ ಅವಳಿಗೆ ಮತ್ತೊಂದು ಆಸೆಯೂ ಇತ್ತು. ಸುಂದರರಾಜ ರಂಭಾಪುರಿಗೆ ಬರಬಹುದು ಅಲ್ಲಿಂದ ಮಲ್ಲಿಗೆಹಳ್ಳಿಗೂ ಬರಬಹುದು ಮಲ್ಲಿಗೆಹಳ್ಳಿ ರಂಭಾಪುರಿಗೆ ಹತ್ತಿರವಾದುದರಿಂದ, ಅಲ್ಲಿದ್ದರೆ ಸುಂದರರಾಜನ ಸುದ್ದಿ ಬೇಗ ತಿಳಿಯುತ್ತೆ, ಎಂಬುದು ಅವಳ ಅಂತರಂಗದ ಆಸೆಯಾಗಿತ್ತು. ಅಲ್ಲದೆ ಕಮಲಮ್ಮನ ಹೊರತು ಉಳಿದವರಾರೂ ಆಕೆಯನ್ನು ಅರ್ಥಮಾಡಿಕೊಂಡಿರಲಿಲ್ಲ. ಆದುದರಿಂದ ಕಮಲಮ್ಮನ ಜತೆಯಲ್ಲಿದ್ದರೆ ಮಾತ್ರವೇ ಆಕೆಗೆ ಸಮಾಧಾನವಾಗುವಂತಿತ್ತು. ಸೀತಾಲಕ್ಷ್ಮಿಯು "ಆಯುರ್ವೇದ ವಿದುಷಿ" ಎಂಬ ಪ್ರಶಸ್ತಿ ಪತ್ರಿಕೆಯೊಂದಿಗೆ ಮತ್ತೆ ಮಲ್ಲಿಗೆಹಳ್ಳಿಗೆ ಹೋಗಿ, ಅಣ್ಣ ಶ್ರೀನಿವಾಸನ ಮನೆಯನ್ನು ಸೇರಿದಳು.

ಅಲ್ಲಿಂದ ಸೀತಾಲಕ್ಷ್ಮಿಯ ಮತ್ತೊಂದು ಕ್ಷೇತ್ರ ಪ್ರಾರಂಭವಾಯಿತು. ಮಲ್ಲಿಗೆಹಳ್ಳಿಯಲ್ಲಿ ಒಬ್ಬ ಸರ್ಕಾರಿ ಸಂಬಳದ ಹೆಣ್ಣು ಡಾಕ್ಟರೇನೋ ಇದ್ದಳು. ಆದರೆ ಆಕೆಯ ಕಾರ್ಯ "ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ" ಸುತ್ತಲ ಹಳ್ಳಿಗಳಿಗೂ ಹೋಗಿ ವೈದ್ಯಸಹಾಯ ಮಾಡಬೇಕೆಂದು ಸರ್ಕಾರದವರು ಆಕೆಯನ್ನು ನಿಯಮಿಸಿದ್ದರೂ, ಆಕೆ ಸಾಧಾರಣವಾಗಿ ಮಲ್ಲಿಗೆಹಳ್ಳಿ ಬಿಟ್ಟು ಹೊರಗೆ ಹೋಗುತ್ತಲೇ ಇರಲಿಲ್ಲ. ಹಳ್ಳಿಯವರ ಕನಿಕರ ಧ್ವನಿ ಅವಳ ಮುಂದೆ ವ್ಯರ್ಥವೇ

ಆಗುತ್ತಿತ್ತು. ಸಾಲದುದಕ್ಕೆ ಅವಳು ಹಳ್ಳಿಗರ ಸಂಸಾರಜೀವನದ ಪೊಳ್ಳು ಕಾಡು ಹರಟೆಗಳಲ್ಲಿ ಸೇರಿಕೊಂಡು, ಆ ಪ್ರೀತಿಪ್ರೇಷಗಳನ್ನು ತನ್ನ ವೈದ್ಯೋಪ ಚಾರಕ್ಕೂ ತೆಗೆದುಕೊಂಡುಹೋಗಿದ್ದಳು. ಹೀಗಾಗಿ ಪಕ್ಷ್ಪವ್ಯಕ್ತಿಗಳನ್ನು ಮೀರಿದ ಎಲ್ಲರೂ ತನಗೆ ರೋಗಿಗಳು ಎಂಬ ಆ ಅನಾಸಕ್ತಿಭಾವ ಅವಳಲ್ಲಿ ಮರೆಯಾಗಿ ಅವಳು ಮುಖನೋಡಿ ಮಣೆ ಹಾಕುತ್ತಿದ್ದಳು. ಪಟ್ಟಣಗಳಲ್ಲಿ ವಾಸಮಾಡಿ ತಾನು ನಾಗರಿಕಳಾಗಿದ್ದೇನೆಂಬ ಹೆಮ್ಮೆಯುಳ್ಳ ಆಕೆ. ಹಳ್ಳಿಯವರ ಕೊಳಕು ಒರಟುತನ ಕಂಡು ವೈದ್ಯೋಪಚಾರಗಳನ್ನು ಮಾಡುವುದಕ್ಕೆ ಹಿಂದೆಗೆಯು ತ್ತಿದ್ದಳು.

ಇಂತಹ ಪರಿಸ್ಥಿತಿಯಲ್ಲಿ ಮತ್ತೊಬ್ಬ ಡಾಕ್ಟರ್ ಹಳ್ಳಿಗೆ ಬಂದಕೂಡಲೇ ಸರ್ಕಾರಿ ಡಾಕ್ಟರಿಂದ ತಿರಸ್ಕೃತರಾದ ಜನ ಆಕೆಯ ಕಡೆ ತಿರುಗಿದರು. ತನ್ನ ದುರದೃಷ್ಟದ ಕಾಲದಲ್ಲಿ ಆಸ್ಪತ್ರೆಯಲ್ಲಿ ತನಗೆ ಉಂಟಾಗಿದ್ದ ಅನುಭವದಿಂದ ಸೀತಾಲಕ್ಷ್ಮಿಗೆ, ಎಲ್ಲಾ ರೋಗಿಗಳಲ್ಲೂ ಕನಿಕರವೇ ಪೂರ್ಣವಾಗಿರುತ್ತಿದ್ದಿತು. ರೋಗಿಗಳು ದಿನದಿನವೂ ತನ್ನಲ್ಲಿಗೆ ನುಗ್ಗುತ್ತಿದ್ದುದನ್ನು ಕಂಡು ಆಕೆ "ಈ ಸೇವಾಕ್ಷೇತ್ರದಲ್ಲಾದರೂ, ತಾನು ಜನರಿಗೆ ಬೇಕಾದವಳಾಗಿದ್ದೇನೆಯಲ್ಲ? ಇಲ್ಲಿಯಾದರೂ ನನಗೆ ಒಂದು ಬೆಲೆ ಇದೆಯಲ್ಲ" ಎಂದು ಸಮಾಧಾನ ಗೊಂಡಳು.

ಒಂದು ಬೆಳಗಿನ ಜಾವ ಸುಮಾರು ನಾಲ್ಕು ಗಂಟೆ ಹೊತ್ತಿನಲ್ಲಿ ಅವಳು ಮಲಗಿ ನಿದ್ರಿಸುತ್ತಿರುವಾಗ, ಬಾಗಿಲನ್ನು ಯಾರೋ ತಟ್ಟಿದರು. ಸೀತಾಲಕ್ಷ್ಮಿ ಬಾಗಿಲು ತೆರೆದು ನೋಡಿದಾಗ ಬಾಗಿಲಿನಲ್ಲಿ ಒಬ್ಬ ಮುದುಕ ರೈತ ನಿಂತಿದ್ದನು. ಅವನ ಕೈಯ್ಯಲ್ಲಿ ಮಂಕಾದ ಒಂದು ಲಾಂದ್ರ ಇತ್ತು ಅವನ ಮುಖವೂ ಗಾಬರಿಯಿಂದಲೂ ಆತುರದಿಂದಲೂ ಕಂಡಿತ್ತು. ಸೀತಾಲಕ್ಷ್ಮಿಯನ್ನು ಕಂಡಕೂಡಲೇ ಆತನು "ಅಮ್ಮಾ ನನ್ನ ಮಗಳಿಗೆ ಪ್ರಸವವೇನನೆ. ರಾತ್ರಿ ಯೇ ಬಹಳ ನೋವು" ಎಂದನು. "ರಾತ್ರಿಯೇ ಗಾಡಿಕಟ್ಟಿಸಿ ಮಗಳನ್ನೂ ಕೂರಿಸಿಕೊಂಡು ಹೊರಟೆ. ಇಲ್ಲಿಗೆ ಐದು ಮೈಲಿಯ ಹಳ್ಳಿಯಿಂದ ಎರಡು ಮೈಲಿ ಬರುವುದರೊಳಗಾಗಿ, ಗಾಡಿ ಕತ್ತಲೆಯಲ್ಲಿ ಕೊರಕಲಿಗೆ ಸಿಕ್ಕಿಕೊಂಡು ಉರುಳಿಕೊಂಡಿತು. ಅದು ಯಾವ ತರ ಏಟು ಬಿತ್ತೋ, ಗಾಡಿಯಲ್ಲಿಯೇ ಪ್ರಸವವಾಗಿಬಿಟ್ಟದೆ. ಪ್ರಸವವಾದಕೂಡಲೇ ಆಕೆಗೆ ಜ್ಞಾನ ಹೋಯಿತು.

ಒಬ್ಬ ಸಣ್ಣ ಹುಡುಗ ಮಾತ್ರ ಜತೆಗಿದ್ದ. ಅವನನ್ನೇ ಗಾಡಿಯಲ್ಲಿ ಕೂರಿಸಿ ನಾನು ಬಂದೆ. ನನಗೆ ಭಯವಾಗಿದೆ ಸ್ವಲ್ಪ ಬನ್ನಿ" ಎಂದನು. ಸೀತಾ ಲಕ್ಷ್ಮಿಯು "ಅಪ್ಪಾ ನನ್ನಲ್ಲಿ ಈ ಕಾರ್ಯಗಳಿಗೆ ಬೇಕಾದ ಸಾಮಾನು ಇಲ್ಲ. ಔಷಧಿಗಳೂ ಇಲ್ಲ. ನಾನು ಈಗ ತಾನೆ ಅಭ್ಯಾಸಮಾಡಿಕೊಳ್ಳುತ್ತಿದ್ದೇನೆ. ಹೋಗು, ಸರ್ಕಾರಿ ಡಾಕ್ಟರನ್ನು ಕರೆ" ಎಂದು ಹೇಳಿದಳು. "ರಾತ್ರಿಯೇ ಗಾಡಿ ಕಟ್ಟಿಸಿದ್ದೆ" ಎಂದು ಮುದುಕ ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡು "ಪ್ರಸವವಾದಾಗ ಎಷ್ಟು ಹೊತ್ತು? ಇದುವರೆಗೆ ಎಲ್ಲಿದ್ದೆ? ಆಗಲೇ ಯಾಕೆ ಬರಲಿಲ್ಲ?" ಎಂದು ಕೇಳಿದಳು. ಮುದುಕ ಸ್ವಲ್ಪ ಸಂಕೋಚದಿಂದ "ರಾತ್ರಿ ಇನ್ನೂ ಮಲಗುವುದಕ್ಕೆ ಮುಂಚೆಯೇ ಗಾಡಿ ಕಟ್ಟಿಸಿದೆ. ಒಂಭತ್ತು ಗಂಟೆ ಇರ ಬಹುದು ಅಷ್ಟೆ. ಎರಡು ಮೈಲಿ ಬಂದಕೂಡಲೇ ಗಾಡಿ ಬಿದ್ದು ಪ್ರಸವ ವಾಯಿತು, ಅರ್ಧರಾತ್ರಿಗೆ ಮುಂಚೆಯೇ" ಎಂದನು. ಸೀತಾಲಕ್ಷ್ಮಿ ತಾನು ಕೇಳಿದ ಪ್ರಶ್ನೆಗೆ ಪ್ರತ್ಯುತ್ತರ ಬರದುದನ್ನು ಕಂಡು "ಹೌದು ಇಲ್ಲಿಗೆ ಬರುವು ದಕ್ಕೆ ಇಷ್ಟು ಹೊತ್ತು ಏಕೆ?" ಎಂದು ಮತ್ತೆ ಕೇಳಿದಳು. ಮುದುಕ ತತ್‌ಕ್ಷಣ ಪ್ರತ್ಯುತ್ತರ ಕೊಡಲಿಲ್ಲ. ಅನಂತರ "ಬರುತ್ತಿರುವಾಗ ದಾರಿಯಲ್ಲಿ ದೆವ್ವ ಅಡ್ಡಲಾಯಿತು" ಎಂದನು. ಸೀತಾಲಕ್ಷ್ಮಿ ಪ್ರಶ್ನೆಯ ಮೇಲೆ ಪ್ರಶ್ನೆಹಾಕಿ ಸಂಗತಿ ಹೊರಡಿಸಿದಳು. "ಗಾಡಿ ಬಿದ್ದ ಆ ಏಟಿಗೆ ಮಗಳಿಗೆ ಪ್ರಸವವಾಗಿ ಹೋಯಿತು. ಮಗಳಿಗೆ ಜ್ಞಾನ ಇರಲಿಲ್ಲ. ನಾನು ಗಾಡಿಗೆ ಕಟ್ಟಿದ್ದ ಲಾಂದ್ರ ಬಿಚ್ಚಿಕೊಂಡು ಡಾಕ್ಟರನ್ನು ಕರೆದುಕೊಂಡು ಹೋಗಲು ಈ ಊರ ಕಡೆಗೆ ಬಂದೆ. ಮಗಳಿಗೆ ಪ್ರಜ್ಞೆಯೇ ಇಲ್ಲದಿದ್ದುದರಿಂದ ಅವಳಿಗೆ ಹೇಳಿ ಬರಲಿಲ್ಲ. ಹುಡುಗನನ್ನು ಕಾವಲಿಗೆ ಹಾಕಿದೆ. ಇಬ್ಬರೂ ಕತ್ತಲೆಯಲ್ಲಿ ಕುಳಿತಿದ್ದಾರೆ. ಹುತ್ನಹಳ್ಳಿ ಕೆರೆ ಬಳಿಗೆ ಬರುವವೇಳೆಗೆ ದೂರದಲ್ಲಿ ಒಂದು ದೆವ್ವ ಎದುರಾಯಿತು. ಅದು ಬ್ರಾಹ್ಮಣರ ಕೊಳ್ಳಿದೆವ್ವ. ಕೈಯಲ್ಲಿ ಪಂಜು ಹಿಡಿದಿತ್ತು. ಅದರ ಪ್ರಕಾಶ ಆ ದಿಕ್ಕನ್ನೇ ಬೆಳಗಿತ್ತು" ಅದರ ಎದೆಯ ಮೇಲೆ ಜನಿವಾರ ಸಹ ಇತ್ತು. ಜನಿವಾರವಿದ್ದರೆ ದೆವ್ವ ಕಣ್ಣಿಗೆ ಬೀಳುವುದಿಲ್ಲ ಎನ್ನುತ್ತಾರೆ, ಈ ದೆಯ್ಯ ತಾನೇ ಜನಿವಾರ ಹಾಕಿಕೊಂಡಿತ್ತು. ನೋಡಿ ನನ್ನ ಕೈಕಾಲು ನಡು ಗಿತು. ಬಾಯಿ ಒಣಗಿಹೋಯಿತು. ಕೈಯ್ಯಲ್ಲಿದ್ದ ಲಾಂದ್ರ ಕೆಳಕ್ಕೆ ಬಿದ್ದು ಆಳಿಸಿಹೋಯಿತು. ನನಗೆ ಹಿಂದಕ್ಕೆ ಹೋಗುವುದಕ್ಕೂ ಭಯ, ಮುಂದಕ್ಕೆ

ಹೋಗುವುದಕ್ಕೂ ಭಯ. ದೂರದಲ್ಲಿ, ದೆಯ್ಯ ಹಿಡಿದಿದ್ದ ಕೊಳ್ಳಿಯ ಬೆಳಕಿನಲ್ಲಿ ನನ್ನ ಬಿದ್ದಿದ್ದ ಲಾಂದ್ರ ಸಹ ಕಾಣುತ್ತಿತ್ತು. ನಾನು ಕಣ್ಣುಮುಚ್ಚಿಕೊಂಡು ಕುಳಿತುಬಿಟ್ಟೆ ಹೀಗೆ ಎಷ್ಟು ಹೊತ್ತು ಕುಳಿತ್ತೆನೊ? ನನಗೇ ಗೊತ್ತಿಲ್ಲ. ದೂರದ ಗ್ರಾಮದಲ್ಲಿ ಕೋಳಿ ಕೂಗಿದ್ದನ್ನು ಕೇಳಿ ಎದ್ದು ಬಂದೆ."

ರೈತನ ಅಜ್ಞಾನ ಮೂಢಭಕ್ತಿ, ಸೊಸೆಯ ಅವಸ್ಥೆ, ಎಲ್ಲವನ್ನೂ ಕುರಿತು ಯೋಚಿಸಿ ಯೋಚಿಸಿ, ಸೀತಾಲಕ್ಷ್ಮಿ ಬಹಳ ದುಃಖಿತಳಾದಳು. ಆದರೂ ಅವಳ ಬಳಿ ಸರಿಯಾದ ಶಸ್ತ್ರಗಳಾಗಲೀ ಒಳ್ಳೆ ಔಷಧಗಳಾಗಲೀ ಇಲ್ಲದುದರಿಂದ ಮುದುಕನನ್ನು ಡಾಕ್ಟರ ಮನೆಗೆ ಕಳುಹಿಸಿ, ಮನೆಯೊಳಕ್ಕೆ ಹೋದಳು. ಕಾಡಿನಲ್ಲಿ ಮೂರ್ಛೆಬಿದ್ದು ಪ್ರಸವಿಸಿರುವ ಹೆಣ್ಣಿನ ಅವಸ್ಥೆ, ಅವಳ ಮನಸ್ಸನ್ನು ಬಿಟ್ಟುಹೋಗಲಿಲ್ಲ. ಅವಳಿಗೆ ಅದು ಹೇಗೋ. ತಾನು ಆಸ್ಪತ್ರೆಯಲ್ಲಿದ್ದುದೂ ಅಲ್ಲಿ ತನಗೆ ಸಂಭವಿಸಿದ ನರಕಯಾತನೆಗಳೂ, ಜ್ಞಾಪಕಕ್ಕೆ ಬಂದವು. ಅವಳು ಹೀಗೆ ಯೋಚಿಸುತ್ತಾ ಕುಳಿತಿರುವಾಗ, ಸುಮಾರು ಅರ್ಧ ಗಂಟೆಯ ನಂತರ ಮುದುಕ ಹಿಂದಿರುಗಿ ಮತ್ತೆ ಬಾಗಿಲನ್ನು ತಟ್ಟಿದನು. ಸೀತಾಲಕ್ಷ್ಮಿ ಬಾಗಿಲನ್ನು ತೆರೆದಕೂಡಲೇ, ಮುದುಕನು "ನನ್ನ ತಾಯಿ. ನೀವೇ ಬರಬೇಕು. ಡಾಕ್ಟರು ಬರೋಲ್ಲ" ಎಂದನು. "ಡಾಕ್ಟರು ಹೊತ್ತಿಲ್ಲದ ಹೊತ್ತಿನಲ್ಲಿ ಎಬ್ಬಿಸಿದುದಕ್ಕೆ ನನ್ನನ್ನು ಬೈದುಬಿಟ್ಟರು. ನೂರು ರೂಪಾಯಿ ಕೊಡಬೇಕೆನ್ನುತ್ತಾರೆ. ನಮ್ಮವ್ವ ನೂರು ರೂಪಾಯಿ ನಾನೆಲ್ಲಿ ತರಲಿ? ನನ್ನ ಹತ್ತಿರ ನೂರು ಕಾಸೂ ಇಲ್ಲವಲ್ಲ. ಅಯ್ಯೋ, ನಾವು ಇಲ್ಲಿ ಹೀಗೆ ಮಾತನಾಡುತ್ತಾ ಕುಳಿತಿರುವಾಗ ಅಲ್ಲಿ, ಅವಳ ಪ್ರಾಣವೇ ಹಾರಿ ಹೋಗುತ್ತೆಲ್ಲ?" ಎಂದು ಗೋಳಿಟ್ಟನು. ಸೀತಾಲಕ್ಷ್ಮಿಯು "ನನ್ನಲ್ಲಿ ಯಾವ ಔಷಧಿಯೂ ಇಲ್ಲವಲ್ಲ. ಆದರೆ, ಡಾಕ್ಟರು ಬರುವುದಿಲ್ಲವೆಂದಮೇಲೆ ನಾವಾದರೂ ಹೋಗಿ ನೋಡೋಣ. ಇಲ್ಲಿ ಕುಳಿತು ಮಾಡುವುದೇನು?" ಎಂದು ಹೇಳಿಕೊಂಡು, ಆಯುರ್ವೇದ ಪ್ರಾಣಾಚಾರ್ಯರು ಕೊಟ್ಟಿದ್ದ ಸರ್ವಸಂಜೀವಿನಿ ಎಂಬ ಔಷಧಿಯೊಂದನ್ನು ತೆಗೆದುಕೊಂಡು, ಮುದುಕನ ಜತೆ ಹೊರಟಳು. ಬೆಳಗಿನ ಎಂಟು ಗಂಟೆಯವರೆಗೆ, ನಾನಾ ಔಷಧಿ ಪ್ರಯೋಗ ಸಾಹಸಗಳಿಂದ ಮುದುಕನ ಮಗಳಿಗೆ ಜ್ಞಾನ ಬಂತು. ಸೀತಾಲಕ್ಷ್ಮಿ ತನಗೆ ತಿಳಿದಿದ್ದ ಕೆಲವು ಔಷಧಿಗಳನ್ನು ಮಾಡಿ, ಮುದುಕನನ್ನೂ ಮಗಳನ್ನೂ ಅವರ ಹಳ್ಳಿಗೆ ಹಿಂದಕ್ಕೆ

ಕಳುಹಿಸಿದಳು. ಬಾಣಂತಿಗೆ ಇನ್ನೇನು ಭಯವಿಲ್ಲವೆಂಬುದು ಆಕೆಗೆ ಖಾತರಿಯಾಯಿತು. ಈ ಅನುಭವದಿಂದ, ತನಗೆ ಪ್ರಾಣಾಚಾರ್ಯರ ಕೈಯ್ಯಲ್ಲಿ ಸರಿಯಾದ ಶಿಕ್ಷಣವಾಗಿದ್ದರೂ, ತಾನು ತಿಳಿಯಬೇಕಾದ ಅಂಶಗಳು ಇನ್ನೂ ಅನೇಕ ಇವೆ ಎಂಬುದು ಆಕೆಗೆ ಮನವಟ್ಟಾಯಿತು ಆದರೂ ತಾನು ಹಿಡಿದ ಮೊದಲನೆಯ ರೋಗಿ, ಇಷ್ಟಾದರೂ ಗುಣ ಹೊಂದಿದುದಕ್ಕೆ ಅವಳು ಮನಸ್ಸಿನಲ್ಲಿಯೇ ಭಗವಂತನನ್ನು ವಂದಿಸಿದಳು.

ತನ್ನ ಈ ಕಾರ್ಯದಿಂದ ಮೊದಲೇ ಅಧಿಕವಾಗಿದ್ದ ಶತ್ರುಗಳ ಸಂಖೆಗೆ, ಡಾಕ್ಟರೂ ಸೇರಿದರೆಂಬುದು. ಆಕೆಗೆ ತತ್‌ಕ್ಷಣ ಗೊತ್ತಾಗಲಿಲ್ಲ. ಸೀತಾಲಕ್ಷ್ಮಿ ನಡೆದ ಸಂಗತಿಯನ್ನು ಯಾರೊಂದಿಗೂ ಹೇಳಲಿಲ್ಲ. ಆದರೆ ಸಣ್ಣ ಹಳ್ಳಿಗಳಲ್ಲಿ ಇಂತಹ ವಿಷಯಗಳು ಬಹಳ ಬೇಗ ಹರಡುತ್ತವೆ. ಈ ಸಂದರ್ಭದಿಂದ ಮೊದಲೇ ಜನರಿಗೆ ಅಪ್ರಿಯರಾಗಿದ್ದ ಡಾಕ್ಟರು, ಇನ್ನೂ ಹೆಚ್ಚು ಅಪ್ರಿಯರಾದರು. "ಹಳ್ಳಿ ಹಳ್ಳಿಗಳಿಗೆ ನಡೆದುಕೊಂಡು ಹೋಗಿ ಔಷಧಿ ಕೊಡುವಂತಹ ಗತಿಗೆಟ್ಟ ಡಾಕ್ಟರು ನಾನಲ್ಲ. ನಾನು ನಾವಿರಾರು ರೂಪಾಯಿ ವೆಚ್ಚಮಾಡಿ ಐದು ಆರು ವರ್ಷ ಫೇಲ್ ಆಗಿ ವ್ಯಾಸಂಗಮಾಡಿದವಳು. ನನ್ನದು ಬರಿಯ ಆಳಲೆಕಾಯಿ ವೈದ್ಯವಲ್ಲ" ಎಂದಳು ಡಾಕ್ಟರು. ಜತೆಯಲ್ಲಿ ಸೀತಾಲಕ್ಷ್ಮಿಯ ಗುಣದೋಷಗಳ ವರ್ಣನೆಯೂ ಬರತೊಡಗಿತು. ಕೊನೆಯಲ್ಲಿ ಯಾರೂ ಹೇಳದೆಯೇ ಜನತೆ "ಡಾಕ್ಟರು ಧನಿಕರ ಡಾಕ್ಟರೆಂದೂ, ಸೀತಾಲಕ್ಷ್ಮಿ ಬಡವರ ಡಾಕ್ಟರೆಂದೂ" ತಾವೇ ತೀರ್ಮಾನಿಸಿಕೊಂಡರು. ಅಲ್ಲಿಂದ ಮುಂದೆ ಕಂಡಲ್ಲಿ ಸೀತಾಲಕ್ಷ್ಮಿಯನ್ನು ದೂಷಿಸುವುದೂ ಡಾಕ್ಟರ ಕೆಲಸಗಳಲ್ಲಿ ಒಂದಾಯಿತು. ಇಷ್ಟಾದರೂ ಆಕೆ ಮಾತ್ರ ತನ್ನ ನೆರವನ್ನು ಕಡಿಮೆ ಮಾಡಲಿಲ್ಲ. ಬಡವರಾದವರಿಗೂ ಕೈಯ್ಯಲ್ಲಿ ಹಣವು ಇಲ್ಲದವರಿಗೂ ಹಳ್ಳಿಯವರಿಗೂ, ಔಷಧಿ ಕೊಡುವ ಔದಾರ್ಯವನ್ನು ಹೊಂದಲಿಲ್ಲ.

ಪ್ರಾಥಮಿಕಶಾಲಾ ಸಂಗೀತ ಉಪಾಧ್ಯಾಯ ಕೇಶವಯ್ಯನ ಹೆಂಡತಿ ಪ್ರಸವಿಸಿದಾಗ, ಸರ್ಕಾರಿ ಡಾಕ್ಟರಿಗೂ ಸೀತಾಲಕ್ಷ್ಮಿಗೂ ಇದ್ದ ವ್ಯತ್ಯಾಸ ಶಿಖರವನ್ನು ಮುಟ್ಟಿತು. ಕೇಶವಯ್ಯನ ಹೆಂಡತಿ ಸರೋಜಮ್ಮ, ಆತನಿಗೆ ಮೂರನೆಯ ಹೆಂಡತಿ. ಕೇಶವಯ್ಯ ಹಣ್ಣು ಹಣ್ಣು ಮುದುಕನಾಗಿದ್ದರೂ ಇನ್ನೂ ಸರ್ಕಾರಿ ನೌಕರಿಯಿಂದ ನಿವೃತ್ತನಾಗಿರಲಿಲ್ಲ. ವಯಸ್ಸನ್ನು ಕಡಿಮೆ ಕೊಟ್ಟಿ

ದ್ದನೆಂದು ಕಾಣುತ್ತದೆ. ಅವನ ಕೈಕಾಲುಗಳು ತೆಳ್ಳಗೆ ಕಡ್ಡಿಯಂತಿದ್ದುವು. ಬೆನ್ನು ಪೂರ್ಣವಾಗಿ ಬಾಗಿತ್ತು. ತಲೆಯಲ್ಲಿ ಬಿಳಿಕೂದಲು ಸಹ ಒಂದೂ ಇಲ್ಲದೆ, ತಲೆ ಪೂರ್ಣವಾಗಿ ಬೋಳಾಗಿತ್ತು. ಅವನು ನಡೆಯುವಾಗ ಅವನ ಕಾಲುಗಳು ನಡುಗುತ್ತಿದ್ದುದನ್ನು ಕಂಡು ಜನ " ಇವನಿಗೆ ಮೊದಲು ಎರಡು ಕಂಬಳಿ ಹೊದೆಸಬೇಕೆಂದು " ಹೇಳುತ್ತಿದ್ದರು. ಆದರೆ, ಆತನ ಹೆಂಡತಿ ಸರೋಜಮ್ಮ ಇಪ್ಪತ್ತೈದು ವರುಷದ ಸುಂದರಿಯಾದ ಯುವತಿಯಾಗಿದ್ದಳು. ಕೇಶವಯ್ಯನನ್ನು, ಮಲ್ಲಿಗೆಹಳ್ಳಿಯಿಂದ ದೂರವಾದ ಮಲೆನಾಡು ಹಳ್ಳಿಗೆ ವರ್ಗಾಯಿಸಿಬಿಟ್ಟಿದ್ದರು. ಅಲ್ಲಿಂದ ಮಲ್ಲಿಗೆಹಳ್ಳಿಗೆ ರಸ್ತೆ ಇಲ್ಲದುದರಿಂದ, ಆತ ಅಲ್ಲಿ ಹೋಗಿ ನೌಕರಿ ವಹಿಸಿಕೊಂಡವನು, ಮಲ್ಲಿಗೆ ಹಳ್ಳಿಗೆ ತಿಂಗಳಿಗೆ ಎರಡು ತಿಂಗಳಿಗೆ ಒಮ್ಮೆ ಹಿಂದಿರುಗುತ್ತಿದ್ದನು. ಮಳೆಗಾಲವಾದುದರಿಂದ ಉಳಿದವೇಳೆ, ಅಲ್ಲಿಯೇ ಶಾನುಭೋಗರ ಮನೆಯಲ್ಲಿ ಊಟಮಾಡುತ್ತಾ ಆ ಹಳ್ಳಿಯಲ್ಲೇ ಇದ್ದನು. ತಿಂಗಳಿಗೆ ಒಂದು ಸಲ ಯಾರ ಕೈಯ್ಯಲ್ಲಾದರೂ ಹತ್ತು ಹದಿನೈದು ರೂಪಾಯಿ ಕಳುಹಿಸಿಬಿಡುತ್ತಿದ್ದನು. ಸರೋಜಮ್ಮನಿಗೂ ಸಂಗೀತದಲ್ಲಿ ಅಭಿರುಚಿ ಇತ್ತು. ಪಿಟೀಲು ನುಡಿಸುವುದನ್ನು ಅಭ್ಯಾಸಮಾಡಿದ್ದಳು. ಕೇಶ ವಯ್ಯನಿಗೆ ಆಗಲೇ ಸರೋಜಮ್ಮನಲ್ಲಿ ಇಬ್ಬರು ಮಕ್ಕಳಾಗಿದ್ದರು. ಆರು ವರುಷದ ಒಂದು ಹೆಣ್ಣು ಮೂರು ವರುಷದ ಗಂಡು. ಆ ಮಕ್ಕಳು ತಾಯಿಯ ರೂಪವನ್ನು ಹೊತ್ತು ಸುಂದರವಾಗಿ ಹಕ್ಕಿಗಳಂತೆ ನಲಿದಾಡುತ್ತಿದ್ದರು. ಸೀತಾ ಲಕ್ಷ್ಮಿಗೆ ಆ ಮಕ್ಕಳನ್ನು ಕಂಡರೆ ಯಾವಾಗಲೂ ವಿಶೇಷ ಪ್ರೀತಿ. ಆಕೆ ತನಗೆ ಅವಕಾಶವಾದಾಗಲೆಲ್ಲ ಸರೋಜಮ್ಮನ ಮನೆಗೆ ಹೋಗಿ ಮಕ್ಕ ಳೊಂದಿಗೆ ಆಟವಾಡುವಳು. ಮಕ್ಕಳಿಗೆ ಮುಕುಂದಮಾಲೆ, ಸ್ತೋತ್ರರತ್ನ, ಭಜಗೋವಿಂದಗಳನ್ನು ಹೇಳಿಕೊಡಲು ಪ್ರಯತ್ನಿಸುವಳು. ಸರೋಜಮ್ಮ ನಿಗೆ ಪಿಟೀಲು ಹೇಳಿಕೊಡುವಳು ಸರೋಜಮ್ಮ, ಸೀತಾಲಕ್ಷ್ಮಿ, ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯನಿ ಕಮಲಮ್ಮ, ಇವರು ಮೂವರು ಸಾಧಾ ರಣವಾಗಿ ಸರೋಜಮ್ಮನ ಮನೆಯಲ್ಲಿ, ನಿತ್ಯ ಸಂಧ್ಯಾಕಾಲ ಒಂದುಗಳಿಗೆ ಸೇರುತ್ತಿದ್ದರು. ಅವರೆಲ್ಲರಿಗೂ ಸಂಗೀತಪ್ರೀತಿಯ ಸಾಮಾನ್ಯ ಕುತೂಹಲ ವಿದ್ದುದರಿಂದ, ಇತರರೊಂದಿಗೆ ಸೇರಲು ಅವರಿಗೆ ಕಾರಣವೂ ಅವಕಾಶವೂ ಇರಲಿಲ್ಲ ಆದರೆ ಹಳ್ಳಿಯ ಜನದ ನಾಲಗೆ ಬಹಳ ಕೆಟ್ಟದ್ದು. ಕೆಲಸವಿಲ್ಲ

ದವರಿಗೆ ಇತರರ ವಿಚಾರವನ್ನು ಮಾತನಾಡುವುದೇ ಕೆಲಸ. ಯುವತಿಯಾದ ಸರೋಜಮ್ಮ ಗರ್ಭಿಣಿಯಾಗಿದ್ದುದೇ ಕೆಲವರಿಗೆ ಆಕೆಯ ತಪ್ಪಾಗಿ ಕಂಡಿತು. "ಗಂಡ ಮುದುಕ ಊರನ್ನೇ ಸೇರುವುದಿಲ್ಲ. ಇವಳು ಮಾತ್ರ ಗರ್ಭಿಣಿ" ಇಂತಹ ಮಾತು ಒಂದು ಸಲ ಮೊದಲು ಹೊರಟರೆ ಅನಂತರ ಸತ್ಯ ಅದರ ಬೆನ್ನು ಹತ್ತಿದರೂ ಸುಳ್ಳು ಮುಂದಾಗುತ್ತವೆ. ಅನಂತರ ಅಂತಹ ಮಾತುಗಳಿಗೆ ಕೈಕಾಲು ಹುಟ್ಟಿಕೊಳ್ಳುತ್ತದೆ. ಇವಳ ಮನೆಗೆ ಬರುತ್ತಿರುವವರು ಯಾರು? ಇವಳ ಅನುಕೂಲ ಅನಾನುಕೂಲ ಹೇಗಿದೆ?" ಹೀಗೆ ಒಬ್ಬರ ಬಾಯಿನಿಂದ ಒಬ್ಬರ ಬಾಯಿಗೆ ಮಾತು ಬಿದ್ದು, ಕೊನೆಗೆ ಅದು ಖಂಡಿತವೇ ಆಗಿಬಿಡುತ್ತದೆ.

ಸರೋಜಮ್ಮನ ವಿಷಯದಲ್ಲಿಯೂ ಹಾಗೆಯೇ ಆಗಿಬಿಟ್ಟಿತು. ಆಕೆಯ ತಲೆಗೂ ಊರವರು ವ್ಯಭಿಚಾರದ ದೂರು ಹೊರಿಸಿದರು. ಗಂಡನಿಲ್ಲದೆ ಗರ್ಭಿಣಿಯಾದವಳೆಂದರು. ತಮ್ಮ ಅತೃಪ್ತಿಯನ್ನು ಸೂಚಿಸುವ ಅತ್ಯಂತ ಕ್ರೂರವಾದ ಮಾರ್ಗ, ಹಳ್ಳಿಯವರಿಗೆ ಗೊತ್ತು. ಅದು ಗಟ್ಟಿಯಾಗಿ ಬಯ್ಯುವುದಲ್ಲ. ಇತರರೊಂದಿಗೆ ಸರೋಜಮ್ಮನನ್ನು ದೂರುವುದೂ ಅಲ್ಲ. ಮೌನವಾಗಿ ಸರೋಜಮ್ಮನನ್ನು ಎಲ್ಲರೂ ಬಹಿಷ್ಕರಿಸುವುದೂ, ಅವಳ ಮನೆಗೆ ಹೋಗದಿರುವುದೂ, ಅವಳನ್ನು ಕಂಡರೂ ಕಾಣದಂತೆ ಹೋಗುವುದು, ಆರತಿ ಅಕ್ಷತೆಗಳಿಗೆ ಅವಳನ್ನು ಕರೆಯದಿರುವುದು, ನದಿಗೆ ಅವಳು ಬಂದರೆ, ತಾವು ಆಡಿಕೊಳ್ಳುತ್ತಿರುವ ಮಾತುಗಳನ್ನು ತಟಕ್ಕನೆ ನಿಲ್ಲಿಸಿಬಿಡುವುದು, ಅವಳು ಬಟ್ಟೆ ಒಗೆದ ನೀರು ಹಾರಿತೆಂದು ಅವಳನ್ನು ಆಕ್ಷೇಪಿಸದೆ, ಮೌನವಾಗಿ ಮತ್ತೆ ಸ್ನಾನಮಾಡುವುದು, ಸರೋಜಮ್ಮ ಇಳಿದುಕೊಂಡಿದ್ದ ಸ್ಥಳವನ್ನು ಬಿಟ್ಟು ದೂರವಾಗಿ ಹೋಗಿ ಇಳಿದುಕೊಳ್ಳುವುದು. ದೇವಸ್ಥಾನಕ್ಕೆ ಆಕೆ ಬಂದರೆ ಎಲ್ಲರೂ ಆಕೆಯನ್ನು ಒಂಟಿಮಾಡುವುದು; ಆಕೆಯ ಮಕ್ಕಳು ಮನೆಗೆ ಬಂದರೆ ಅವರನ್ನು ಬೈದು ಓಡಿಸುವುದು. ಒಂದೇ ತಿಂಗಳಿನಲ್ಲಿ ಸರೋಜಮ್ಮ ಊರವರ ಮಧ್ಯದಲ್ಲಿದ್ದರೂ ಒಂಟಿಯೂ ಅನಾಥೆಯೂ ಆದಳು.

ಅಂತೂ ಕೇಶವಯ್ಯನ ಹೆಂಡತಿ ಸರೋಜಮ್ಮ, ಪ್ರಸವಿಸಿದಾಗ, ಊರವರೊಬ್ಬರೂ ಆಕೆಯ ಸಹಾಯಕ್ಕೆ ಹೋಗಲಿಲ್ಲ. ಸರೋಜಮ್ಮನಿಗೆ ಮನೆಯಲ್ಲಿ ಸಹಾಯಕ್ಕೆ ತಾಯಿ ತಂದೆ ಯಾರೂ ಇರಲಿಲ್ಲ. ಜತೆಗೆ ಮಕ್ಕಳು ಬೇರೆ.

ಸರೋಜಮ್ಮನಿಗೆ ಹೊಟ್ಟೆಗಿಲ್ಲದ ಸಂಕಟದ ಜತೆಗೆ, ಉಪಚಾರಮಾಡುವವರಿಲ್ಲದ ಹಿಂಸೆಯ ಜತೆಗೆ, ಜನತೆಯ ಅಸಹನೆಯ ಶೂಲವೂ ಇರಿಯುತ್ತಿತ್ತು. ಅವಳದು ತಪ್ಪು ಎಂದು ತಪ್ಪು ತೀರ್ಮಾನಿಸಿ, ಅವಳನ್ನು ಕಟು ಟೀಕೆಯ ಕ್ರೂರ ದೃಷ್ಟಿಯಿಂದ ನೋಡುತ್ತಿದ್ದ ಆ ಜನತೆಯಲ್ಲಿ ಒಬ್ಬರಾದರೂ, ಆಕೆಗೆ ಹೊಟ್ಟೆಗಿದೆಯೋ ಎಂದು ಕೂಡ ವಿಚಾರಿಸಲಿಲ್ಲ. ಉಳಿದ ಸಂಗತಿಗಳು ಹೇಗಾದರೂ ಇರಲಿ. ವೈದ್ಯೋಪಚಾರಮಾಡುವುದು ಡಾಕ್ಟರರ ಕರ್ತವ್ಯ. ಪ್ರಸವವೇದನೆಯೆಂದು, ಬಂದು ನೋಡಬೇಕೆಂದು ಸರೋಜಮ್ಮನ ಪರವಾಗಿ ಕಮಲಮ್ಮ ಹೇಳಿ ಕಳುಹಿಸಿದರೂ, ಡಾಕ್ಟರು ಹೋಗಲೇ ಇಲ್ಲ ಎಲ್ಲರಿಗೂ ಕೇಳಿಸುವಂತೆಯೇ "ಆ ಮಹಾಪತಿವ್ರತೆಯ ಸುಖ ಪ್ರಸವಕ್ಕೆ ನಾನು ಬರಬೇಕಲ್ಲವೆ? ಪಾಪ ಮಕ್ಕಳಾಗಲಿಲ್ಲ ಅಂತ ಆ ಗಂಡ ಅಲ್ಲಿ ಅಳ್ತಾ ಇದಾನೆ, ಅಲ್ಲವೆ ?" ಎಂದಳು. ಮತ್ತೊಂದು ಸಲ "ಆ ಪ್ರೈಮರಿ ಮೇಷ್ಟ್ರು ಇನ್ನು ಬಂದು ಮೊಗುವನ್ನ ಮುದ್ದಾಡೋಕೆ ನಾನು "ಮಿಡ್‌ವೈಫ್ ಆಗಬೇಕಲ್ಲವೆ? ಇದ್ದಾಳೆಲ್ಲ ಆ ಚಿನ್ನಾಲಿ ಚಿತ್ರಾಂಗದೆ ಹೊಸ ಡಾಕ್ಟರು ಸೀತಾಲಕ್ಷ್ಮಿ. ಅವಳಿಗೆ ಇಂತಹ ವಿಷಯಗಳಲ್ಲಿ ಅನುಭವ" ಎಂದು ಬಾಯಿಗೆ ಬಂದಂತೆ ಬೈದಳು.

ಸೀತಾಲಕ್ಷ್ಮಿ ಏನೋ ಸಿದ್ಧಳಾಗಿಯೇ ಇದ್ದಳು. ಆದರೆ ಅವಳಿಗೆ ತನಗೆ ಇನ್ನೂ ಅನುಭವ ಸಾಲದೆಂಬ ಭಯವಿತ್ತು. ಸೇವೆಮಾಡಲು ಅವಳು ಸ್ವಲ್ಪವೂ ಹಿಂದೆಗೆಯುತ್ತಿರಲಿಲ್ಲ ಸರೋಜಮ್ಮ ಪ್ರಸವಿಸುವುದಕ್ಕೆ ಎಂಟು ದಿನ ಮುಂಚಿನಿಂದಲೇ, ಮನೆಯಲ್ಲಿ ಅಡಿಗೆ, ಮಕ್ಕಳ ಪೋಷಣೆ ಜವಾಬ್ದಾರಿಯನ್ನೆಲ್ಲ ಸೀತಾಲಕ್ಷ್ಮಿ ವಹಿಸಿಕೊಂಡಿದ್ದಳು. ಇಲ್ಲದಿದ್ದರೆ ಸರೋಜಮ್ಮನಾಗಲೀ ಮಕ್ಕಳಾಗಲೀ ಅನ್ನ ಕಾಣುವ ಅಥವ ಜೀವದಿಂದಿರುವ ಆಸೆಯೇ ಇರಲಿಲ್ಲ. ಸರೋಜಮ್ಮನ ಮನೆಯಲ್ಲಿ ಒಂದು ಕಾಳು ಧಾನ್ಯವೂ ಇರಲಿಲ್ಲ. ಒಂದು ಕಾಸೂ ಇರಲಿಲ್ಲ. ಮಾಡುವವರೂ ಇರಲಿಲ್ಲ, ಅವಳಷ್ಟು ಕರುಣೆಗೆ ಪಾತ್ರಳೂ ಅನಾಥಳೂ ಸೀತಾಲಕ್ಷ್ಮಿಗೆ ಮತ್ತಾರೂ ತೋರಲಿಲ್ಲ. ಪಾಠಶಾಲೆಯ ಮುಖ್ಯೋಪಾಧ್ಯಾಯಿನಿ ಕಮಲಮ್ಮ, ಯಾರೂ ಹೇಳದೆಯೇ ಸರೋಜಮ್ಮನ ಮನೆಗೆ ಬೇಕಾಗುವ ಸಾಮಾನುಗಳನ್ನು ಕಳುಹಿಸುವ ಜವಾಬ್ದಾರಿ ಹೊತ್ತಳು. ಸೀತಾಲಕ್ಷ್ಮಿ, ಸರೋಜಮ್ಮನ ಮನೆಯಲ್ಲಿ ಅಡಿಗೆ ಕೆಲಸಮಾಡುತ್ತಾ, ಆಕೆಗೂ ಮಕ್ಕಳಿಗೂ ಅನ್ನ ಕಾಣಿಸಿ, ಅವರ ಪ್ರಾಣ ಉಳಿಸಿದಳು. ಸೀತಾಲಕ್ಷ್ಮಿಯ

ಈ ಕಾರ್ಯದಿಂದಲೂ ಸಹ ಊರವರಿಗೆ ಅವಳ ಮೇಲಿದ್ದ ಅಸಮಾಧಾನ ಇನ್ನೂ ಹೆಚ್ಚೇ ಆಯಿತು. ಕಮಲಮ್ಮ ಮಾತ್ರ “ ಹೆಣ್ಣು ಗಂಡು ಒಬ್ಬರಿಗಾಗಲೀ ಹೃದಯದಲ್ಲಿ ಸ್ವಲ್ಪವಾದರೂ ಕರುಣೆ ಇಲ್ಲವಲ್ಲ ? ” ಎಂದು ಊರವರನ್ನು ಕುರಿತು ಪಶ್ಚಾತ್ತಾಪ ಪಡುತ್ತಿದ್ದಳು. ಬೀದಿಯಲ್ಲಿ ಮಕ್ಕಳು ಮಾತನಾಡುತ್ತಾ ಸರೋಜಮ್ಮನ ಮಗಳನ್ನು ದೇವಸ್ಥಾನಕ್ಕೆ ಕರೆದಾಗ, ಆ ಹುಡುಗಿ “ ನಮ್ಮ ತಾಯಿ ಹೇಳುತ್ತಾರೆ. ನಮ್ಮ ದೇವರು ಗುಡಿಯಲಿಲ್ಲವಂತೆ. ಸೀತಾಲಕ್ಷ್ಮಿಯೇ ನಮ್ಮ ದೇವರಂತೆ ” ಎಂದಳು. ಈ ಮಾತು ಕಿವಿಗೆ ಬಿದ್ದಾಗ, ದಯಾಶೂನ್ಯರಾದ ಕೆಲವು ಆಸ್ತಿಕರಿಗಂತೂ ಚೇಳು ಕುಟುಕಿದಂತೆ ಆಯಿತು. ಅಂತೂ ಸೀತಾಲಕ್ಷ್ಮಿ ಸರೋಜಮ್ಮನ ಮನೆಯಲ್ಲಿ ಮೂರು ತಿಂಗಳು ಅಡಿಗೆಮಾಡಿ ಮಕ್ಕಳನ್ನು ಸಾಕಿ, ಆಕೆಯ ಬಾಣಂತನವನ್ನು ನಿಭಾಯಿಸಿಬಿಟ್ಟಳು. ಯಾರಿಗೂ ಬೇಕಾಗದ ತಾನು, ಸರೋಜಮ್ಮನಿಗಾದರೂ ಬೇಕಾದೆನೆಲ್ಲ ಎಂದು ಆಕೆಗೆ ಸಮಾಧಾನವೇ ಆಯಿತು.

ವೈದ್ಯಕಾರ್ಯದಲ್ಲಿ ದಯಯೇ ಮುಖ್ಯ. ಆದರೆ ವೈದ್ಯರ ಮಿತಿಮೀರಿದ ಧನದ ಆಸೆ, ಉತ್ಪತ್ತಿಗಿಂತ .ವೆಚ್ಚವನ್ನು ಹೆಚ್ಚುಮಾಡಿಕೊಳ್ಳುವ ಅವರ ನಾಗರಿಕತೆ, ಷೋಕಿ ಇವುಗಳಿಂದ, ಅವರ ಹೃದಯದ ದಯೆಯ ಸಲೆ ಬತ್ತಿ ಹೋಗಿ, ಅವರು ಬರಿಯ ಹಣಸಂಪಾದನೆಯ ಯಂತ್ರವಾಗುತ್ತಾರೆ. ಅವರಲ್ಲಿಯ ಮನುಷ್ಯತ್ವ ಪೂರ್ಣವಾಗಿ ನಾಶವಾಗಿಬಿಡುತ್ತದೆ. ಮಲ್ಲಿಗೆಹಳ್ಳಿಯ ಹೆಣ್ಣು ಡಾಕ್ಟರರ ಅವಸ್ಥೆಯೂ ಹೀಗೆಯೇ ಆಯಿತು.

ಸೀತಾಲಕ್ಷ್ಮಿಯ ಪ್ರಭಾವ ಹೆಚ್ಚುತ್ತಾ ಬಂದಂತೆಲ್ಲ, ಡಾಕ್ಟರಿಗೆ ಅವಳ ಮೇಲೆ ಅಸೂಯೆ ಹೆಚ್ಚಾಯಿತು. ಆದರೆ, ಸೀತಾಲಕ್ಷ್ಮಿ ಅದಾವುದನ್ನು ಪ್ರತಿಭಟಿಸಲೇ ಇಲ್ಲ. ಒಂದೊಂದು ಹಳ್ಳಿಯ ಕುಟುಂಬದಲ್ಲಿ ಹೋಗಿ ಕೆಲಸ ಮಾಡಿ ಹಿಂದಿರುಗಿದಾಗಲೂ, ಆಕೆಯ ಮನಸ್ಸಿಗೆ ತನ್ನಿಂದ ಇಷ್ಟಾದರೂ ಉಪಕಾರವಾಯಿತೆಲ್ಲ, ಎಂಬ ಅನಿರ್ವಚನೀಯವಾದ ಆನಂದವುಂಟಾಗುತ್ತಿದ್ದಿತು. ತಾನು ಯಾರ ಸೇವೆಗಾಗಿ ಹೋಗುತ್ತಿದ್ದಳೋ ಅವರು, ತನಗೆ ಸೇವೆಗೆ ಅವಕಾಶಕೊಡುತ್ತಿದ್ದುದೇ, ತನ್ನ ಜನ್ಮದ ಸಾರ್ಥಕ್ಯವೆಂದು ಆಕೆ ಭಾವಿಸಿದಳು. ಆರು ತಿಂಗಳು ಕಳೆಯುವುದರೊಳಗಾಗಿ ಮಲ್ಲಿಗೆಹಳ್ಳಿಯ ಸುತ್ತ ಮುತ್ತಲಿನ ರೈತರೆಲ್ಲ, ಆಕೆಯನ್ನು ತಮ್ಮ ಹಿರಿಯ ಹಿತೈಷಿಯೆಂದು ಭಾವಿಸಿ

ದರು. ಆಕೆ, ಪ್ರಸವವನ್ನು ನೋಡುವುದಕ್ಕೆ ಹಳ್ಳಿಗಳಿಗೆ ಹೋಗುತ್ತಿರುವಾಗ, ದಾರಿಯಲ್ಲಿ ರೈತರೆಲ್ಲ ಅವಳನ್ನು ಕಂಡಕೂಡಲೇ ನಮಸ್ಕರಿಸಿ, ಪ್ರೀತಿಯ ನಗೆಯನ್ನು ಸೂಸುತ್ತಿದ್ದಳು. ತಾನು ಜಗತ್ತಿಗೇ ಬೇಡವಾಗಿದ್ದವಳೆಂದು ಭಾವಿಸಿಕೊಂಡಿದ್ದ ಆಕೆಗೆ, ಹೊಸ ಒಂದು ಪ್ರೀತಿಯ ಪ್ರಪಂಚಕ್ಕೆ ಪ್ರವೇಶವಾದ ಭಾವನೆಯುಂಟಾಯಿತು.

ಆ ಯುಗಾದಿಯ ದಿನ, ಕಮಲಮ್ಮ, ಸೀತಾಲಕ್ಷ್ಮಿಯನ್ನು ತನ್ನ ಮನೆಗೆ ಊಟಕ್ಕೆ ಬರಹೇಳಿದ್ದಳು. ಬೆಳಗಿನ ಸುಮಾರು ಹನ್ನೊಂದು ಗಂಟೆ ಆಗಿತ್ತು. ಕಮಲಮ್ಮ ಅಡಿಗೆ ಕಾರ್ಯದಲ್ಲಿ ತೊಡಗಿದ್ದಳು. ಸೀತಾಲಕ್ಷ್ಮಿ ಪಿಟೀಲು ಬಾರಿಸುತ್ತಿದ್ದಳು. ಈಚೆಗೆ ಆ ವಿನೋದಕ್ಕೆ ಅವಳಿಗೆ ಅವಕಾಶವೇ ಇರಲಿಲ್ಲ. ಅಡಿಗೆ ಕಾರ್ಯದಲ್ಲಿ ಜಾಣಳಾದ ಕಮಲಮ್ಮ ಮಾಡುತ್ತಿದ್ದ ರುಚಿರುಚಿಯಾದ ಪದಾರ್ಥಗಳ ವಾಸನೆಯನ್ನು ಆಘ್ರಾಣಿಸುತ್ತಾ, ಸೀತಾಲಕ್ಷ್ಮಿ ಮುಂದಲ ಒಳ್ಳೆಯ ಊಟದ ಆನಂದದಲ್ಲಿ ರಾಗಾಲಾಪನೆಯಲ್ಲಿ ತೊಡಗಿದ್ದಳು. ಆಗ ಹೊರಗಡೆಯ ಬಾಗಿಲಿನಲ್ಲಿ ಒಬ್ಬನು ಅಮ್ಮಾ ಎಂದು ಕೂಗಿದನು. ಅದು ಬಿಕ್ಷಕನ ಧ್ವನಿಯಲ್ಲದಿದ್ದರೂ, ಆರ್ತನಾದವೆಂಬುದು, ಅದನ್ನು ಕೇಳಿದ ಕೂಡಲೇ ಸೀತಾಲಕ್ಷ್ಮಿಗೆ ಗೊತ್ತಾಯಿತು. ಅವಳು ಗಾಬರಿಯಿಂದಲೇ ಬಾಗಿಲಿಗೆ ಹೋಗಿನೋಡಿದಳು. ಬಾಗಿಲಿನಲ್ಲಿ ಒಬ್ಬ ರೈತ ನಿಂತಿದ್ದ. "ಅಮ್ಮಾ ಬೇಗ ಬರಬೇಕು. ನನ್ನ ಮಗಳು ಗರ್ಭಿಣಿ ದಿನ ತುಂಬಯ್ತೆ. ರಾಗಿ ಗುಡ್ಡೆ ಮೇಲಿಂದ ಹುಲ್ಲು ತೆಗೆದುಕೊಡುತ್ತಿದ್ದಳು. ತಲೆ ತಿರುಗಿ ಕೆಳಗೆ ಬಿದ್ದು ಬಿಟ್ಟಳು.' ಜ್ಞಾನವೇ ಇಲ್ಲ. ಹೊಟ್ಟೆ ಬುರುಬುರನೆ ಊದಿಕೊಂಡಿದೆ" ಎಂದನು. ಆ ವೇಳೆಗೆ ಒಳಗಿನಿಂದ ಬಂದ ಕಮಲಮ್ಮ ಸಿಟ್ಟಿನಿಂದ "ಹಬ್ಬದ ದಿನವೂ ನಿಮ್ಮ ಕಾಟದಿಂದ ಬಿಡುಗಡೆ ಇಲ್ಲ. ಆ ಹುಡುಗಿ ಒಂದು ತುತ್ತು ಅನ್ನ ಸುಖವಾಗಿ ತಿನ್ನೋದಕ್ಕೆ ಇಲ್ಲ. ನಮ್ಮ ಜನದಲ್ಲಿ ಒಳ್ಳೆರಾಗಿರೋದೆ ತಪ್ಪು. ಅವರನ್ನು ನಾಶಮಾಡಿಬಿಡ್ತೀರಿ" ಎಂದು ಗದರಿಸಿದಳು. "ಹೋಗಿ ಆ ಸರ್ಕಾರಿ ಸಂಬಳ ತಿಂದ್ಕೊಂಡು ದಿನ ದಿನಕ್ಕೆ ಹೆಗ್ಗಣದಂತೆ ಮೈ ಬೆಳಸಿಕೊಳ್ಳೊ ಡಾಕ್ಟರಮ್ಮನನ್ನು ಕರ್ಕೊಂಡು ಹೋಗು" ಎಂದಳು. ರೈತನು ಪದ್ಧತಿಯಂತೆ "ಡಾಕ್ಟರಮ್ಮ ನಂಗೇ ಹುಷಾರಿಲ್ಲ ಅಂದಳವ್ವ. ನಮ್ಮಂತ ಬಡವರಿಗೆ ಆ ಯಮ್ಮ ಬರ್ತಾಳಾ? ನಿಮ್ಮವಮ್ಮಯ್ಯ ಇಕೊ! ನಿಮ್ಮ ಪಾದ

ಹೊರ್ತೀನೆ. ಈಗ ನೀವೇ ನನ್ನ ದೇವರು, ದಯಮಾಡಿ ಅವ್ವ" ಎಂದು ಅಂಗಲಾಚಿದನು. ಅಂತಹ ದೈನ್ಯ ಧ್ವನಿಯನ್ನು ತಿರಸ್ಕರಿಸುವುದು ಸೀತಾಲಕ್ಷ್ಮಿಗೆ ಎಂದಿಗೂ ಸಾಧ್ಯವಿರಲಿಲ್ಲ. ಆಕೆಯು ಕಮಲಮ್ಮನಿಗೆ "ಅಮ್ಮಾ ಹೋಗಿ ಬರುತ್ತೇನೆ. ಪಾಪ ಆ ಹುಡುಗಿ ಬಡಪಾಯಿ ಎಷ್ಟು ಸಂಕಟಪಡುತಿದೆಯೊ?" ಎಂದು ಹೊರಟೇಬಿಟ್ಟಳು. ಕಮಲಮ್ಮ "ಬಿಸಿಲು ತಲೆ ಸಿಡಿಯುತ್ತೆ ಊಟವಾದರೂ ಮಾಡಿಬಿಟ್ಟು ಹೋಗಮ್ಮ" ಎಂದಳು. ರೈತನ ಕಡೆ ತಿರುಗಿ ಕೋಪದಿಂದ "ಗಾಡಿ ತರೋಕೆ ನಿನಗೇನು ರೋಗ. ಈ ಬಿಸಿಲಿನಲ್ಲಿ ಈ ಮಗು ಹೇಗೆ ನಡೆಯುತ್ತಾಳೆ? ಎಷ್ಟು ಮೈಲಿ ಇಲ್ಲಿಗೆ?" ಎಂದು ಒಂದೇ ಸಮನೆ ಪ್ರಶ್ನೆಗಳ ಮಳೆಗರೆದಳು. ರೈತ ಆ ಕೇಳಿಕೆಗಳ ಘರ್ಜನೆಗೆ ಹೆದರಿದನು. "ತಾಯಿ ಗಾಡಿ ಎತ್ತು ನನ್ನಲ್ಲಿ ಇಲ್ಲ" ಎಂದನು. ಕಮಲಮ್ಮ "ಇಲ್ಲ. ಸ್ಟೇಷನ ಹತ್ತಿರ ಎತ್ತು ಇಲ್ಲವಂತೆ! ಹಾಗಾದರೆ ಇನ್ನೇನಿದೆ? ಬಸ್ ಲಾರಿ ಇದೆಯೊ? ಹೂ, ಎತ್ತಿಲ್ಲದೆ ಬೇಸಾಯ ಹೇಗೆ ಮಾಡ್ತಿಯ?" ಎಂದಳು. ರೈತನು ಒಂದು ಗಳಿಗೆ ಅವಳನ್ನು ಕನಿಕರದಿಂದ ನೋಡಿ "ತಾಯಿ ಯಾವುದೊ ಒಂದು ಬಡಕಲು ಹಸುವಿನಲ್ಲಿ ಉಳ್ತ ಇದೀವಿ ಈಗ ಮನುಷ್ಯರನ್ನೇ ನೇಗಲಿಗೆ ಕಟ್ಟಬೇಕಾಗಿದೆ. ಹರತೆ ಕೆಲಸವನ್ನೆಲ್ಲ ಮನುಷ್ಯರನ್ನು ನೇಗಿಲಿಗೆ ಕಟ್ಟಿಯೇ ಮಾಡಿಸುತ್ತಿದ್ದೇವೆ, ದನ್ನೆ ನಸ ಇಲ್ಲ ನಮ್ಮ ಹಳ್ಳಿಗೆ" ಎಂದನು. ಅವನ ಮಾತು ಹಗುರವಾಗಿ ಕಂಡರೂ, ಅದು ನಿಜವೆಂಬುದರಲ್ಲಿ ಸೀತಾಲಕ್ಷ್ಮಿಗೂ ಕಮಲಮ್ಮನಿಗೂ ಅನುಮಾನ ಬರಲಿಲ್ಲ ಕಮಲಮ್ಮ ಮತ್ತೆ "ಈಗ ಎಷ್ಟು ಮೈಲಿ ನಡೆಯಬೇಕು ಹಾಗಾದರೆ?" ಎಂದಳು. ರೈತನು "ಹಳ್ಳಿ ಇಲ್ಲಿಗೆ ನಾಲ್ಕು ಮೈಲಿ. ಆಚೆಗೆ ಹೊಲ ಸ್ವಲ್ಪ ದೂರ" ಎಂದನು. ಸೀತಾಲಕ್ಷ್ಮಿಯು ಗಾಬರಿಯಿಂದ "ಅಯ್ಯೋ ನೀನು ಇಲ್ಲಿಗೆ ಬರುವವೇಳೆಗೇ ಏನಾಗಿದೆಯೊ? ನಾವು ಮಾತನಾಡುತ್ತ ಕಾಲ ಕಳೆದುಬಿಟ್ಟೆವು. ಹೊರಡು ಹೊರಡು" ಎಂದು ಹೊರಟೇಬಿಟ್ಟಳು. ಕಮಲಮ್ಮ "ಊಟ ಮಾಡಿಬಿಟ್ಟು ಹೋಗು. ಅಲ್ಲಿಂದ ಬರುವುದು ಎಷ್ಟು ಹೊತ್ತೋ? ಎಂದು ಬಲಾತ್ಕರಿಸಿದುದು ಸೀತಾಲಕ್ಷ್ಮಿಯ ಕಿವಿಗೆ ಬೀಳಲೇ ಇಲ್ಲ.

ಸೀತಾಲಕ್ಷ್ಮಿ ರೈತನೊಂದಿಗೆ ಉರಿಬಿಸಿಲಿನಲ್ಲಿ ಸುಮಾರು ಎರಡು ಗಂಟೆಳ ಕಾಲ ನಡೆದು, ಹಳ್ಳಿಯನ್ನು ದಾಟಿ ಹೊಲವನ್ನು ಸೇರಿದಳು. ಹೊಲವಲ್ಲಿ

ರೈತನ ಹೆಂಡತಿಯೊಬ್ಬಳೇ ಕುಳಿತು, ಮೂರ್ಛೆಬಿದ್ದಿದ್ದ ಹುಡುಗಿಗೆ ಗಾಳಿ ಹಾಕುತ್ತಿದ್ದಳು. ಪ್ರಖರವಾದ ಮಧ್ಯಾಹ್ನದ ಬಿಸಿಲು ಹುಡುಗಿಯ ಮುಖದ ಮೇಲೆ ಬೀಳದಂತೆ ಒಂದು ಗಳುವಿಗೆ ಒಂದು ಹರಕಲು ಈಚಲು ಚಾಪೆ ಕಟ್ಟಿದ್ದರು ಆದರೂ ಬಿಸಿಲು ಹುಡುಗಿಗೆ ಮುಟ್ಟಿಸುತ್ತಿತ್ತು. ಎಲ್ಲಿಯೂ ಒಂದು ಬೊಗಸೆ ಅಗಲ ಸಹ ನೆಳಲು ಇರಲಿಲ್ಲ. ಸೀತಾಲಕ್ಷ್ಮಿ ಬಿಸಿಲಿನಲ್ಲಿಯೇ ನಿಂತು ಕೊಂಡು ರೋಗಿಯನ್ನು ಪರೀಕ್ಷಿಸಿದಳು. ತಾಯಿ ಬಿದ್ದ ರಭಸಕ್ಕೆ ಮಗು ಹೊಟ್ಟೆಯೊಳಗೆ ಸತ್ತಿತ್ತು. ಇನ್ನು ಅರ್ಧಗಂಟೆ ಉದಾಸೀನವಾಡಿದ್ದರೆ ತಾಯಿಯೂ ಸಾಯುತ್ತಿದ್ದಳು. ಸೀತಾಲಕ್ಷ್ಮಿ ಶೈತ್ಯೋಪಚಾರವಾಡಿ ತಾಯಿಗೆ ತಿಳಿವನ್ನುಂಟುಮಾಡಿದಳು.

ಶಸ್ತ್ರ ಚಿಕಿತ್ಸೆಮಾಡಿಯೇ ಮೊಗುವನ್ನು ತೆಗೆಯಬೇಕಾಗಿದ್ದಿತು. ಅಲ್ಲಿ ಏನು ಆಪರೇಶ್ ಥಿಯೇಟರೇ? ನರ್ಸ್‌ಗಳೇ? ಮೇಜು ಕುರ್ಚಿಗಳೇ? ಸರಿಯಾದ ಮರೆ ಸಹ ಇರಲಿಲ್ಲ. ಸೀತಾಲಕ್ಷ್ಮಿಯ ಬಳಿ ಆವಶ್ಯಕವಾದ ಶಸ್ತ್ರಗಳು ಸಹ ಇರಲಿಲ್ಲ. ಆದುದರಿಂದ ಅವಳು ಶಸ್ತ್ರವನ್ನು ಉಪಯೋಗಿಸದೆ ಉಪಾಯವಾಗಿ ಮೊಗುವನ್ನು ಈಚೆಗೆ ತೆಗೆದಳು. ಮಗುವನ್ನು ಹುಡುಗಿಯ ತಾಯಿಯ ಕೈಯಲ್ಲಿ ಕೊಟ್ಟಳು. ಅದು ಉಸಿರಾಡದಿದ್ದುದನ್ನು ಕಂಡು ತಾಯಿ ಅದನ್ನು ಒಂದು ಕಡೆ ಹುಲ್ಲಿನ ಗುಡ್ಡೆ ಮಗ್ಗುಲಲ್ಲಿ ಗೋಣಿಚೀಲದ ಮೇಲೆ ಇಟ್ಟಳು. ಮಗು ಇನ್ನೂ ಬೆಚ್ಚಗೆ ಇತ್ತು. ಅದು ಸತ್ತಿರಬಹುದೆಂದು ಅವಳು ಮೊದಲು ಊಹಿಸಿದರೂ ಮಗುವನ್ನು ನೋಡಿದಕೂಡಲೇ ಅದು ಇನ್ನೂ ಬದುಕಿರಬಹುದೆಂಬ ಆಸೆ ಅವಳಿಗೆ ಉಂಟಾಯಿತು. ಆದರೆ ಆಗ ಮಗುವಿನ ಕಡೆ ಗಮನ ಕೊಡಲು ಸೀತಾಲಕ್ಷ್ಮಿಗೆ ಹೊತ್ತಿರಲಿಲ್ಲ. ಮೊಗು ಈಚೆಗೆ ಬಂದ ಆಯಾಸದಿಂದ ತಾಯಿ ಮತ್ತೆ ಮೂರ್ಛಿತಳಾದಳು ಅವಳ ಉಪಚಾರವನ್ನು ಮೊದಲು ಮಾಡುವುದು ಸೀತಾಲಕ್ಷ್ಮಿಯ ಪ್ರಥಮ ಕರ್ತವ್ಯವಾಯಿತು. ಅವಳು ತಾಯಿಗೆ ಎಲ್ಲ ಉಪಚಾರವನ್ನುಮಾಡಿ ಅವಳು ಚೇತರಿಸಿಕೊಳ್ಳುತ್ತಿರುವುದನ್ನು ನೋಡಿ "ಮಗು ಎಲ್ಲಿ" ಎಂದು ಅಜ್ಜಿಯನ್ನು ಕೇಳಿದಳು, ಗೋಣೀಚೀಲದ ಮೇಲೆ ಕೊರಡಿನಂತೆ ಬಿದ್ದಿದ್ದ ಮಗುವನ್ನು ಅಜ್ಜಿ, ಅವಳಿಗೆ ತೋರಿಸಿದಳು. ಸೀತಾಲಕ್ಷ್ಮಿ ಮೊಗುವನ್ನು ತೆಗೆದುಕೊಂಡ ಅದರ ಕೈಕಾಲುಗಳನ್ನು ಚೆನ್ನಾಗಿ ಆಡಿಸಿದಳು. ಕಿವಿ ಮೂಗುಗಳನ್ನು ಊದಿದಳು. ಅಷ್ಟು ಹೊತ್ತಿಗೆ ಗೌಡ

ಬಿಸಿನೀರು ತಂದ, ಸೀತಾಲಕ್ಷ್ಮಿ ಮೊಗುವನ್ನು ಹತ್ತಾರು ಸಲ ಬಿಸಿನೀರಿನ ಮತ್ತು ತಣ್ಣೀರಿನ ಬಕೆಟ್‌ನಲ್ಲಿ ಆಡಿಸಿದಳು. ಹುಡುಗಿಯ ತಾಯಿ ಕನಿಕರ ದಿಂದ "ಸತ್ತು ಹೋಗಯ್ತೆ ಬಿಡಿ" ಎಂದಳು. ಸೀತಾಲಕ್ಷ್ಮಿ ಬಿಡಲಿಲ್ಲ. ಇನ್ನೂ 10—15 ನಿಮಿಷ ಉಪಚರಿಸುವುದರೊಳಗೆ ಮೊಗು ಕಿಟ್ಟೆಂದು ಕಿರಿಚಿತು. ಸೀತಾಲಕ್ಷ್ಮಿ ರೈತನಿಗೆ "ಇನ್ನು ಇಬ್ಬರಿಗೂ ಭಯವಿಲ್ಲ, ನಿಧಾನವಾಗಿ ಗಾಡಿ ತೆಗೆದುಕೊಂಡು ಇಬ್ಬರನ್ನು ಮನೆಗೆ ಕರೆದುಕೊಂಡು ಹೋಗಿ" ಎಂದು ಹೇಳಿ ತನ್ನ ಮನೆಗೆ ಹಿಂದಿರುಗಿದಳು.

ಮರುದಿನ ಬೆಳಗ್ಗೆ ಸೀತಾಲಕ್ಷ್ಮಿ ಸ್ನಾನಕ್ಕೆ ನದಿಗೆ ಹೋಗಿದ್ದಳು. ಅವಳ ಮನಸ್ಸೆಲ್ಲ ಮೊದಲ ದಿವಸ ತಾನು ಉಪಚರಿಸಿದ್ದ ರೋಗಿಯ ಮೇಲೆಯೇ ಇದ್ದಿತು. ಮಧ್ಯಾಹ್ನದ ಊಟಮಾಡಿಕೊಂಡು, ಮತ್ತೆ ತಾಯಿನ್ನೂ ಮಗುವನ್ನೂ ಹೋಗಿ ನೋಡಿಕೊಂಡು ಬರಬೇಕೆಂದು ಅವಳು ಯೋಚಿಸುತ್ತಾ, ಕಮಲಮ್ಮನ ಮನೆಗೆ ಬಂದಳು. ಅವಳು ಕೆಳಕ್ಕೆ ತನ್ನ ತಲೆಯಮೇಲಿನ ಕುಕ್ಕೆಯನ್ನಿಟ್ಟ ಕೂಡಲೇ, ಕಮಲಮ್ಮ ಸಮೀಪಕ್ಕೆ ಬಂದು ಅವಳ ಕೈಯ್ಯನ್ನು ಹಿಡಿದುಕೊಂಡು, "ಎಲ್ಲಿ ಕಣ್ಣುಮುಚ್ಚಿಕೊಂಡು ನನ್ನೊಂದಿಗೆ ಬಾ, ಮಾತನಾಡಬೇಡ" ಎಂದು ಹೇಳಿ ನಗುವಿನ ಗಂಭೀರತೆಯಿಂದ ನಡುಮನೆಗೆ ಹೋದಳು. ಅಲ್ಲಿ ಕಮಲಮ್ಮ ಹಳ್ಳಿಯವರಿಂದ ಬಂದಿದ್ದ ಕಾಣಿಕೆಗಳನ್ನೆಲ್ಲಾ ಸಾಲಾಗಿ ಜೋಡಿಸಿ ಇಟ್ಟಿದ್ದಳು. ನಾಲ್ಕಾರು ಸೌತೆಕಾಯಿ, ಒಳ್ಳೆ ರಸಬಾಳೆಗೊನೆ ಒಂದು—ಹಳ್ಳಿಯವರ ಪ್ರೇಮವೇ ಅದರ ಹೊಂಬಣ್ಣದ ಮೈಯಲ್ಲಿ ತುಂಬಿದ್ದ ಕಾಂತಿಯಾಗಿತ್ತು—ಒಂದು ಬೂದಗುಂಬಳಕಾಯಿ, ನಾಲ್ಕು ಜಲ್ಲೆ ಪಟಾಪಟಿ ಕಬ್ಬು ಒಂದು ಪೊಣ್ಣದಲ್ಲಿ ಬೆಲ್ಲ, ಪಪಾಯಹಣ್ಣು ; ಸೀತಾಲಕ್ಷ್ಮಿಗೆ ಎಲ್ಲಿಂದಾ ಎಲ್ಲಿಗೆ ನೋಡಿದರೂ ಎಲ್ಲೆಲ್ಲಿಯೂ ಸಮೃದ್ಧಿಯೇ ತೋರುತ್ತಿದ್ದಿತು. ಕೆಲವು ಕಾಣಿಕೆಗಳ ಜತೆಯಲ್ಲಿ ಒಂದೊಂದು ಚೀಟಿಯನ್ನು ಸಹ ಇಟ್ಟಿದ್ದರು. ಕಾಣಿಕೆ ಕಳುಹಿಸಿದವರ ಹೆಸರುಗಳು ಅದರಲ್ಲಿದ್ದವು, ಕೆಲವರು ಅಕ್ಷರಗಳನ್ನು ತಪ್ಪುತಪ್ಪಾಗಿ ಬರೆದಿದ್ದರು. ಕಾಣಿಕೆ ಎಂಬುದಕ್ಕೆ ಕೆಲವರು ಉಡುಗೊರೆ ಎಂದೇ ಬರೆದಿದ್ದರು. "ಯುಗಾದಿ ಹಬ್ಬಕ್ಕೆ ತಿಮ್ಮನ ಉಡುಗೊರೆ," "ನೀವು ಪ್ರಾಣವುಳಿಸಿದ ರಾಮಿಯ ಕಾಣಿಕೆ." "ನಿಮ್ಮ ದಯೆಯಿಂದ ಭೂಮಿಗೆ ಬಂದ ಚಿನ್ನನ, ತಾಯಿಯ ಕಾಣಿಕೆ" ಎಲ್ಲ ಕಾಣಿಕೆಗಳನ್ನೂ ನೋಡುತ್ತಾ ನೋಡು

ತ್ತಾ ಸೀತಾಲಕ್ಷ್ಮಿಗೆ ಹೃದಯ ತುಂಬಿ ಬಂದು ಆನಂದಭಾಷ್ಪ ಸುರಿಯಿತು. ಹಳ್ಳಿಯವರ ಅಕೃತ್ರಿಮ ಹೃದಯವನ್ನು ಕಂಡು ಆಕೆಗೆ ಅವರಲ್ಲಿ ಕೃತಜ್ಞತೆ ಉಂಟಾಯಿತು. ಕಮಲಮ್ಮನು "ನೆನ್ನೆ ನೀನು ಹೋಗಿದ್ದೆಯಲ್ಲ, ಆತ ಬಂಧಿದ್ದ. ಮಗು ತಾಯಿ ಆರೋಗ್ಯವಾಗಿದ್ದಾರಂತೆ. ಈ ಕಾಣಿಕೆ ತಂದವರೆಲ್ಲ ಅವನ ಜತೆಯಲ್ಲಿಯೇ ಬಂದವರು. ನೀನು "ಸತ್ತ ಮಗುವನ್ನೇ ಬದುಕಿಸಿದೆ" ಎಂದು ಎಲ್ಲರೂ ಹೇಳುತ್ತಿದ್ದಾರೆ. ನಿನ್ನ ಮಹಿಮೆ ಅಸಾಧ್ಯವಾಗಿ ಬೆಳೆಯುತ್ತಿದೆ" ಎಂದಳು. ಸೀತಾಲಕ್ಷ್ಮಿಯು "ಎಲ್ಲವೂ ದೇವರ ದಯ, ಸ್ವಲ್ಪ ಬುದ್ಧಿ ಉಪಯೋಗಿಸಿದರೆ ವಿಷಯಗಳು ತಾವಾಗಿಯೇ ತಿಳಿಯುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ವೈದ್ಯನಿಗೆ ರೋಗಿಯಲ್ಲಿ ಪ್ರೀತಿ ಇರಬೇಕು. ಅಣ್ಣತಮ್ಮಂದಿರ ಸೇವೆಗೆ, ದೇವರು ತನಗೆ ಇಂತಹ ಅವಕಾಶವನ್ನು ಕಲ್ಪಿಸಿದನಲ್ಲ, ಎಂಬ ಕೃತಜ್ಞತೆ ಆನಂದ ಇರಬೇಕು. ಅಂತಹವರಿಂದ ಮಾತ್ರ ನಿಜವಾದ ವೈದ್ಯಕಾರ್ಯ ಸಾಧ್ಯ. ನಾನೂ ದೀನಳು, ಈ ಬಡಪಾಯಿಗಳೂ ದೀನರೂ, ಆದುದರಿಂದ ನಮ್ಮಲ್ಲಿ ಒಬ್ಬರೊಂದಿಗೊಬ್ಬರಿಗೆ ಸ್ನೇಹ ಸ್ವಾಭಾವಿಕವಾದುದು. ಅದಿರಲಿ, ಈ ರೈತರ ಪ್ರೀತಿಯನ್ನು ನೋಡಿ; ಹೊಸ ವರುಷಕ್ಕಾಗಿ ಹೊಸ ಹೊಸ ಉಡುಗೊರೆ ತಂದುಕೊಟ್ಟಿದ್ದಾರೆ. ನನಗೆ ಪ್ರತಿಫಲ ಹೀಗೆ ಕೊಟ್ಟರೆ ಸಾಕು. ಫೀಜು ಹೀಗೆ ಪದಾರ್ಥರೂಪದಲ್ಲಿ ಬರಬೇಕು. ನಾನು ಸೇವೆಮಾಡಿದೆ. ನನಗೆ ಪ್ರತಿಫಲ ಅವರು ಬೆಳೆದ ಪದಾರ್ಥ. ಇಬ್ಬರಿಗೂ ಸುಲಭ. ಅದನ್ನು ಬಿಟ್ಟು ಹಣ ಹಣ ಅಂತ ವೈದ್ಯರೆಲ್ಲ ಫೀಸ್‌ಗೆ ಬಡಕೊಂಡು, ಈ ಕಾರ್ಯದ ಪಾವಿತ್ರ್ಯತೆಯನ್ನೇ ಹಾಳುಮಾಡಿಬಿಟ್ಟಿದ್ದಾರೆ. ಆ ಚೀಟಿಗಳನ್ನೆಲ್ಲ ಇಲ್ಲಿ ಕೊಡಿ. ಇಟ್ಟಿರೋಣ" ಎಂದಳು. ಸೀತಾಲಕ್ಷ್ಮಿ ಮದುವೆಯಾದಮೇಲೆ ಹಿಂದೆಂದೂ ಇಲ್ಲದಷ್ಟು ಆವತ್ತು ಸಂತೋಷದಿಂದಿದ್ದಳು.

## ೨೭

ಸೀತಾಲಕ್ಷ್ಮಿಗೆ ರಂಭಾಪುರಿಯ ಸಮಾಚಾರ ಒಂದಿಲ್ಲೊಂದು ರೀತಿಯಿಂದ ಪ್ರತಿದಿನವೂ ತಿಳಿಯುತ್ತಲೇ ಇದ್ದಿತು. ಅಲ್ಲಿ ತನ್ನ ಮಾವಂದಿರ ಮನೆಯ ಸ್ಥಿತಿ ದಿನದಿನಕ್ಕೂ ಕೆಡುತ್ತಿದೆ ಎಂಬುದು ಮೊದಮೊದಲು ಗೊತ್ತಾಯಿತು. ಅನಂತರ ಆ ಮನೆಯಲ್ಲಿ ಅಣ್ಣತಮ್ಮಂದಿರ ಪರಸ್ಪರ ಅಂತಃಕಲಹದಿಂದ

ಮನೆಯ ಶಾಂತಿ ನಾಶವಾಗಿ ಅತ್ತೆ ಕಲ್ಯಾಣಮ್ಮನವರಿಗೂ ಅವರ ಸೊಸೆಯ ರಿಗೂ ನಿತ್ಯಾ ಮನೆಯಲ್ಲಿ ಕುರುಕ್ಷೇತ್ರವಾಗಿರುವುದೆಂದೂ ಗುಂಡಣ್ಣನವರು ಬೆಂಗಳೂರಿಗೆ ಹೋಗಿಬಿಟ್ಟುದರಿಂದ ಅವರನ್ನು ತಹಬಂದಿಗೆ ತರುವವರು ಯಾರೂ ಇಲ್ಲದೆ ಕೃಷ್ಣ ಶ್ಯಾಮ ಮನೆಯ ಮೂರು ಮೂಲೆಗಳಲ್ಲಿಯೂ ಮೂರು ಸಂಸಾರ ಹೂಡಿರುವುದೂ ಗೊತ್ತಾಯಿತು. ಒಂದೆರಡು ವಾರಗಳ ನಂತರ, ಕಲ್ಯಾಣಮ್ಮನವರು ಒಬ್ಬಂಟಿಗರಾಗಿ ಅವರ ಆರೋಗ್ಯ ಪೂರ್ಣವಾಗಿ ಕೆಟ್ಟಿರುವುದೆಂದು ಅವರ ನಿಗಾ ನೋಡುವವರು ಯಾರೂ ಇಲ್ಲವೆಂದೂ, ದಿನ ದಿನಕ್ಕೆ ಕಲ್ಯಾಣಮ್ಮನವರ ಸ್ಥಿತಿ ಹೀನವಾಗುತ್ತಿರುವುದೆಂದೂ ಅವರು ಬದು ಕುವುದೇ ಅಸಂಭವವೆಂದು ಜನ ಹೇಳುತ್ತಿರುವುದೂ ತಿಳಿಯಿತು

ರಂಭಾಪುರಿ ಮಲ್ಲಿಗೆಹಳ್ಳಿಯಿಂದ ಹತ್ತು ಮೈಲಿ ಮಾತ್ರ ದೂರವಿತ್ತು. ಎರಡು ಊರಿನ ಎಲ್ಲ ಸಂಸಾರಗಳವರೂ ಪರಸ್ಪರ ಬಂಧುಗಳಾದುದರಿಂದ ಪ್ರತಿದಿನವೂ ಒಂದು ಊರಿನವರು ಮತ್ತೊಂದು ಊರಿಗೆ ಒಬ್ಬರಾದರೂ ಹೋಗಿ ಬರುತ್ತಿದ್ದರು. ಎರಡು ಊರಿನವರಿಗೂ ಸೀತಾಲಕ್ಷ್ಮಿ ಸುಂದರರಾಜ ಗುಂಡಣ್ಣ ಇವರ ವೃತ್ತಾಂತ ಎಂದೆಂದಿಗೂ ಮಾಸದ ಕಥೆಯ ಗಣಿಯಾಗಿತ್ತು. ಸ್ತ್ರೀಯರಿಗಂತೂ ಆ ಸುದ್ದಿ ಇಲ್ಲದಿದ್ದರೆ ದಿನ ಕಳೆಯುವುದೇ ಕಷ್ಟವಾಗಿಬಿಡು ತ್ತಿದ್ದಿತು. ದೇವಸ್ಥಾನದಲ್ಲಿ ನದಿಯಲ್ಲಿ ಮನೆಯ ಜಗಲಿ ಮೇಲೆ ಎಲ್ಲೆಲ್ಲಿಯೂ ಅದೇ ಸುದ್ದಿ. ಆ ಸುದ್ದಿ ಹಾಗೂ ಹೀಗೂ ಕಮಲಮ್ಮನ ಮೂಲಕವೂ, ಸೀತಾಲಕ್ಷ್ಮಿಯ ಕೈಲಿ ಪಿಟೀಲು ಹೇಳಿಸಿಕೊಳ್ಳಲು ಅಥವಾ ಔಷಧಿ ತೆಗೆದು ಕೊಳ್ಳಲು ಬರುತ್ತಿದ್ದ ಹುಡುಗಿಯರಿಂದ ಸೀತಾಲಕ್ಷ್ಮಿಗೂ ತಿಳಿಯುತ್ತಿತ್ತು. ಅನೇಕರು ತಮ್ಮ ಮನಸ್ಸಿನಲ್ಲಿ ಸುಂದರರಾಜನಿಗೂ ಸೀತಾಲಕ್ಷ್ಮಿಗೂ ಇದ್ದ ಬಾಂಧವ್ಯವನ್ನೇ ಕಿತ್ತುಹಾಕಿದ್ದುದರಿಂದ ಆಕೆಯ ಎದುರಿಗೆ ಸಹ ಮರೆತಂತೆ ರಂಭಾಪುರಿಯ ವಿಚಾರವನ್ನು ಹೇಳಿಯೇಬಿಡುತ್ತಿದ್ದರು. ಆದರೆ ಸೀತಾ ಲಕ್ಷ್ಮಿಗೆ ಮಾತ್ರ ರಂಭಾಪುರಿಯವರು ತನ್ನ ಅತ್ತೆ ಮಾವನ ಮನೆಯವರು ಎಂಬುದನ್ನು ಮರೆಯಲು ಸಾಧ್ಯವಾಗಿರಲಿಲ್ಲ. ಮರೆಯುವುದಿರಲಿ, ಅವಳಿಗೆ ಅದರ ಅಭಿಮಾನ ಸಹ ಹೆಚ್ಚಾಗಿಯೇ ಇತ್ತು. ಒಂದೊಂದು ಸಂದರ್ಭದಲ್ಲಿ ನದಿಯಲ್ಲಿ ಸೀತಾಲಕ್ಷ್ಮಿ ಇರುವುದನ್ನೇ ಮರೆತು ಸ್ತ್ರೀಯರು ರಂಭಾಪುರಿಯ ಸಮಾಚಾರವನ್ನು ಪ್ರಾರಂಭಿಸಿಬಿಡುತ್ತಿದ್ದರು. ಆಗ ಒಬ್ಬಾಕೆ ' ಪೆತ್ತಗೆ

ಮಾತಾಡೇ ಅಲ್ಲಿಯೇ ಸೀತಾಲಕ್ಷ್ಮಿ ಇದ್ದಾಳೆ" ಎಂದರೆ ಮತ್ತೊಬ್ಬಾಕೆ "ಇದ್ದರೆ ಏನು, ಮಹಾ ಸದ್ಯ ಅತ್ತೆಮನೆಯಲ್ಲಿ ಇವಳು ಹೋಗಿ ಬದುಕಿ ಬಾಳಿದುದಕ್ಕೆ" ಎನ್ನುತ್ತಿದ್ದಳು. ಆ ಮಾತನ್ನು ಕೇಳಿ ಸೀತಾಲಕ್ಷ್ಮಿಗೆ ನೋವಾದರೂ ಅತ್ತೆಯ ಮನೆಯ ಅಭಿಮಾನ ಕಡಿಮೆಯಾಗಲಿಲ್ಲ.

ಆದರೆ ತನ್ನ ಅತ್ತೆ ಕಲ್ಯಾಣಮ್ಮನವರಿಗೆ ಕಾಹಿಲೆಯಾಗಿರುವುದನ್ನೂ, ಅವಳ ಉಪಚಾರಕ್ಕೆ ಯಾರೂ ಇಲ್ಲದುದನ್ನೂ ಕೇಳಿದಂದು ಆಕೆಯ ಮನಶ್ಶಾಂತಿ ಪೂರ್ತಿ ಹಾಳಾಯಿತು. ಗುಂಡಣ್ಣ ಸುಂದರರಾಜ ಇಬ್ಬರೂ ಬೆಂಗಳೂರಿಗೆ ಹೋಗಿರುವಾಗ, ಮನೆಯಲ್ಲಿ ಉಳಿದ ಹಿರಿಯ ನೊಸೆಯರ ನಿತ್ಯ ಕುರುಕ್ಷೇತ್ರದಲ್ಲಿ ಪಾಪ ಸಾಧುಪ್ರಾಣಿಯಾದ ಅತ್ತೆ ಕಲ್ಯಾಣಮ್ಮನ ಸ್ಥಿತಿಯನ್ನು ನೆನೆಸಿಕೊಂಡು, ಅವಳಿಗೆ ಬಹಳ ದುಃಖವಾಯಿತು. ಅವಳು ಕಮಲಮ್ಮನೊಂದಿಗೆ "ಇಲ್ಲಿ ನಾನಿದ್ದು ಏನು ಪ್ರಯೋಜನ. ಆಕೆ ಅಲ್ಲಿ ಉಪಚರಿಸುವವರಿಲ್ಲದೆ ಸಾಯುತ್ತಿದ್ದಾರೆ. ನಾನು ರಂಭಾಪುರಿಗೆ ಹೋಗುತ್ತೇನೆ" ಎಂದಳು. ಕಮಲಮ್ಮ ಕನಿಕರದಿಂದ "ಹೌದಮ್ಮ ನಿನ್ನ ಕೈಯಲ್ಲಿ ಸೇವೆಮಾಡಿಸಿಕೊಳ್ಳಲು ಆಕೆ ಪುಣ್ಯಮಾಡಿರಬೇಕು ಆದರೆ ನಿನ್ನನ್ನು ಅಲ್ಲಿ ಸೇರಿಸುವವರು ಯಾರು? ನಿನ್ನನ್ನು ಮನೆ ಬಾಗಿಲಿನಿಂದ ಒಳಕ್ಕೇ ಬಿಡುವುದಿಲ್ಲವಲ್ಲ. ನಿನ್ನ ಆ ಓರಗಿತ್ತಿಯರು ರಾಕ್ಷಸಿಯರು. ತಮ್ಮ ಚೇಷ್ಟೆಯಿಂದ ಅತ್ತೆಯನ್ನೇ ಮೂಲೆಗೆ ಕೂರಿಸಿ ಅವಳಿಗೆ ಈ ರೋಗ ಬರಿಸಿರುವ ಅವರು, ನಿನ್ನನ್ನು ಜೀವಸಹಿತ ತಿಂದೇಬಿಡುತ್ತಾರೆ. ಹಿಂದೆ ಹೋದಾಗ ನಡೆದದ್ದು ಜ್ಞಾಪಿಸಿಕೊ" ಎಂದಳು. ಸೀತಾಲಕ್ಷ್ಮಿಯು "ನನ್ನತ್ತೆ ಅಲ್ಲಿ ಸಾಯುತ್ತ ಬಿದ್ದಿರುವಾಗ ಸೊಸೆಯಾದ ನಾನು ಇಲ್ಲಿ ಕುಳಿತಿರುವುದೆ? ನನಗೆ ವೈದ್ಯವಿದ್ಯೆ ತಿಳಿದುತಾನೇ ಏನು ಪ್ರಯೋಜನ?" ಎಂದುಕೊಂಡ ಗೊಳೋ ಎಂದು ಅತ್ತಳು. ಕಮಲಮ್ಮ ಆಕೆಯನ್ನು ತನಗೆ ತೋರಿದ ರೀತಿಯಲ್ಲಿ ಸಮಾಧಾನಮಾಡಿದಳು.

ಬರಬರುತ್ತಾ ರಂಭಾಪುರಿಯಿಂದ ಕೆಟ್ಟ ಸುದ್ದಿಗಳು ಬರುವುದೇ ಹೆಚ್ಚಾಯಿತು. ಕಲ್ಯಾಣಮ್ಮನ ಕಾಹಿಲೆ ವಿಚಾರ ತಿಳಿದು ಸುಂದರರಾಜನೂ,ಗುಂಡಣ್ಣನವರೂ ಬೆಂಗಳೂರಿನಿಂದ ಹಿಂದಿರುಗಿದರೆಂದು ಕೇಳಿ ಸೀತಾಲಕ್ಷ್ಮಿಗೆ ಸ್ವಲ್ಪ ಸಮಾಧಾನವಾಯಿತು. ಆದರೆ ಮುಂದಲ ಕ್ಷಣದಲ್ಲಿಯೇ ಹಾಗೆ ಅವರು ಹಿಂದಿರುಗುವುದಕ್ಕೆ ಕಾರಣ, ಕಲ್ಯಾಣಮ್ಮನವರ ಕಾಹಿಲೆಗಿಂತ ಹೆಚ್ಚಾಗಿ

ಸುಂದರರಾಜನ ಕಾಹಿಲೆಯೇ ಎಂಬುದು ತಿಳಿದಾಗ, ಒಂದು ಗಳಿಗೆ ಸೀತಾ ಲಕ್ಷ್ಮಿಯ ಎದೆ ದುಡಿಯುವುದೇ ನಿಂತಿತು. ಅವಳು ಊಟ ನಿದ್ರೆ ಪೂರ್ಣ ವಾಗಿ ಬಿಟ್ಟೇಬಿಟ್ಟಳು. ಕಮಲಮ್ಮನ ಬಲಾತ್ಕಾರಕ್ಕಾಗಿ ಬಂದು ನೆಪಕ್ಕೆ ಎಲೆಯಮುಂದೆ ಕೂರುವಳು. ದುಃಖದ ಆವೇಗ ಹೆಚ್ಚಾದಾಗ ಪಿಟೀಲನ್ನು ತೆಗೆದುಕೊಂಡು ಹೃದಯದಲ್ಲಿ ತುಂಬಿದ್ದ ಸಂಕಟವನ್ನು ಎತ್ತಿ ಎತ್ತಿ ಹೊರಕ್ಕೆ ತೋಡಿಕೊಳ್ಳುವಂತೆ,ಶೋಕಗಾನಲಹರಿಯನ್ನೇ ಏಳಿಸುವಳು. ಆ ಗಾನಾಮೃತ ವನ್ನು ಕೇಳಿದವರಿಗೂ. ನುಡಿಸುತ್ತಿರುವವರ ಬಗೆಯನ್ನು ಭಾರವಾಗಿಮಾಡು ತ್ತಿದ್ದ ಆ ದುಃಖ, ಗೊತಾಗುತ್ತಿದ್ದಿತು. ಗಾನದ ಮಧ್ಯದಲ್ಲಿ ಇದ್ದಕ್ಕಿದ್ದಂತೆ, ಅಲ್ಲಿ ದೂರದಲ್ಲಿ ರೋಗದಿಂದ ಮಲಗಿರುವ ಸುಂದರರಾಜನ ಜ್ಞಾಪಕ ಬಂದು ಆ ನೋವಿನ ಗಾನವಾಹಿನಿಯೊಂದಿಗೆ ಕಣ್ಣೀರಿನ ಪ್ರವಾಹ ಸೀತಾಲಕ್ಷ್ಮಿಯ ಬೆರಳುಗಳ ಮೇಲೂ ಪಿಟೀಲಿನ ಕಮಾನಿನ ಮೇಲೂ ಬಿದ್ದು ಆಕೆಯ ಕಣ್ಣುಗಳಿಗೆ ಕತ್ತಲೆ ಕವಿದು ಇದ್ದಕ್ಕಿದ್ದಂತೆ ಪಿಟೀಲಿನ ದನಿ, ತಂತಿ ಕಿತ್ತು ಹೋದಂತೆ ನಿಂತುಹೋಗುತ್ತಿದ್ದಿತು. ಸೀತಾಲಕ್ಷ್ಮಿ ಪಿಟೀಲನ್ನು ಕೆಳಗಿಟ್ಟು ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಎಳೆಯ ಮಗುವಿನಂತೆ ಅತ್ತು ಬಿಡುತ್ತಿದ್ದಳು.

ಒಂದೆಡೆ ಕಮಲಮ್ಮ ಇನ್ನೊಂದೆಡೆ ಶ್ರೀನಿವಾಸ, ಇಬ್ಬರೂ ಸೀತಾಲಕ್ಷ್ಮಿಗೆ ವಿವೇಕವನ್ನು ಬೋಧಿಸುವುದರಲ್ಲಿ ತೊಡಗಿದ್ದರು. " ಸುಂದರರಾಜ ನಿನ್ನನ್ನು ಯಾವತ್ತೋ ಬಿಟ್ಟು ಆಗಿಹೋಗಿದೆ. ಇದೇನು ಇಂದಿನ ಹೊಸ ವಿಚಾರವಲ್ಲ. ನಿನ್ನ ಸಂಬಂಧ ಅವರು ಪೂರ್ತಾ ಕಡಿದಿದ್ದಾರೆ. ಅವರಿಗೆ ಕಾಹಿಲೆ ಎಂದು ನೀನು ಇಲ್ಲಿ ಅನ್ನ ನೀರು ಬಿಟ್ಟರೆ ಏನು ಪ್ರಯೋಜನ. ಅವರಿಗೆ ಕಾಹಿಲೆ ಯಾದರೆ ಕೇಳುವರಾದರೂ ಇದ್ದಾರೆ, ನೀನು ಸತ್ತರೂ ಕೇಳುವವರು ಯಾರೂ ಇಲ್ಲ " ಅವರ ವಾದ ಸೀತಾಲಕ್ಷ್ಮಿಗೆ ಸರಿಯಾಗಿ ತೋರಿದರೂ ಅವಳ ಹೃದಯ ಇದು ಸರಿಯಲ್ಲ ಎನ್ನುತ್ತಿತ್ತು. ಜತೆಗೆ ದಿನ ದಿನವೂ ರಂಭಾಪುರಿಯಿಂದ ಬರು ತ್ತಿದ್ದ ಸುದ್ದಿ ಹೆಚ್ಚು ಹೆಚ್ಚು ಗಾಬರಿಯನ್ನುಂಟುಮಾಡುವುದಾಗಿತ್ತು. ಕಲ್ಯಾ ಣಮ್ಮನಿಗಿಂತ ಸುಂದರರಾಜನಿಗೇ ಕಾಹಿಲೆ ಹೆಚ್ಚೆಂದು ಸುದ್ದಿ ಬಂತು. ಸೀತಾ ಲಕ್ಷ್ಮಿಗೆ ಇನ್ನು ಮಲ್ಲಿಗೆಹಳ್ಳಿಯಲ್ಲಿ ಶಾಂತಿಯಿಂದಿರುವುದು ಸಾಧ್ಯವಾಗಲಿಲ್ಲ. ಅವಳು ಅದೇ ಗಳಿಗೆಯಲ್ಲಿಯೇ ರಂಭಾಪುರಿಗೆ ಹೊರಟೇಬಿಟ್ಟಳು. ಅವಳನ್ನು

ಹೇಗೆಮಾಡಿಯೂ ತಡೆಯಲು ಸಾಧ್ಯವಾಗದುದರಿಂದ ಶ್ರೀನಿವಾಸ ಗಾಡಿ ಹೂಡಿಸಿದನು.

ಗಾಡಿ ಹೊರಟಕೂಡಲೇ ತಾನು ಎರಡು ವರುಷಗಳ ಹಿಂದೆ ಅದೇ ದಾರಿಯಲ್ಲಿ ಮಾಡಿದ್ದ ಪ್ರಯಾಣ ಸೀತಾಲಕ್ಷ್ಮಿಗೆ ಜ್ಞಾಪಕ ಬಂದು ಅವಳ ಕಣ್ಣು ನೀರಿನಿಂದ ತುಂಬಿತು. ಆ ಪ್ರಯಾಣದ ಕಾಲದ ಎತ್ತುಗಳೇ, ಅದೇ ಗಾಡಿ. ಅಂದಿನಂತೆ ಜತೆಗೆ ಅಣ್ಣ ಶ್ರೀನಿವಾಸ. ಫಲವೂ ಅದರಂತೆಯೇ ಆಗಬಹುದೇನೊ? ಎಂಬ ಭಯ ಸಹ ಆಕೆಗೆ ಉಂಟಾಯಿತು. ಆದರೆ ಒಂದು ದೃಷ್ಟಿಯಲ್ಲಿ ಆ ದಿನಕ್ಕಿಂತ ಈ ದಿನ ಅವಳ ಮನಸ್ಸು ಹೆಚ್ಚು ವಿರಕ್ತ ವಾಗಿತ್ತು. ಆ ದಿನ ಒಂದು ಆಸೆಯಾದರೂ ಇತ್ತು. ಇಂದು ಅದೂ ಇರಲಿಲ್ಲ. ಆ ದಿನ ಗಂಡನ ಮನೆಯಲ್ಲಿ ಹೋಗಿ ಹೇಗಾದರೂ ಒಂದು ಸ್ಥಾನವನ್ನು—ಕೊನೆಗೆ ದಾಸಿಯಾಗಿಯಾದರೂ ಸರಿಯೆ—ಸಂಪಾದಿಸಬೇಕೆಂಬ ಆಸೆ ಇತ್ತು. ಇಂದು ಅದೂ ಇರಲಿಲ್ಲ. ತನಗೆ ಯಾವ ಸ್ಥಾನವೂ ಬೇಡ ಯಾವ ಸ್ಥಳವೂ ಬೇಡ, ಅವರು ರೋಗದಲ್ಲಿದ್ದಾರೆ. ಹೋಗಿ ಉಪಚರಿಸುವ ಭಾಗ್ಯ ದೊರೆತರೆ ಸಾಕು. ಅವರಿಗೂ ಇದು ಬೇಡದೆ ಇರಬಹುದು, ಆದರೆ ನನ್ನ ಜನ್ಮ ಸಾರ್ಥಕವಾಗಬೇಕಾದರೆ ನಾನು ಈ ಕಾರ್ಯವನ್ನು ಮಾಡಲೇಬೇಕು" ಎಂಬ ಒಂದೇ ತೀವ್ರವಾದ ಆಸೆ ಇಂದು ಅವಳಿಗೆ.

ಗಾಡಿ ರಂಭಾಪುರಿಯನ್ನು ಕುರಿತು ಅರ್ಧ ದಾರಿ ಹೋಗುವ ವೇಳೆಗೆ ಎದುರಿಗೆ ಬೆಂಗಳೂರಿನ ವೇದಾಂತ ಬರುತ್ತಿರುವುದು ಶ್ರೀನಿವಾಸನಿಗೆ ಕಂಡಿತು. ಗುಂಡಣ್ಣನವರು ಬೆಂಗಳೂರಿನಲ್ಲಿ ಹೋಗಿ ಇದ್ದುದು ವೇದಾಂತನ ಮನೆಯಲ್ಲಿಯೇ. ವೇದಾಂತ ಕಲ್ಯಾಣಿಗೂ ದೂರದ ಬಂಧು. ವೇದಾಂತ ಶ್ರೀನಿವಾಸನಿಗೂ ಹೇಗೋ ಸಂಬಂಧ. ಹಳ್ಳಿಯ ಬಾಂಧವ್ಯ ಒಂದಕ್ಕೊಂದು ಹೆಣೆದುಕೊಂಡಿತ್ತು ವೇದಾಂತನನ್ನು ಕಂಡು ಶ್ರೀನಿವಾಸ ಮರದ ನೆರಳಿನಲ್ಲಿ ಗಾಡಿಯ ಕೊರಳು ಬಿಟ್ಟು ಎತ್ತುಗಳಿಗೆ ಹುಲ್ಲು ಹಾಕಿದನು ವೇದಾಂತನಿಂದ ಸೀತಾಲಕ್ಷ್ಮಿಗೆ ಮುಂದಲ ವಿಚಾರ ತಿಳಿಯಿತು.

"ಸುಂದರರಾಜ ಬೆಂಗಳೂರಲ್ಲಿ ಸರಿಯಾಗಿ ಊಟ ತಿಂಡಿ ನಿದ್ರೆ ಮಾಡದೆ ಹುಚ್ಚನಂತೆ ಅಲೆಯುತ್ತಿದ್ದ. ವೇದಾಂತನ ಮನೆಗೂ ಹೋಗುತ್ತಿರಲಿಲ್ಲ. ವೇದಾಂತನ ಮನೆಯಲ್ಲಿದ್ದ ಗುಂಡಣ್ಣನವರಿಗೆ ಸುಂದರರಾಜ ಬೆಂಗಳೂರಿನಲ್ಲಿ

ತಿರುಗುತ್ತಿರುವುದು ಗೊತ್ತಿದ್ದರೂ ಅವರು ಏನನ್ನೂ ಮಾಡಲಾರದವರಾಗಿದ್ದರು. ಸುಂದರರಾಜ ಎಲ್ಲಿದ್ದಾನೆ ಎಂಬುದನ್ನು ತಿಳಿಯುವುದೂ ಸಹ ಅವರಿಗೆ ಕಷ್ಟವಾಗಿತ್ತು. ಒಂದು ದಿನ ಇದ್ದಕ್ಕಿದ್ದಂತೆ ಧನ್ವಂತರಿ ವೈದ್ಯಶಾಲೆಯ ಪ್ರಾಣಾಚಾರ್ಯರು ನಮ್ಮ ಮನೆಗೆ ಬಂದರು ಅವರು ಆಗ್ಗಾಗೆ ಬರುವುದು ಪದ್ಧತಿ. ಆದರೆ ಆ ದಿನ ಬಂದಾಗ 'ಗವಿಪುರದ ಭಂಡೆಯಮೇಲೆ ಒಬ್ಬ ಅರೆ ಹುಚ್ಚನಂತೆ ಕಾಣುತ್ತಿರುವವನು ಪ್ರಖರವಾದ ಬಿಸಿಲಿನಲ್ಲಿ ಮಲಗಿದ್ದಾನೆಂದು ಯಾರೋ ಬಂದು ಹೇಳಿದರು. ಹೋಗಿ ನೋಡಿದೆ ನಮ್ಮ ಮಲ್ಲಿಗೆಹಳ್ಳಿ ಸುಂದರರಾಜನೇ ಅವನೆಂಬುದು ನನಗೆ ಗೊತ್ತಾಯಿತು ಎಲ್ಲಿಯೋ ಬಿದ್ದಿದ್ದುದರಿಂದಲೋ ಏನೋ ಅವನ ನೆತ್ತಿ ಕೆನ್ನೆ ಎಲ್ಲಾ ಜಜ್ಜಿಹೋಗಿತ್ತು. ಅವನ ಮೈ ಮೇಲೆ ಪ್ರಜ್ಞೆ ಇರಲಿಲ್ಲ. ಸ್ವಲ್ಪ ನೀರು ತಟ್ಟಿ ಬಿಸಿಲನ್ನು ಮರೆಮಾಡಿದೆ, ಗಾಳಿ ಹಾಕಿದರೂ ಪ್ರಜ್ಞೆ ಮರಳಿಲ್ಲ. ಗಾಡಿಯಲ್ಲಿ ವೈದ್ಯಶಾಲೆಗೆ ಕರೆದುಕೊಂಡು ಬಂದೆ ನಡಿಯಿರಿ ಹೋಗೋಣ. ಗುಂಡಣ್ಣನವರೂ ಬರಲಿ' ಎಂದರು. ನಾನೂ ಗುಂಡಣ್ಣನವರೂ ಧನ್ವಂತರಿ ವೈದ್ಯಶಾಲೆಗೆ ಹೋದೆವು. ಅಲ್ಲಿ ಸುಂದರರಾಜನನ್ನು ಹಾಸಿಗೆಯಮೇಲೆ ಮಲಗಿಸಿದ್ದರು. ಅವನ ಹಣೆಗೆ ಬಟ್ಟೆ ಕಟ್ಟಿದ್ದರು."

ವೇದಾಂತ ಸ್ವಲ್ಪ ಸುಧಾರಿಸಿಕೊಂಡು ಹೇಳಿದ, "ಪ್ರಾಣಾಚಾರ್ಯರ ಶಕ್ತಿ ನಿನಗೆ ಗೊತ್ತಿಲ್ಲದೆ ಇಲ್ಲ ಆದರೆ ಸುಂದರರಾಜನಿಗೆ ಪ್ರಜ್ಞೆ ಬರುವಂತೆ ಮಾಡುವ ವೇಳೆಗೆ ಅವರಿಗೂ ಸಾಕು ಸಾಕಾಗಿ ಹೋಯಿತು ಕೊನೆಗೆ ಎರಡು ಗಂಟೆ ಹೋರಾಡುವ ವೇಳೆಗೆ ಸುಂದರರಾಜ ಕಣ್ಣುಬಿಟ್ಟ. ಆದರೆ ಅವನಿಗೆ ಪ್ರಜ್ಞೆ ಬಂದಮೇಲೆ ಅವನ ಕಷ್ಟ ಇನ್ನೂ ಹೆಚ್ಚಾಯಿತು. ಗಳಿಗೆ ಗಳಿಗೆಗೆ ಕಣ್ಣು ತಲೆಶೂಲೆ, ಆ ಶೂಲೆ ಅಲೆ ಅಲೆಯಾಗಿ ಬರತೊಡಗಿತು ಸುಂದರರಾಜ ಪಡುತ್ತಿದ್ದ ಹಿಂಸೆ ಕಣ್ಣಿನಿಂದ ನೋಡುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ ಪ್ರಾಣಾಚಾರ್ಯರು ವಿಧಿಯಿಲ್ಲದೆ ಅವನ ನೋವು ಹೋಗಲು ಒಂದು ಔಷಧಿ ಕೊಡಬೇಕಾಯಿತು"

ಶ್ರೀನಿವಾಸ ಸುಮ್ಮನೆ ಕೇಳುತ್ತ ಇದ್ದನು. ಅವನಿಗೆ ಸುಂದರರಾಜನ ಸ್ಥಿತಿಯಿಂದ ಕಳವಳ ಉಂಟಾಯಿತು. ಆದರೆ ವೈದ್ಯದ ವಿಚಾರ ಅವನಿಗೆ ಏನೇನೂ ತಿಳಿದಿರಲಿಲ್ಲ. ಆದರೆ ಸೀತಾಲಕ್ಷ್ಮಿಯ ವಿಚಾರ ಹಾಗಲ್ಲ. ಆಕೆ

ಸ್ವಲ್ಪ ಗಾಬರಿಯಿಂದ ಯಾವ ಔಷಧಿ ಎಂದಳು. ವೇದಾಂತನು ಮಾರ್ಫಿಯ ಎಂದನು. ಪ್ರಾಣಾಚಾರ್ಯರು ಯಾವ ಸಂದರ್ಭದಲ್ಲಿಯೂ ಮಾರ್ಫಿಯ ಅಥವ ಮತ್ಯಾವ ಮಾದಕ ದ್ರವ್ಯಗಳನ್ನು ರೋಗಿಗೆ ಔಷಧವಾಗಿ ಕೊಡದೆಂದು ಪದೇ ಪದೇ ಹೇಳುತ್ತಿದ್ದುದೂ, ರೋಗನಿವಾರಣೆಗೆ ಮಾದಕ ದ್ರವ್ಯದ ಆವಶ್ಯಕತೆ ಇಲ್ಲವೆಂದು ಹೇಳುತ್ತಿದ್ದುದೂ ಸೀತಾಲಕ್ಷ್ಮಿಗೆ ಜ್ಞಾಪಕಬಂದಿತು ಸುಂದರ ರಾಜನಿಗೆ ಮಾರ್ಫಿಯ ಕೊಡಬೇಕಾದರೆ ಪ್ರಬಲವಾದ ಕಾರಣವಿರಬೇಕೆಂದೂ ಅವನ ದೇಹಸ್ಥಿತಿ ತುಂಬ ಅಪಾಯದಲ್ಲಿರಬೇಕೆಂದೂ ಆಕೆ ಅರಿತಳು.

ವೇದಾಂತ ಮುಂದುವರಿಸಿದನು. "ಮಾರ್ಫಿಯಾವನ್ನು ಯಾವಾಗಲೂ ಕೊಡುತ್ತಿಲ್ಲ ಸುಂದರರಾಜನಿಗೆ ಕಣ್ಣು ಮತ್ತು ತಲೆಶೂಲೆ ದಿನವೆಲ್ಲ ಇರುತ್ತೆ. ಹೇಗೋ ಹಗಲು ಹೊತ್ತನ್ನು ಕಳೆದುಬಿಡುತ್ತಾನೆ. ಆದರೆ ರಾತ್ರಿ ಆಗುತ್ತ ಆಗುತ್ತ ಅವನು ಹಿಂಸೆಪಡುವುದನ್ನು ನೋಡುವುದು ಸಾಧ್ಯವಿಲ್ಲ ರಾತ್ರಿ 8, 8-30 ಗಂಟೆ ವೇಳೆಗೆ ಕಣ್ಣು ಮತ್ತು ತಲೆಶೂಲೆ ಬಹಳ ತೀವ್ರವಾಗಿ ಬಂದುಬಿಡುತ್ತವೆ ಆಗ ಅವನಿಗೆ ಏನೂ ಬೇಕಾಗುವುದಿಲ್ಲ ಮಾರ್ಫಿಯ ಕೊಟ್ಟ ಹೊರತು ನೋವು ಕಡಿಮೆಯಾಗುವುದಿಲ್ಲ ನಿದ್ರೆಯೂ ಬರುವುದಿಲ್ಲ. ಅದನ್ನು ಕೊಟ್ಟಮೇಲೆಯೇ ಅವನಿಗೆ ನಿದ್ರೆ ಬರುವುದು."

ಸೀತಾಲಕ್ಷ್ಮಿಯು "ದಿವಸ ದಿವಸಕ್ಕೆ ಮಾರ್ಫಿಯಾವನ್ನು ಹೆಚ್ಚು ಹೆಚ್ಚು ಮಾಡುತ್ತಿದ್ದಾರೆಯೇ" ಎಂದು ಕೇಳಿದಳು. ವೇದಾಂತನು "ಮಾಡದೆ ವಿಧಿಯೇ ಇಲ್ಲವಲ್ಲ. ನಿನಗೇ ಗೊತ್ತಿಲ್ಲ, ಆ ಪದಾರ್ಥಗಳ ಸ್ವಭಾವ" ಎಂದನು. ಅನಂತರ "ಸುಂದರರಾಜ ತುಂಬ ನಿಶ್ಶಕ್ತನಾಗಿದ್ದಾನೆ, ಇದು ಒಂದು ದಿನದ ಕಾಹಿಲೆಯಲ್ಲ, ಬೆಂಗಳೂರಿನಲ್ಲಿ ಪ್ರಾಣಾಚಾರ್ಯರು ತಮ್ಮ ಮಿತ್ರರಾದ ವೈದ್ಯ ನಿಪುಣರಿಗೆ ರೋಗಿಯನ್ನು ತೋರಿಸಿದಾಗ ಅವರು 'ಗುಣವಾದರೂ ಆಗಬಹುದು, ಇದು ಔಷಧಿಯಿಂದ ಸಾಧ್ಯವಿಲ್ಲ. ರೋಗಿ ಗುಣಹೊಂದುತ್ತೇನೆಂದು ದೃಢಸಂಕಲ್ಪಮಾಡಿಕೊಂಡರೆ ಸಾಧ್ಯ. ಆದರೆ ಸುಂದರರಾಜನಿಗೆ ಗುಣ ಹೊಂದಬೇಕೆಂಬ ಇಚ್ಛೆಯೇ ಇರುವಂತೆ ತೋರುವುದಿಲ್ಲವಲ್ಲ. ಅವನು ಯಾರೊಂದಿಗೂ ಸರಿಯಾಗಿ ಮಾತನ್ನು ಸಹ ಆಡುತ್ತಿಲ್ಲ. ಅಯ್ಯೋ ಸಾಕು. ಯಾರಿಗಾಗಿ ಬದುಕಬೇಕು ಎನ್ನುತ್ತಾನೆ? ಎಂದರು.

ಸೀತಾಲಕ್ಷ್ಮಿ ನಿಟ್ಟುಸಿರುಬಿಟ್ಟಳು. ವೇದಾಂತನು "ಹೌದು ಈ ಪರಿಸ್ಥಿತಿ

ಯಲ್ಲಿ ಬದುಕಲು ಅವನಿಗೆ ಆಸೆಕೊಡತಕ್ಕದ್ದು ಯಾವುದೂ ಇಲ್ಲ. ಆರು ತಿಂಗಳಿನಿಂದ ಆಹಾರ ನಿದ್ರೆ ಇಲ್ಲದೆ ಬಿಸಿಲಿನಲ್ಲಿ ಬೆಂದು ಬೆಂಡಾಗಿರುವ ದೇಹ! ಮನೆಯ ದಾರಿದ್ರ್ಯ, ಸಂಸಾರದಲ್ಲಿ ಅಣ್ಣಂದಿರಿಗೂ ತಂದೆಗೂ ಇರುವ ಅಂತಃಕಲಹ, ಅದರಿಂದ ತಂದೆಗೆ ಉಂಟಾಗಿರುವ ಮನೋವ್ಯಾಧಿ, ತಾಯಿಯ ರೋಗ, ತನ್ನ ನಿರುತ್ಸಾಹ ಇವೆಲ್ಲವುಗಳಿಂದ ಅವನಿಗೆ ಈ ರೋಗಕ್ಕೆ ಎದುರಾಗಿ ಹೋರಾಡಿ ಬಾಳಬೇಕೆಂಬ ಆಸೆ ಮರೆಯಾಗಿದೆ. ಜತೆಗೆ ಮನೆಯಲ್ಲಿ ಉಪಚರಿಸುವವರು, ಕಾಲಕಾಲಕ್ಕೆ ಪಥ್ಯ ಔಷಧಿಮಾಡಿಕೊಡುವವರು ಯಾರೂ ಇಲ್ಲ. ಆ ಅಣ್ಣಂದಿರು ಕಂಡೂ ಕಾಣದಂತೆ ತಿರುಗುತ್ತಿದ್ದಾರೆ. ಕೃಷ್ಣನ ಹೆಂಡತಿ ತವರುಮನೆಗೆ ಹೋಗಿದ್ದಾಳೆ. ರಾಮನ ಹೆಂಡತಿ ತಂಗಿಯ ಬಾಣಂತನಕ್ಕೆ ಹೋಗಿದ್ದಾಳೆ. ನಿಮ್ಮತ್ತೆ ಕಲ್ಯಾಣಮ್ಮ ಪಾಪ ಅವಳಿಗೇ ಖಾಯಿಲೆ, ಒದ್ದಾಡುತ್ತಿದ್ದಾಳೆ

"ಮೊನ್ನೆ ಒಂದು ಸಂಗತಿ ನಡೆಯಿತು. ಸುಂದರರಾಜ ನಿತ್ಯ ಮಧ್ಯಾಹ್ನದ ಹೊತ್ತು ಸ್ವಲ್ಪ ಗಂಜಿ ಕುಡಿಯುತ್ತಿದ್ದವನು ಆವತ್ತು ಬೆಳಗಿನಿಂದ ಏನನ್ನೂ ಕುಡಿಯಲೇ ಇಲ್ಲ. ಯಾರು ಎಷ್ಟು ಹೇಳಿದರೂ ಹೊದೆದಿದ್ದ ಮುಸುಕನ್ನು ತೆಗೆಯಲೇ ಇಲ್ಲ. ಅವನಿಗೆ ತಲೆಶೂಲೆ, ಕಣ್ಣಿನ ಬಾಧೆ, ನಿತ್ಯಕ್ಕಿಂತ ಹೆಚ್ಚಾಗಿತ್ತು. ಕಲ್ಯಾಣಮ್ಮನವರು ಕಾಫಿ ಗಂಜಿ ಹಾಲು ಎಲ್ಲವನ್ನೂ ಮಾಡಿಟ್ಟುಕೊಂಡು ಕಣ್ಣೀರು ಸುರಿಸುತ್ತ ಹಾಸಿಗೆ ಬಳಿ ಕುಳಿತಿದ್ದರು. ಮತ್ತೊಂದು ಕಡೆ ನಿಮ್ಮ ಮಾವ ಗುಂಡಣ್ಣನವರೂ ಸಹ ತಲೆಯ ಮೇಲೆ ಕೈಯಿಟ್ಟುಕೊಂಡು ಕಣ್ಣುಮುಚ್ಚಿಕೊಂಡು ಕುಳಿತಿದ್ದರು. ನರಳುತ್ತ ಮಲಗಿದ್ದ ಸುಂದರರಾಜ, ಒಂದೆರಡು ನಿಮಿಷ ನರಳಿಕೆ ನಿಲ್ಲಿಸಿದನು. ಅವನಿಗೆ ಸ್ವಲ್ಪ ನಿದ್ರೆಯ ಜೊಂಪು ಬಂದಂತೆ ಇತ್ತು. ಅದು ಒಂದು ಗಳಿಗೆ ಮಾತ್ರ. ಆದರೆ ಆ ಗಳಿಗೆಯಲ್ಲಿ ಅವನು ಮೆತ್ತಗೆ ನಾಲ್ಕು ಐದು ಸಲ ನಿನ್ನ ಹೆಸರನ್ನು ಉಚ್ಚರಿಸಿದನು, ಅಷ್ಟೆ. ಆ ಕೂಡಲೇ ಅವನಿಗೆ ಎಚ್ಚರವಾಗಿ ಮತ್ತೆ ಮೊದಲಿನಂತೆ ನರಳಲು ಪ್ರಾರಂಭಿಸಿದನು. ಗುಂಡಣ್ಣನವರೂ ಕಲ್ಯಾಣಮ್ಮನವರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಅನಂತರ ಇಬ್ಬರೂ ನನ್ನ ಕಡೆ ನೋಡಿದರು. ಕಲ್ಯಾಣಮ್ಮನವರು ಸುಂದರರಾಜನ ಮುಸುಕು ತೆಗೆದು "ಸ್ವಲ್ಪ ಗಂಜಿ ಕುಡಿದರೆ ವಾಸಿ" ಎಂದರು. ಸುಂದರರಾಜ ಇನ್ನೂ ನಿದ್ರೆಯ ಮಬ್ಬಿ

ನಿಂದಲೇಯೇ ಎಂಬಂತೆ ಕಣ್ಣು ಮುಚ್ಚಿಕೊಂಡು ಕೈ ನೀಡಿ ಒಂದು ಗುಟುಕು ಕುಡಿದನು. ಅನಂತರ ಕಣ್ಣು ಬಿಟ್ಟು ನೋಡಿ ಎದುರಿಗಿದ್ದ ನಾವು ಮೂವರ ಕಡೆಯೂ ದೃಷ್ಟಿ ಬೀರಿ "ನೀವೇ ?" ಎಂದು ಹೇಳಿ ಮತ್ತೆ ಮುಸುಕು ಹಾಕಿ ಕೊಂಡು ಮಲಗಿಬಿಟ್ಟನು.

ಸೀತಾಲಕ್ಷ್ಮಿ ಸ್ವಲ್ಪ ಸಂಕೋಚದಿಂದಲೇ "ಏನೆಂದು ನಿದ್ರೆಯಲ್ಲಿ ಕರೆದರು ?" ಎಂದಳು. ವೇದಾಂತನಿಗೆ ಆ ಶೋಕದಲ್ಲಿಯೂ ಗೆಲುವುಂಟಾಗಿ "ಸೀತಾಲಕ್ಷ್ಮಿ ಸೀತಾಲಕ್ಷ್ಮಿ ಸೀತೆ-ಲಕ್ಷ್ಮಿ, ಲಕ್ಷ್ಮಿ ಸೀತೆ, ಸೀತಾಲಕ್ಷ್ಮಿ ಎಂದು" ಎಂದನು. ಶ್ರೀನಿವಾಸನಾಗಲಿ, ವೇದಾಂತನಾಗಲೀ ಸೀತಾಲಕ್ಷ್ಮಿ ಯಾಗಲಿ ಒಂದು ಗಳಿಗೆ ಮಾತನಾಡಲಿಲ್ಲ. ಅನಂತರ ವೇದಾಂತನು "ಅಮ್ಮ ನೀನು ಹೋಗಿ ಉಪಚರಿಸಿದರೆ ನಿನ್ನ ಗಂಡನ ಪ್ರಾಣವನ್ನು ಉಳಿಸಬಹುದು. ಅದನ್ನು ನಿನಗೆ ಹೇಳುವುದಕ್ಕೇ ನಾನು ಮಲ್ಲಿಗೆಹಳ್ಳಿಗೆ ಬರುತ್ತಿದ್ದೆ" ಎಂದನು.

ಶ್ರೀನಿವಾಸನು ಕೋಪದಿಂದ "ಉಪಚರಿಸುವುದಂತೆ! ಉಪಚರಿಸ್ಸು ವುದು. ಇವಳ ಉಪಚಾರ ಅಲ್ಲಿ ಯಾರಿಗೆ ಬೇಕಾಗಿದೆ ಗಂಡನಂತೆ ಗಂಡ ಯಾರು ಗಂಡ! ಮನೆಯ ಕಿರಾತರೆಲ್ಲ ಇವಳನ್ನು ಹುರಿದು ಹಪ್ಪಳಮಾಡಿದರೂ ಹಾಹೂ ಅನ್ನಲಿಲ್ಲ ಆ ಬಹದ್ದೂರ. ಇವಳನ್ನು ಮನೆಗೆ ಸೇರಿಸುವರು ಯಾರು ಸ್ವಾಮಿ ? ಹಿಂದೆ ಹೋದಾಗ ಮನೆಯವರೆಲ್ಲ ಹುಚ್ಚನಾಯನ್ನು ಹೊಡೆಯುವಂತೆ ಈಕೆಯನ್ನು ಹೊಡೆದು ಅಟ್ಟಲಿಲ್ಲವೆ? ಮೊದಲೇ ಇವಳು ಕುಣೀತಿದ್ದಾಳೆ. ನೀವೂ ಏಣಿಹಾಕಿಕೊಟ್ಟಂತೆ ಆಯಿತು" ಎಂದ. ಸೀತಾಲಕ್ಷ್ಮಿ ಕಾತರದಿಂದ "ಹೇಗೂ ನಾವು ಹೊರಟು ಬಂದಿದ್ದೇವೆಲ್ಲ ಅಣ್ಣ, ದಯವಿಟ್ಟು ಸುಮ್ಮನಿರಿ" ಎಂದಳು. ವೇದಾಂತನ ಕಡೆ ತಿರುಗಿ "ನೀವು ಹೀಗೆ ಬರುತ್ತಿರುವುದು ನಮ್ಮ ಅತ್ತೆ ಮಾವಂದಿರಿಗೆ ಗೊತ್ತೇ ?" ಎಂದಳು, ವೇದಾಂತ ಪ್ರತ್ಯುತ್ತರ ಕೊಡು ವುದಕ್ಕೆ ಮುಂಚೆ ಶ್ರೀನಿವಾಸ ಹಾಸ್ಯಧ್ವನಿಯಲ್ಲಿ "ನಿಮ್ಮತ್ತೆ ಮಾವ. ಅಬ್ಬಾ ಕೊಡಲೀಲಿ ತಲೆ ತುಂಡಿಸಿಕೊಂಡಹಾಗೇ ಆಯ್ತು" ಎಂದನು. ಅವನ ಮಾತನ್ನು ಗಮನಿಸದೆ ವೇದಾಂತನು ಸೀತಾಲಕ್ಷ್ಮಿಗೆ "ನಾನು ನಿಮ್ಮ ಅತ್ತೆ ಮಾವಂದಿರಿಗೆ ಹೇಳಿ ಬರಲಿಲ್ಲ. ಆದರೆ ನೀನು ಹೋದರೆ ಅವರು ಬಹಳ ಸಂತೋಷಪಡುವರು" ಎಂದನು. ಮತ್ತೆ ಸೀತಾಲಕ್ಷ್ಮಿ "ಸದ್ಯ ಅಷ್ಟು ಆದರೆ ಸಾಕೆಲ್ಲ, ನಾನು ಏನೂ ಕೆಲಸವೇ ಇಲ್ಲದೆ, ಯಾರಿಗೂ ಉಪಯೋಗವಿಲ್ಲದೆ

ಕುಳಿತಿದ್ದೇನೆ. ಅವರು ಅವಕಾಶಕೊಟ್ಟರೆ ಅಲ್ಲಿಯಾದರೂ ಸೇವೆಮಾಡಿ ಸಾರ್ಥಕ್ಯ ಹೊಂದಬಹುದಲ್ಲ" ಎಂದಳು. ಶ್ರೀನಿವಾಸನು "ಹೌದು ಹೌದು. ಸಾರ್ಥಕ ಹೊಂದು" ಎಂದು ಗದರಿಸಿದನು.

ಅವರು ಮತ್ತೆ ಗಾಡಿ ಹೂಡಿದರು, ವೇದಾಂತ "ನಾನು ಹೇಗೂ ಬಂದಾಯಿದು. ಮಲ್ಲಿಗೆಹಳ್ಳಿಗೆ ಹೋಗಿ ಎಲ್ಲರನ್ನೂ ನೋಡಿಕೊಂಡು ಬರು ತ್ತೇನೆ" ಎಂದು ಮುಂದೆ ಹೊರಟ. ಸುಮಾರು ಹನ್ನೆರಡು ಗಂಟೆ ವೇಳೆಗೆ ಗಾಡಿ ರಂಭಾಪುರಿ ತಲಪಿ ಗುಂಡಣ್ಣನವರ ಮನೆಯ ಬಾಗಿಲಿನಲ್ಲಿ ನಿಂತಿತು. ಬಾಗಿಲಿನಲ್ಲಿ ಯಾರೂ ಇರಲಿಲ್ಲ, ಒಳಗಡೆಯೂ ನಿಶ್ಶಬ್ದವಾಗಿತ್ತು. ಸೀತಾ ಲಕ್ಷ್ಮಿ ಗಾಡಿಯಿಂದಿಳಿದು ಒಳಕ್ಕೆ ಹೋದಳು. ಅಂಗಳದಲ್ಲಿ ಗುಂಡಣ್ಣನವರು ದಿಂಬು ಒರಗಿಕೊಂಡು ಕುಳಿತಿದ್ದರು ಸೀತಾಲಕ್ಷ್ಮಿ ಒಳಕ್ಕೆ ಬಂದುದನ್ನು ಕಂಡು ಅವರು ಮೇಲಕ್ಕೆ ತಲೆಯೆತ್ತಿನೋಡಿದರು. ಅವರ ಬಾಯಿನಿಂದ ಮಾತು ಹೊರಡಲಿಲ್ಲ, ಸಂಜ್ಞೆಯಿಂದ ಒಳಕ್ಕೆ ಬರುವಂತೆ ಸೀತಾಲಕ್ಷ್ಮಿಗೆ ಹೇಳಿದರು. ಸೀತಾಲಕ್ಷ್ಮಿ ನಡುಮನೆಗೆ ಹೋದಳು. ಅಲ್ಲಿ ಗೋಡೆ ಮಗ್ಗು ಲಿಗೆ ಚಾಪೆ ಹಾಸಿಕೊಂಡು ಕಲ್ಯಾಣಮ್ಮ ಮಲಗಿದ್ದರು. ಗುಂಡಣ್ಣನವರಿಗಿಂತ ಹೆಚ್ಚು ಬಳಲಿತ್ತು ಆಕೆಯ ಮುಖ. ಸೀತಾಲಕ್ಷ್ಮಿಯನ್ನು ನೋಡಿದಕೂಡಲೇ ಆಕೆ ಮಾತನಾಡುವಂತೆ ಬಾಯಿ ಅಲ್ಲಾಡಿಸಿದರು, ಆದರೆ ಅವರ ಬಾಯಿನಿಂದ ಮಾತು ಹೊರಕ್ಕೆ ಕೇಳಿಸಲೇ ಇಲ್ಲ. ಮಾತು ತನಗೆ ಕೇಳಿಸಿದವಳಂತೆಯೇ ಸೀತಾಲಕ್ಷ್ಮಿ "ಈಗತಾನೇ ಬಂದೆ?" ಎಂದು ಹೇಳಿ ಮುಂದಲ ಕೊಠಡಿಗೆ ಹೋದಳು. ಅಲ್ಲಿ ಸುಂದರರಾಜ ಹಾಸಿಗೆಯ ಮೇಲೆ ನರಳುತ್ತಾ ಮಲಗಿದ್ದನು. ಸೀತಾಲಕ್ಷ್ಮಿ ಅವನ ಸಮೀಪಕ್ಕೆ ಹೋಗಿ ನಿಂತುಕೊಂಡು ನೋಡಿದಳು. ಸುಂದರರಾಜ ಮುಚ್ಚಿದ್ದ ಕಣ್ಣನ್ನು ತೆರೆಯದೆ ನರಳುತ್ತಲೇ ಇದ್ದನು. ಸೀತಾ ಲಕ್ಷ್ಮಿ ಒಂದು ಗಳಿಗೆ ನಿಂತಿದ್ದು ಅಚೆ ಈಚೆ ನೋಡಿ ಇವನ ಹಣೆಯಮೇಲೆ ಕೈ ಇಟ್ಟಳು. ಆ ತಂಪಾದ ಕರಸ್ಪರ್ಶದಿಂದಲೋ ಎಂಬಂತೆ ಸುಂದರರಾಜ ಒಂದು ಗಳಿಗೆ ನರಳುವುದನ್ನು ನಿಲ್ಲಿಸಿದನು. ಮುಂದಲ ನಿಮಿಷದಲ್ಲಿಯೇ ಕಣ್ಣು ತೆರೆದು ನೋಡಿ ಸೀತಾಲಕ್ಷ್ಮಿಯನ್ನು ಗುರುತಿಸಿದನು. "ಯಾವಾಗ ಬಂದೆ?" ಎಂದು ಅವನು ಕೇಳಿದುವಕ್ಕೆ "ಸೀತಾಲಕ್ಷ್ಮಿ ಈಗತಾನೆ" ಎಂದಳು. ಸುಂದರರಾಜ ಬೇಸರಿಕೆಯಿಂದ "ಯಾಕೆ ಬಂದೆ? ನಾನು ಒಂದು

ಹೆಣ. ಕಣ್ಣಿನ ಶೂಲೆಯಿಂದ ಏನನ್ನೂ ಮಾಡಲಾರದವನಾಗಿದ್ದೇನೆ. ಇಲ್ಲಿ ನಿನಗೆ ಬರಿಯ ಶ್ರಮವೇ ಹೊರತು ಮತ್ತೇನೂ ಇಲ್ಲ" ಎಂದನು. ಸೀತಾಲಕ್ಷ್ಮಿಯು "ಶ್ರಮ ಪಡುವುದಕ್ಕೇ ನಾನು ಬಂದಿರುವುದು! ಇಲ್ಲಿ ಇರಲು ಅವಕಾಶ ಕೊಡಿ" ಎಂದಳು. ಸುಂದರರಾಜನು ಬೇಸರಿಕೆಯಿಂದ "ಇಲ್ಲಿ ಯಾರೂ ಇರುವುದು ಬೇಕಿಲ್ಲ. ಇಲ್ಲಿ ಯಾರಿಗೂ ಸುಖವಿಲ್ಲ" ಎಂದನು.

ಆ ವೇಳೆಗೆ ಗುಂಡಣ್ಣನವರು ನಿಧಾನವಾಗಿ ನಡೆದುಕೊಂಡು ಅಲ್ಲಿಗೆ ಬಂದರು. ಅವರು ಸೀತಾಲಕ್ಷ್ಮಿಗೆ "ಕಣ್ಣಿನ ನೋವಿನಿಂದ ಹೀಗಾಡುತ್ತಿದ್ದಾನೆ. ರಾತ್ರಿ ಮಾರ್ಫಿಯ ಕೊಡುವವರೆಗೆ ಇದೇ ಇವನ ಅವಸ್ಥೆ" ಎಂದರು. ಸೀತಾಲಕ್ಷ್ಮಿ ನಿಧಾನವಾಗಿ ಸುಂದರರಾಜನ ಕೊಠಡಿಯಿಂದ ಹೊರಕ್ಕೆ ಬಂದಳು. ಅಷ್ಟು ಹೊತ್ತಿಗೆ ಕಲ್ಯಾಣಮ್ಮನವರು ಎದ್ದು ಕುಳಿತಿದ್ದರು. ಸೀತಾಲಕ್ಷ್ಮಿ ಬಂದುದನ್ನು ನೋಡಿ ಅವರು "ಏನಮ್ಮ, ಏನು ಹೇಳಿದ ನಿನ್ನ ಗಂಡ?" ಎಂದು ಕೇಳಿದರು. ಹಿಂದೆಯೇ ಬಂದು ನಿಂತಿದ್ದ ಗುಂಡಣ್ಣನವರು "ಏನು ಹೇಳುತ್ತಾನೆ. ಅವನ ನೋವಿನಲ್ಲಿ?" ಎಂದರು. ಸೀತಾಲಕ್ಷ್ಮಿಯು "ಅಮ್ಮಾ, ಇಲ್ಲಿ ಇರುವುದಕ್ಕೆ ಅವಕಾಶ ಕೊಡಿ. ಅಲ್ಲಿ ಒಬ್ಬಳೇ ಪ್ರೇತದಂತೆ ಕುಳಿತು ನಾನೇನು ಮಾಡಲಿ" ಎಂದಳು. ಕಲ್ಯಾಣಮ್ಮ ಮಾತನಾಡದೆ ಇದ್ದುದನ್ನು ಕಂಡು ಸೀತಾಲಕ್ಷ್ಮಿ ಇನ್ನೂ ಹೆಚ್ಚು ಧೈರ್ಯದಿಂದ "ಈ ವೇಳೆಯಲ್ಲಿ ನನ್ನನ್ನು ಬೇರೆ ಮಾಡಬೇಡಿ" ಎಂದಳು. ಕಲ್ಯಾಣಮ್ಮ "ಅವನು ಪೂರ್ತಿ ಅಸ್ವಸ್ಥನಾಗಿದ್ದಾನೆಲ್ಲ. ನಿನಗೆ ತಾನೆ ಏನು ಸುಖ" ಎಂದಳು. ಸೀತಾಲಕ್ಷ್ಮಿಯು "ಹಾಗಾದರೆ ನಾನು ಇರುವುದಕ್ಕೆ ನಿಮ್ಮ 'ಆಕ್ಷೇಪಣೆ' ಇಲ್ಲ ತಾನೇ?" ಎಂದಳು. ಗುಂಡಣ್ಣನವರು "ನಮ್ಮ ಆಕ್ಷೇಪಣೆ ಇಲ್ಲವಮ್ಮ. ಆದರೆ, ಶ್ರೀನಿವಾಸ ಆಕ್ಷೇಪಿಸುತ್ತಾನೆ" ಎಂದರು. ಸೀತಾಲಕ್ಷ್ಮಿ ದೃಢಮನಸ್ಸಿನಿಂದ "ಯಾರೂ ಆಕ್ಷೇಪಿಸುವುದಿಲ್ಲ" ಎಂದಳು.

ಬಾಗಿಲಿನಲ್ಲಿ ಗಾಡಿಯಲ್ಲಿದ್ದ ಶ್ರೀನಿವಾಸನನ್ನು ಸೀತಾಲಕ್ಷ್ಮಿ ಮರೆತೇ ಬಿಟ್ಟಿದ್ದಳು. ಶ್ರೀನಿವಾಸ ಎತ್ತುಗಳಿಗೆ ಹುಲ್ಲು ಹಾಕಿ ಗಾಡಿಯೊಳಗೆ ಶಾಂತನಾಗಿ ಕುಳಿತಿದ್ದನು. ಸೀತಾಲಕ್ಷ್ಮಿಯ ಈ "ಸತ್ಕಾರ್ಯದ ನಿಯೋಗ" ಅವನಿಗೆ ಸ್ವಲ್ಪವೂ ಒಪ್ಪಿಗೆಯಾಗಿರಲಿಲ್ಲ. ಸೀತಾಲಕ್ಷ್ಮಿಯು ಗಾಡಿಯ ಬಳಿ ಬಂದು "ಅಣ್ಣಾ ಒಳಕ್ಕೆ ಬನ್ನಿ" ಎಂದಳು. ಶ್ರೀನಿವಾಸನು "ಇರಲಿ, ಬರುವು

ದಾಗುತ್ತದೆ. ಈಗ ನಿನ್ನ ತೀರ್ಮಾನವೇನು? ಇಲ್ಲಿಯೇ ಇರುವುದೋ ಹೊರಡುವುದೋ'' ಎಂದನು ಸೀತಾಲಕ್ಷ್ಮಿಯು "ಇಲ್ಲಿಯೇ ಇರುತ್ತೇನೆ'' ಎಂದಳು. ಶ್ರೀನಿವಾಸನು ಕೋಪದಿಂದ "ನಿನ್ನ ಹಣೆಬರಹ. ನೀನು ಯಾವತ್ತೂ ಯಾರ ಮಾತನ್ನೂ ಕೇಳಿದವಳಲ್ಲ'' ಎಂದನು. ಅಷ್ಟು ಹೊತ್ತಿಗೆ ಗುಂಡಣ್ಣನವರೂ ಬಾಗಿಲಿಗೆ ಬಂದು ಶ್ರೀನಿವಾಸನಿಗೆ "ಒಳಕ್ಕೆ ಬಾಯ್ಯ ಸ್ನಾನ ಊಟಮಾಡಿಕೊಂಡು ಹೊರಡುವಿಯಂತೆ" ಎಂದರು ಶ್ರೀನಿವಾಸನು "ಆಗಲಿ ಎಂದು ಹೇಳಿ ಸೀತಾಲಕ್ಷ್ಮಿಯ ಹಾಸಿಗೆಯನ್ನೂ ಪೆಟ್ಟಿಗೆಯನ್ನೂ ಪಿಟೀಲಿನ ಪೆಟ್ಟಿಗೆಯನ್ನೂ ಮನೆಯ ಒಳಕ್ಕೆ ಇಟ್ಟನು. ಮೊದಲಸಲ ಹೀಗೆಯೇ ಎಲ್ಲ ಸಾಮಾನುಗಳನ್ನು ತಂದು ಇಟ್ಟುದು ಅವನಿಗೆ ಜ್ಞಾಪಕಬಂತು. ಆಗ ಉಂಟಾದ ಫಲವನ್ನೂ ನೆನೆಸಿಕೊಂಡು ಅವನಿಗೆ ಕೋಪದಿಂದ ಮೈನಡುಗಿತು. "ಆ ಸಲ ಹಾಗೆ ಆಯಿತು. ಇನ್ನು ಈ ಸಲ ಹೇಗಾಗುವುದೋ'' ಎಂದು ಯೋಚಿಸುತ್ತಾ ಅವನು ಗಾಡಿಯನ್ನು ಮತ್ತೆ ಹೂಡಿ, ರಂಭಾಪುರಿಯಕಡೆ ಹೊರಟನು. ಗಾಡಿ ಕಣ್ಣಿಗೆ ಕಾಣುವವರೆಗೆ ಅವನನ್ನೇ ನೋಡುತ್ತ ಬಾಗಿಲಿನಲ್ಲಿ ನಿಂತಿದ್ದ ಸೀತಾಲಕ್ಷ್ಮಿ, ಗಾಡಿ ಮರೆಯಾದಕೂಡಲೇ ನಿಟ್ಟುಸಿರುಬಿಟ್ಟು ಒಳಕ್ಕೆ ಹೋದಳು.

## ೨೭

ಮನೆಯಲ್ಲಿ ತಾನು ಹಿಂದೆ ಬಂದಿದ್ದಾಗ ಇದ್ದುದಕ್ಕೂ ಈಗ್ಗೂ ತುಂಬ ವ್ಯತ್ಯಾಸ ಉಂಟಾಗಿರುವುದು ಸೀತಾಲಕ್ಷ್ಮಿಗೆ ಕಂಡಿತು. ಮೊದಲನೆಯದಾಗಿ ಆ ತುಂಬಿದ್ದ ಮನೆಯಲ್ಲಿ ಜನಗಳ ಗದ್ದಲವೇ ಇರಲಿಲ್ಲ. ಎಲ್ಲಿ ನೋಡಿದರೂ ಬಿಕೊ ಎನ್ನುತ್ತಿತ್ತು. ಮನೆಯಲ್ಲಿ ಎಲ್ಲೆಲ್ಲಿಯೂ ಕಸ. ಮನೆ ಗುಡಿಸಿಯೇ ಎಷ್ಟೋ ದಿನಗಳಾಗಿತ್ತು. ಸೀತಾಲಕ್ಷ್ಮಿ ಸ್ನಾನದ ಒಲೆಗೆ ಉರಿಹಾಕಿ ಸ್ನಾನ ಮಾಡಿ ಅಡಿಗೆ ಮನೆಯನ್ನು ಹೊಕ್ಕಳು. ಅಲ್ಲಿ ಮೂಲೆ ಮೂಲೆಗಳಲ್ಲಿ ಬಿದ್ದು ಅರ್ಧ ಅಂಗುಲ ಕೊಳೆ ಮೆತ್ತಿಕೊಂಡಿದ್ದ ಪಾತ್ರೆಗಳನ್ನೆಲ್ಲ ತೊಳೆದು, ಕಸವನ್ನೆಲ್ಲ ಎತ್ತಿಹಾಕಿ ಒಲೆಯನ್ನೂ ಕೋಣೆಯನ್ನೂ ಸಾರಿಸಿದಳು. ಅಡಿಗೆ ಮನೆಯ ಪಾತ್ರೆಗಳನ್ನು ಉಪಯೋಗಿಸಿಯೇ ಅನೇಕ ದಿನಗಳಾಗಿದ್ದಂತೆ ತೋರಿತು, ಕಲ್ಯಾಣಮ್ಮನವರಿಗೆ ಕಾಹಿಲೆಯಾದನಂತರ ಗುಂಡಣ್ಣನವರೇ ಹೇಗೋ

ಒಂದಿಷ್ಟು ಗಂಜಿ ಕಾಯಿಸಿ ಕಾಲ ಹಾಕುತ್ತಿದ್ದರು. ಸೀತಾಲಕ್ಷ್ಮಿ ಮನೆಯನ್ನು ಪ್ರವೇಶಿಸಿದ ಎರಡು ಗಂಟೆ ಕಾಲದೊಳಗೆ ಮನೆಯ ಯಾವ ಯಾವ ಮೂಲೆ ಯಲ್ಲಿದ್ದ ಕಸ ಕೊಳೆ ಕಣ್ಮರೆಯಾಯಿತು. ಪಾತ್ರೆಗಳೆಲ್ಲ ಸೂರ್ಯನ ಮರಿಗಳಾ ದವು. ಗುಂಡಣ್ಣನವರು ನೋಡನೋಡುತ್ತಿದ್ದಂತೆಯೇ ಮಂತ್ರದಿಂದಲೋ ಎಂಬಂತೆ ಮನೆ ಸ್ವಚ್ಛವಾಯಿತು. ಮನೆಯನ್ನು ಸ್ವಚ್ಛವಾಗಿಡುವುದು ತಮ್ಮ ಕೈಯಲ್ಲಿ ಎಂದಿಗೂ ಆಗದ ಕಾರ್ಯವೆಂದು ಕೈಬಿಟ್ಟಿದ್ದ ಗುಂಡಣ್ಣನವರಿಗೆ ಮನೆ ಯನ್ನು ಬೆಳಗುವುದೇ ಸೀತಾಲಕ್ಷ್ಮಿಯ ಸ್ವಾಭಾವಿಕ ಗುಣವೆಂದು ತೋರಿತು. ಬಾಲ್ಯದಲ್ಲಿ ಅವರ ಕಿವಿಗೆ ಬಿದ್ದಿದ್ದ "ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕೆ?" ಎಂಬ ಮಾತು ಜ್ಞಾಪಕ ಬಂದಿತು.

ಅಡಿಗೆಮಾಡಿ, ಸೀತಾಲಕ್ಷ್ಮಿ ಗುಂಡಣ್ಣನವರನ್ನು ಮೊದಲು ಊಟಕ್ಕೆ ಎಬ್ಬಿಸಿದಳು. ಅನಂತರ ಕಲ್ಯಾಣಮ್ಮನವರಿಗೆ ಹಿತವಾಗಿ ಬಿಸಿ ನೀರಿನ ಸ್ನಾನ ಮಾಡಿಸಿ ಅವರಿಗೆ ಊಟಕ್ಕೆ ಬಡಿಸಿದಳು. ರುಚಿಯಾದ ಬಿಸಿಯಾದ ಅಡಿಗೆ ಊಟಮಾಡಿಯೇ ಎಷ್ಟೋ ದಿನಗಳಾಗಿದ್ದವು ಕಲ್ಯಾಣಮ್ಮ. ಗುಂಡಣ್ಣನವರೂ ಕಲ್ಯಾಣಮ್ಮನವರೂ ಬಿಸಿಸ್ನಾನ ಊಟದಿಂದ ಬಳಲಿ ತಮ್ಮ ತಮ್ಮ ಹಾಸಿಗೆಗಳ ಮೇಲೆ ಬಿದ್ದುಕೊಂಡರು. ಸೀತಾಲಕ್ಷ್ಮಿ ಬಂದುದರಿಂದ ಸುಂದರರಾಜನ ವಿಷ ಯದಲ್ಲಿ ಅವರ ಮನಸ್ಸು ಕಾತುರಬಿಟ್ಟು, ಯೋಗ್ಯನಾದ ವೈದ್ಯನಲ್ಲಿ ರೋಗಿ ಯನ್ನು ಒಪ್ಪಿಸುವಂತೆ ಹಗುರವಾಯಿತು. ಆ ನೆಮ್ಮದಿಯಲ್ಲಿ ಅವರ ಮನಸ್ಸು ನೋವನ್ನುಳಿದು ಶಾಂತವಾಯಿತು

ಆ ವೇಳೆಗೆ ಸಾಯಂಕಾಲ ಏಳು ಗಂಟೆಯಾಯಿತು. ಸೀತಾಲಕ್ಷ್ಮಿ, ಸುಂದರರಾಜನಿಗಾಗಿ ರುಚಿಯಾದ ಗಮಗಮಿಸುವ ಗಂಜಿಯನ್ನು ಮಾಡಿದಳು. ಸಂಧ್ಯಾಕಾಲವಾಗುತ್ತಾ ಆಗುತ್ತಾ ಸುಂದರರಾಜನ ನೋವು ಹೆಚ್ಚಿತು. ತಲೆ ಸಿಡಿಯುತ್ತಿತ್ತು. ಏಕಕಾಲದಲ್ಲಿ ಸಾವಿರಾರು ಸೂಜಿಗಳನ್ನು ಕಣ್ಣಿಗೆ ಚುಚ್ಚಿ ದಂತೆ ಅವನಿಗೆ ಆಗುತ್ತಿತ್ತು. ಈ ನೋವನ್ನು ಸುಂದರರಾಜ ಒಂದು ತಿಂಗಳಿ ನಿಂದ ಅನುಭವಿಸಿದ್ದನು. ಸೀತಾಲಕ್ಷ್ಮಿ ಗಂಜಿ ತೆಗೆದುಕೊಂಡು ಬಂದು "ಕುಡಿಯಿರಿ. ಚೆನ್ನಾಗಿ ಮಾಡಿದ್ದೇನೆ. ಹೊಟ್ಟೆಗೆ ಏನೂ ಇಲ್ಲದುದರಿಂದಲೇ ಈ ನಿಶ್ಶಕ್ತಿ" ಎಂದಳು. ಸುಂದರರಾಜ ನರಳುತ್ತಾ "ಪ್ರಾಣವೇ ಹೋಗು ತ್ತಿದೆ, ಯಾರಿಗೆ ಬೇಕು ನಿನ್ನ ಗಂಜಿ. ನಿನ್ನ ಗಂಜಿ ಬೆಂಕಿಗೆ ಸುರಿ. ನನಗೆ ಈಗ

ಬೇಕಾಗಿರುವುದು ಮಾರ್ಫಿಯಾ ಒಂದೇ. ಮಾರ್ಫಿಯವೇ ನನ್ನ ದೇವರು ”
ಎಂದನು. ಸೀತಾಲಕ್ಷ್ಮಿ ಹಾಗೂ ಹೀಗೂ ಸಮಾಧಾನಮಾಡಿ ಅವನಿಗೆ
ಸ್ವಲ್ಪ ಗಂಜಿ ಕುಡಿಸಿದಳು. ಸುಂದರರಾಜನ ಗಮನವೆಲ್ಲ ಮಾರ್ಫಿಯ ಕಡೆಗೆ
ಮಾತ್ರವೇ ಇತ್ತು. ಮದ್ಯಪಾಯಿ ಮದ್ಯಕ್ಕಾಗಿಯೇ ಜೀವಿಸುವಂತೆ ಅವನು
ತನ್ನ ಎಲ್ಲ ಆಸೆಗಳನ್ನೂ ಮಾರ್ಫಿಯ ಒಂದರಲ್ಲಿ ಕೇಂದ್ರೀಕೃತಮಾಡಿ ಆ ಗಳಿಗೆ
ಗಾಗಿಯೇ ಜೀವಿಸುತ್ತಿದ್ದನು.

ನಿತ್ಯಾ ಸಾಯಂಕಾಲ ಏಳುವರೆ ಗಂಟೆಗೆ ಸುಂದರರಾಜನಿಗೆ ಮಾರ್ಫಿಯಾ
ಇಂಜೆಕ್ಷನ್ನು ಕೊಡುತ್ತಿದ್ದರು. ವೈದ್ಯರು ಎಂಟು ಮೈಲಿ ದೂರದಹಳ್ಳಿ
ಯಲ್ಲಿದ್ದುದರಿಂದ ರಂಭಾಪುರಿಯ ಪೋಸ್ಟ್‌ಮಾಸ್ಟರು ಆ ಹೊಣೆಯನ್ನು
ವಹಿಸಿಕೊಂಡಿದ್ದರು, ಸುಂದರರಾಜನಿಗೆ ಅವರೊಬ್ಬರೇ ಈಗ ಬೇಕಾಗಿದ್ದವರು
ಅವರು ಅಂದೂ ಪದ್ಧತಿಯಂತೆ ಏಳುವರೆ ಗಂಟೆಗೆ ಅಲ್ಲಿಗೆ ಬಂದರು, ಸೀತಾ
ಲಕ್ಷ್ಮಿಯನ್ನು ನೋಡಿ ಅವರಿಗೆ ಸಮಾಧಾನವಾಗಿ ಬಿಡುಗಡೆಯ ನಿಟ್ಟುಸಿರನ್ನು
ಬಿಟ್ಟರು. “ ಅಮ್ಮಾ ಹೇಗೂ ನೀನೂ ಡಾಕ್ಟರೇ, ನನ್ಯ ನನಗೆ ಈ ಮಾರ್ಫಿಯಾ
ಕೊಡುವ ಜವಾಬ್ದಾರಿ ಬೇಡ, ‘ ಇದನ್ನು ಕೊಡಬೇಕೆಂದರೇ ನನಗೆ ಏನೋ
ಒಂದು ಬಗೆಯ ಗಾಬರಿಯಾಗುತ್ತಿದೆ ” ಎಂದರು, ಸೀತಾಲಕ್ಷ್ಮಿಯು “ ಇಲ್ಲಿ
ಅದನ್ನು ಕೊಡಿ. ನಾನು ಕೊಡುತ್ತೇನೆ ” ಎಂದು ಹೇಳಿ ತೆಗೆದುಕೊಂಡು
ತನ್ನಲ್ಲಿ ಇಟ್ಟುಕೊಂಡಳು.

ಏಳುವರೆ ಗಂಟೆ ಸಮೀಪಿಸುತ್ತಾ ಬಂದಂತೆ ಸುಂದರರಾಜನು ಹುಚ್ಚ
ನಂತೆ ನರಳುತ್ತಾ ಹುಲಿಯಂತೆ ಆರ್ಭಟಿಸತೊಡಗಿದನು, “ ಆ ಪೋಸ್ಟ್‌ಮಾಸ್ಟ
ರಿಗೆ ಏನ್ ರೋಗ ಬಂತು ಇವತ್ತು ?” ಎಂದು ಹಾಸಿಗೆಯಲ್ಲಿ ತಕತಕನೆ ಕುಣಿ
ದಾಡಿದನು. ಅವನು ಅನುಭವಿಸುತ್ತಿದ್ದ ಹಿಂಸೆಯನ್ನೂ ಆಯಾಸವನ್ನೂ
ಕಂಡು ಸೀತಾಲಕ್ಷ್ಮಿ ತುಂಬ ದಿಕ್ಕೆಟ್ಟುಹೋದಳು. ಆದರೂ ಧೈರ್ಯವನ್ನು
ತಂದುಕೊಂಡು ನಿಧಾನವಾಗಿ ಪಿಟೀಲನ್ನು ಬಾರಿಸತೊಡಗಿದಳು. ಸ್ವಲ್ಪ
ಹೊತ್ತು ಸುಂದರರಾಜ ಪಿಟೀಲಿನ ಧ್ವನಿ ಕೇಳಿಸದವನಂತೆಯೇ ಇದ್ದನು,
ಆವನ ನರಳಿಕೆಯೇ ಪಿಟೀಲಿನ ಧ್ವನಿಯನ್ನು ಮುಳುಗಿಸಿಬಿಟ್ಟಿತ್ತು. ಸೀತಾ
ಲಕ್ಷ್ಮಿ ಮೊದಲು ಅವನಿಗೆ ಅತ್ಯಂತ ಪ್ರಿಯವಾಗಿದ್ದ ಸುರುಟಿ ರಾಗದಲ್ಲಿ
“ ಗೀತಾರ್ಥಮು ” ಎಂಬ ಕೀರ್ತನೆಯನ್ನು ಬಾರಿಸಿದಳು. ಮದುವೆಯಾದ

ಮೊದಲ ದಿನಗಳಲ್ಲಿ ಆ ಕೀರ್ತನೆಯನ್ನು ಬಾರಿಸಿದರೆ ಸುಂದರರಾಜ ಆನಂದ ದಿಂದ ಹುಚ್ಚನಂತೆ ಕುಣಿದಾಡಿಬಿಡುತ್ತಿದ್ದನು. ಆದರೆ ಈಗ ಅಂತಹ ಅದ್ಭುತ ರಾಗ ಸಹ ಕೋಣನಮುಂದೆ ಕಿರಡಿ ಬಾರಿಸಿದಂತೆ ಆಯಿತು. ಸುಂದರರಾಜ ನರಳಿಗೆಯನ್ನು ಸ್ವಲ್ಪವೂ ನಿಲ್ಲಿಸದೆ "ನಿನ್ನ ಪಿಟೀಲನ್ನು ಒಲೆಗೆ ಹಾಕು. ಎಲ್ಲಿ ನನ್ನ ಸಂಜೀವಿನಿ ನನ್ನಮಾರ್ಫಿಯಾ, ಸತ್ತೆಸತ್ತೆ" ಎಂದು ನಿಟ್ಟುಸಿರುಬಿಟ್ಟನು ಅವನ ಭಾಷೆಯನ್ನು ಕಂಡು ಸೀತಾಲಕ್ಷ್ಮಿಗೆ ನಿಜವಾಗಿ ತುಂಬ ಭಯ ವಾಯಿತು. ಮಾರ್ಫಿಯಾ ಕೊಟ್ಟೇ ಬಿಡೋಣವೇ? ಅಯ್ಯೋ ಈ ನೋವನ್ನು ನೋಡಲಾರೆನಲ್ಲ ಎಂದು ಅವಳು ಕೊರಗಿದಳು. ಆದರೆ ಮರುಕ್ಷಣದಲ್ಲಿಯೇ ಪ್ರಾಣಾಚಾರ್ಯರು ಹೇಳಿದ್ದ "ಯಾವ ಕಾರಣದಿಂದಲೂ ರೋಗಿಗೆ ಮಾದಕ ವಸ್ತುವನ್ನು ಕೊಡಬಾರದು. ರೋಗನಿವಾರಣೆಯಲ್ಲಿ ಮಾದಕವಸ್ತು ಖಂಡಿತ ಆವಶ್ಯಕವಿಲ್ಲ. ಎಂಬ ಮಾತು ಜ್ಞಾಪಕಕ್ಕೆ ಬಂದು ಸುಮ್ಮನಾದಳು.

ತನಳಕ್ಕೆ ನಿಧಾನವಾಗಿ, ಸುಂದರರಾಜನಿಗೆ ಪ್ರಿಯವಾದ ವಂತವರಾಗಿ ರಾಗವನ್ನು ಆಲಾಪಿಸತೊಡಗಿತು. ಅವಳ ಪ್ರಯತ್ನವೇ ಇಲ್ಲದೆ ಬೆರಳುಗಳು ಚಲಿಸುತ್ತಿದ್ದವು. ನಿಧಾನವಾಗಿ "ಶಿವಶಿವ" ಎಂಬ ಕೀರ್ತನೆಯನ್ನು ಅವಳು ಬಾರಿಸತೊಡಗಿದಳು ಮದುವೆಯಾದ ಪ್ರಾರಂಭದಲ್ಲಿ ಆ ರಾಗ, ಕೀರ್ತನೆಗಳನ್ನು ಎಷ್ಟು ಬಾರಿಸಿದರೂ ಸುಂದರರಾಜನಿಗೆ ತೃಪ್ತಿ ಇರಲಿಲ್ಲ. ಈಗಲೂ ಸುಂದರರಾಜ ಹಾಸಿಗೆಯಮೇಲೆ ನರಳುತ್ತಾ ಬಿದ್ದಿದ್ದರೂ ಆ ರಾಗ ನಿಧಾನವಾಗಿ ಅವನನ್ನು ಮುತ್ತಿತು. ಅಪೂರ್ವವಾದ ತಂಪಾದ ಅಮೃತ ರಸಧಾರೆಯಂತೆ ಆ ಕೊರಡಿಯನ್ನೇ ಇಂಪಾದ ಗಾನವಾಪರಿಸಿ ಅವನನ್ನು ಅದರಲ್ಲಿ ಮುಳುಗಿಸಿ ಅವನ ನೊಂದ ಜೀವ ಬೆಂಡಾದ ಕರಣಗಳಿಗೆ ದೈವಿಕ ತೃಪ್ತಿಯನ್ನು ಕೊಟ್ಟಿತು. ಸುಂದರರಾಜನಿಗೆ ಒಂದು ಅಪೂರ್ವವಾದ ಸುಖ ಸಂಮಿಶ್ರ ಅನುಭವವುಂಟಾಯಿತು. ಒಂದೆಡೆ ನೋವು ಸಾವಿರ ಸೂಜಿಗಳು ಏಕಕಾಲದಲ್ಲಿ ಚುಚ್ಚಿದಂತೆ; ಜಗತ್ತಿನಲ್ಲಿ ನೋವಲ್ಲದೆ ಮತ್ತೇನೂ ಇಲ್ಲವೇ ಇಲ್ಲವೇನೊ ಎಂಬಂತೆ ಯಮಯಾತನೆಯನ್ನು ಕೊಡುತ್ತಿತ್ತು ಮತ್ತೊಂದೆಡೆ ಆ ನೋವನ್ನು ಅಮುಕಿ ಅಡಗಿಸಿ, ಭೌತ ಅತೀತವಾದ ಅತೀಂದ್ರಿಯವಾದ ದೈವಿಕಗಾನ ಅಮರ ಸಂಗೀತದಿಂದ ಅವನಿಗೆ ಅಮೃತತತ್ವವನ್ನು ಉಂಟು ಮಾಡಿತ್ತು. ಅವನ ಮನಸ್ಸಿನ ಮೇಲೆ ಉಂಟಾದ ಪರಿಣಾಮ ತನಗೇ ತಿಳಿಯದೆ

ಸೀತಾಲಕ್ಷ್ಮಿ ಯೂ ತನ್ನ ಪಾಡಿಗೆ ತಾನು ಗಾನವಾಹಿನಿಯಲ್ಲಿ ಲೀನಳಾಗಿ ತನ್ನ ಕೃತಿಯನ್ನು ತಾನೇ ಮೆಚ್ಚುತ್ತಿದ್ದಾಳೆಯೋ ಎಂಬಂತೆ ಏಕಾಗ್ರವಾಗಿ ಪಿಟೀಲನ್ನು ನುಡಿಸುತ್ತಿದ್ದಳು. ಪಂತವರಾಳಿಯನ್ನು ಮುಗಿಸಿ, ರಾಗ ಯಾವಾಗ ಸ್ವಾಭಾವಿಕವಾಗಿ ಕವಿಚಂದ್ರಿಕೆಗೆ ಹೋಯಿತೋ ಅವಳಿಗೇ ಅರಿವಾಗಲಿಲ್ಲ. ಅನಂತರ ಸೀತಾಲಕ್ಷ್ಮಿ ಯದುಕುಲ ಕಾಂಬೋದಿಯನ್ನು ಬಾರಿಸಿದಳು. ಅದು ಮುಗಿದಮೇಲೆ ಭೈರವಿಯಲ್ಲಿ " ಉಪಚಾರಮು " ಬಾರಿಸಿದಳು. ಪುನ್ನಾಗ ವರಾಳಿ, ಷಣ್ಮುಖಪ್ರಿಯ, ಹಿಂದೋಳ ರಾಗಗಳನ್ನೆಲ್ಲಾ ಒಂದಾದಮೇಲೆ ಒಂದ ರಂತೆ ಬಾರಿಸಿ ಕೊನೆಯಲ್ಲಿ ರಾಗಮಾಲಿಕೆಯನ್ನು ಬಾರಿಸಿದಳು. ಅನಂತರವೇ ಅವಳಿಗೆ ಆ ಗಾನಪ್ರಪಂಚದಿಂದ ಬಿಡುಗಡೆಯಾದುದು ಅಲ್ಲಿಯವರೆಗೆ ಸುಂದರ ರಾಜನಾಗಲೀ ಅವನ ರೋಗವಾಗಲೀ ಮಾರ್ಫಿಯವಾಗಲಿ ತಾನು ಯಾರು ಎಲ್ಲಿದ್ದೇನೆ ಎಂಬುದಾಗಲೀ ಅವಳಿಗೆ ನೆನಪಿಗೇ ಬಂದಿರಲಿಲ್ಲ. ಹಕ್ಕಿ ರಕ್ಕೆ ಬೀಸುತ್ತಾ ತಾನು ಎಲ್ಲಿಗೆ ಹೋಗುತ್ತಿದ್ದೇನೆಂಬುದನ್ನು ಸಹ ಗಮನಿಸದೆ ನೀಲಾಕಾಶದಲ್ಲಿ ಸ್ವೇಚ್ಛೆಯಿಂದ ಹಾರಾಡುವಂತೆ, ಮೀನು ನೀರಿನಲ್ಲಿ ಈಜು ವಂತೆ ಆಕೆ ಪಿಟೀಲಿನ ಮೂಲಕ ಇಹಲೋಕದ ಕಾರ್ಪಣ್ಯವನ್ನು ಮರೆತು ಅಮೃತತ್ವವನ್ನು ಸಾಧಿಸಿಕೊಳ್ಳುತ್ತಿದ್ದಳು ಸೀತಾಲಕ್ಷ್ಮಿ ಕೊನೆಯಲ್ಲಿ ಕೋಕಿಲ ಧ್ವನಿಯ " ತೊಲಿನೇಮ " ಕೀರ್ತನೆಯನ್ನು ಮುಗಿಸುವ ಹೊತ್ತಿಗೆ ಅವಳಿಗೆ ಸುಂದರರಾಜನ ನೋವಿನ ಜ್ಞಾಪಕ ಬಂದಿತು. ಆಕೆ ಕೂಡಲೇ ಗಾಬರಿಯಿಂದ ಪಿಟೀಲನ್ನು ಮೆಲ್ಲನೆ ಕೆಳಗೆ ಇಟ್ಟು ಸುಂದರರಾಜನ ಸಮೀ ಪಕ್ಕೆ ಹೋಗಿ ನೋಡಿದಳು, ಸುಂದರರಾಜ ಸುಖವಾಗಿ ನಿದ್ರಿಸುತ್ತಿದ್ದನು.

ಸೀತಾಲಕ್ಷ್ಮಿಗೆ ಆನಂದದ ಆಧಿಕ್ಯದಲ್ಲಿ ಏನೂ ತೋರಲೇ ಇಲ್ಲ. " ಮಾರ್ಫಿಯಾ ಕೊಟ್ಟಿಲ್ಲ, ನಿದ್ರೆ ಬಂದಿದೆ " ಇವೆರಡೇ ಆಕೆಯ ಮನಸ್ಸಿಗೆ ಹೊಳೆದ ಭಾವಗಳು. ಅನಿರ್ವಚನೀಯವಾದ ದೈವಿಕವಾದ ಆನಂದದಿಂದ ಆಕೆಗೆ, ಭಗವಂತ ಪ್ರತ್ಯಕ್ಷವಾಗಿದ್ದರೆ ಹೇಗೆ ಆಗುತ್ತಿತ್ತೋ ಹಾಗೆ ಆಯಿತು. ತನ್ನ ಸಮಸ್ತಸೇವೆಗೂ ಪ್ರತಿಫಲ ದೊರೆತಂತೆಯೇ ಆಕೆ ಭಾವಿಸಿದಳು ಅವಳ ಮನಸ್ಸು ಹಗುರವಾಯಿತು. ಜೀವನ ಪೂರ್ಣವಾದಂತೆ ಭಾವನೆ ಬಂತು. ಆಕೆಯ ಕಣ್ಣುಗಳಿಂದ ಧಾರಾಳವಾಗಿ ಆನಂದಬಾಷ್ಪ ಹರಿಯಿತು ಅವಳ ಮನ ಸ್ಸಿನ ಏನೋ ಒಂದು ಹೊರೆಯೇ ಇಳಿದಂತಾಯಿತು. ಆಕೆ ಮತ್ತೇನೂ

ತೋರದೆ ಕುಳಿತುಕೊಂಡು ಕಣ್ಣು ಮುಚ್ಚಿಕೊಂಡು ಬಹಳ ಹೊತ್ತಿನವರೆಗೆ ದೇವರ ಧ್ಯಾನ ಮಾಡಿದಳು.

ಹೀಗೆ ಸುಂದರರಾಜ ಸುಮಾರು ಒಂದು ಗಂಟೆ ನಿದ್ರೆ ಮಾಡುತ್ತಿರುವ ವೇಳೆಗೆ, ಮೊದಲು ನಿಶ್ಶಬ್ದವಾಗಿ ಮೆಲ್ಲನೆ ಕಲ್ಯಾಣಮ್ಮ ಒಳಕ್ಕೆ ಪ್ರವೇಶಿಸಿದರು. ಸನ್ನೆಯಿಂದಲೇ "ಔಷಧಿ ಕೊಡಲಿಲ್ಲವೇ ?" ಎಂದು ಕೇಳಿದರು ಸೀತಾಲಕ್ಷ್ಮಿ ಇಲ್ಲವೆಂದು ತಲೆಯಲ್ಲಾಡಿಸಿದಳು. ಕಲ್ಯಾಣಮ್ಮನವರು ಹಾಗಾದರೆ ಹೇಗೆ ಮಾಡಿದೆ ಎಂಬಂತೆ ಕೈಯಲ್ಲಾಡಿಸಿದರು. ಸೀತಾಲಕ್ಷ್ಮಿ ಮಾತನಾಡದೆ ಪಿಟೀಲಿನ ಕಡೆ ಕೈ ತೋರಿಸಿದಳು. ಕಲ್ಯಾಣಮ್ಮ ಒಂದು ಗಳಿಗೆ ಒಂದು ಅದ್ಭುತ ವಸ್ತುವನ್ನು ನೋಡುವಂತೆ ಪಿಟೀಲನ್ನೇ ನೋಡಿದಳು ಅನಂತರ ಏನೂ ತಿಳಿಯದವಳಂತೆ ಪಿಟೀಲಿಗೇ ಒಂದು ಸಲ ಕೈ ಮುಗಿದು ಬಿಟ್ಟಳು. ಸೀತಾಲಕ್ಷ್ಮಿ ಚಿಕ್ಕವಳಾಗಿ ಅವಳ ಸೊಸೆಯಾಗದೆ ಇದ್ದಿದ್ದರೆ, ಕಲ್ಯಾಣಮ್ಮ ಅವಳಿಗೇ ಕೈ ಮುಗಿಯುತ್ತಿದ್ದಳು. ಈಗಲೂ ಅವಳು ಪಿಟೀಲಿಗೆ ಕೈ ಮುಗಿಯುತ್ತಾ ನಿನಗೇ ಎಂಬಂತೆ ಸೀತಾಲಕ್ಷ್ಮಿಯನ್ನು ನೋಡಿದ ಮುಖಭಾವ ಸೀತಾಲಕ್ಷ್ಮಿಗೆ ಅರ್ಥವಾಗಿ, ಅವಳು ಸಂಕೋಚದಿಂದಲೂ ಮುಖವನ್ನು ತಗ್ಗಿಸಿದಳು. ಕಲ್ಯಾಣಮ್ಮ ಹೊರಡುವುದಕ್ಕೆ ಒಂದು ಗಳಿಗೆ ಮುಂಚೆ ಗುಂಡಣ್ಣನವರು ಒಳಕ್ಕೆ ಬಂದರು. ಅವರೂ ಸನ್ನೆಯಿಂದಲೇ ವಿಷಯಗಳನ್ನೆಲ್ಲ ತಿಳಿದುಕೊಂಡರು, ಮಾರ್ಫಿಯಾ ಇಲ್ಲದೆ ಎಂದೂ ನಿದ್ರೆಮಾಡದಿದ್ದ ಸುಂದರರಾಜ, ಇಂದು ಮಾಡುತ್ತಿದ್ದುದರಿಂದ, ಅವರಾರಿಗೂ ಗಟ್ಟಿಯಾಗಿ ಉಸಿರು ಬಿಡಲು ಸಹ ಧೈರ್ಯವಿಲ್ಲ

ಪ್ರತಿದಿನ ರಾತ್ರಿ ಸುಂದರರಾಜ ಮಾರ್ಫಿಯಾ ಮತ್ತಿನಿಂದ ನಿದ್ರಿಸುತ್ತಿರುವಾಗ, ಅವನ ಹಾಸಿಗೆಯ ಬಳಿ ಕುಳಿತು ಕಾಯುವುದು ಗುಂಡಣ್ಣನವರ ಹೊಣೆಗಾರಿಕೆಯಾಗಿತ್ತು. ಕುಳಿತುಕೊಂಡೇ ಅವರು ತೂಕಡಿಸುತ್ತಿದ್ದರು. ಹೀಗೆ ಸುಮಾರು ಮೂರು ತಿಂಗಳಿನಿಂದ ಮಾಡಿದುದರಿಂದ ಮೊದಲೇ ಕೆಟ್ಟಿದ್ದ ಅವರ ದೇಹಾರೋಗ್ಯ ಮತ್ತಷ್ಟು ಕೆಟ್ಟಿತ್ತು ಈ ದಿವಸ ಸೀತಾಲಕ್ಷ್ಮಿ ಅವರ ಭಾಗದ ಹೊರೆಯನ್ನು ಹೊತ್ತುದರಿಂದ, ಅವರು ಮುಖದಲ್ಲಿಯೇ ಕೃತಜ್ಞತೆಯನ್ನು ಸೂಚಿಸುತ್ತಾ ಹೋಗಿ ಹಾಸಿಗೆಯಮೇಲೆ ಬಿದ್ದುಕೊಂಡರು.

ಸೀತಾಲಕ್ಷ್ಮಿ ಕೊಠಡಿಯಲ್ಲಿ ಹಾಕಿದ್ದ ಆರಾಮಕುರ್ಚಿಯ ಮೇಲೆ ಬಿದ್ದುಕೊಂಡಳು. ಸುಂದರರಾಜ ಒಂದೇ ಸಮನಾಗಿ ನಿಧಾನವಾಗಿ ಉಸಿರು ಬಿಡುತ್ತಿದ್ದನು. ಬಹು ದಿನಗಳಿಂದ ಅವನ ಮುಖದಮೇಲೆ ಕಾಣುತ್ತಿದ್ದ ನೋವು ಮರೆಯಾಗಿ, ಮುಖ ಶಾಂತವಾಗಿ ಪ್ರಸನ್ನವಾಗಿತ್ತು. ಅದು ಹುಣ್ಣಿಮೆಯ ಮೊದಲ ರಾತ್ರಿ; ಆಕಾಶ, ಚಂದ್ರನೆಂಬ ಬಟ್ಟಲಿನಲ್ಲಿ ನಕ್ಷತ್ರಕುಸುಮವನ್ನು ತುಂಬಿ ಪರಮಾತ್ಮನಿಗೆ ಅರ್ಪಿಸುತ್ತಿತ್ತು. ಹಿತ್ತಲ ಏಳುಮಲ್ಲಿಗೆ ಹೂವಿನ ಗಂಧವನ್ನು ಹೊತ್ತು ತಂಗಾಳಿ ಮೆಲ್ಲನೆ ಚಲಿಸುತ್ತಿತ್ತು. ಆ ಗಾಳಿ ಸ್ವಲ್ಪ ಬಲವಾದಾಗ ತೆಂಗಿನ ಗರಿಗಳು ಹೆಚ್ಚು ವೇಗದಿಂದ ಅಲುಗಾಡಿ ದೂರದ ಜನತೆಯನ್ನು ಕೈ ಬೀಸಿ ಕರೆಯುವಂತಿದ್ದಿತು. ಸುಂದರರಾಜನ ಮುಖವನ್ನು ನೋಡುತ್ತ ನೋಡುತ್ತಿದ್ದಂತೆ, ಸೀತಾಲಕ್ಷ್ಮಿಗೆ ತಾವಿಬ್ಬರೂ ಬಹಳ ಕಾಲ ಒಟ್ಟಿಗೆ ಇದ್ದು ಹೀಗೆಯೇ ನಸಗಿದ್ದವರಂತೆ ಭಾಸವಾಯಿತು. ವಿವಾಹವಾದ ನಂತರದ ಈಚೆಯ ವಿರಸದ ದಿನಗಳು ಅವರ ಮಧ್ಯೆ, ಕೆಟ್ಟ ಸ್ವಪ್ನದಂತೆ ಕಳಚಿ ಹೋಗಿ, ಬಾಳು ಆವತ್ತು ಬಿಟ್ಟ ಸ್ಥಳದಿಂದ ಸ್ವಾಭಾವಿಕವಾಗಿ ಮುಂದುವರಿದಂತೆ ಭಾಸವಾಯಿತು. ಹೀಗೆ ಕುಳಿತು ಸುಖಸ್ವಪ್ನವನ್ನು ಕಾಣುತ್ತಿದ್ದಂತೆ ಸೀತಾಲಕ್ಷ್ಮಿಗೆ ನಿಧಾನವಾಗಿ ನಿದ್ದೆ ಬಂದಿತು. ಅವನು ಎಚ್ಚರವಾಗಿರಬೇಕೆಂದೇ ಮನಸ್ಸುಮಾಡಿಕೊಂಡಿದ್ದಳು. ಆದರೆ, ಸುಂದರರಾಜನ ನಿದ್ರೆಯನ್ನು ನೋಡಿದ ಒಂದು ಮನಶ್ಶಾಂತಿಯಿಂದ ಅವಳಿಗೂ ನಿದ್ರೆ ಬಂದುಬಿಟ್ಟಿತು. ಆಕೆ ಕಣ್ಣುಬಿಟ್ಟು ನೋಡಿದಾಗ ಘಂಟೆ ಮೂರು ಆಗಿತ್ತು. ಗಡಿಯಾರದ ಟಿಕ್ ಟಿಕ್ ಶಬ್ದದ ಹೊರತು ಮತ್ತಾವುದೂ ಧ್ವನಿ ಇರಲಿಲ್ಲ. ಸುಂದರರಾಜನೂ ನಿದ್ರೆಯಿಂದ ಎಚ್ಚರಗೊಂಡನು. “ಪಾಕ್ಸಿಯಾ ಇಲ್ಲ ಹಾಗೆ ನಿದ್ರೆ ಬಂತು. ನೋವೂ ಕಡಮೆ ಆಗಿದೆ” ಎಂದನು. ಸೀತಾಲಕ್ಷ್ಮಿ ಅವನ ಮಂಚದ ಬಳಿಗೆ ಹೋದಳು. ಸುಂದರರಾಜನಿಗೆ ಆರು ತಿಂಗಳಿನಿಂದ ಇಲ್ಲದ ಸುಖ ಮನಶ್ಶಾಂತಿ ಹಗುರ ಉಂಟಾಗಿತ್ತು. ಅವನು ಅವಳ ಕೈ ಹಿಡಿದುಕೊಂಡು “ಸುಖವಾಗಿ ನಿದ್ರೆ ಬಂತು. ಇನ್ನೂ ನಿದ್ರೆಕಣ್ಣು ಎಳೆದುಕೊಂಡು ಹೋಗುತ್ತಾ ಇದೆ. ನಿನ್ನಲ್ಲಿ ಏನೋ ಮಾಯೆ ಇದೆ. ರಾತ್ರಿ ರಾತ್ರಿ ಹೀಗೆಯೇ ಕುಳಿತಿದ್ದೆಯಾ? ನೀನೂ ನಿದ್ರೆಮಾಡು” ಎಂದನು. ಸೀತಾಲಕ್ಷ್ಮಿ “ನನಗೂ ನಿದ್ರೆ ಬಂತು” ಎಂದಳು. ಆ ಮಾತು ಸುಂದರ

ರಾಜನ ಕಿವಿಗೆ ಬಿತ್ತೊ ಇಲ್ಲವೋ ಗೊತ್ತಿಲ್ಲ. ಅವನು ಅಷ್ಟರಲ್ಲಿ ಸುಖವಾಗಿ ಕಣ್ಣುಮುಚ್ಚಿ ಮತ್ತೆ ನಿದ್ರೆಹೋಗಿಬಿಟ್ಟನು. ಸೀತಾಲಕ್ಷ್ಮಿಗೂ ಕುಳಿತಲ್ಲಿಯೇ ನಿದ್ರೆ ಬಂದುಬಿಟ್ಟಿತು.

## ೨೮

ಸುಂದರರಾಜನಿಗೆ, ಜಗತ್ತು ಅಂದಿನಿಂದಲೇ ಒಂದು ಹೊಸ ಮೆರುಗನ್ನು ತಳೆಯಿತು. ಅವನನ್ನು ಹಿಡಿದಿದ್ದ ಯಾವುದೋ ಒಂದು ಪಿಶಾಚಿ ಅವನನ್ನು ಬಿಟ್ಟುಹೋಗಿ ಅವನ ಮನಸ್ಸು ದೇಹಗಳು ಹಗುರವಾದುವು. ಅವನು ಪರೆಯನ್ನು ಉಜ್ಜಿದ ಹಾವಿನಂತೆ, ಹೊಸ ಯವ್ವನವನ್ನು ಹೊಂದಿ ಮತ್ತೆ ಮುಂದಿನ ಸುಖದ ಕನಸಿನ ರಾಜ್ಯದಲ್ಲಿ, ಗರಿಗೆದರಿಕೊಂಡು ವಿಹರಿಸತೊಡಗಿದನು. ಸಾವು ತನ್ನನ್ನು ಅಗಿದು ಉಗಿದಿದ್ದರೂ ಸೀತಾಲಕ್ಷ್ಮಿ ಅವನ ಸಮೀಪದಲ್ಲಿದ್ದುದರಿಂದ ಅವನಿಗೆ ಬಾಳು ಹಚ್ಚ ಹೊಸದಾಯಿತು ಅದುವರೆಗೆ ಸಂಭವಿಸಿದ್ದುದೆಲ್ಲ ಅವನ ಮನಸ್ಸಿನಿಂದ ಪೂರ್ಣವಾಗಿ ಮರೆಯಾಗಿ, ಸೀತಾಲಕ್ಷ್ಮಿ ಒಂದು ಅದ್ಭುತ ದೇವತೆಯಾಗಿ ಅವನಿಗೆ, ಅಂದೇ ಅವಳು ಹೊಸದಾಗಿ ಕಣ್ಣಿಗೆ ಬಿದ್ದಂತೆ ತೋರಿದಳು.

ರಂಭಾಪುರಿಯ ಗುಂಡಣ್ಣನವರ ಮನೆ ಮತ್ತೆ—ಈಚೆಗೆ ಅನೇಕ ವರುಷಗಳಿಂದ ಇಲ್ಲದುದನ್ನು ಗೆಲುವಾಯಿತು. ಸೀತಾಲಕ್ಷ್ಮಿ ಪರಮಾತ್ಮನಿಂದ ವರವನ್ನೇ ಪಡೆದವಳೋ ಎಂಬಂತೆ ಒಬ್ಬಳೇ ಹತ್ತು ಜನರ ಶಕ್ತಿಯನು ಹೊಂದಿ, ಬೇರೆಬೇರೆ ಹತ್ತು ಜನರ ಕಾರ್ಯವನ್ನೂ ಮಾಡುತ್ತಿದ್ದಳು. ಬಾಲ್ಯದಿಂದಲೂ ತಾಯಿಯಿಲ್ಲದಿದ್ದ ಆಕೆ ಅಡಿಗೆಮಾಡುವುದನ್ನು ಚನ್ನಾಗಿ ಕಲಿತಿದ್ದಳು. ಆದರೆ, ಆಕೆ ಬಂದ ಎರಡು ದಿನಗಳವರೆಗೆ ಕಲ್ಯಾಣಮ್ಮನವರೂ, ಗುಂಡಣ್ಣನವರೂ ಕಾಹಿಲೆಯ ಕಳವಳದಲ್ಲಿ ಹೋಗೋ ಆಕೆಯ ಕೈಯಿನ ಅಡಿಗೆಯನ್ನು ಊಟಮಾಡಿಬಿಟ್ಟರು. ಮೂರನೆಯ ದಿನ. ಸೀತಾಲಕ್ಷ್ಮಿ ಕೊಡುತ್ತಿದ್ದ ಔಷಧಿಗಳಿಂದಲೇ ಗುಂಡಣ್ಣನವರೂ, ಕಲ್ಯಾಣಮ್ಮನವರೂ, ಚೇತರಿಸಿಕೊಂಡರು. ಅವರು ಎದ್ದು ಸ್ವಲ್ಪ ತಿರುಗಾಡಲು ಪ್ರಾರಂಭಿಸಿದ ಕೂಡಲೇ, ಅದುವರೆಗೆ ಅವರ ಕೈಯನ್ನೇ ಬಿಟ್ಟಿದ್ದ ಶಾಮು, ಕೃಷ್ಣ, ಅವರೂ ಅವರ ಪತ್ನಿಯರೂ ಮತ್ತೆ ಈ ಮನೆಗೆ ಬರತೊಡಗಿದರು ಕಲ್ಯಾಣಮ

ನವರು ಸ್ವಲ್ಪ ಚೇತರಿಸಿಕೊಂಡುದೇ ತಡ, ಪಂಚಗವ್ಯವನ್ನು ತೆಗೆದುಕೊಂಡು ತಾವೇ ಅಡಿಗೆಗೆ ಪ್ರಾರಂಭಿಸಿದರು. ಮನೆಯ ಒಂದು ಭಾಗದಲ್ಲಿಯೇ ಇದ್ದು ಕೊಂಡು ಅದುವರೆಗೆ ಕಲ್ಯಾಣಮ್ಮನವರನ್ನಾಗಲಿ ಸುಂದರರಾಜನನ್ನಾಗಲಿ ಇಣಕಿ ಸಹ ನೋಡದಿದ್ದ ಉಳಿದ ಸೊಸೆಯರು, ಮನೆಗೆ ಬಂದು ಧಾಮ್ ಧೂಮ್ ಎಂದು ಶಬ್ದಮಾಡಿ "ಈ ಮನೆಯಲ್ಲಿ ಮಡಿ ಮೈಲಿಗೆ ಯಾವುದೂ ಇಲ್ಲವೆಂದು" ಸಿಡುಕಾಡಿ ಒಂದು ಪಾತ್ರೆ ತುಂಬ ಸಗಣಿನೀರು ಮಾಡಿ ಅದನ್ನು ಮನೆಗೆಲ್ಲ ಎರಚಿದರು. ಸುಂದರರಾಜನ ಹಾಸಿಗೆ ಮಗ್ಗುಲಲ್ಲಿ ಕುಳಿತಿದ್ದ ಸೀತಾಲಕ್ಷ್ಮಿಗೂ, ಮೂಲೆಯಲ್ಲಿಟ್ಟಿದ್ದ ಪಿಟೀಲಿಗೂ ಧಾರಾಳವಾಗಿ ಸಗಣಿನೀರಿನ ಅಭಿಷೇಕ ವಾಯಿತು ಹಿಂದೆ ಸೀತಾಲಕ್ಷ್ಮಿ ಬಂದಿದ್ದಾಗ ಶಾಮುನ ಹೆಂಡತಿ, ಕೊನೆಯ ಗಳಿಗೆಯಲ್ಲಿ ಅವಳಲ್ಲಿ ಸ್ವಲ್ಪ ಸಮಾಧಾನ ಹೊಂದಿದ್ದರೂ ಈಚೆಗೆ ಗಂಡ ಹೆಂಡರು (ಶಾಮು ಮತ್ತು ಹೆಂಡತಿ) ಒಮ್ಮನಸ್ಸಿನವರಾದ ಮೇಲೆ, ಸೀತಾ ಲಕ್ಷ್ಮಿ ಶಾಮುನ ಹೆಂಡತಿಗೆ ಮೊದಲಿಗಿಂತಲೂ ಹೆಚ್ಚು ದುಷ್ಟಳಾಗಿ ತೋರ ತೊಡಗಿದಳು. ಶಾಮುನ ಹೆಂಡತಿ ತನ್ನ ಅಸಮಾಧಾನವನ್ನು ಮುಚ್ಚಿ ಕೊಳ್ಳಲೇ ಇಲ್ಲ. ಸೀತಾಲಕ್ಷ್ಮಿಯನ್ನೇ ಹಾಕಿ ತೀಡುವಂತೆ, ಅವಳು ಮೊದಲು ದಿನ ಮುಟ್ಟಿದ್ದ ಪಾತ್ರೆಗಳನ್ನೆಲ್ಲ ದಡಾರ್ ಭಡಾರ್ ಎಂದು ಸಪ್ಪುಮಾಡಿ ತಿಕ್ಕಿದಳು. ಮತ್ತೆ ಎಲ್ಲರೂ ಒಂದಾಗಿ ಕಲ್ಯಾಣಮ್ಮನವರನ್ನೇ ಅಡಿಗೆಮನೆ ಸೇರಿಸಿದರು.

ಮತ್ತೆ ಸೀತಾಲಕ್ಷ್ಮಿಯ ಬಾಳು ಮೊದಲಿನಂತೆಯೇ ಅಸ್ಪೃಶ್ಯತೆಯ ಬಾಳು ಆಯಿತು ಆಕೆ ಪ್ರಾರಂಭದಲ್ಲಿ ಮೂರು ದಿನ ಸುಂದರರಾಜನಿಗೆ ಗಂಜಿ ಕಾಫಿ ಮಾಡಿಕೊಟ್ಟಿದ್ದಷ್ಟೇ ಅವಳ ಪತಿಸೇವೆಯಾಯಿತು. ಬರಿಯ ಕಲ್ಯಾಣಮ್ಮನವರೊಬ್ಬರೇ ಇದ್ದಿದ್ದರೆ ಸೀತಾಲಕ್ಷ್ಮಿ ಅಡಿಗೆಮನೆಗೆ ಹೋಗು ತ್ತಿದ್ದಳೇನೋ? ಆದರೆ, ಈಚೆಗೆ ಸೀತಾಲಕ್ಷ್ಮಿ ಬಂದಮೇಲೆ, ಅವಳಮೇಲೆ ಕಾವಲಿರುವುದಕ್ಕಾಗಿಯೋ ಎಂಬಂತೆ ಶಾಮುನ ಹೆಂಡತಿ, ತಾವು ಬೇರೆ ಅಡಿಗೆಮಾಡಿಕೊಳ್ಳುತ್ತಿದ್ದರೂ, ಹೆಚ್ಚು ಕಾಲವನ್ನು ಕಲ್ಯಾಣಮ್ಮನವರ ಅಡಿಗೆ ಮನೆಯಲ್ಲಿಯೇ ಕಳೆಯುತ್ತಿದ್ದಳು. ದಿನ ದಿನಕ್ಕೆ ಸುಂದರರಾಜ ನಿಗೆ ಗುಣವಾಗುತ್ತಾ ಬಂದಂತೆ, ಕೃಷ್ಣನ ಹೆಂಡತಿ, ಸೀತಾಲಕ್ಷ್ಮಿಯನ್ನು ಸುಂದರರಾಜನ ಹಾಸಿಗೆಯಿಂದ ದೂರ ದೂರಕ್ಕೆ ತಳ್ಳ ತೊಡಗಿದಳು. ಕೊನೆ

ಕೊನೆಗೆ ಸೀತಾಲಕ್ಷ್ಮಿ ಸುಂದರರಾಜನಿಂದ ಎಷ್ಟು ದೂರದಲ್ಲಿ—ಕೊಠಡಿಯ ಮೂಲೆಯಲ್ಲಿ ಕುಳಿತರೂ— ಮಹಾಲಕ್ಷ್ಮಿಗೆ ಸಮಾಧಾನವಾಗುತ್ತಿರಲಿಲ್ಲ. "ಎಲ್ಲಿಯಾದರೂ ತಗಲಿಸಿಕೊಂಡು ಬಿಟ್ಟೀಯೇ ದೂರ ಹೋಗು" ಎಂದು ಅವಳು ಸೀತಾಲಕ್ಷ್ಮಿಯನ್ನು ಗದರಿಸುತ್ತಿದ್ದಳು. ಸೀತಾಲಕ್ಷ್ಮಿಗೆ ಕೇಳು ವಂತೆಯೇ "ಇದೆಲ್ಲಿಯ ಅನಿಷ್ಟ" ಎಂದು ಗೊಣಗುತ್ತಿದ್ದಳು. ಆದರೆ, ಸುಂದರರಾಜ ದಿನದಿನಕ್ಕೆ ಸೀತಾಲಕ್ಷ್ಮಿಯ ಔಷಧಿಯಿಂದ ಗುಣಮುಖ ನಾಗುತ್ತಿದ್ದುದರಿಂದ ಸೀತಾಲಕ್ಷ್ಮಿಯು ಈ ಯಾವ ತಿರಸ್ಕಾರವನ್ನೂ ಗಮನಿಸಲೇ ಇಲ್ಲ. ಆಕೆ ಪ್ರತಿದಿನವೂ ತಪ್ಪದೆ ಸುಂದರರಾಜನಿಗೆ ಮೂರು ಹೊತ್ತು ಅವನ ಔಷಧಿ ಕೊಡುತ್ತಿದ್ದಳು. ಕಲ್ಯಾಣಮ್ಮನವರಿಗೂ ಗುಂಡಣ್ಣ ನವರಿಗೂ ಔಷಧಿ ಕೊಡುತ್ತಿದ್ದಳು. ನಿದ್ರೆಗೆ ಮುಂಚೆ ಒಂದು ಅರ್ಧ ಗಂಟೆಯಾದರೂ ಸೀತಾಲಕ್ಷ್ಮಿ ಪಿಟೀಲು ಬಾರಿಸದಿದ್ದರೆ ಸುಂದರರಾಜನಿಗೆ ನಿದ್ರೆ ಬರುತ್ತಿರಲಿಲ್ಲ.

ಅಂತೂ ಸೀತಾಲಕ್ಷ್ಮಿಗೆ ಸುಂದರರಾಜನ ಎದುರಿಗಿರುವುದೇ ತೃಪ್ತಿ ಯಾಗಿ ಮೂರು ತಿಂಗಳು ಮೂರು ದಿನಗಳಂತೆಯೇ ಕಳೆದುಹೋಯಿತು. ನಿಧಾನವಾಗಿ ಸುಂದರರಾಜ ಎದ್ದು ತಿರುಗಾಡತೊಡಗಿದನು. ಅವನ ಆರೋಗ್ಯ ಹೆಚ್ಚುತ್ತಾ ಹೋದಂತೆ ಸೀತಾಲಕ್ಷ್ಮಿಯಲ್ಲಿ ಅವನ ಆಸೆಯೂ ಹೆಚ್ಚುತ್ತಾ ನಡೆಯಿತು. ಗುಂಡಣ್ಣನವರಿಗಾಗಲೀ ಕಲ್ಯಾಣಮ್ಮನವರಿಗಾಗಲೀ ಅವನ ಆಸೆ ತಿಳಿಯದೇ ಹೋಗಲಿಲ್ಲ. ಆದರೆ, ಆ ಮಾರ್ಗದಲ್ಲಿ ಮಾತ್ರ ಸೀತಾಲಕ್ಷ್ಮಿ ಸುಂದರರಾಜನ ಸುಖವಿದೆಯೆಂದು ಅವರಿಗೆ ಗೊತ್ತಾದರೂ, ಸಮಾಜವನ್ನು ಎದುರಿಸುವ ಧೈರ್ಯ ಅವರಿಗೆ ಇರಲಿಲ್ಲ "ಸೀತಾಲಕ್ಷ್ಮಿಯೊಂದಿಗೆ ಸುಖವಾಗಿ ತನ್ನ ಪಾಡಿಗೆ ನಾನು ಇದ್ದುಬಿಡೋಣ" ಎಂದು ಸುಂದರರಾಜ ಯೋಚಿ ಸುವನು ಆ ಸುಖದ ಕನಸಿನಲ್ಲಿ ಅವನು ಅರ್ಧದಾರಿ ಹೋಗುವ ಹೊತ್ತಿಗೆ ಇದ್ದಕ್ಕಿದ್ದಂತೆ, ಆ ಘಾತಕ ನರಸಿಂಹನ ವಿಕಾರ ರೂಪು ಕಣ್ಣಿಗೆ ಬಿದ್ದು, ಕನಸಿನಲ್ಲಿ ಹಾವನ್ನು ಕಂಡವನು ಬೆಚ್ಚಿಬಿದ್ದಂತೆ ಬೆಚ್ಚಿಬೀಳುವನು. ಹೀಗೆ ಇನ್ನೂ ಒಂದು ತಿಂಗಳು ಕಳೆಯುವುದರೊಳಗಾಗಿ ಸುಂದರರಾಜನಿಗೆ ದೇಹಕ್ಕೆ ಪೂರ್ಣವಾಗಿ ಗುಣವಾದರೂ ಮನಸ್ಸಿಗೆ ಪೂರ್ಣ ಅಶಾಂತಿಯುಂಟಾಯಿತು.

ಆಗ ರಂಭಾಪುರಿಗೆ ನೆಂಟರೊಬ್ಬರನ್ನು ನೋಡಲು ಬಂದಿದ್ದ ಮೈಸೂರಿನ

ವೈದ್ಯರೊಬ್ಬರು ಸುಂದರರಾಜನಿಗೆ "ನೀನು ಎಲ್ಲಿಯಾದರೂ ಹೋಗಿ ಹವಾ ಬದಲಾವಣೆ ಮಾಡಿಕೊಂಡು ಬಾ. ಸ್ವಲ್ಪ ಉಷ್ಣದೇಶಕ್ಕೆ ಹೋದರೆ ವಾಸಿ" ಎಂದು ಸೂಚಿಸಿದರು. ಗುಂಡಣ್ಣನವರು "ಹಾಗಾದರೆ ಹೋಗಿ ಹದಿನೈದು ದಿನಗಳು ಮದರಾಸಿನಲ್ಲಿಯಾದರೂ ಇದ್ದು ಬಾ" ಎಂದು ಸುಂದರರಾಜನಿಗೆ ಹೇಳಿದರು. ಸುಂದರರಾಜ "ನಾನು ಒಬ್ಬನೇ ಅಲ್ಲಿ ಹೋಗಿ ಮಾಡುವುದೇನು? ನನಗೆ ಹೋಗುವುದಕ್ಕೇ ಬೇಜಾರು" ಎಂದನು. ಕೃಷ್ಣನ ಹೆಂಡತಿ ಮಹಾಲಕ್ಷ್ಮಿ "ಒಬ್ಬನೇ ಹೋಗುವುದಕ್ಕೆ ಬೇಜಾರಾದರೆ ನಮ್ಮ ಅತ್ತೆ ಮಾವಂದಿರನ್ನೂ ಜತೆಯಲ್ಲಿ ಕರೆದುಕೊಂಡು ಹೋಗು. ಅವರಿಗೂ ತೀರ್ಥಯಾತ್ರೆಯಾಯಿತು. ಶ್ರೀರಂಗ ತಿರುಪತಿ ಕಂಚಿ ಮಧುರೆ ಕಾಳಹಸ್ತಿ ಪಳನಿ ಚಿದಂಬರಂ ಎಲ್ಲವನ್ನೂ ತಿರುಗಿಕೊಂಡು ಬನ್ನಿ. ಇಹವೂ ಆಯಿತು ಪರವೂ ಆಯಿತು" ಎಂದಳು. ಮಹಾಲಕ್ಷ್ಮಿ, ಸೀತಾಲಕ್ಷ್ಮಿಯನ್ನೇ ನೋಡುತ್ತಾ "ಈ ಹಾಳು ಖಾಯಿಲೆ ನೆಪದಿಂದ ಸಿಕ್ಕ ಸಿಕ್ಕ ಔಷಧಿ ಕುಡಿದು ತಿನ್ನಬಾರದವರ ಕೈಯ್ಯಲ್ಲೆಲ್ಲ ತಿಂದುಬಿಟ್ಟಿದ್ದೀರಿ. ಯಾತ್ರೆ ತೀರ್ಥ ತಿರುಗಿಕೊಂಡು ದೇವರ ಸೇವೆಮಾಡಿಕೊಂಡು ಬಂದರೆ ಪಾಪವೆಲ್ಲ ಪರಿಹಾರವಾಗುತ್ತೆ. ಎಲ್ಲರೂ ಹೋಗಿ ಬನ್ನಿ" ಎಂದಳು. ಮಹಾಲಕ್ಷ್ಮಿಯ ಮನಸ್ಸಿನಲ್ಲಿದ್ದುದು ನಿಜವಾಗಿ ಅದೊಂದೇ ಉದ್ದೇಶ. ಗುಂಡಣ್ಣನವರನ್ನೂ ಕಲ್ಯಾಣಮ್ಮನವರನ್ನೂ ಸುಂದರರಾಜನನ್ನೂ ಯಾತ್ರೆಗೆ ಕಳುಹಿಸಿ, ಸೀತಾಲಕ್ಷ್ಮಿಯ ಕೈಯಲ್ಲಿ ಅವರು ಔಷಧಿ ಆಹಾರ ಸೇವಿಸಿದುದಕ್ಕೆ ಪಾಪಪರಿಹಾರಮಾಡಿಕೊಂಡು ಬರಬೇಕೆಂದು ಮಹಾಲಕ್ಷ್ಮಿ ಹಿಂದೆಯೇ ನಾಲ್ಕಾರು ಸಲ ಸೂಚಿಸಿದ್ದಳು. ಆದರೆ, ಗುಂಡಣ್ಣನವರು ಆಕೆಯ ಮಾತಿಗೆ ಕಿವಿಗೊಟ್ಟಿರಲಿಲ್ಲ ಒಂದು ಸಲ ಮಹಾಲಕ್ಷ್ಮಿ ಸ್ಪಷ್ಟವಾಗಿಯೇ ಕಲ್ಯಾಣಮ್ಮನವರಿಗೆ "ಸೀತಾಲಕ್ಷ್ಮಿಯ ಕೈಯಲ್ಲಿ ಔಷಧಿ ಕುಡಿದು ಊಟ ಮಾಡಿದ ಮೈಲಿಗೆಯನ್ನು ಪುಣ್ಯಕ್ಷೇತ್ರಗಳಿಗೆ ಹೋಗಿಯಾದರೂ ಕಳೆದುಕೊಂಡು ಬರಬೇಡವೇ?" ಎಂದಳು. ಕಲ್ಯಾಣಮ್ಮನವರು ಕೋಪದಿಂದ "ನಾವು ಸಾಯುತ್ತಾ ಬಿದ್ದಿದ್ದರೂ ನೀವು, ಯಾವ ಊರು ಎಂದು ಕೇಳಲಿಲ್ಲ. ನಿಮಗೆ ದಯ ದಾಕ್ಷಿಣ್ಯ ಏನೂ ಇಲ್ಲ. ನಿಮಗಿಂತ ಆಕೆ ಸಾವಿರಪಾಲು ವಾಸಿ. ಮಡಿಯಂತೆ ಮಡಿ! ಹೋಗು" ಎಂದುಬಿಟ್ಟಳು. ಮಹಾಲಕ್ಷ್ಮಿ ನಿಷ್ಠುರದ ಧ್ವನಿಯಲ್ಲಿ "ನನಗೆ ತಿಳಿದ ಒಳ್ಳೆಯದನ್ನೇ ನಾನು ಹೇಳಿದೆ. ಇಷ್ಟರ

ಮೇಲೆ ನಿಮ್ಮ ಇಷ್ಟ. ನನ್ನಮೇಲೆ ಯಾಕೆ ಕೋಪ ಬಿಡಿ'' ಎಂದು ಸುಮ್ಮನಾದಳು

ಅಂತೂ "ಯಾತ್ರೆ ಹೋಗಿ ಬಂದುಬಿಡೋಣ, ಒಂದು ಸಲ ಹೋಗಿ ಬರಬೇಕೆಂಬುದು ನಮ್ಮ ಆಸೆಯೂ ಆಗಿದೆಯಲ್ಲ?'' ಎಂದು ಗುಂಡಣ್ಣನವರೂ ಹೇಳಿದರು. ಒಂದೇ ದಿನದೊಳಗೆ, ಗುಂಡಣ್ಣನವರು ಮನೆಯವರೊಂದಿಗೆ ಯಾತ್ರೆ ಹೊರಡುತ್ತಾರೆ" ಎಂಬ ಸುದ್ದಿ ಊರಿನಲ್ಲಿ ಹಬ್ಬಿತು. ಮಹಾಲಕ್ಷ್ಮಿ ಅದನ್ನೇ "ನಾನೇ ಹೇಳಿ ಹೊರಡಿಸಿದೆ. ಆ ಮೂಳಿಯ ಕೈಲಿ ಯಾವ ಯಾವದೋ ನೀರು ಕುಡಿದದ್ದಕ್ಕೆ ಅಷ್ಟಾದರೂ ಮಡಿ ಬೇಡವೆ?" ಎಂದು ಬೆನ್ನು ತಟ್ಟಿಕೊಂಡಳು. "ಸೀತಾಲಕ್ಷ್ಮಿ ಗಂಡನ ಮನೆಗೆ ಹೋಗಿದ್ದಳು. ಅಲ್ಲಿ ಕಲ್ಯಾಣಮ್ಮ ಗುಂಡಣ್ಣನವರು ಅವಳ ಕೈಯಲ್ಲಿ ಊಟಮಾಡಿದರು; ನೀರು ಕುಡಿದರು, ಔಷಧಿ ಕುಡಿದರು'' ಎಂದು ಕೇಳಿದ್ದವರಿಗೆಲ್ಲ ಇದರಿಂದ ಹೇಗೋ ಒಂದು ಬಗೆಯ ಸಮಾಧಾನವಾದಂತೆ ತೋರಿತು

ಆದರೆ ಕೊನೆಯ ಗಳಿಗೆಯಲ್ಲಿ ಮಹಾಲಕ್ಷ್ಮಿಯು ನಿರೀಕ್ಷಿಸದಿದ್ದ ಸಂಗತಿಯೊಂದು ನಡೆಯಿತು. ಸುಂದರರಾಜನು "ಸೀತಾಲಕ್ಷ್ಮಿಯನ್ನು ಕರೆದುಕೊಂಡು ಹೋಗೋಣ. ಆಕೆಯ ಸಂಗೀತದ ಉಪಾಧ್ಯಾಯಿನಿ ಕಮಲಮ್ಮನೂ ಬರುತ್ತಾಳಂತೆ. ಬರಲಿ, ಅವಳ ಖರ್ಚು ಅವಳು ಹಾಕಿಕೊಳ್ಳುತ್ತಾಳೆ. ಅವಳನ್ನು ಕರೆದುಕೊಂಡು ಹೋಗುವವರು ತಾನೆ ಮತ್ಯಾರು?" ಎಂದನು. ಅಂತೂ ಗುಂಡಣ್ಣನವರು ಒಳ್ಳೆಯ ದಿನವನ್ನು ನೋಡಿ ಕಲ್ಯಾಣಮ್ಮ ಸುಂದರರಾಜ ಸೀತಾಲಕ್ಷ್ಮಿಯರೊಂದಿಗೆ ಹೊರಟರು. ರೈಲ್ವೆ ನಿಲ್ದಾಣದಲ್ಲಿ ಕಮಲಮ್ಮ ಬಂದು ಅವರನ್ನು ಕೂಡಿದಳು

ಸೀತಾಲಕ್ಷ್ಮಿಗೆ ಅದು ಮುಖ್ಯವಾಗಿ ತೀರ್ಥಯಾತ್ರೆಗಿಂತ ಹೆಚ್ಚಾಗಿ ತನ್ನ ಸ್ವಂತ ದೇವರ ಜತೆಯ ಯಾತ್ರೆಯೇ ಆಯಿತು. ಯಾತ್ರಾಸ್ಥಳದಿಂದ ಯಾತ್ರಾಸ್ಥಳಕ್ಕೆ ಹೋಗುತ್ತಿದ್ದರೂ ಆಕೆಗೆ ಅವೊಂದೂ ಮುಖ್ಯವಾಗದೆ ಅವೆಲ್ಲ ಸ್ವಪ್ನಗಳಂತಾಗಿ ತಾನು ಸುಂದರರಾಜನ ಜತೆ ತಿರುಗುತ್ತಿರುವುದೊಂದೇ ಸತ್ಯವಾಗಿ ತೋರಿತು. ಯಾತ್ರೆಯೂ ಬೇಡ ತೀರ್ಥವೂ ಬೇಡ. ಇವರೊಂದಿಗೆ [ಪತಿ] ಈ ರೀತಿ ಇವರ ಸಾನಿಧ್ಯದಲ್ಲಿ ತಿರುಗುವುದೇ ಸಾಕೆಲ್ಲ ಎಂದು ಅವಳು ಯೋಚಿಸುತ್ತಿದ್ದಳು. ಕಲ್ಯಾಣಮ್ಮ ಗುಂಡಣ್ಣ ಕಮಲಮ್ಮ ಇವರು "ಆ ಕ್ಷೇತ್ರ

ಆ ಸೇವೆ ಈ ಸೇವೆ ಎಂದೆಲ್ಲ ಕಾತರಗೊಳ್ಳುತ್ತಿರುವಾಗ ಸೀತಾಲಕ್ಷ್ಮಿ ತನಗೆ ಎಲ್ಲ ಸೇವೆಯೂ ಇದೇಯೆ ಎಂಬ ರೀತಿಯಲ್ಲಿ, ಪ್ರೇಮಾದರಗಳಿಂದ ಗಂಡನನ್ನೇ ನೋಡುತ್ತಿದ್ದಳು. ಗಂಡನ ಸಾನ್ನಿಧ್ಯದಲ್ಲಿರಲು ತೀರ್ಥಯಾತ್ರೆ ಆಕೆಗೆ ಒಂದು ನೆಪವಾಯಿತು ಅಷ್ಟೆ.

ಸೀತಾಲಕ್ಷ್ಮಿ ಇಪ್ಪತ್ತು ದಿನಗಳು ಈ ಸ್ವರ್ಗಸುಖವನ್ನು ಅನುಭವಿಸಿ ತಿರುಪತಿ ಶ್ರೀರಂಗ ಮಧುರೆ ಕಾಳಹಸ್ತಿ ರಾಮೇಶ್ವರ ಚಿದಂಬರಂ ದರ್ಭ ಶಯನಂ ಧನುಷ್ಕೋಟಿ ಕನ್ಯಾಕುಮಾರಿ ಈ ಕ್ಷೇತ್ರಗಳನ್ನೆಲ್ಲ ತಿರುಗಿದಳು. ಹಿಂದೆ ಅಗ್ನಿ ಸಾಕ್ಷಿಕವಾಗಿ ಸೀತಾಲಕ್ಷ್ಮಿ ಸುಂದರರಾಜರ ವಿವಾಹ ನೆರೆ ದಿದ್ದರೂ ಈಚೆಗೆ ಮನುಷ್ಯನ ಸಾಕ್ಷಿಯಿಂದ ಆ ವಿವಾಹ ರದ್ದಾದಂತೆ ಆಗಿತ್ತು. ಹಾಗೆ ರದ್ದಾದ ವಿವಾಹ, ಪ್ರತಿ ಕ್ಷೇತ್ರದಲ್ಲಿಯೂ ಪ್ರತಿ ತೀರ್ಥದಲ್ಲಿಯೂ ಪುರೋಹಿತರ ಬಾಯಿಂದ ಮತ್ತೆ ಮತ್ತೆ ಸಂಕಲ್ಪದಲ್ಲಿ "ಈ ದಂಪತಿಗಳಿಗೆ ಒಳ್ಳೆಯದಾಗಲಿ, ಇವರ ದೋಷಗಳೆಲ್ಲ ಪರಿಹಾರವಾಗಲಿ" ಎಂದು ಪುನರುಕ್ತಿ ಯಾಗಿ ಮತ್ತೆ ಮತ್ತೆ ಸ್ಪಷ್ಟವಾಗುತ್ತಿತ್ತು. ಸೀತಾಲಕ್ಷ್ಮಿ ನಿಜವಾಗಿ ಹೆಂಡತಿ ಅಥವ ಗೃಹಿಣಿಯಾಗಿ ಬಾಳಿದ್ದುದು ಆ ಕಾಲದಲ್ಲಿಯೇ. ದೇವಾಲಯಗಳಲ್ಲಿ ಅರ್ಚಕರು ಭಗವಂತನಿಗೆ ಅರ್ಚನೆಮಾಡುವಾಗ ಸುಂದರರಾಜನ ಹೆಸರನ್ನು ಕೇಳಿ "ನಿಮ್ಮ ಹೆಂಡತಿಯ ಹೆಸರು?" ಎಂದೂ ಕೇಳುತ್ತಿದ್ದರು. ಮದುವೆ ಯಾದ ಎರಡು ವರುಷಗಳಲ್ಲಿ ಮಲ್ಲಿಗೆಹಳ್ಳಿಯಲ್ಲಾಗಲೀ, ರಂಭಾಪುರಿಯ ಲ್ಲಾಗಲಿ, ಸೀತಾಲಕ್ಷ್ಮಿಯನ್ನು ಸುಂದರರಾಜನ ಹೆಂಡತಿ ಎಂದೂ ಯಾರೂ ಬಾಯಿತುಂಬ ಸಂಬೋಧಿಸಿರಲಿಲ್ಲ. ಸೀತಾಲಕ್ಷ್ಮಿಗೆ ಆ ಮಾತನ್ನು ಕೇಳಿ ದಾಗಲೆಲ್ಲ ನಿಜವಾಗಿ ರೋಮಾಂಚವಾಗುತ್ತಿತ್ತು. ಸುಂದರರಾಜನೂ ಸಹ ಮರೆತಂತೆ "ಅವಳು ನನ್ನ ಹೆಂಡತಿ" ಎಂದು ಯಾರಾದರೂ ಕೇಳಿದಾಗ ಹೇಳುತ್ತಿದ್ದನು. ಗುಂಡಣ್ಣನವರೂ ಕಲ್ಯಾಣಮ್ಮನವರೂ "ಸೊಸೆ" ಎಂದು ಒಂದೆರಡು ಸಲ ಸಂಬೋಧಿಸಿದ್ದುಂಟು. ಕೆಲವು ತೀರ್ಥ ಗಳಲ್ಲಿ ಯುವಕರಾದ ಪುರೋಹಿತರು, ಸುಂದರರಾಜನಿಂದ ಹೆಚ್ಚು ದಕ್ಷಿಣೆ ಸಂಪಾದಿಸುವ ಆಸೆಯಿಂದ "ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಮುಳುಗಿ. ಪತಿ ಪತ್ನಿಯರು ಒಟ್ಟಿಗೆ ಮುಳುಗಬೇಕು. ಒಟ್ಟಿಗೇ ಏಳಬೇಕು" ಎನ್ನುತ್ತಿದ್ದರು. ಧನುಷ್ಕೋಟಿ ಮತ್ತು ದರ್ಭಶಯನಗಳಲ್ಲಿ ಸಮುದ್ರ ಬಹಳ

ಜೋರು, ಅಲೆಗಳದು ಬಹಳ ಅವಾಂತರ. ಅಲ್ಲಿ ಒಬ್ಬರನ್ನೊಬ್ಬರು ಅಪ್ಪಿಕೊಂಡೇ ಸ್ನಾನಮಾಡಬೇಕಾಗಿತ್ತು. ಧನುಷ್ಕೋಟಿ ಲಂಕೆಗೆ ದಾಟುವ ಸ್ಥಳವೆಂದು ಪ್ರತೀತಿ. ಅಲ್ಲಿ ಸ್ನಾನಮಾಡಿದನಂತರ ಸ್ವಾಭಾವಿಕವಾಗಿ ಶ್ರೀರಾಮಚಂದ್ರನ ಕತೆ ಎಲ್ಲರಿಗೂ ಜ್ಞಾಪಕಕ್ಕೆ ಬಂತು. ಎಂದಿಗೂ ಸುಖವನ್ನೇ ಕಾಣದ ಸೀತಾದೇವಿಯ ಕನಿಕರ ವೃತ್ತಾಂತ ಮತ್ತೆಮತ್ತೆ ಹೊಸದಾಗಿ ಸೀತಾಲಕ್ಷ್ಮಿ ಸೀತಾದೇವಿಗಾಗಿಯೇ ಅತ್ತಳು. ಅವಳಿಗೆ ತನ್ನ ಬಾಳೂ ಸೀತಾದೇವಿಯ ಬಾಳಿನಂತೆಯೇ ಎಂಬ ಭಾವನೆಯುಂಟಾಯಿತು ಆ ಭಾವನೆ ಮೊದಲು ತೋರಿದಾಗ "ಛೀ ಅಂತಹ ಜಗನ್ಮಾತೆಗೆ ನನ್ನನ್ನು ಹೋಲಿಕೊಳ್ಳಬಹುದೆ? ಅಪಚಾರ ಅಪಚಾರ, ಈ ತಲೆಹರಟೆಯನ್ನು ಮನ್ನಿಸಿ ಕಾಪಾಡು ತಾಯಿ" ಎಂದು ಕೆನ್ನೆಗೆ ಹೊಡೆದುಕೊಂಡಳು. ಆದರೂ ಅವಳಿಗೆ ಮತ್ತೆ ಮತ್ತೆ "ತನ್ನ ಬಾಳೂ ಸೀತಾದೇವಿಯ ಬಾಳಿನಂತೆಯೇ" ಎಂಬ ನಂಬಿಕೆಯೇ ದೃಢವಾಯಿತು.

ಹೀಗೆ ತಿರುಗುತ್ತಾ ತಮಿಳು ಆಡಿಮಾಸದ ಹದಿನೇಳನೆಯ ದಿನ ಅವರು ಮಾಯಾವರವನ್ನು ಸೇರಿದರು. ಅಲ್ಲಿಂದ ಕೆಳಗಡೆಯೇ ಕಾವೇರಿ ಸಮುದ್ರವನ್ನು ಸೇರುವುದು. ಆಡಿಮಾಸದ ಹದಿನೆಂಟನೆಯ ದಿನ ಕಾವೇರಿಯಲ್ಲಿ ಪೂರ್ಣ ಪ್ರವಾಹ. ಉಳಿದ ಕಾಲದಲ್ಲಿ ಮಳೆ ಇರಲಿ ಬಿಡಲಿ "ಪದಿನೆಟ್ಟಾಂ ಪೆರಪ್"ನಂದು ಮಾತ್ರ ಕಾವೇರಿ ಪ್ರತಿವರುಷವೂ ಅನಾದಿಕಾಲದಿಂದ ಒಂದೇ ಸಮನಾಗಿ, ಎಲ್ಲಿಯೋ ಮಳೆಯಾದರೂ ಸರಿಯೆ ಪೂರ್ಣ ಪ್ರವಾಹವನ್ನು ತಳೆಯುತ್ತಿದೆ ಯಾತ್ರಿಕರು ಕಾವೇರಿ ನದಿಯ ತೀರದಲ್ಲಿ ಉದ್ದಕ್ಕೂ ಕ್ಷೇತ್ರಗಳಲ್ಲಿ ಸ್ನಾನಮಾಡುತ್ತಾ ಹೋಗುತ್ತಾರೆ. ಕಾವೇರಿ ಇಬ್ಭಾಗವಾಗಿ ಪವಿತ್ರವಾದ ಶ್ರೀರಂಗಕ್ಷೇತ್ರ (ತಿರುಚನಾಪಲ್ಲಿ) ವನ್ನು ಸೃಷ್ಟಿಸಿ ಹದಿನೇಳು ಮೈಲಿಯಾಚೆ ಮತ್ತೆ ಒಂದಾಗುತ್ತಿದೆ ಕಾವೇರಿಯ ಕೊನೆ ಕೊನೆಯ ಪ್ರಯಾಣದಲ್ಲಿ ಎಂಟೇ ಮೈಲಿಗಳೊಳಗೆ ಅದರ ಮಗ್ಗುಲಲ್ಲಿ ಐದು ನದಿಗಳು ಹರಿಯುತ್ತವೆ. ಆ ಸ್ಥಳಕ್ಕೆ ಪಂಚನದಂ ಎಂದೇ ಹೆಸರು. ಸೀತಾಲಕ್ಷ್ಮಿ ಸುಂದರರಾಜ ಗುಂಡಣ್ಣ ಕಲ್ಯಾಣಮ್ಮ ಕಮಲಮ್ಮ ಇವರು ಪಂಚನದಂನಲ್ಲಿ ಸ್ನಾನಮಾಡಿ ಕಾವೇರಿ, ಸಂಗಮದಲ್ಲಿ ಸಮುದ್ರವನ್ನು ಸೇರುವ ಸ್ಥಳವನ್ನು ನೋಡಿದರು. ಕಾವೇರಿ ಪಟ್ಟಣದ (ಸಂಗಮಮ್) ಮಹಿಮೆಯನ್ನು ಮಣಿಮೇಖಲೆಯ ಕತೆಯಲ್ಲಿ ಅವರು ಬಹಳ

ಕೇಳಿದ್ದರೂ ಆ ವೈಭವದ ಅವಶೇಷ ಒಂದೂ ಈಚೆಗೆ ತೋರುತ್ತಿಲ್ಲ. ಆದರೆ, ಆ ಕತೆಯನ್ನು ಕೇಳಿದ್ದ ಸೀತಾಲಕ್ಷ್ಮಿ, ಗುಂಡಣ್ಣ ಕಲ್ಯಾಣಮ್ಮನವರ ಕಣ್ಣ ಮುಂದೆ ಕಾವೇರಿ ಪಟ್ಟಣದ ವಿಶಾಲವಾದ ಬೀದಿಗಳು, ಆ ಬೀದಿಗಳಲ್ಲಿ ಸೌಧಗಳು, ಅವುಗಳಮುಂದೆ ಅಲಂಕೃತಗಳಾದ ರಥ ಗಜ ಪದಾತಿಗಳು. ರಥಗಳಲ್ಲಿ ರಾಜಕುಮಾರಿ ಕುಮಾರರು, ಮಗಧ ಅವಂತಿ ಮತ್ತು ಯವನ ರಾಜ್ಯಗಳಿಂದ ಗಾಡಿ ಗಾಡಿಗಳಲ್ಲಿ ಅನರ್ಘ್ಯ ರತ್ನಾಭರಣಗಳನ್ನು ತಂದು ಕುಶಲ ಕರ್ಮಿಗಳು ಕಾವೇರಿ ಪಟ್ಟಣವನ್ನು ಸಿಂಗರಿಸುತ್ತಿರುವುದು, ಇವೆಲ್ಲ ಊಹನಾ ರಾಜ್ಯದಲ್ಲಿ ಹಾದುಹೋದವು.

ಆದರೆ ಮನುಷ್ಯ ನಿರ್ಮಿತವಾದ ವೈಭವ, ಕಾಲನ ದವಡೆಯನ್ನು ಸೇರಿದ್ದರೂ ಕಣ್ಣೆದುರಿಗೆ ಕಾಣುತ್ತಿದ್ದ ಪ್ರಕೃತಿ ನಿರ್ಮಿತ ಅಟ್ಟಹಾಸ, ಆ ಕಾವ್ಯ ಕಥೆಗಿಂತ ಕಡಿಮೆಯಾಗಿರಲಿಲ್ಲ. ಕಾವೇರಿ ನದಿ ಪೂರ್ಣ ಪ್ರವಾಹದಲ್ಲಿ ದಡದಿಂದ ದಡವನ್ನು ತುಂಬಿ ನೂರಾರು ನಗರಗಳ ಜನಸ್ತೋಮದ ಧ್ವನಿಯಂತೆ ಘೋರ್ಗರೆಯುತ್ತಾ ಸಮುದ್ರದ ಕಡೆಗೆ ಧಾವಿಸುತ್ತಿತ್ತು. ದೂರದಿಂದ ನೋಡಿದರೆ ರಥ, ತುರಗ, ಪದಾತಿಗಳ, ಅಲ್ಲಲ್ಲಿ ಮೇಲಕ್ಕೆ ಚಿಮ್ಮುವ ಬಿಳಿನೊರೆಯ ನಿಶಾನಿಗಳ ಪ್ರಭುವಿನ ದಿಗ್ವಿಜಯ ಘೋಷದಂತೆ ತೋರುತ್ತಿತ್ತು. ನುಗ್ಗುತ್ತಿದ್ದ ಪ್ರವಾಹದ ಧ್ವನಿಯಲ್ಲಿ ಸೀತಾಲಕ್ಷ್ಮಿಗೆ ಒಂದು ವಿಧವಾದ ಆಕರ್ಷಣೆಯೂ ಮಾಧುರ್ಯವೂ, ಎಷ್ಟು ಕೇಳಿದರೂ ತೃಪ್ತಿಯಾಗದ ಭಾವನೆಯೂ ಉಂಟಾಯಿತು. ಅವರು ಇಳಿದುಕೊಂಡಿದ್ದ ದೇವಾಲಯದಲ್ಲಿ ಶಾಸ್ತ್ರಿಗಳು ಕಾವೇರಿಯ ಮಹಿಮೆಯನ್ನು ಪುರಾಣ ಹೇಳುತ್ತಿದ್ದರು. ಕಾವೇರಿಯ ಸೌಂದರ್ಯ, ಮಾಧುರ್ಯ, ಹೇಗೆ ಅದು ತಮಿಳುನಾಡಿಗೆ ತಾಯಿ, ಕೊಡಗಿನಲ್ಲಿ ಶಿಶು, ಮೈಸೂರಿನಲ್ಲಿ ಪ್ರೌಢೆ, ತಮಿಳುತಾಯಿ, ವಾಲ್ಮೀಕಿಯ ಮಾತಿನಲ್ಲಿ ಅಪ್ಸರೆಯರ ಜಲಕ್ರೀಡಾ ವನ; ಕಂಬರು ಕಾವೇರಿಯನ್ನು ಮಧು ಕ್ಷೀರದ ಸ್ವರ್ಣನದಿ ಎಂದು ಕರೆಯುತ್ತಾರೆ. ಎಂದೆಲ್ಲ ಪುರಾಣಿಕರು ಹೇಳುತ್ತಿದ್ದರು. ದೇವಾಲಯ ಭಕ್ತರಿಂದ ತುಂಬಿಹೋಗಿತ್ತು. ಎಲ್ಲೆಲ್ಲಿಯೂ ಸುಮಂಗಲೆಯರು. ಒಬ್ಬಾಕೆ ತ್ಯಾಗರಾಜರ ಕಾವೇರಿಯನ್ನು ಕುರಿತ ಕೀರ್ತನೆಯನ್ನು ಹಾಡಿದರು. (ಸಾರಿ ವಡಲಿನ ಕಾವೇರಿ) ಆ ಕೀರ್ತನೆ ಸೀತಾಲಕ್ಷ್ಮಿಯ ಪ್ರಿಯಕೀರ್ತನೆ. ಆದರೆ ಅದರ ನಿಜತ್ವ ಇಂದಿನಂತೆ ಎಂದೂ

ಅವಳ ಮನಸ್ಸನ್ನು ಹೊಕ್ಕಿರಲಿಲ್ಲ “ಕನ್ಯಾರತ್ನವಾದ ಈ ಕಾವೇರಿಯನ್ನು ನೋಡಿ; ಕೇಳಿದವರಿಗೆ ಕೇಳಿದುದನ್ನು ಕೊಟ್ಟುಕೊಂಡು ಗಂಭೀರವಾಗಿ ನಡೆಯುತ್ತಿದ್ದಾಳೆ. ಅಯೋಗ್ಯರಿಗೂ ವರವನ್ನು ದಯಪಾಲಿಸುತ್ತಿದ್ದಾಳೆ. ಒಂದೆಡೆ ಸುಳಿ, ಒಂದೆಡೆ ಅಲೆಗಳು, ಹಾರುತ್ತಾಳೆ, ನೆಗೆಯುತ್ತಾಳೆ, ಗುಡುಗಿನಂತೆ ಭೋರ್ಗರೆಯುತ್ತಾಳೆ. ಶ್ರೀರಂಗದ ರಂಗನಾಥನ ಸನ್ನಿಧಿಗೆ ನಿಧಾನವಾಗಿ ಶಾಂತವಾದ ಸುವರ್ಣಹಾರವಾಗಿ, ತನ್ನನ್ನೇ ಅರ್ಪಿಸಿಕೊಳ್ಳುತ್ತಾಳೆ. ರಂಗನಾಥನ ಸನ್ನಿಧಿಯ ಕೋಗಿಲೆಗಳ ಸ್ವರದೊಡನೆ ತನ್ನ ಸ್ವರವನ್ನೂ ಬೆರೆಸುತ್ತಾಳೆ. ಮುಂದೆ ಪಂಚನದೀಶ್ವರನನ್ನು ಸೇವಿಸಿ, ಎಲ್ಲೆಲ್ಲಿಯೂ ಭಕ್ತವೃಂದದ ಜಯಜಯಕಾರದೊಡನೆ ರಾಜರಾಜೇಶ್ವರೀ ಎಂಬ ಬಿರುದನ್ನು ಗಳಿಸಿ ಪ್ರಿಯನನ್ನು ಸೇರುತ್ತಾಳೆ.”

ಹಾಡುತ್ತಿದ್ದವರ ಧ್ವನಿ ಅತ್ಯಂತ ಮಧುರವಾಗಿತ್ತು. ಹೊರಗಡೆ ಅನತಿ ದೂರದಲ್ಲಿ ಭೋರ್ಗರೆಯುತ್ತಿದ್ದ ಕಾವೇರಿ ನದಿಯ ಅಮೃತಪ್ರವಾಹದ ಅನಂತ ವಾಹಿನಿಯೊಂದಿಗೆ ಗಾನವಾಹಿನಿಯೂ ಸೇರಿಹೋಯಿತು. ಅಲ್ಲಿ ನೇರಿದ್ದ ಅನೇಕ ಆ ಅಸಂಖ್ಯಾತ ಸ್ತ್ರೀಪುರುಷರಿಗೆ ಪರಮಾತ್ಮನ ಧ್ಯಾನದ ಹೊರತು ಮತ್ತೇನೂ ಕಾರ್ಯವೇ ಇದ್ದಂತೆ ಕಾಣಲಿಲ್ಲ. ಅವರ ಅವಿಚ್ಛಿನ್ನ ಭಜನೆ ಕೀರ್ತನೆ ಪ್ರಾರ್ಥನೆ ಅನಾಸಕ್ತಿಯ ಎದುರಿಗೆ ಜಗತ್ತಿನ ಸಮಸ್ತ ಐಹಿಕ ಭೋಗವೂ ತುಚ್ಛವಾಗಿ ತೋರಿದವು. ಕಾವೇರಿ ಮತ್ತು ಪರಮಾತ್ಮನ ಸಾನ್ನಿಧ್ಯದಲ್ಲಿ ಆ ಭಕ್ತರು, ತಾವು ಸಾಮಾನ್ಯ ಮನುಷ್ಯರು ಎಂಬುದನ್ನು ಮರೆತು ಪುನರ್ಜನ್ಮವನ್ನು ಹೊಂದಿ ಅದುವರೆಗೆ ತಮಗೆ ಸಂಭವಿಸಿದ್ದುದೆಲ್ಲ ಮಾಯೆ ಎಂಬಂತೆ ನಿರ್ಲಿಪ್ತರಾಗಿದ್ದರು. ಸೀತಾಲಕ್ಷ್ಮಿಗಂತೂ ಮಾಯವರಂ ದೊಡ್ಡ ಸಾನ್ನಿಧ್ಯವಾಗಿ ತೋರಿತು. ಅಲ್ಲಿ ಸೇರಿದ್ದವರಾರೂ ಮನುಷ್ಯರಾಗಿ ತೋರದೆ, ಈಶ್ವರನ ಸಾನ್ನಿಧ್ಯದ ಗಣಗಳಾಗಿ ಒಂದು ವಿಚಿತ್ರವಾದ ಶೋಭೆಯಿಂದ ಸೀತಾಲಕ್ಷ್ಮಿಗೆ ತೋರಿದರು ಕೆಲವರನ್ನು ನೋಡಿದರೆ ಅವರ ಮುಖ ದುಃಖದಿಂದ ಪುನೀತವಾದಂತೆ ತೋರುತ್ತಿದ್ದಿತು. “ಪಾಪ. ಇವರ ಸಂಕಟವೇನಿರಬಹುದೋ” ಎಂದು ಸೀತಾಲಕ್ಷ್ಮಿ ಭಾವಿಸುವಳು. ಮತ್ತೆ ಕೆಲವರನ್ನು ನೋಡಿದರೆ “ಇವರಿಗೆ ದೊರೆತ ಯಾವ ಆನಂದ ಸೌಭಾಗ್ಯಕ್ಕಾಗಿ ಹೀಗೆ ಪರಮಾತ್ಮನನ್ನು ವಂದಿಸುತ್ತಿರುವರೋ ಎಂದು ಭಾವಿಸುವಳು

ಒಟ್ಟಿನಲ್ಲಿ ಸೀತಾಲಕ್ಷ್ಮಿಗೆ ಎಂದೂ ಇಲ್ಲದ ವಿಚಿತ್ರವಾದ ಮನಶ್ಶಾಂತಿ ಉಂಟಾಯಿತು.

ಇಷ್ಟಕ್ಕಿದ್ದಂತೆ ಸುಂದರರಾಜನು ಸೀತಾಲಕ್ಷ್ಮಿ ಮೂಲೆಯಲ್ಲಿಟ್ಟಿದ್ದ ಅವಳ ಪಿಟೀಲನ್ನು ನೋಡಿದನು. ಅನಂತರ ಸೀತಾಲಕ್ಷ್ಮಿಯ ಕಡೆ ನೋಡಿದನು. ಆ ನೋಟದಲ್ಲಿ ಆಸೆ ಬೇಡಿಕೆ ಇದ್ದವು. ಸೀತಾಲಕ್ಷ್ಮಿಯ ಮನಸ್ಸು ಯಾತ್ರೆಯ ಸಂಭವಗಳಿಂದ ಬಹಳ ಮೃದುವಾಗಿತ್ತು. ಅವಳಿಗೆ ಮನಶ್ಶಾಂತಿಯುಂಟಾಗಿದ್ದುದರಿಂದ "ಇನ್ನು ಇಲ್ಲಿಗೆ ಬಾಳು ಸಾಕು, ಕೀಲುಕೊಟ್ಟ ಗಡಿಯಾರ ತಾನಾಗಿಯೇ ಕಾಲಕ್ಕೆ ಸರಿಯಾಗಿ ನಿಂತುಹೋಗುವಂತೆ ಈ ಬಾಳಗಡಿಯಾದ ಮುಳ್ಳುಗಳು ಪೂರ್ತಿ ತಿರುಗಿ ಇಲ್ಲಿಗೆ ಸ್ವಾಭಾವಿಕವಾಗಿ ನಿಂತು ಹೋಗಬಾರದೆ? ಎಂದು ಆಶಿಸುತ್ತಿದ್ದಳು. ಆಕೆಗೆ ಯಾವುದರ ಮೇಲೆಯೂ ಆಸೆ ಇರಲಿಲ್ಲ, ಪಿಟೀಲಿನ ಮೇಲೆಯೂ ಇರಲಿಲ್ಲ. ಆದರೆ ಸುಂದರರಾಜನ ಬೇಡಿಕೆ ಒಂದು ವಿಧಿಯ ಆಜ್ಞೆಯಂತೆಯೂ ತೋರಿತು. ಆಕೆ ಕಮಲಮ್ಮನ ಕಡೆ ನೋಡಿದಳು. ಇವರುಗಳ ಮುಖಭಾವವನ್ನು ಎಂದಿನಿಂದಲೂ ನೋಡುತ್ತಲೇ ಇದ್ದ ಕಮಲಮ್ಮ "ಸರಿ" ಎಂಬಂತೆ ಪಿಟೀಲನ್ನು ತಂದು ಸೀತಾಲಕ್ಷ್ಮಿಯ ಮುಂದೆ ಇಟ್ಟಳು. ಸೀತಾಲಕ್ಷ್ಮಿ ನಿಧಾನವಾಗಿ ಪಿಟೀಲಿನ ಮೇಲೆ ಗಾನವನ್ನು ಆಡಿಸಿದಳು. ಮೊದಲು ಆಗತಾನೇ ಕೇಳಿದ್ದ ಸಾರೆ ವಡಲಿನ ಸೇರಿ" ನುಡಿಸಿದಳು. ಒಂದು ಗಳಿಗೆ ಮುಂಚೆ ಭಕ್ತರು ಆ ಹಾಡನ್ನು ಯಿ ಹಾಡುಗಾರಿಕೆಯಲ್ಲಿ ಕೇಳಿದ್ದರೂ, ಮೊದಲಿನಷ್ಟೇ ಉತ್ಸಾಹದಿಂದ ಟೀಲನ್ನು ಕೇಳಿದರು ಮೊದಲೇ ಸೃಷ್ಟಿಯಾಗಿದ್ದ ಸಂಗೀತದ ವಾತಾವರಣದಲ್ಲಿ ಪಿಟೀಲು ಅತ್ಯಂತ ಮೋಹಕವಾಯಿತು. ಸೀತಾಲಕ್ಷ್ಮಿಯ ಸಮಸ್ತ ಇರುವಿಕೆಯೂ ಪಿಟೀಲೇ ಆಯಿತು. ಪಂತುವರಾಳಿಯಲ್ಲಿ ಶಿವಶಿವ, ಷಣ್ಮುಖಪ್ರಿಯದಲ್ಲಿ ಮರವೇರದಿ, ಯದುಕುಲ ಕಾಂಬೋದಿಯಲ್ಲಿ ಎಚ್ಚರಿಕ, ಭೈರವಿಯಲ್ಲಿ ಉಪಚಾರಮು, ಸುರಟಿಯಲ್ಲಿ ಗೀತಾರ್ಥಮು, ಹಿಂದೋಳದಲ್ಲಿ ಸಾಮಜವರ, ಬೇಹಾಗ್‌ನಲ್ಲಿ ಆಡುಚಿದಂಬರಂ, ಒಂದಾದ ಮೇಲೆ ಒಂದರಂತೆ ಸೀತಾಲಕ್ಷ್ಮಿ ಬಾರಿಸತೊಡಗಿದಳು. ರಾತ್ರಿ ಬಹಳ ಹೊತ್ತಾಗಿದ್ದರೂ ಜನರಿಗೆ ಮರೆತೇಹೋಯಿತು. ದಿನದ ಶ್ರಮದಿಂದ ಬಳಲಿದ್ದ ಜನ ಗಾನಮಾಧುರ್ಯ ಅಮೃತವಾಹಿನಿಯ ಸುಖ ಸೇಚನದಿಂದ ನಿಧಾನವಾಗಿ ಮನಶ್ಶಾಂತಿಯ

ಸುಷುಪ್ತಿಗೆ ಸಲ್ಲುತ್ತಿದ್ದರು. ಆದರೆ ಸೀತಾಲಕ್ಷ್ಮಿಗೆ ಮಟ್ಟಿಗೆ ಯಾರಮೇಲೆಯೂ ದೃಷ್ಟಿ ಇರಲಿಲ್ಲ. ಆಕೆಯು ಕಣ್ಣುಗಳಿಂದಲೇ ಸುಂದರರಾಜನನ್ನು ಪಾನ ಮಾಡುತ್ತಾ ತನ್ನ ಇಚ್ಛೆಯೇ ಇಲ್ಲದಂತೆಯೋ ಎಂಬಂತೆ, ಚಿಗುರಿನಂತಹ ಕೋಮಲ ಬೆರಳುಗಳನ್ನು ಪಿಟೀಲಿನ ತಂತಿಗಳಮೇಲೆ ಆಡಿಸುತ್ತಿದ್ದಳು. ಸುಂದರರಾಜ ಆನಂದದ ಆಧಿಕ್ಯದಲ್ಲಿ ಮುಗುಳುನಗೆ ನಕ್ಕಾಗ ಆಕೆ, ಕಾಮಾಚ್ ನಲ್ಲಿ "ಸೀತಾಪತೆ" ನುಡಿಸಿದಳು. ಅನಂತರ ತನಗೆ ಪ್ರಿಯವಾಗಿದ್ದ, ವೈಷ್ಣವ ಜನತೋ ನುಡಿಸಿದಳು. ಸೀತಾಲಕ್ಷ್ಮಿಯ ವಾದನ ಮುಗಿದಾಗ ಬೆಳಗಿನ ಜಾವದ ಪತ್ರಿರವಾಗುತ್ತಿತ್ತು. ಸುಂದರರಾಜ ಕಮಲಮ್ಮನ ಹೊರತು ಉಳಿದ ಭಕ್ತರೆಲ್ಲ ಕುಳಿತಲ್ಲಿಯೇ ಮಲಗಿದ್ದರು. ಸೀತಾಲಕ್ಷ್ಮಿಯೂ ಕಮಲಮ್ಮನೂ ಸುಂದರರಾಜನೂ ತಾವು ತಾವು ಕುಳಿತಿದ್ದ ಸ್ಥಳಗಳಲ್ಲಿಯೇ ಮಲಗಿ ಕಣ್ಣು ಮುಚ್ಚಿಕೊಂಡರು.

ಅಂದು ಬೆಳಗಿನ ಸೂರ್ಯ ಬಹಳ ಪ್ರಕಾಶವಾಗಿ ಉದಯಿಸಿದನು. ಮೊದಲ ದಿನಕ್ಕಿಂತ ಕಾವೇರಿಯ ಪ್ರವಾಹ ಇನ್ನೂ ಹೆಚ್ಚಾಗಿತ್ತು. ಯಾತ್ರಿಕರೆಲ್ಲ ಸುತ್ತ 4-6 ಮೈಲಿಗಳಿದ್ದ ಇತರ ಪುಣ್ಯಕ್ಷೇತ್ರಗಳಿಗೆ ಹೋಗಿ ಬರುತ್ತಿದ್ದರು. ಅಂತಹ ಕ್ಷೇತ್ರಗಳಲ್ಲಿ ಆ ದಿನ ಯಾವ ಹೊತ್ತಿನಲ್ಲಿ ಸ್ನಾನಮಾಡಿದರೂ ಮೋಕ್ಷ ಎಂದು ಭಕ್ತರಿಗೆ ಗೊತ್ತಿದ್ದರೂ, ಈ ಪುರೋಹಿತರು, ಪುಣ್ಯಕಾಲ ಮಧ್ಯಾಹ್ನ ಒಂದು ಗಂಟೆ ಎಂದು ಹೇಳಿದ್ದರು. ಗುಂಡಣ್ಣ ಕಲ್ಯಾಣಮ್ಮ ಇವರು, ಸುತ್ತಲ ಕ್ಷೇತ್ರ ಗಳಿಗೆ ನಾವೂ ಹೋಗಿ ಬರೋಣ ಎಂದು ಹೇಳಿದರು. ಸೀತಾಲಕ್ಷ್ಮಿಗಾಗಲೀ ಕಮಲಮ್ಮನಿಗಾಗಲೀ ಅದೊಂದೂ ಬೇಕಾಗಿರಲಿಲ್ಲ ಕಾವೇರಿ ನದಿ ಪೂರ್ಣ ಪ್ರವಾಹದಲ್ಲಿರುವಾಗ ಇನ್ನು ಚಿಲ್ಲರೆ ಕ್ಷೇತ್ರಗಳು ಯಾಕೆ? ಸೂರ್ಯನೇ ಎದುರಿಗೆ ಇರುವಾಗ ಉಳಿದ ಸಾಮಾನ್ಯ ಸೊಡರುಗಳು ಯಾಕೆ? ಪರಮಾತ್ಮನೇ ಪ್ರತ್ಯಕ್ಷನಾದಾಗ ಚಿಲ್ಲರೆ ದೇವರುಗಳು ಯಾಕೆ? ಎಂದು ಅವರು ಭಾವಿಸಿದರು. ಅಲ್ಲದೆ ಸೀತಾಲಕ್ಷ್ಮಿಗೆ ಮನಸ್ಸು ಪೂರ್ಣಶಾಂತಿಯಿಂದಲೂ ಭಕ್ತಿಯಿಂದಲೂ ಹಗುರವಾಗಿತ್ತು. ಎಲ್ಲಿಗೂ ಹೋಗುವುದೇ ಬೇಡ. ಇಲ್ಲಿಯೇ ಇದ್ದು ದೇವರ ಸಾನ್ನಿಧ್ಯದಲ್ಲಿ ಸೇವೆಮಾಡಿಕೊಂಡು ಪುಣ್ಯಕಾಲಕ್ಕೆ ಸ್ನಾನಮಾಡೋಣ ಎಂದು ಆಕೆ ಕಲ್ಯಾಣಮ್ಮನಿಗೆ ಹೇಳಿದಳು. ಸುಂದರರಾಜ ಅಂದು ಏಳುವಾಗಲೇ "ಸ್ವಲ್ಪ ತಲೆ ಭಾರ ತಲೆ ತಿರುಗುತ್ತಿದೆ" ಎಂದು ಹೇಳಿಕೊಂಡು ಎದ್ದನು.

ಸೀತಾಲಕ್ಷ್ಮಿಯು ತನ್ನ ವೈದ್ಯ ವಿದ್ಯೆಯನ್ನು ಜ್ಞಾಪಿಸಿಕೊಂಡು ಅವನನ್ನು ಪರೀಕ್ಷಿಸಿದಳು. ಸ್ವಲ್ಪ ಕಣ್ಣು ಕೆಂಪಗಾಗಿತ್ತು. ತಲೆ ಸುಡುತ್ತಿತ್ತು. ಕಾಲ ಕಾಲಕ್ಕೆ ಆಹಾರವಿಲ್ಲದೆ ತಮಿಳು ನಾಡಿನ ಪ್ರಖರ ಬಿಸಿಲಿನಲ್ಲಿ ಅಷ್ಟು ದಿವಸ ಗಳಿಂದ ನಿದ್ರೆಕೆಟ್ಟು ಸಿಕ್ಕಿದಲ್ಲಿ ಸಿಕ್ಕಿದುದನ್ನು ತಿಂದುದರಿಂದ ಸುಂದರರಾಜನಿಗೆ ಪಿತ್ತ ಹೆಚ್ಚಾಗಿರುವುದು ಆಕೆಗೆ ಗೊತ್ತಾಯಿತು. ಕಲ್ಯಾಣಮ್ಮ "ನೀವು ಇಲ್ಲಿ ಇರಿ. ನಾವು ಕ್ಷೇತ್ರಗಳಿಗೆ ಹೋಗಿಬರುತ್ತೇವೆ. ಇವತ್ತು ಇಲ್ಲಿ ಬಂದು ಕ್ಷೇತ್ರಗಳಿಗೆ ಹೋಗಿ ಬರದೇ ಇರೋದೆ? ಅದಕ್ಕಾಗಿಯೇ ದೇಶದಿಂದೆಲ್ಲ ಜನ ಬಂದಿದ್ದಾರೆ" ಎಂದು ಹೊರಟೇಬಿಟ್ಟರು. ಗುಂಡಣ್ಣನವರೂ ತಮ್ಮ ಮಡಿ ಚೀಲವನ್ನು ಹೆಗಲಿಗೆ ಹಾಕಿಕೊಂಡು ಹೊರಟರು. ಸುಂದರರಾಜನೂ ಎದ್ದು "ಇದೇನು ಮಹಾ ನನಗೆ ಏನೂ ಆಗಿಲ್ಲ" ಆಯಾಸದಿಂದ ಸ್ವಲ್ಪ ತಲೆ ತಿರುಗುತ್ತಿದೆ ಅಷ್ಟೆ. ನಾನು ಬರುತ್ತೇನೆ" ಎಂದು ಹೊರಟೇಬಿಟ್ಟನು.

ಸಾವಿರಾರು ಯಾತ್ರಿಕರು ತುಳಿದ ದಾರಿಯನ್ನು ಅವರೂ ತುಳಿಯುತ್ತಾ ಪಾತಾಳಗಂಗೆ ಶಂಖತೀರ್ಥ ದಕ್ಷಿಣಬದರಿ ಭಗೀರಥ ಕ್ಷೇತ್ರಗಳನ್ನು ಮುಗಿಸಿ ಕೊಂಡು ಹನ್ನೆರಡು ಗಂಟೆ ಹೊತ್ತಿಗೆ ಮಾಯವರಂಗೆ ಬಂದರು. ಕ್ಷೇತ್ರಗಳಲ್ಲಿ ಜನರಿಗೆ, ದೂರದ ಸರಿಯಾದ ಕಲ್ಪನೆ ಇಲ್ಲ. ಒಂದು ಮೈಲಿ ಎರಡು ಮೈಲಿ ಎಂದು ಅವರು ಕೇಳಿದ್ದ ಸ್ಥಳಗಳು ಎಷ್ಟು ನಡೆದರೂ ಸಿಕ್ಕಲೇ ಇಲ್ಲ. ಹಿಂದಿರು ಗುವ ವೇಳೆಗೆ ಅವರೆಲ್ಲ ಪೂರ್ಣ ಸೋತಿದ್ದರು ಸುಂದರರಾಜ ಉದ್ದಕ್ಕೂ ಹಿಂದೆಯೇ ಬೀಳುತ್ತಿದ್ದನು. ಸೀತಾಲಕ್ಷ್ಮಿ ಜತೆಗೆ ನಿಂತು ನಿಂತು ಅವನನ್ನು ಕರೆದುಕೊಂಡು ಬಂದಿದ್ದಳು ಒಂದೇ ದಿನದಲ್ಲಿ ಅವನು ಎಷ್ಟರಮಟ್ಟಿಗೆ ಸೋತುಹೋದನೆಂಬುದನ್ನು ನೋಡಿ ಅವಳಿಗೆ ಗಾಬರಿಯೇ ಆಗಿತ್ತು.

ಪುಣ್ಯಕಾಲವಾದ ಒಂದು ಗಂಟೆ ಸಮೀಪಿಸಿತು. ಮೊದಲದಿನ ಬಂದಿದ್ದ ಪುರೋಹಿತರು ಸಂಕಲ್ಪ ಹೇಳಲು ಬಂದರು. ನದಿಯ ತೀರದಲ್ಲಿ ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಭಕ್ತರ ಸೋಪಾನಗಳೇ ಕಂಗೊಳಿಸುತ್ತಿದ್ದುವು. ಕಾವೇರಿ ನದಿ ಪೂರ್ಣ ಪ್ರವಾಹದಲ್ಲಿ ಬಯಲು ಹೊಳೆ ಬಿದ್ದುದರಿಂದ ಯಾತ್ರಿ ಕರು ಎಲ್ಲೆಲ್ಲಿ ಜಾಗ ಸಿಕ್ಕಿದರೆ ಅಲ್ಲಲ್ಲಿ ಸ್ನಾನಕ್ಕೆ ಇಳಿಯುತ್ತಿದ್ದರು. ದೇವಸ್ಥಾ ನದ ಮುಂದಲ ಕಡು ಜನರಿಂದ ತುಂಬಿಹೋಗಿದ್ದುದರಿಂದ ಗುಂಡಣ್ಣ ಕಲ್ಯಾ ಣಮ್ಮ ಸೀತಾಲಕ್ಷ್ಮಿ ಕಮಲಮ್ಮ ಸುಂದರರಾಜ ಸ್ವಲ್ಪ ದೂರದಲ್ಲಿ ಹೋಗಿ

ನಕ್ಕೆ ಇಳಿದುಕೊಂಡರು. ಬಿಸಿಲು ಅತಿ ಜೋರಾಗಿತ್ತು. ಎಲ್ಲೆಲ್ಲಿಯೂ
ಲವಿದ್ದರೂ ಆ ಗದ್ದಲವನ್ನು ಮುಚ್ಚಿಕೊಂಡು ಮಧ್ಯಾಹ್ನದ ಒಂದು ಶಾಂತಿ
ತಾವರಣವನ್ನು ಆವರಿಸಿತ್ತು. ಸೀತಾಲಕ್ಷ್ಮಿಗೆ ಅದು ತಮಿಳುನಾಡಿನ
ವೇರಿ ಎಂಬುದೇ ಮರೆತುಹೋಗಿ ದೇವಲೋಕದ ಗಂಗೆಯಂತೆಯೂ,
ತ್ತರೆಲ್ಲ ದೇವತೆಗಳಂತೆಯೂ ತೋರಿದರು. ಅವಳಿಗೆ ಏನೋ ಪೂರ್ಣತೆ
ಎಂಟಾಗಿ ಮತ್ತೆ ಮತ್ತೆ "ಇದೇ ಬಾಳಿನ ಗುರಿ ಕೊನೆ ; ಇಷ್ಟು ಸಾಕು "
ನಿಸಿತು.

ಪುರೋಹಿತರು ಸಂಕಲ್ಪವನ್ನು ಹೇಳಿ "ಇನ್ನು ಸ್ನಾನಮಾಡಿ. ನಿಮಗೆ
ನರ್ಜನ್ಮವಿಲ್ಲ" ಎಂದರು ಕಲ್ಯಾಣಮ್ಮನವರೂ ಗುಂಡಣ್ಣನವರೂ ಸ್ನಾನ
ಮಾಡಿ ಮೇಲೆ ಬಂದು ನಿಂತರು. ಪುರೋಹಿತರು ಸೀತಾಲಕ್ಷ್ಮಿಗೆ ಹಿರಿಯರಿಗೆ
ನಮಸ್ಕಾರಮಾಡಿ ಸ್ನಾನಮಾಡಿ ಇಂತಹ ದಿನ ದೊರಕುವುದು ಅಪರೂಪ
ನೈಕನ್ಯ ಅಧಿಕಂ ಫಲಂ" ಎಂದರು. ಸುಂದರರಾಜನೂ ಸೀತಾಲಕ್ಷ್ಮಿಯೂ
ಂಡಣ್ಣನವರಿಗೂ ಕಲ್ಯಾಣಮ್ಮನವರಿಗೂ ನಮಸ್ಕಾರಮಾಡಿದರು ಗುಂಡಣ್ಣ
ವರು ದೀರ್ಘ ಸುಮಂಗಲೀ ಭವಾ ಎಂದು ಆಶೀರ್ವದಿಸಿದರು. ಹೀಗೆ ಗಂಡ
ಒಂದಿಗೆ ಅತ್ತೆಮಾವಂದಿರಿಗೆ ತನ್ನ ವಿವಾಹದಲ್ಲಿ ಮಾತ್ರ ತಾನು ನಮಸ್ಕಾರ
ಮಾಡಿದುದು ಸೀತಾಲಕ್ಷ್ಮಿಯ ಜ್ಞಾಪಕಕ್ಕೆ ಬಂದಿತು. ಅವಳ ಮುಖದ
ಮೇಲೆ ದುಃಖದ ಛಾಯೆ ಹಾದುಹೋಯಿತು. ಸುಂದರರಾಜ ಕಮಲಮ್ಮ
ಇಬ್ಬರಿಗೂ ಇದೇ ಭಾವ ಹೊಳೆಯಿತೆಂಬುದು ಅವರ ಮುಖವನ್ನು ನೋಡಿ
ಗಲೇ ಸೀತಾಲಕ್ಷ್ಮಿಗೆ ಗೊತ್ತಾಯಿತು.

ಸುಂದರರಾಜ ಸ್ನಾನಕ್ಕೆ ಇಳಿಯಲು ಸಿದ್ಧನಾಗುತ್ತಿರುವಾಗ ಸೀತಾ
ಕ್ಷ್ಮಿ ಸುತ್ತ ಇದ್ದ ಸುಮಂಗಲಿಯರಿಗೆಲ್ಲ ಎಲೆ ಅಡಿಕೆ ಅರಸಿನ ಕುಂಕುಮ
ಕೊಟ್ಟು ನಮಸ್ಕರಿಸಿದಳು. ಎಲ್ಲರಿಂದಲೂ "ವಜ್ರದ ತಾಲಿಯಾಗಲಿ" ಎಂಬ
ಶೀರ್ವಚನವನ್ನು ಹೊಂದಿದಳು. ಆಕೆ ಕಮಲಮ್ಮನನ್ನು ನಮಸ್ಕರಿಸಿದಾಗ
ದಯ ತುಂಬಿ ಬಂದ ಕಮಲಮ್ಮನ ಬಾಯಿಂದ ಆಶೀರ್ವಾದದ ಮಾತೇ
ಹೊರಡಲಿಲ್ಲ. ಕಮಲಮ್ಮ ಕಣ್ಣಿನಲ್ಲಿ ನೀರು ಸುರಿಸುತ್ತಾ ಸೀತಾಲಕ್ಷ್ಮಿ
ಯನ್ನು ತಬ್ಬಿಕೊಂಡುಬಿಟ್ಟಳು. ಅವಳ ಮನಸ್ಸು ಹೇಗೋ ತಳಮಳ
ಗೊಂಡಿತು. ಇದ್ಯಾಕೆ ಹೀಗೆ ಎಂಬುದು ಅವಳಿಗೆ ಅರ್ಥವಾಗಲಿಲ್ಲ.

ಸುಂದರರಾಜ ಸ್ನಾನಕ್ಕೆ ಇಳಿದನು. ಇಳಿದ ಜಾಗವಲ್ಲಿ ಸೆಳವಿನಿಂಲೋ ಮಡುವಿನಿಂದಲೋ ಜಾರಿಕೆಯಿಂದಲೊ ಏನು ಕಾರಣವೋ ಅಂತೂ ಅವನ ಕಾಲಿಗೆ ನೆಲ ಸಿಕ್ಕಲಿಲ್ಲ, ಅವನು ಹಾ ಎಂದು ಕೂಗುತ್ತಾ ದಡದ ಕಡೆಗೆ ಕೈ ಚಾಚಿದನು. ಸೀತಾಲಕ್ಷ್ಮಿ ಬೆಚ್ಚಿಬಿದ್ದು ಅವನನ್ನು ಮೇಲಕ್ಕೆ ಎಳೆದು ಕೊಳ್ಳಲು ಅವನ ಕಡೆಗೆ ಕೈ ಚಾಚಿದಳು. ಸುಂದರರಾಜ ಆ ಕೈಯನ್ನು ಹಿಡಿದುಕೊಂಡನು. ಆದರೆ ಮೇಲಕ್ಕೆ ಬರಲು ಅವನಿಗೆ ಸಾಧ್ಯವಾಗಲಿಲ್ಲ. ಒಂದೇ ನಿಮಿಷದಲ್ಲಿ ನೀರಿನ ಅಲೆಯಲ್ಲಿ ಇಬ್ಬರೂ ಮರೆಯಾದರು. ಕಮಲಮ್ಮ ಹೊ ಹೊ ಎಂದು ಕೂಗಿದಳು. ಗುಂಡಣ್ಣನವರೂ ಕಲ್ಯಾಣಮ್ಮನವರೂ ಬೆಚ್ಚಿಬಿದ್ದು ತಲೆ ಎತ್ತಿ ನೋಡಿದಾಗ ನೀರಿನಲ್ಲಿ ಏನೂ ಕಾಣಲಿಲ್ಲ. ಸ್ವಲ್ಪ ದೂರದಲ್ಲಿ ಅಲೆಗಳ ನಡುವೆ ಒಂದು ಸಲ ಎರಡು ದೇಹಗಳೂ ಎದ್ದುದು ಕಮಲಮ್ಮನಿಗೆ ಕಂಡಂತೆ ಆಯಿತು.

❖ ❖ ❖

ಮರುದಿನ ಸಂಧ್ಯಾಕಾಲ, ಒಂದನ್ನೊಂದು ಅಪ್ಪಿಕೊಂಡಿದ್ದ ಎರಡು ದೇಹಗಳನ್ನೂ ಬೆಸ್ತರು ಎರಡು ಮೈಲಿಗಳ ಆಚೆ ಮೇಲೆತ್ತಿದರು ಗುಂಡ ಣ್ಣನವರು ಕನಸಿನಲ್ಲಿದ್ದವರಂತೆ ಅಲ್ಲಿಗೆ ಹೋಗಿ ದಹನ ಕ್ರಿಯೆಗೆ ಏರ್ಪಡಿ ಸಿದರು. ಕಮಲಮ್ಮನ ಕಣ್ಣಿನಿಂದ ನೀರು ಒಂದೇ ಸಮನೆ ಸುರಿಯುತ್ತಲೇ ಇತ್ತು. ಚಿತೆ ಪೂರ್ತಿ ಭಸ್ಮವಾಗುತ್ತಿರುವಾಗ ಯಾರೋ ಒಬ್ಬರು ಕಮಲಮ್ಮ ನನ್ನು ಸತ್ತವರು ಯಾರು? ಎಂದು ಕೇಳಿದರು. ಕಮಲಮ್ಮ "ಸಾವಿತ್ರಿ ಸತ್ಯವಾನ" ಎಂದಳು.

ರಂಭಾಪುರಿಗೆ ಹಿಂದಿರುಗಿದಮೇಲೆ ಕಮಲಮ್ಮ ಯಾತ್ರೆಯ ವಿಷಯ ವನ್ನು ಯಾರೊಂದಿಗೂ ಪ್ರಸ್ತಾಪಿಸುತ್ತಿಲ್ಲ, ಹಾಗೆ ಪ್ರಸ್ತಾಪಮಾಡಿದರೂ, ಅದು "ಪ್ರೇಮ ಸಮಾಧಿ" ಎಂಬುದೇ ಅವಳ ಮಾತು ಆಗಿದೆ.

ಮಂಗಳಂ

---